# ಹಿಂದೂ ಮತದಲ್ಲಿ
# ಸಿದ್ಧಾಂತ ಕರ್ತರು





ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org



# ಹಿಂದೂ ಮತದಲ್ಲಿ

# ಸಿದ್ಧಾಂತಕರ್ತರು


<u>ಗ್ರಂಥಕರ್ತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 210/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

**ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)**
ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ (ಮಂ), ಅನಂತಪುರ (ಜಿಲ್ಲಾ)
ಸೆಲ್:9620193341, 9739226839

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಹಿಂದೂ ಮತದಲ್ಲಿ ಸಿದ್ಧಾಂತಕರ್ತರು 

ಮೊದಲು **'ಸಿದ್ಧಾಂತ'** ಎಂದರೇ ಏನೊ ತಿಳಿದುಕೊಳ್ಳೋಣ. ಒಂದು ಗ್ರಂಥದಲ್ಲಿ ಎಷ್ಟೋ ಕಾಗದಗಳಿದ್ದಂತೆ, ಒಂದು ಶಾಸ್ತ್ರದಲ್ಲಿ ಎಷ್ಟೋ ಸಿದ್ಧಾಂತಗಳು ಇರುತ್ತವೆ. ಕೆಲವು ಸಿದ್ಧಾಂತಗಳು ಸೇರಿ ಒಂದು ಶಾಸ್ತ್ರವಾಗಿ ಇರುತ್ತದೆ. ಗಣಿತ ಸಿದ್ಧಾಂತಗಳೆಲ್ಲವನ್ನು ಸೇರಿಸಿ 'ಗಣಿತ ಶಾಸ್ತ್ರ' ಎಂದು ಹೇಳಬಹುದು. ಹಾಗೆಯೇ ರಸಾಯನ ಸಿದ್ಧಾಂತಗಳೆಲ್ಲ ಸೇರಿ ರಸಾಯನ ಶಾಸ್ತ್ರವಾಗಿದೆ. ಉದಾಹರಣೆಗೆ H2O=Water ಎನ್ನುವುದು ರಸಾಯನ ಶಾಸ್ತ್ರ ಸಂಬಂಧ ಸೂತ್ರ. ಈ ಸೂತ್ರದ ಪ್ರಕಾರ "ಎರಡು ಅಳತೆಗಳು ಹೈಡ್ರೋಜನ್ ವಾಯುವು, ಒಂದು ಅಳತೆ ಆಕ್ಸಿಜನ್ ವಾಯುವನ್ನು ಬೆರೆಸಿದರೆ ನೀರು ಆಗುತ್ತದೆ" ಎನ್ನುವುದು ಸೂತ್ರ ಅಥವಾ ಸಿದ್ಧಾಂತ. ಸಿದ್ಧಾಂತವನ್ನು 'ಸೂತ್ರ' ಎಂದು ಸಹ ಹೇಳಬಹುದು. ಎರಡರಷ್ಟು ಹೈಡ್ರೋಜನ್‌ನ್ನು ಹೇಳುವುದಕ್ಕೆ H2 ಎಂದು ಷಾರ್ಟ್‌ಕಟ್ಟಾಗಿ ಹೇಳಿದ್ದಾರೆ. ಹಾಗೆಯೇ ಒಂದಿಷ್ಟು ಆಕ್ಸಿಜನ್‌ನ್ನು ಹೇಳುವುದಕ್ಕೆ O ಎಂದು ಸಂಕ್ಷೇಪವಾದ ಅಕ್ಷರವಾಗಿ ಹೇಳಿದ್ದಾರೆ. ನೀರನ್ನು ರಸಾಯನ ಶಾಸ್ತ್ರದ ಪ್ರಕಾರ ಸಂಕ್ಷೇಪವಾದ ಅಕ್ಷರಗಳಲ್ಲಿ ಹೇಳಿದರೆ H2O=Water ಎಂದು ಹೇಳಬಹುದು. ಈ ವಿಧವಾಗಿಯೇ ಎಲ್ಲಾ ಶಾಸ್ತ್ರಗಳು ಮೊದಲೆ ನಿರ್ಧಾರಿಸಲ್ಪಟ್ಟ ಅಥವಾ ಕಂಡುಹಿಡಿದ ಸೂತ್ರಗಳಿಂದ ತುಂಬಿಕೊಂಡಿರುತ್ತವೆ. ಶಾಸ್ತ್ರಗಳು ಭೂಮಿಮೇಲೆ ಆರೇ ಇವೆ. ಅವುಗಳನ್ನೇ ಷಟ್ ಶಾಸ್ತ್ರಗಳೆಂದು ಕರೆಯುತ್ತೇವೆ. ಶಾಸ್ತ್ರ ಎಂದರೆ ಶಾಸನಗಳಿಂದ ಕೂಡಿಕೊಂಡಿರುವುದೆಂಬ ನಿರ್ವಚನೆಯನ್ನು ಅಥವಾ ಅರ್ಥವನ್ನು ಹೇಳಬಹುದು. ಇದರ ಪ್ರಕಾರ ಶಾಸನ ಎಂದರೂ, ಸೂತ್ರ ಎಂದರೂ, ಸಿದ್ಧಾಂತ ಎಂದರೂ ಒಂದೇ ಅರ್ಥವೆಂದು ತಿಳಿಯುತ್ತಿದೆ. ಶಾಸನ ಎಂದರೆ ನಡೆದು ತೀರುವುದೆಂದು ಅರ್ಥ. 'ಶಾಸನ' ಎಂಬ ಪದ **'ಶಾಪ'** ಎನ್ನುವ ಪದದಿಂದ ಹುಟ್ಟಿದೆ. ಶಾಪ ಎಂದರೆ "ಹೇಳಿರುವುದು ಹೇಳಿದಂತೆ ನಡೆಯುತ್ತದೆ" ಎಂದು ಅರ್ಥ. ಇದರ ಪ್ರಕಾರ ಶಾಸ್ತ್ರ ಎಂದರೇ **"ಸತ್ಯ"** ಎಂದು ಹೇಳಬಹುದು. ಯಾವುದಾದರೆ ಶಾಸ್ತ್ರವೋ, ಅಥವಾ ಯಾವುದಾದರೆ ಸೂತ್ರವೋ, ಯಾವುದಾದರೆ ಸಿದ್ಧಾಂತವೊ ಅದೆಲ್ಲವೂ ನಡೆಯುವಂತಹ ಪ್ರತ್ಯಕ್ಷ ಸತ್ಯವೆಂದು ಹೇಳಬಹುದು. ಆದುದರಿಂದ ಶಾಸ್ತ್ರ ಎಂದರೆ ಸತ್ಯಕ್ಕೆ ಇನ್ನೊಂದು ಹೆಸರೆಂದು, ಹಾಗೆ ಸತ್ಯ

ಶಾಸ್ತ್ರಕ್ಕೆ ಇನ್ನೊಂದು ಹೆಸರೆಂದು ಹೇಳಬಹುದು. ಆದುದರಿಂದ ಯಾವ ವಿಷಯವಾದರೂ ಶಾಸ್ತ್ರಬದ್ಧವಾಗಿ ಇರಬೇಕೆಂದು ಹೇಳುತ್ತಿರುತ್ತಾರೆ. ಶಾಸ್ತ್ರಬದ್ಧ ವಾಗಿದ್ದರೆ ಸತ್ಯಬದ್ಧವಾಗಿ ಇದ್ದಂತೆಯೆಂದು ಗುರುತು.

ಯಾವ ಶಾಸ್ತ್ರಕ್ಕಾದರೂ ಸಿದ್ಧಾಂತಗಳೆ ಆಧಾರ. ಸಿದ್ಧಾಂತಗಳಿಂದಲೇ ಶಾಸ್ತ್ರ ಆಧಾರಪಟ್ಟಿರುತ್ತದೆ. ಶಾಸ್ತ್ರ ಎಂದರೆ ಅರ್ಥವಾಗುವಂತೆ ಬಿಡಿಸಿ ಹೇಳಿಕೊಂಡಿದ್ದೇವೆ. ಶಾಸ್ತ್ರಕ್ಕೆ ಆಧಾರವಾದ ಸಿದ್ಧಾಂತ ಎಂದರೆ ಅದರ ಅರ್ಥದ ಪ್ರಕಾರ ವಿವರಿಸಿ ಹೇಳಿಕೊಳ್ಳೋಣ. ಸಿದ್ಧಾಂತವನ್ನು ಬಿಡಿಸಿ ಹೇಳಿದರೆ ಸಿದ್ಧ+ಅಂತ=ಸಿದ್ಧಾಂತ ಎಂದು ಇದೆ. 'ಸಿದ್ಧಾಂತ' ಪದದಲ್ಲಿನ ಸಿದ್ಧಕ್ಕು ಮತ್ತು ಅಂತ್ಯಕ್ಕು ಬೇರೆಬೇರೆಯಾಗಿ ಅರ್ಥವನ್ನು ಹೇಳಿಕೊಂಡರೆ ಹೀಗೆ ಇದೆ. ಸಿದ್ಧ ಎಂಬ ಪದವನ್ನು ಸಿದ್ಧವು ಎಂದು ಸಹ ಹೇಳಬಹುದು. ಸಿದ್ಧ ಎಂದರೂ, ಸಿದ್ಧವು ಎಂದರೂ, ಸಿದ್ಧಂ ಎಂದರೂ ಮೂರು ಒಂದೇ ಅರ್ಥದಿಂದ ಕೂಡಿಕೊಂಡಿವೆ. ಸಿದ್ಧಿ ಎಂಬ ಪದದಿಂದ ಸಿದ್ಧ ಎಂಬ ಶಬ್ದ ಹುಟ್ಟಿದೆ. ಆದುದರಿಂದ ಸಿದ್ಧಿ ಎಂಬ ಪದಕ್ಕೆ ಹೇಳುವ ಅರ್ಥವನ್ನೇ ಸಿದ್ಧ ಎಂಬ ಪದಕ್ಕು ಸಹ ಹೇಳಬಹುದು. ಸಿದ್ಧ ಅಥವಾ ಸಿದ್ಧಂ ಅಥವಾ ಸಿದ್ಧವು ಎನ್ನುವ ಪದಕ್ಕು ಒಂದೇ ಅರ್ಥವಿದೆ. ಅದೇ 'ಹುಡುಕಿದಾಗ ದೊರೆತಿದೆ' ಎಂದು ಅರ್ಥ. 'ಅನ್ವೇಷಿಸಿದಾಗ ದೊರೆತಿದೆ' ಎಂದು ಅರ್ಥ. ಪರಿಶೋಧನೆ ಮಾಡಿದಾಗ ಬಂದಿರುವ ಫಲಿತವನ್ನು, ಅಥವಾ ದೊರೆತ ಅರ್ಥವನ್ನು ಸಿದ್ಧಾಂತ ಎಂದು ಅನ್ನುತ್ತಿದ್ದೇವೆ. ಒಬ್ಬ ಪರಿಶೋಧಕನು ಒಂದು ವಿಷಯವನ್ನು ಪೂರ್ತಿಯಾಗಿ ಪರಿಶೋಧಿಸಿದ ನಂತರ ಬಂದಿರುವ ಫಲಿತವನ್ನು, ಅಥವಾ ತಿಳಿದ ಸತ್ಯವನ್ನು **'ಸಿದ್ಧಾಂತ'** ಎಂದು ಅನ್ನುತ್ತಿದ್ದೇವೆ. ಒಬ್ಬ ಮನುಷ್ಯ ತನ್ನ ಪರಿಶೋಧನೆಯಲ್ಲಿ ಕಂಡುಹಿಡಿದ ಸತ್ಯವನ್ನು ಸಿದ್ಧಾಂತ ಎನ್ನುವುದು ನಡೆಯುತ್ತಿದೆ. ಒಬ್ಬ ಮನುಷ್ಯ ಕಂಡುಹಿಡಿದ ಸಿದ್ಧಾಂತವನ್ನು ಆತನ ಸಿದ್ಧಾಂತ ಎಂದು ಹೇಳುತ್ತಿದ್ದೇವೆ. ಒಂದು ಶಾಸ್ತ್ರದಲ್ಲಿ ಎಷ್ಟೋಜನ ಕಂಡುಹಿಡಿದ ಸಿದ್ಧಾಂತಗಳಿರುತ್ತವೆ. ಶಾಸ್ತ್ರಕ್ಕೆ ಒಂದೇ ಹೆಸರಿದ್ದರೂ, ಅದರಲ್ಲಿನ ಸಿದ್ಧಾಂತಗಳಿಗೆ ಅವುಗಳನ್ನು ಕಂಡುಹಿಡಿದವರ ಹೆಸರುಗಳಿರುತ್ತವೆ.

'ಸಿದ್ಧಾಂತ' ಎಂಬ ಪದದಲ್ಲಿ ಸಿದ್ಧ ಎಂದರೆ ಹುಡುಕಿದರೆ ಲಭಿಸಿದೆಯೆಂಬ ಭಾವನೆ ತಿಳಿದುಹೋಗಿದೆ. ಅದೇ ಪದದಲ್ಲಿ ಕೊನೆಯಲ್ಲಿರುವ ಅಂತ ಎಂದರೆ ಶೇಷ ಇಲ್ಲದಂತೆ, ಅಥವಾ ಪೂರ್ತಿ ಮುಗಿದುಹೋಗಿರುವುದೆಂದು ಅರ್ಥ ಇದೆ. ಶೇಷ ಇಲ್ಲದಂತೆ ಇರುವ ಫಲಿತವೆಲ್ಲಾ ತಿಳಿದಿದೆಯೆಂಬ ಅರ್ಥದಿಂದ 'ಸಿದ್ಧಾಂತ' ಎಂದು ಅನ್ನುತ್ತಿದ್ದೇವೆ. ಒಂದು ಸಿದ್ಧಾಂತ ತಿಳಿದಿದೆಯೆಂದರೆ ಪೂರ್ತಿ ಅರ್ಥದಿಂದ ಅಥವಾ ಏನೂ ಉಳಿಯದ ಅರ್ಥದಿಂದ ಪೂರ್ತಿ ತಿಳಿದುಹೋಗಿದೆಯೆಂದು ಭಾವನೆ. ಆದುದರಿಂದ ಯಾವ ಸಿದ್ಧಾಂತವಾದರೂ ಸಂಪೂರ್ಣವಾಗಿ ಇರುತ್ತದಾಗಲಿ, ಅಸಂಪೂರ್ಣವಾಗಿ ಇರುವುದಿಲ್ಲ. ಈ ವಿಧವಾಗಿ ಸಿದ್ಧಾಂತ ಎಂದರೆ ಪೂರ್ತಿ ಸತ್ಯವಾದುದೆಂಬ ಭಾವನೆ ಸಹ ಇದೆ. ಸತ್ಯವಾದ ಸಿದ್ಧಾಂತಗಳಿಂದ ಕೂಡಿಕೊಂಡಿರುವುದು ಶಾಸ್ತ್ರವಾಗಿರುವುದರಿಂದ, ಶಾಸ್ತ್ರ ಯಾವುದಾದರೂ ಅದು ಸತ್ಯದಿಂದಲೇ ಕೂಡಿಕೊಂಡಿರುತ್ತದೆ. ಅಂತ್ಯದವರೆಗು ಅಸತ್ಯ ಇಲ್ಲದಂತೆ ಲಭಿಸಿದ ಸತ್ಯವನ್ನು ಸಿದ್ಧಾಂತ ಎಂದು ಹೇಳಬಹುದು. ಸಿದ್ಧ ಎಂದರೆ ಲಭಿಸಿರುವುದೆಂದು ಅಂತ್ಯ ಎಂದರೆ ಕೊನೆಯವರೆಗು ಲಭಿಸಿದ ಸತ್ಯವನ್ನು ಸಿದ್ಧಾಂತ ಎಂದು ಹೇಳಿದರೂ, ಪ್ರಪಂಚ ಸಿದ್ಧಾಂತಗಳಿಂದ ಕೂಡಿಕೊಂಡ ಶಾಸ್ತ್ರಗಳು ನಾಲ್ಕು ಇವೆ. ದೇವರಿಗೆ ಸಂಬಂಧಿಸಿದ ಸಿದ್ಧಾಂತಗಳಿಂದ ಕೂಡಿಕೊಂಡಿರುವುದು ಒಂದು ಶಾಸ್ತ್ರವಿದೆ. ಹೀಗೆ ಪ್ರಪಂಚ ಸಂಬಂಧವಾಗಿ ಸ್ವಲ್ಪ, ದೈವಸಂಬಂಧವಾಗಿ ಸ್ವಲ್ಪ ಸಂಬಂಧಪಟ್ಟಿರುವ ಶಾಸ್ತ್ರ ಒಂದು ಇದೆ. ಅದೇ ಜ್ಯೋತಿಷ್ಯ ಶಾಸ್ತ್ರ. ಪ್ರಪಂಚ ಸಂಬಂಧ ನಾಲ್ಕು ಶಾಸ್ತ್ರಗಳು ಕ್ರಮವಾಗಿ 1) ಗಣಿತ ಶಾಸ್ತ್ರ 2) ಖಗೋಳ ಶಾಸ್ತ್ರ 3) ರಸಾಯನ ಶಾಸ್ತ್ರ 4) ಭೌತ (ಭೌತಿಕ) ಶಾಸ್ತ್ರ ಇವೆ. ಪರಮಾತ್ಮ ಸಂಬಂಧ ಶಾಸ್ತ್ರ ಬ್ರಹ್ಮವಿದ್ಯಾ ಶಾಸ್ತ್ರ ಒಂದೇ ಇದೆ.

ಷಟ್ ಶಾಸ್ತ್ರಗಳಲ್ಲಿ ಎಲ್ಲದಕ್ಕಿಂತ ಮೊದಲು ಹುಟ್ಟಿರುವುದು ಬ್ರಹ್ಮವಿದ್ಯಾ ಶಾಸ್ತ್ರ. ಮೊದಲು ಹುಟ್ಟಿದ ಬ್ರಹ್ಮವಿದ್ಯಾ ಶಾಸ್ತ್ರ ಸಂಪೂರ್ಣವಾಗಿ ಹುಟ್ಟಿದೆ. ನಂತರ ಹುಟ್ಟಿದ ಐದು ಶಾಸ್ತ್ರಗಳು ಅಸಂಪೂರ್ಣವಾಗಿ ಹುಟ್ಟಿವೆ. ಉಳಿದ

ಐದು ಶಾಸ್ತ್ರಗಳಲ್ಲಿ ಎಷ್ಟೋ ಸಿದ್ಧಾಂತಗಳು ಆಗಾಗ ಕಂಡುಹಿಡಿಯಲ್ಪಡುತ್ತಿವೆ. ಇನ್ನೂ ಎಷ್ಟು ಸಿದ್ಧಾಂತಗಳು ತಿಳಿಯಬೇಕಾಗಿದೆಯೋ ಯಾರಿಗೂ ತಿಳಿದಿಲ್ಲ. ಐದು ಶಾಸ್ತ್ರಗಳ ಸಿದ್ಧಾಂತಗಳು ಎಂದಿಗೆ ಸಂಪೂರ್ಣವಾಗುತ್ತವೆಂಬ ವಿಷಯ ಯಾರಿಗೂ ತಿಳಿದಿಲ್ಲ. ನಾವು ನೋಡಿರುವಂತೆ ಗತ ಐವತ್ತು (50) ವರ್ಷಗಳಲ್ಲಿ ನಾಲ್ಕು ಶಾಸ್ತ್ರಗಳಲ್ಲಿ ಎಷ್ಟೋ ಸಿದ್ಧಾಂತಗಳು ಮನುಷ್ಯರಿಂದ ಕಂಡುಹಿಡಿಯಲ್ಪಟ್ಟಿವೆ. ಪ್ರತ್ಯೇಕಿಸಿ ಜ್ಯೋತಿಷ್ಯ ಶಾಸ್ತ್ರದಲ್ಲಿ ಪರಿಶೋಧನೆ ಬಹಳ ಕಡಿಮೆ ಇದೆ. ಆದುದರಿಂದ ಜ್ಯೋತಿಷ್ಯದಲ್ಲಿ ಹೊಸ ಸಿದ್ಧಾಂತಗಳು ಹೊರಗೆ ಬರಲಿಲ್ಲ. ಈ ಮಧ್ಯ ಕಾಲದಲ್ಲಿ ನಾವೇ ಒಂದು, ಎರಡು ಸಿದ್ಧಾಂತಗಳನ್ನು ಹೊಸದಾಗಿ ಹೇಳಿದ್ದೇವೆ. ಜ್ಯೋತಿಷ್ಯವು ಪ್ರಪಂಚದೊಂದಿಗೆ ಸಂಬಂಧಿಸಲ್ಪಟ್ಟಿದೆ. ಆದಕಾರಣ ಅದು ನಮಗೆ ಸಂಬಂಧಿಸಿದ ಶಾಸ್ತ್ರ ಅಲ್ಲ. ಆದರೂ ಎರಡು ಹೊಸ ಸಿದ್ಧಾಂತಗಳು ನಾವು ಬರೆದ **"ಜ್ಯೋತಿಷ್ಯ ಶಾಸ್ತ್ರ"** ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಪ್ರಪಂಚ ಸಂಬಂಧ ಶಾಸ್ತ್ರದೊಳಗೆ ಜ್ಯೋತಿಷ್ಯ ಶಾಸ್ತ್ರ ಸಹ ಲೆಕ್ಕಿಸಲ್ಪಡುತ್ತಿರುವುದರಿಂದ ನಮಗೆ ಅದರಮೇಲೆ ಆಸಕ್ತಿ ಇಲ್ಲ. ಬ್ರಹ್ಮವಿದ್ಯಾ ಶಾಸ್ತ್ರ ಹೊರತು ಉಳಿದ ಐದು ಶಾಸ್ತ್ರಗಳು ಅಸಂಪೂರ್ಣ ಶಾಸ್ತ್ರಗಳೇಯೆಂದು ಹೇಳುತ್ತಿದ್ದೇವೆ. ನಮ್ಮ ಆಸಕ್ತಿಯೆಲ್ಲವೂ ಬ್ರಹ್ಮವಿದ್ಯಾ ಶಾಸ್ತ್ರದ ಮೇಲೆಯೇ ಇರುತ್ತದೆ. ಆದುದರಿಂದ ನಾವು ಏನು ಹೇಳಿದರೂ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ವಿಷಯಗಳನ್ನೇ ಹೇಳುತ್ತಿರುತ್ತೇವೆ. .

**ಪ್ರಶ್ನೆ :– ನೀವು ಸಿದ್ಧಾಂತಗಳನ್ನು, ಶಾಸ್ತ್ರಗಳನ್ನು ಚೆನ್ನಾಗಿ ಅರ್ಥವಾಗುವಂತೆ ಹೇಳಿದ್ದೀರಾ. ನೀವು ಹೇಳಿದ ಮಾತುಗಳಲ್ಲಿ ಬ್ರಹ್ಮವಿದ್ಯಾ ಶಾಸ್ತ್ರ ಸೃಷ್ಠಿ ಆದಿಯಲ್ಲಿಯೇ ಸಂಪೂರ್ಣವಾಗಿ ಹೇಳಲಾಗಿದೆಯೆಂದು ಹೇಳಿದ್ದೀರ. ಸೃಷ್ಠಿ ಆದಿಯಲ್ಲಿಯೇ ಸಂಪೂರ್ಣವಾಗಿ ಹೇಳಲಾದ ವಿಷಯವನ್ನು ಪುನಃ ಹೇಳಬೇಕಾದ ಅವಶ್ಯಕತೆ ಇಲ್ಲ! ಸೃಷ್ಠಿ ಆದಿಯಲ್ಲಿ ದೇವರೇ ಸ್ವತಃವಾಗಿ ಬ್ರಹ್ಮವಿದ್ಯಾ ಶಾಸ್ತ್ರವನ್ನು ಹೇಳಿದಾಗ ಅದನ್ನು ಕುರಿತಾದ ಹೊಸ ವಿಷಯಗಳು ಏನೂ ಇಲ್ಲದಿರುವಾಗ ನೀವು ಹೊಸದಾಗಿ ತ್ರೈತ ಸಿದ್ಧಾಂತವನ್ನು ಹೇಗೆ ಹೇಳಿದ್ದೀರ? ತ್ರೈತ ಸಿದ್ಧಾಂತವನ್ನು ನೀವು ಹೇಳಿದಂತೆ ನಿಮ್ಮ ಹೆಸರಿಗಿಂತ ಮೊದಲು "ತ್ರೈತ ಸಿದ್ಧಾಂತ ಆದಿಕರ್ತ" ಎಂದು ಹೆಸರು ಸಹ**

**ಇಟ್ಟುಕೊಂಡಿದ್ದೀರಾ. ದೇವರು ಮೊದಲೇ ಹೇಳಿದ ವಿಷಯವನ್ನು ಹೈಜಾಕ್ ಮಾಡಿ ಅದನ್ನು ನೀವೇ ಹೇಳಿದಂತೆ ಪ್ರಕಟಿಸಿಕೊಳ್ಳುವುದು ತಪ್ಪಲ್ಲವೆ!**

**ಉತ್ತರ :-** ದೇವರು ಸೃಷ್ಠಿ ಆದಿಯಲ್ಲಿಯೇ ಬ್ರಹ್ಮವಿದ್ಯಾ ಶಾಸ್ತ್ರವನ್ನು ಸಂಪೂರ್ಣವಾಗಿ ಹೇಳಿದ್ದಾನೆಂದು ನಾನು ಹೊರತು ಯಾರಾದರೂ ಹೇಳಿದ್ದಾರಾ? ನೀವು ಒಂದು ಬಾರಿ ಹಿಂದಿರುಗಿ ನೋಡಿಕೊಳ್ಳಿ. ಪ್ರಪಂಚ ಶಾಸ್ತ್ರಗಳು ಅಸಂಪೂರ್ಣವೆಂದೂ, ದೈವಶಾಸ್ತ್ರ ಸಂಪೂರ್ಣವೆಂಬ ವಿಷಯವನ್ನು ಹೇಳಿದವರಲ್ಲಿ ಮೊದಲನೆಯವನು ನಾನೇಯೆಂದು ಧೈರ್ಯವಾಗಿ ಹೇಳುತ್ತಿದ್ದೇನೆ. ಹಾಗಿರುವಾಗ ದೈವ ಸಿದ್ಧಾಂತವಾದ ತ್ರೈತ ಸಿದ್ಧಾಂತವನ್ನು ನಾನು ಹೇಳಿದ್ದೇನೆಂದು ಹೇಗೆ ಹೇಳುತ್ತೇನೆ? ನಾನು ಎಲ್ಲಿ ತ್ರೈತ ಸಿದ್ಧಾಂತವನ್ನು ಕುರಿತು ಹೇಳಿದರೂ ಈ ವಿಷಯ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಇದೆಯೆಂದೇ ಹೇಳುತ್ತಿದ್ದೇವೆ. ಭಗವದ್ಗೀತೆಯನ್ನು ದೇವರು ಸೃಷ್ಠಿ ಆದಿಯಲ್ಲಿಯೇ ಬೋಧಿಸಿದ್ದಾನೆಂದು, ಅದನ್ನೇ ದ್ವಾಪರಯುಗ ಕೊನೆಯಲ್ಲಿ ಭಗವಂತನಾಗಿ ಬಂದಿರುವ ಶ್ರೀಕೃಷ್ಣನು ಹೇಳಿದ್ದಾನೆಂದು ಹೇಳಿದ್ದೇವೆ. ಹಾಗೆ ಹೇಳುವುದೇ ಅಲ್ಲದೆ ನಾವು ಹೇಳುತ್ತಿರುವ ತ್ರೈತ ಸಿದ್ಧಾಂತವನ್ನು ಭಗವದ್ಗೀತೆಯಲ್ಲಿಯೇ ಹೇಳಲ್ಪಟ್ಟಿದೆಯೆಂದು ಸಹ ಹೇಳಿದ್ದೇವೆ. ಹಾಗಿರುವಾಗ ತ್ರೈತ ಸಿದ್ಧಾಂತವನ್ನು ಹೇಳುವುದರಲ್ಲಿ ನಮ್ಮ ತಪ್ಪು ಇದೆಯೇನೊ ನೀವೇ ಹೇಳಿರಿ. ತ್ರೈತ ಸಿದ್ಧಾಂತ ಸೃಷ್ಠಿ ಆದಿಯಲ್ಲಿ ಹೇಳಿದರೂ, ಪುನಃ ಅದನ್ನು ದ್ವಾಪರ ಯುಗದ ಕೊನೆಯಲ್ಲಿ ಹೇಳಿದರೂ ಅದು ಯಾರಿಗೂ ತಿಳಿಯದ ಸಿದ್ಧಾಂತವಾಗಿ ಇದೆ. ಹಿಂದೂಗಳ ಗ್ರಂಥ ಭಗವದ್ಗೀತೆಯೆಂದು ಬಹಳಜನ ಹೇಳುತ್ತಿದ್ದರೂ ಭಗವದ್ಗೀತೆಯಲ್ಲಿನ ತ್ರೈತ ಸಿದ್ಧಾಂತವನ್ನು ಕುರಿತು ಈದಿನಕ್ಕು ಹಿಂದೂಗಳಿಗೇ ತಿಳಿದಿಲ್ಲ. ಯಾರಿಗೂ ತಿಳಿಯದ ಸಿದ್ಧಾಂತವನ್ನು ಕುರಿತು ನಾವು ಹೇಳಿದ್ದೇವೆ. ಆದುದರಿಂದ ಅದು ಎಲ್ಲರಿಗೂ ಹೊಸದಾಗಿಯೇ ಇದೆ. ಆದುದರಿಂದ ತ್ರೈತ ಸಿದ್ಧಾಂತ ನಿಮಗೆ ಹೊಸದೆಂದು ಹೇಳಿದ್ದೇನೆ ಆದರೆ ನಮಗೆ ಹಳೆಯದೆಂದೇ ತಿಳಿದಿದೆ.

ನಮ್ಮ ಹೆಸರಿನ ವಿಷಯಕ್ಕೆ ಬಂದರೆ ನಮ್ಮ ಹೆಸರಿನ ಮುಂದೆ **ತ್ರೈತ ಸಿದ್ಧಾಂತ ಆದಿಕರ್ತ ಎಂದು** ಇರುವುದು ನಿಜವೇ. ಹಾಗೆ ಬರೆಯುವುದಕ್ಕೆ ಕಾರಣ ಹೇಳಿದರೆ ಕೆಲವರಿಗೆ ಆಶ್ಚರ್ಯವಾಗಿ ಇರುತ್ತದೆ. ಏಕೆಂದರೆ ಆ ಹೆಸರು ನನ್ನದಲ್ಲ. ತಪ್ಪು ದೊರೆತಿದೆಯೆಂದು ಹೆಸರು ನನ್ನದಲ್ಲವೆಂದು ತಪ್ಪಿಸಿಕೊಳ್ಳುತ್ತಿದ್ದಾನೆಂದು ಕೆಲವರಂದುಕೊಳ್ಳಬಹುದು. ಯಾರು ಒಪ್ಪಿಕೊಂಡರೂ ಒಪ್ಪಿಕೊಳ್ಳದಿದ್ದರೂ ನಿಜಕ್ಕೆ ಎಲ್ಲರೂ ನನ್ನದಂದುಕೊಂಡ ಹೆಸರು ನನ್ನದಲ್ಲ. ಅಷ್ಟೇಕೆ 'ನಿಮ್ಮದು' ಎಂದು ನೀವು ಹೇಳಿಕೊಳ್ಳುತ್ತಿರುವ ನಿಮ್ಮ ಹೆಸರೂ ಸಹ ನಿಮ್ಮದಲ್ಲ. ನಾನು ಹೇಳುವ ವಿಷಯದಿಂದ ನನಗೆ ಬುದ್ಧಿಗೆಟ್ಟಿದೆಯೆಂದು ನೀವು ಅಂದುಕೊಳ್ಳಬಹುದು. ನನಗೆ ಚಿಕ್ಕಂದಿನಲ್ಲಿ ನಿಜಕ್ಕೆ ಬುದ್ಧಿಗೆಟ್ಟಿ, ತಾಯಿತಂದೆಯರು ನನಗೆ ಇಟ್ಟಿರುವ ಹೆಸರನ್ನು ನನ್ನದೇಯೆಂದು ನಾನು ಅಂದುಕೊಳ್ಳುತ್ತಿದ್ದೆನು. ತಾಯಿತಂದೆಯರು ಸಹ ನನಗೆ ಹೆಸರು ಇಟ್ಟಿದ್ದೇವೆಂದು ಅಂದುಕೊಂಡಿದ್ದಾರೆ. ಅಂದಿಗೆ ಅದು ಸಕ್ರಮವೇ ಅಂದುಕೊಂಡರು ನಾನು ಯುಕ್ತವಯಸ್ಸಿಗೆ ಬಂದ ನಂತರ, ಸ್ವಲ್ಪ ಆಧ್ಯಾತ್ಮಿಕ ಜ್ಞಾನ ತಿಳಿದ ನಂತರ, ನಾನು ಯಾರೋ ನನಗೆ ತಿಳಿದ ನಂತರ ಆಗ ತಿಳಿದಿದೆ 'ನನ್ನದು' ಅಂದುಕೊಳ್ಳುವ ಹೆಸರು ನನ್ನದಲ್ಲವೆಂದು ತಿಳಿದಿದೆ. ಈ ವಿಷಯದಲ್ಲಿ ತಾಯಿತಂದೆಯರು ಸಹ ತಪ್ಪಾಗಿ ತಿಳಿದಿದ್ದಾರೆಂದು ಅರ್ಥವಾಗಿದೆ. ತಾಯಿತಂದೆಯರೇ ಅಲ್ಲ ಪ್ರತಿಯೊಬ್ಬರೂ ತಪ್ಪಾಗಿ ತಿಳಿದ್ದಿದ್ದಾರೆಂದು, ಪ್ರಪಂಚದಲ್ಲಿ ಯಾರಿಗೂ ಹೆಸರಿಲ್ಲವೆಂದು ಎಲ್ಲರೂ ಪ್ರಸ್ತುತ 'ನನ್ನದು' ಎಂಬ ಹೆಸರು ನಿಜಕ್ಕೆ ಅವರದು ಅಲ್ಲವೆಂದು ಅರ್ಥವಾಗಿದೆ. ಹಾಗೆ ಎಲ್ಲರೂ ಭ್ರಮಿಸುವುದಕ್ಕೆ ಕಾರಣ ಅವರ ಆಧ್ಯಾತ್ಮಿಕ ಜ್ಞಾನ ಅವರಿಗೇ ತಿಳಿಯದಿರುವುದೆಯೆಂದು ತಿಳಿದಿದೆ. ಯಾವಾಗ ಮನುಷ್ಯನಿಗೆ ತನ್ನನ್ನು ಕುರಿತು ತನಗೆ ತಿಳಿಯುತ್ತದೆಯೋ ಆಗ ತಾನು ಯಾರೋ ತಿಳಿದುಹೋಗುವುದರಿಂದ, ಅಲ್ಲಿಯವರೆಗು ತನ್ನ ಹೆಸರು ಅಂದುಕೊಂಡಿರುವುದು ತಪ್ಪೆಂದು, ನಿಜಕ್ಕೆ ತನ್ನ ಹೆಸರು ಅದು ಅಲ್ಲವೆಂದು ತಿಳಿದುಹೋಗುವುದರಿಂದ ಪ್ರಪಂಚದಲ್ಲಿ ಇರುವವರೆಲ್ಲರಿಗೂ ತಿಳಿಯದ ಸತ್ಯ ತಿಳಿದುಹೋಗುತ್ತಿದೆ.

ಯಾವಾಗಾದರೆ ತನ್ನ ಆತ್ಮವನ್ನು ಕುರಿತಾದ ಸತ್ಯ ತಿಳಿದುಹೋಗಿದೆಯೋ ಆಗ ತನ್ಯಾರೋ ತಿಳಿದುಹೋಗುತ್ತಿದೆ. ತಾನು ಯಾರೋ ತಿಳಿದಾಗ ಅಲ್ಲಿಯವರೆಗು ತನ್ನದು ಎಂದು ಹೇಳಿಕೊಳ್ಳುವ ಹೆಸರು ತನ್ನದಲ್ಲವೆಂದು ತಿಳಿದುಹೋಗುತ್ತಿದೆ. ಅದೇ ವಿಧವಾಗಿ ನನ್ನ ಆತ್ಮವನ್ನು ಕುರಿತು ನಾನು ತಿಳಿದುಕೊಂಡ ದಿನ ನಾನು ಯಾರೊ ನನಗೆ ತಿಳಿದುಹೋಗಿದೆ. ಆದುದರಿಂದ ಅಲ್ಲಿಯವರೆಗು ನನ್ನದು ಅಂದುಕೊಂಡ ಹೆಸರು ನನ್ನದಲ್ಲವೆಂದು ತಿಳಿದುಹೋಗುವುದಲ್ಲದೆ ಈ ವಿಷಯದಲ್ಲಿ ಮನುಷ್ಯರೆಲ್ಲರೂ ತಪ್ಪಾಗಿ ತಿಳಿದಿದ್ದಾರೆಂದು ತಿಳಿದುಹೋಗಿದೆ. ಅಂದಿನಿಂದ ಯಾವ ಕೆಲಸವನ್ನು ಮಾಡಿದರೂ, ಯಾವ ಮಾತನ್ನು ಮಾತನಾಡಿದರೂ ಅದು ನಾನೇ ಮಾಡಿದ್ದೇನೆಂದು, ನಾನೇ ಮಾತನಾಡಿದ್ದೇನೆಂದು ಎಲ್ಲರೂ ಅಂದುಕೊಂಡರೂ, ಆ ಕೆಲಸವನ್ನು ಮಾಡಿರುವುದು, ಆ ಮಾತು ಮಾತನಾಡಿರುವುದು ನಾನು ಅಲ್ಲ ಎಂಬ ಭಾವನೆ ನನ್ನಲ್ಲಿ ಬಂದಿದೆ, ಹಾಗಿರುವಾಗ ತ್ರೈತ ಸಿದ್ಧಾಂತವನ್ನು ಹೇಳಿರುವುದು, ಅದನ್ನು ಕುರಿತು ಮಾತನಾಡಿರುವುದು ನಾನೇಯೆಂದು ಎಲ್ಲರೂ ಅಂದುಕೊಂಡರೂ ನಿಜಕ್ಕೆ ಆ ಕೆಲಸವನ್ನು ಮಾಡಿರುವುದು, ಆ ಮಾತು ಮಾತನಾಡಿರುವುದು ನಾನು ಅಲ್ಲವೆಂದು ಅವರಿಗೆ ತಿಳಿಯದಂತೆ ಹೋದರೂ, ತೆರೆಹಿಂದಿರುವ ಸತ್ಯವೇನೋ ನನಗೆ ತಿಳಿಯುತ್ತದಾದ್ದರಿಂದ ತ್ರೈತ ಸಿದ್ಧಾಂತವನ್ನು ಯಾರು ಹೇಳಿದ್ದಾರೊ ಅವರ ಹೆಸರನ್ನೇ ಅಲ್ಲಿ ಬರೆಯಲಾಗಿದೆ. ಆ ಹೆಸರು ನನ್ನದೆಂದು ನೀವು ಅಂದು ಕೊಳ್ಳುವುದು ನಿಮ್ಮ ತಪ್ಪೇ ಹೊರತು, ಅದರಲ್ಲಿ ನನ್ನ ಅಜಾಗರೂಕ ಏನು ಇಲ್ಲ!

**ಪ್ರಶ್ನೆ :– ಮಸಿಬಳಿದು ಬೋರೆಹಣ್ಣನ್ನು ನೇರಳೆಹಣ್ಣಾಗಿ ತೋರಿಸಿದಂತೆ, ಹೆಸರು ನನ್ನದಲ್ಲವೆಂದು ಮೊದಲಿಗೇ ತಪ್ಪಿಸಿಕೊಂಡಿದ್ದೀಯಾ. ಪ್ರಬೋಧಾನಂದ ಎಂಬ ಹೆಸರು ನಿನ್ನದು ಅಲ್ಲದಿರುವಾಗ ನಿನ್ನ ಹೆಸರೇನು? ಹೇಳಬಲ್ಲೆಯಾ?**

**ಉತ್ತರ :–** ಸತ್ಯವನ್ನು ತಿಳಿದ ನಂತರ ನನ್ನ ಹೆಸರನ್ನು ನಾನು ಹೇಳುವುದರಲ್ಲಿ ನನಗೇನು ನಾಚಿಕೆ. ಮಸಿಬಳಿದು ಬೋರೆಹಣ್ಣನ್ನು ನೇರಳೆಹಣ್ಣಾಗಿ

ತೋರಿಸಬೇಕಾದ ಅವಶ್ಯಕತೆ ನನಗೆ ಇಲ್ಲ. ನೀನು ಮೊದಲಿಗೇ ನೇರಳೆಹಣ್ಣನ್ನು ತಪ್ಪಾಗಿ ಬೋರೆಹಣ್ಣೆಂದು ಅಂದುಕೊಳ್ಳುತ್ತಿದ್ದೀಯಾ. ಮೇಲಿನ ಬಣ್ಣವನ್ನು ನೋಡಿ ಮೋಸಹೋಗಬೇಕಾದ ಕೆಲಸವಿಲ್ಲ. ಬೋರೆಹಣ್ಣು ಹುಳಿಯಾಗಿರುತ್ತದೆ. ನೇರಳೆಹಣ್ಣು ವಗರಾಗಿರುತ್ತದೆ. ನಿನ್ನ ರುಚಿ ಏನೊ ನೋಡಿಕೋ, ಹುಳಿಯಾಗಿದ್ದರೆ ಬೋರೆಹಣ್ಣು, ವಗರಾಗಿದ್ದರೆ ನೇರಳೆಹಣ್ಣೆಂದು ತಿಳಿದುಹೋಗುತ್ತದೆ. ನನ್ನ ರುಚಿಯನ್ನು ನಾನು ನೋಡಿದ್ದೇನೆ. ನನ್ನ ರುಚಿ ವಗರೆಂದು ನನಗೆ ತಿಳಿದಿದೆ, ನನ್ನ ಬಣ್ಣ ಕಪ್ಪೆಂದು ತಿಳಿದಿದೆ. ಕಪ್ಪುಬಣ್ಣ, ವಗರು ರುಚಿರುವ ಕಾಯಿ ನೇರಳೆಹಣ್ಣು ಅಲ್ಲದಿದ್ದರೆ ಯಾವ ಹಣ್ಣು ಆಗುತ್ತದೋ ನೀವೇ ಹೇಳಿರಿ. ನನ್ನ ವಿಷಯ ನನಗೆ ತಿಳಿದಿದೆ, ಉಳಿದ ಪ್ರಜೆಗಳು ಸಹ ನನ್ನಂತೆ ಇರುವವರು, ನನ್ನ ಜಾತಿಯವರೇ ಆದ್ದರಿಂದ ಉಳಿದ ಎಲ್ಲರ ವಿಷಯ ಸಹ ತಿಳಿದಿದೆ. ಆದುದರಿಂದ "ನಿಮ್ಮವು ಅಂದುಕೊಂಡ ನಿಮ್ಮ ಹೆಸರುಗಳು ನಿಮ್ಮವಲ್ಲ" ಎಂದು ಹೇಳಿದ್ದೇನೆ.

**ಪ್ರಶ್ನೆ :– ಇಷ್ಟಕ್ಕೂ ನೀನ್ಯಾರೋ ಹೇಳಲಿಲ್ಲ. ನಿನ್ನ ಹೆಸರು ಏನು?**

**ಉತ್ತರ :– ನಾನು ಒಬ್ಬ ಅನಾದಿ.** ಅಂಗವಿಕಲನು, ನನಗೆ ಹೆಸರೆನ್ನುವುದೇ ಇಲ್ಲ. ನನಗೆ ಹೆಸರನ್ನು ಯಾರೂ ಇಡಲಿಲ್ಲ. ಆದರೆ ಒಂದು ಬಿರುದು ಮಾತ್ರ ಇದೆ. ನಾನು ಶರೀರದಲ್ಲಿ ಜೀವಿಸುವವನು, ಜೀವನದಲ್ಲಿ ಜೀವಿಸುವವನಾದ್ದರಿಂದ **"ಜೀವಿ"** ಎಂಬ ಬಿರುದು ಇದೆ. ಅದರಿಂದಲೇ ನನ್ನನ್ನು ಜೀವಿಯು ಎಂದು ಹೇಳಬೇಕಾಗಿರುತ್ತದೆ. ನನ್ನ ವಿಷಯ ಪಕ್ಕಕಿಟ್ಟು ನಿನ್ನ ವಿಷಯ ಸಹ ಅಷ್ಟೇ!

**ಪ್ರಶ್ನೆ :– ನೀನು ಏನು ಹೇಳುತ್ತಿದ್ದೀಯೋ ನಮಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಇಲ್ಲಿಯವರೆಗು ನೀನು 'ಅಸತ್ಯ ಹೇಳುವುದಿಲ್ಲ' ಎಂಬ ನಂಬಿಕೆ ನಿನ್ನ ಮೇಲೆ ಇರುತ್ತಿತ್ತು. ಆದರೆ ಈಗ ನೀನು ಹೇಳುವ ಮಾತುಗಳನ್ನನುಸರಿಸಿ ಆ ನಂಬಿಕೆ ಇಲ್ಲದಂತೆ ಹೋಗುತ್ತಿದೆ. ನಿನಗೆ ಏನು ತಿಳಿದಿದೆಯೋ ಏನೊ ಆಗಲಿ, ನಮಗೆ ಮಾತ್ರ ನಿನಗೆ ಬುದ್ಧಿಗೆಟ್ಟಿದೆಯೆಂದು ತಿಳಿದುಹೋಗಿದೆ.**

**ಉತ್ತರ :–** ಇಷ್ಟುಕಾಲ ನಿಜವಾಗಲು ನನಗೆ ಮತಿಭ್ರಮಿಸಿರುತ್ತಿತ್ತು. ಈಗೀಗಲೇ

ನನ್ನಬುದ್ಧಿ ಭ್ರಮೆಯನ್ನು ಬಿಟ್ಟು ಸತ್ಯದೊಳಗೆ ಬಂದಿದೆ. ಈಗ ನಿಮ್ಮ ಬುದ್ಧಿಯೇ ಭ್ರಮೆಯಲ್ಲಿ ಇದೆ.

**ಪ್ರಶ್ನೆ :– ನನ್ನ ಹುಟ್ಟಿದ ದಿನ ನನಗೆ ತಿಳಿದಿದೆ, ನನ್ನ ತಂದೆತಾಯಿಯರು ನನಗೆ ತಿಳಿದಿದೆ. ನನ್ನ ಅಣ್ಣತಮ್ಮಂದಿರು ನನಗೆ ತಿಳಿದಿದ್ದಾರೆ. ನಾನು ತಿನ್ನುವ ತಿಂಡಿ ತಿಳಿದಿದೆ, ನಾನು ಕುಡಿಯುವ ನೀರು ತಿಳಿದಿದೆ. ಇವೆಲ್ಲ ನಿನಗೂ ಇವೆ. ಆದರೆ ಇದರಲ್ಲಿ ನನಗಿರುವ ಭ್ರಮೆ ಏನು? ನಿನಗೆ ಇಲ್ಲದ ಭ್ರಮೆ ಏನು?**

**ಉತ್ತರ:–** ನಾನು ಎಷ್ಟು ಹೇಳಿದರೂ ನಿನ್ನ ಲೋಕ ನಿನ್ನದು, ನನ್ನ ಲೋಕ ನನ್ನದು ಎನ್ನುವಂತಿದೆ. ನಿನ್ನ ಲೋಕವೇನೊ? ನನ್ನ ಲೋಕವೇನೊ? ಅಂದರೇ ನಿನ್ನ ಭ್ರಮೇ ಎನೊ? ನನ್ನ ಬೋಧನೆ ಏನೊ? ನಿನಗೆ ಅರ್ಥವಾಗುವುದಕ್ಕೆ ಒಂದು ಉದಾಹರಣೆಯನ್ನು ಕೊಟ್ಟು ಹೇಳುತ್ತೇನೆ ಕೇಳು. ಒಬ್ಬ ವ್ಯಕ್ತಿ ಸನ್ಯಾಸತ್ವವನ್ನು ತೆಗೆದುಕೊಂಡು, ಕಾಷಾಯ ಬಟ್ಟೆಗಳನ್ನು ಧರಿಸಿ, ಗಡ್ಡ ಬೆಳೆಸಿ ಮೇಲ್ನೋಟಕ್ಕೆ ಕೈಲಾಸದಿಂದ ಇಳಿದುಬಂದ ಈಶ್ವರನಂತೆ ಕಾಣಿಸುತ್ತಿದ್ದನು. ಒಂದು ದಿನ ಆತನು ನಮ್ಮ ಹತ್ತಿರಕ್ಕೆ ಬರುವುದು ನಡೆದಿದೆ. ಒಂದು ದಿನವೆಲ್ಲವೂ ನಮ್ಮ ಹತ್ತಿರವೇ ಇದ್ದ ಆ ಸನ್ಯಾಸಿ ಸ್ವಾಮಿಯವರು, ನಾವು, ಇನ್ನೂ ಕೆಲವರು ಎಲ್ಲರೂ ಸೇರಿ ನಮ್ಮ ಮನೆಹತ್ತಿರವೇ ಹೊರಗಡೆ ಮಲಗಿದ್ದೇವೆ. ರಾತ್ರಿ ಒಂದುಗಂಟೆ ಸಮಯದಲ್ಲಿ ಕಾಷಾಯ ಬಟ್ಟೆಗಳು ಧರಿಸಿರುವ ಸ್ವಾಮಿಯವರು ಸ್ವಪ್ನದೊಳಗೆ ಹೋಗುವುದು ನಡೆದಿದೆ. ಸ್ವಪ್ನದಲ್ಲಿ ಆತನು ಒಂದು ತೋಟದಲ್ಲಿ ನಿವಾಸ ಏರ್ಪಡಿಸಿಕೊಂಡಿರುವಾಗ, ಪ್ರಕ್ಕತೋಟದಲ್ಲಿರುವ ವ್ಯಕ್ತಿ ಸ್ವಾಮಿಯವರ ಹತ್ತಿರಕ್ಕೆ ಬಂದು ತನ್ನ ಕೋಳಿ ಕಾಣಿಸಲಿಲ್ಲವೆಂದು, ಕೆಂಪುಬಣ್ಣದ ಪುಕ್ಕಗಳಿರುವ ಕೋಳಿಯೆಂದು, ಅದರ ಗುರುತನ್ನು ಮತ್ತು ಬಣ್ಣವನ್ನು ಸಹ ಹೇಳಿದ್ದಾನೆ. ಆ ಸ್ವಾಮಿಯವರು ಪಕ್ಕತೋಟದ ಯಜಮಾನ ಕೇಳಿದ ಕೋಳಿಯನ್ನು ನೋಡಲಿಲ್ಲ ವೆಂದು ಹೇಳಿದ್ದಾನೆ. ಅಲ್ಲಿಗೆ ಆ ಕೋಳಿ ಯಜಮಾನ ಕೋಳಿಯನ್ನು ಕುರಿತು ಬಾಧೆಪಡುತ್ತಾ ಅಲ್ಲಿಂದ ಹೋಗಿದ್ದಾನೆ. ಆತನು ಹೋಗುವ ಸಮಯದಲ್ಲಿ ತನ್ನಕೋಳಿ ಎಲ್ಲಿಯಾದರೂ ಕಾಣಿಸುತ್ತದೇನೊ ಎಂಬ ಆಸೆಯಿಂದ ಆಕಡೆ

ಈಕಡೆ ನೋಡುತ್ತಾ ಹೋಗಿದ್ದಾನೆ. ಆಗ ಆತನಿಗೆ ತನ್ನಕೋಳಿ ಕಾಣಿಸಲಿಲ್ಲ ಆದರೆ, ತನ್ನಕೋಳಿ ಕೆಂಪುಪುಕ್ಕಗಳು ಒಂದು ತೊಗರಿಗಿಡದ ಕೆಳಗೆ ಕಾಣಿಸಿವೆ. ಆಗ ಆತನಿಗೆ ತನ್ನ ಕೋಳಿ ಪುಕ್ಕಗಳು ಸ್ವಾಮಿ ಇರುವ ತೋಟದಲ್ಲಿಯೇ ಕಾಣಿಸುವುದರಿಂದ, ಆ ಪ್ರಾಂತದಲ್ಲಿ ಸ್ವಾಮಿ ಹೊರತು ಯಾರೂ ಇಲ್ಲದಿರುವುದರಿಂದ, ಸ್ವಾಮಿಯೇ ತನ್ನ ಕೋಳಿಯನ್ನು ಸಾಯಿಸಿ ಅಡುಗೆಮಾಡಿಕೊಂಡು ತಿಂದಿರುತ್ತಾನೆಂದು ಅನುಮಾನ ಬಂದಿದೆ. ತಕ್ಷಣ ಸ್ವಾಮಿಯವರ ಹತ್ತಿರಕ್ಕೆ ಬಂದು ತನ್ನ ಕೋಪವೆಲ್ಲವನ್ನು ಸ್ವಾಮಿಮೇಲೆ ತೋರಿಸಿದನು. ಆಗ ಆ ಸ್ವಾಮಿ ನನಗೆ ಕೋಳಿ ವಿಷಯ ತಿಳಿಯದೆಂದು ಹೇಳಿದರೂ ಕೋಳಿಯಜಮಾನ ಕೇಳಲಿಲ್ಲ. ಇಬ್ಬರ ಮಧ್ಯದಲ್ಲಿ ಮಾತುಮಾತು ಬೆಳೆದುಹೋಗಿದೆ. ಇದೆಲ್ಲವೂ ಸ್ವಪ್ನದಲ್ಲಿ ನಡೆಯುತ್ತಿರುವ ಪ್ರತ್ಯಕ್ಷ ಪ್ರಸಾರದಂತೆ ಸ್ವಾಮಿಯವರ ಮಾತುಗಳೆಲ್ಲ ಹೊರಗೆ ಕೇಳಿಸುತ್ತಿವೆ. ಸ್ವಾಮಿಯವರು ನಿದ್ರೆಹೋಗಿದ್ದಾನೆ ಎಂದು ನಾವು ಅಂದುಕೊಂಡರೂ ಅಲ್ಲಿ ಆತನು ಮಾತನಾಡುವ ಮಾತಗಳನ್ನನುಸರಿಸಿ ಸ್ವಾಮಿಯವರು ಸ್ವಪ್ನದಲ್ಲಿ ಇದ್ದಾನೆಂದು ಅರ್ಥವಾಗಿದೆ. ಅಲ್ಲಿಯೇ ಮಲಗಿರುವ ಹತ್ತುಜನ ನಿದ್ರೆಯಿಂದ ಎದ್ದು ಸ್ವಾಮಿ ಮಾತುಗಳನ್ನು ಕೇಳುತ್ತಿದ್ದಾರೆ.

ಅಷ್ಟರಲ್ಲಿ ಸ್ವಪ್ನದಲ್ಲಿ ಕೋಳಿಯ ಯಜಮಾನ ಸ್ವಾಮಿಯವರನ್ನು ಹೊಲಸು ಪದಗಳನ್ನು ಉಪಯೋಗಿಸಿ ಬೈಯ್ದಿದ್ದಾನೆ. ಅದಕ್ಕೆ ಪ್ರತಿಯಾಗಿ ಸ್ವಾಮಿಯವರು ಸಹ ಹೊಲಸುಮಾತುಗಳನ್ನೆ ಬೈಯ್ಯುವುದು ನಮಗೆ ಕೇಳಿಸುತ್ತಿದೆ. ಅಷ್ಟರಲ್ಲಿ ಕೋಳಿ ಯಜಮಾನ ಸ್ವಾಮಿಯವರನ್ನು ಹೊಡೆದಂತೆ ಮೇಲ್ನೋಟಕ್ಕೆ ಕೇಳಿಸುವ ಮಾತುಗಳನ್ನನುಸರಿಸಿ ನಮಗೆ ಅರ್ಥವಾಗಿದೆ. ಸ್ವಾಮಿಯವರು ನನ್ನನ್ನೇ ಹೊಡೆಯುತ್ತೀಯಾ! ಎಂದು ಕೋಳಿ ಯಜಮಾನನ್ನು ಹೊಡೆಯುವುದು ಆ ಘರ್ಷಣೆ ಎಲ್ಲವೂ ನಮಗೆ ತಿಳಿದಿದೆ. ಆಗ ನಾವು ಅದನ್ನು ನಿವಾರಿಸುವುದಕ್ಕೆ ಸ್ವಪ್ನದೊಳಗೆ ಅವರ ಮಧ್ಯದೊಳಗೆ ಹೋಗಲಾರೆವು. ಆದುದರಿಂದ ಸ್ವಾಮಿಯವರನ್ನು ಗಟ್ಟಿಯಾಗಿ ತಟ್ಟಿ ಎಬ್ಬಿಸಲಾಯಿತು. ಆಗ ಆತನು ಸ್ವಪ್ನದಿಂದ ಹೊರಗೆ ಬಂದಿದ್ದಾನೆ ಆದರೆ, ಸ್ವಪ್ನದಲ್ಲಿ ನಡೆದಿರುವುದೆಲ್ಲವೂ ನಮಗೆ

ತಿಳಿದಿದೆಯೆಂದು ಆತನಿಗೆ ತಿಳಿದಿಲ್ಲ. ಸ್ವಾಮಿಯವರು ಎಚ್ಚರಗೊಂಡ ನಂತರ ಅದು ಸ್ವಪ್ನವೆಂದು ಅದರಿಂದ ಹೊರಬಿದ್ದಿದ್ದೇನೆಂದು ತಿಳಿದರೂ, ಆಗ ಕೋಳಿಯ ಯಜಮಾನನ ಮೇಲೆ ಬಂದಿರುವ ಕೋಪ ಆತನಲ್ಲಿರುವುದೂ, ಹೊಡೆದಾಟದಲ್ಲಿ ಕೋಪದಿಂದ ತೂಗಾಡಿಹೋದ ಚಲನೆ ಶರೀರದಲ್ಲಿ ಇನ್ನೂ ಸ್ವಲ್ಪ ಇರುವುದೂ, ತೋಟಪಕ್ಕದವನು ನನ್ನನ್ನು ಹೊಡೆದಿದ್ದಾನೆಂಬ ಅವಮಾನದ ಭಾರ ಹತ್ತು ನಿಮಿಷಗಳವರೆಗು ಆತನನ್ನು ಬಿಡದಂತೆ ಇರುವುದನ್ನು ನೋಡಿದರೆ ಸ್ವಪ್ನದಲ್ಲಿ ನಡೆದಿರುವುದೆಲ್ಲ ನಿಜವೇ ಎನ್ನುವಂತಿದ್ದರೂ, ಎಚ್ಚರಿಕೆಯಲ್ಲಿ ಅದೆಲ್ಲವೂ ಅಸತ್ಯವೆಂದು ನಮ್ಮ ಭ್ರಮೆಯೆಂದು ತಿಳಿಯುತ್ತಿದೆ. ನಡೆದಿರುವುದು ಭ್ರಮೆ ಎಂದು ಅಂದುಕೊಂಡರೂ ಅದಕ್ಕೆ ಸರಿಯಾದ ಸಮಾಧಾನ ಇಲ್ಲ. ಸ್ವಪ್ನದಿಂದ ಹೊರಬಿದ್ದ ಹತ್ತು ನಿಮಿಷಗಳವರೆಗು ಆ ಸಂಘಟನೆಯಲ್ಲಿದ್ದ ಕೋಪ, ಎದೆಬಡಿತ, ಭಯ, ಶರೀರದಲ್ಲಿ ತೂಗಾಟ ಮೊದಲಾದವೆಲ್ಲ ಇರುವುದರಿಂದ ಅದು ಅಸತ್ಯವಲ್ಲ ಸತ್ಯವೇಯೆನ್ನುವಂತೆ ಅನಿಸುತ್ತಿದೆ. ಎಷ್ಟು ಸತ್ಯವೆನಿಸಿದರೂ ಎಚ್ಚರಬಂದ ನಂತರ ಯಾರಾದರೂ ಅದನ್ನು ಅಸತ್ಯವೆಂದು, ಭ್ರಮೆಯೆಂದು ಹೇಳದೆ ತಪ್ಪುವುದಿಲ್ಲ. ಸ್ವಪ್ನದೊಳಗೆ ಹೋಗಿಬಂದವನು ಸ್ವಪ್ನದಲ್ಲಿನ ಅನುಭವಗಳೆಲ್ಲವನ್ನು ಅನುಭವಿಸಿರುವುದರಿಂದ ಆತನು ಸಂಶಯದಲ್ಲಿ ಬಿದ್ದು, ಸತ್ಯವೆಂದಾಗಲಿ, ಅಸತ್ಯವೆಂದಾಗಲಿ ನಿರ್ಧಾರಣೆಗೆ ಬರದಂತಿರುತ್ತಾನೆ.

ಸ್ವಪ್ನಕ್ಕೆ ಹೊರಗಡೆ ಇರುವವನು ಮಾತ್ರ ನಡೆದಿರುವುದು ಅಸತ್ಯವೇ ಎಂದು ಹೇಳುತ್ತಾನೆ. ಏಕೆಂದರೆ! ತನ್ನ ಕಣ್ಣೆದುರುಗಡೆಯೇ ಸ್ವಾಮಿ ಮಲಗಿರುವುದರಿಂದ ಹೊರಗಿನವರ ದೃಷ್ಠಿಯಲ್ಲಿ ತೋಟವಿಲ್ಲ, ಕೋಳಿಯಿಲ್ಲ, ಕೋಳಿ ಯಜಮಾನ ಇಲ್ಲ. ಆದುದರಿಂದ ಸ್ವಾಮಿಯವರ ಮಾತುಗಳೆಲ್ಲ ಕೇವಲ ಭ್ರಮಯೇ ಎಂದು ಹೇಳುತ್ತಾರೆ. ಸ್ವಾಮಿಯವರ ವಿಷಯಕ್ಕೆ ಬಂದರೆ, ಆತನು ಸ್ವತಃವಾಗಿ ಅನುಭವಿಸಿದ ಅನುಭಗಳನ್ನನುಸರಿಸಿ ಅದನ್ನು 'ಭ್ರಮೆ' ಎಂದು ಹೇಳಲಾರನು. ಈ ವಿಧವಾಗಿ ಸ್ವಪ್ನಕ್ಕೆ ಹೊರಗಡೆ ಇರುವ ಹತ್ತುಜನ ಕೋಳಿ, ಕೋಳಿ ಯಾಜಮಾನ ಏನೂಯಿಲ್ಲ ಇದೆಲ್ಲವೂ ಅಸತ್ಯವೆಂದು ಅನ್ನುತ್ತಿರುವಾಗ, ಸ್ವಪ್ನವನ್ನು

ಹೊಂದಿದವನು ಮಾತ್ರ ನಿಜವೇ ಎಂದು ಹೇಳುತ್ತಿದ್ದಾನೆ. ಈ ವಿಷಯ ಬಹಳ ಜನರನ್ನು ನಿಜವಾ! ಸುಳ್ಳಾ!! ಎಂದು ಸಂಶಯದಲ್ಲಿ ಇಡುತ್ತಿದೆ.

**ಪ್ರಶ್ನೆ :– ಈ ವಿಷಯದಲ್ಲಿ ನೀವೇನು ಹೇಳುತ್ತೀರಾ?**

**ಉತ್ತರ :–** ಒಬ್ಬರಿಗೆ ಸತ್ಯವಾಗಿರುವುದು, ಹತ್ತುಜನರಿಗೆ ಅಸತ್ಯವಾದುದು ಆಗಿರುವುದರಿಂದ ಆ ಸ್ವಪ್ನ ಆತನಿಗೊಬ್ಬನಿಗೆ ನಿಜವೇ ಆದರೂ ಎಲ್ಲರಿಗೂ ಅಸತ್ಯವೇ ಆಗುತ್ತದೆ. ಅಸತ್ಯವನ್ನು **'ಕಲ್ಲ' (ಕನಸು)** ಎನ್ನುವುದು ಸಹ ನಡೆಯುತ್ತಿದೆ. ಕಲ್ಲ ಎಂದರೆ ಅಸತ್ಯವೆಂದು ಅರ್ಥವಿದೆ. ಸ್ವಪ್ನ ಒಬ್ಬರ ದೃಷ್ಠಿಯಲ್ಲಿ ಸತ್ಯವಾದರೂ ನೂರಜನರ ದೃಷ್ಠಿಯಲ್ಲಿ ಅಸತ್ಯವಾಗುವುದರಿಂದ ಸ್ವಪ್ನವನ್ನು ಕಲ್ಲ ಎಂದು ಹೇಳಿದ್ದಾರೆ. **'ಕಲ್ಲ'** ಎಂಬಮಾತು ಕಾಲಕ್ರಮೇಣ **'ಕಲ' (ಕನಸಾಗಿ)** ಆಗಿ ಬದಲಾವಣೆಯಾಗಿದೆ. 'ಕಲ್ಲ' ಎಂಬ ಪದ 'ಕಲ' (ಕನಸಾಗಿ) ಆಗಿ ಬದಲಾದರೂ ಅದು ಅಸತ್ಯವೆಂದು ಅರ್ಥಮಾಡಿಕೊಳ್ಳಬೇಕು. ಒಬ್ಬರ ವಿಷಯದಲ್ಲಿ ನಿಜವಾದರೂ ಅನೇಕಜನರ ವಿಷಯದಲ್ಲಿ ಅಸತ್ಯವಾಗುವುದರಿಂದ ಹೆಚ್ಚು ಸಾಂದ್ರತೆ ಇರುವ ವಿಷಯ ಪ್ರಚಾರವಾಗಿದೆ. 'ಕಲ್ಲ' ಎಂಬ ಪದದಲ್ಲಿ 'ಲ' ಕೆಳಗೆ ಲ ವತ್ತು ಇಲ್ಲದಂತಿರುವುದರಿಂದ ಕಲ್ಲ ಎಂಬ ಪದ ಕಲ (ಕನಸು) ಆಗಿ ಬದಲಾಗಿದೆ. ಈ ವಿಷಯವಾಗಿ ನನ್ನನ್ನು ಕೇಳಿರುವುದರಿಂದ ಸ್ವಾಮಿಗೆ ಬಂದಿರುವ ಸ್ವಪ್ನವನ್ನು ಕುರಿತು ವಿಶ್ಲೇಷಿಸಿ ನೋಡಿದರೆ, ಈ ವಿಧವಾಗಿ ಅರ್ಥವಾಗುತ್ತಿದೆ. 'ಸ್ವಪ್ನ' ಎಂಬ ಪದದಲ್ಲಿಯೇ ಅದಕ್ಕೆ ಸ್ವಲ್ಪ ಅರ್ಥ ಇದೆ. ಸ್ವಪ್ನ ಎಂಬ ಪದವನ್ನು ಬಿಡಿಸಿ ನೋಡಿದರೆ ಈ ವಿಧವಾಗಿ ಇದೆ. ಸ್ವ+ಪನ=ಸ್ವಪ್ನವಾಗಿ ಹೇಳಲಾಗುತ್ತಿದೆ. ಸ್ವ ಎಂದರೆ ನಿನ್ನ ಸ್ವಂತಕ್ಕೆ ಮಾತ್ರವೇ ಎಂದು ಅರ್ಥ. ನಿನೊಬ್ಬನಿಗೇ ಎಂದು ಸಹ ಅರ್ಥ ಬರುತ್ತದೆ. ಸ್ವ ಎಂದರೇ ನಿನ್ನದು ಎಂದೂ ಪನ ಎಂದರೆ ಧನ ಎಂದೂ ಅರ್ಥ ನಿನ್ನ ಸ್ವಂತ ಧನ ಎಂಬಮಾತನ್ನು ನಿನ್ನ ಸ್ವಂತ ಅರ್ಥ ಎಂದು ಸಹ ಹೇಳಬಹುದು. ಸ್ವಂತಕ್ಕೆ ಅದು ನಿಜವೆನಿಸಿದರೂ, ನಿಜವೇ ಆದರೂ ಕೊನೆಗೆ ಎಲ್ಲರಿಂದ ಅದು ಅಸತ್ಯವಾಗಿ, ಅಥವಾ ಕನಸಾಗಿ ನಿರ್ಣಯಿಸಲಾಗಿದೆ.

ಅದೇ ವಿಧವಾಗಿ ನಿನಗೆ ತಂದೆತಾಯಿಯರು ಇದ್ದಂತೆ ತಿಳಿದರೂ, ನಿನ್ನ ಹುಟ್ಟಿದ ದಿನ ನಿನಗೆ ತಿಳಿದರೂ, ನೀನು ತಿನ್ನುವುದು ಕುಡಿಯುವುದು ನಿನಗೆ ತಿಳಿದರೂ ಅದು ಎಲ್ಲವೂ ಕನಸೆ. ನಿನ್ನವರೆಂದುಕೊಂಡ ತಾಯಿತಂದೆಯರು ನಿನ್ನವರಲ್ಲ. ಅವರು ಅಸತ್ಯ. ಸತ್ಯವಾಗಿ ನಿನ್ನ ತಾಯಿ ತಂದೆಯರು ಬೇರೆ ಇದ್ದಾರೆ. ನಿನ್ನ ಹುಟ್ಟಿದ ದಿನ ನಿನಗೆ ತಿಳಿದರೂ ಅದು ಕನಸೆ. ನೀನು ನಿಜವಾಗಲು ಸೃಷ್ಠಿ ಆದಿಯಲ್ಲಿಯೇ ಹುಟ್ಟಿದ್ದೀಯಾ. ನೀನು ತಿಂದಿದ್ದೇನೆ ಕುಡಿದಿದ್ದೇನೆ ಎಂಬ ಮಾತು ಸಹ ನಿನಗೆ ಸತ್ಯವೆನಿಸಿದರೂ ನಿಜಕ್ಕೆ ಅದು ಅಸತ್ಯವೆಯಾಗುತ್ತದೆ. ಸ್ವಪ್ನ ಅಂತರಂಗದಲ್ಲಿ ನಡೆಯುವ ಸತ್ಯವಾದರೂ ಬಾಹ್ಯರಂಗದಲ್ಲಿ ಅದು ಅಸತ್ಯವಾಗುತ್ತದೆ. ಅದೇ ವಿಧವಾಗಿ ನಿನ್ನ ಸ್ವಂತ ಭಾವನೆಯಲ್ಲಿ ಎಷ್ಟು ನಿಜವಿದ್ದರೂ ಹೊರಗಿನ ಸತ್ಯದ ಪ್ರಕಾರ ಸ್ವಂತ ಭಾವನೆಗಳನ್ನು ಮೀರಿದ ಶಾಸ್ತ್ರಭಾವವೇ ಸತ್ಯವಾಗುತ್ತದೆ. ಆದುದರಿಂದ ನನಗೆ ಇಂತಹವರು ತಾಯಿತಂದೆಯರು ಎಂದು ಅಂದುಕೊಂಡರೂ ಅದು ಸ್ವಂತ ಭಾವವೇಯಾಗಲಿ ಸತ್ಯವೆಂದು ಹೇಳಲಾರೆವು. ಸತ್ಯವನ್ನು ಪರಿಶೋಧಿಸಿ ನೋಡಿದರೂ, ಶಾಸ್ತ್ರವನ್ನು ಅನುಸರಿಸಿ ನೋಡಿದರೂ ಪ್ರಕೃತಿ ಪರಮಾತ್ಮ ತಾಯಿತಂದೆಯರೆಂದು, ಬಾಹ್ಯವಾಗಿ ಕಾಣಿಸುವವರು ನಿನ್ನ ತಾಯಿತಂದೆಯರು ಅಲ್ಲವೆಂದು ತಿಳಿಯುತ್ತಿದೆ. ಜಗತ್ತಿನಲ್ಲಿರುವ ಪ್ರತಿ ಮನುಷ್ಯ ಪ್ರತಿ ವಿಷಯದಲ್ಲಿಯೂ ತಪ್ಪು ಭಾವನೆ ಹೊಂದಿದ್ದಾನೆಂದು ತಿಳಿಯುತ್ತಿದೆ. ಮನುಷ್ಯನಿಗೆ ಆಧ್ಯಾತ್ಮಿಕ ಜ್ಞಾನ ತಿಳಿಯದವರೆಗು ತನ್ನ ಭ್ರಮೆ ಏನೊ? ತನಗೇ ಗೊತ್ತಿಲ್ಲ. ಆದುದರಿಂದ ಈದಿನ ಆತ್ಮಗಳ ಜ್ಞಾನ ತಿಳಿಯದ ಮನುಷ್ಯರೆಲ್ಲರೂ ತಾನ್ಯಾರೊ ತಿಳಿಯದೆ, ತನ್ನದು ಅಲ್ಲದಿರುವುದನ್ನು ತನ್ನದೇ ಅಂದುಕೊಳ್ಳುತ್ತಿದ್ದಾನೆ. ತಾನು ಬರೆಯದಿರುವುದನ್ನು ತಾನೇ ಬರೆದಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಸತ್ಯವಾಗಿ ಜೀವಿಯು ಏನು ಮಾಡದವನು, ಕೈಲಾಗದವನು. ಪ್ರಸ್ತುತ ನಾನು ದೈವಜ್ಞಾನವನ್ನು ಅನುಸರಿಸಿ ನನ್ನ ಸ್ಥಿತಿಯನ್ನು ತಿಳಿದಿದ್ದೇನೆ. ಆದುದರಿಂದ ಸಿದ್ಧಾಂತವನ್ನು ಕಂಡುಹಿಡಿದಿರುವುದು ನಾನು ಅಲ್ಲವೆಂದು ಹೇಳುತ್ತಿದ್ದೇನೆ. ಮನುಷ್ಯನ ಶರೀರವೆಲ್ಲವೂ ವ್ಯಾಪಿಸಿರುವ ಆತ್ಮವೇ ಎಲ್ಲಾ ಕೆಲಸಗಳು ಮಾಡುತ್ತಿದೆ. ಶರೀರ ಪೂರ್ತಿ ಆತ್ಮದೇ ಅದಾಗ ಶರೀರಕ್ಕಿರುವ ಹೆಸರು ಸಹ ಆತ್ಮದೇ ಆಗುತ್ತದೆ.

**ಪ್ರಶ್ನೆ :– ಈಗ ನೀವು ಏನು ಹೇಳಬೇಕೆಂದುಕೊಂಡಿದ್ದೀರಾ?**

**ಉತ್ತರ :–** ಈಗಾಗಲಿ, ಎಂದಿಗಾಗಲಿ ನಾನು ಏನು ಹೇಳಬೇಕೆಂದುಕೊಳ್ಳಲಿಲ್ಲ. 'ನಾನು ಹೇಳುತ್ತೇನೆ' ಎಂದು ಅಂದುಕೊಳ್ಳುವುದು ತಪ್ಪೆಂದು ತಿಳಿದಿದೆ. ನಿಜಕ್ಕು ಏನು ಮಾಡಬೇಕೆಂದರೂ ಅದು ಆತ್ಮವೇ ಮಾಡಬೇಕು. ವ್ಯವಹಾರಿಕವಾಗಿ ಉಳಿದವರು ತಿಳಿಯದತನದಲ್ಲಿ ನನ್ನನ್ನು ಪ್ರಬೋಧಾನಂದನಾಗಿ ಅಂದು ಕೊಂಡರೂ ಆಧ್ಯಾತ್ಮಿಕ ತಿಳಿದವರೂ ನನ್ನನ್ನು ಜೀವಿಯಾಗಿಯೇ ಲೆಕ್ಕಿಸಿ, ಪ್ರಬೋಧಾನಂದ ಹೆಸರಿರುವವನನ್ನು ಆತ್ಮವಾಗಿ ಲೆಕ್ಕಿಸುತ್ತಾರೆ. ನೀವು ಏನು ಪ್ರಶ್ನೆ ಕೇಳಿದರೂ ಉತ್ತರವನ್ನು ಆತ್ಮವೇ ಹೇಳುತ್ತದೆ. ನಾನು (ಜೀವಿಯು) ಶರೀರದಲ್ಲಿ ಪಕ್ಕದಲ್ಲಿದ್ದು ಹೇಳುವುದನ್ನು ಕೇಳುತ್ತಿದ್ದೇನೆ.

**ಪ್ರಶ್ನೆ:– ನಿಮ್ಮ ಮಾತಿನ ಪ್ರಕಾರವೇ ನೀವು ಹೇಳಲಿಲ್ಲ, ನಿಮ್ಮೊಳಗಿರುವ ಆತ್ಮವೇ ಹೇಳುತ್ತಿದೆಯೆಂದು ಅಂದುಕೊಳ್ಳುತ್ತಿದ್ದೇವೆ. ಎಲ್ಲರಲ್ಲಿಯೂ ಸಹ ಹಾಗೆಯೇ ಇದೆಯೆಂದು ನೀವು ಹೇಳುತ್ತಿದ್ದೀರಾ. ಹಾಗಿರುವಾಗ ಕೆಲವು ಸಂದರ್ಭಗಳಲ್ಲಿ ಮನುಷ್ಯ ತಪ್ಪಾಗಿ ಮಾತನಾಡುವುದು, ಅಜ್ಞಾನವಾಗಿ ಮಾತನಾಡುವುದು, ಅಸತ್ಯವಾಗಿ ಮಾತನಾಡುವುದು ನಡೆಯುತ್ತಿದೆ ಅಲ್ಲವೆ! ಆಗ ಆತ್ಮಕೂಡಾ ಅಜ್ಞಾನವಾಗಿ ಮಾತನಾಡಿದಂತೇನಾ? ಆತ್ಮಕೂಡಾ ಅಸತ್ಯವನ್ನು ಹೇಳಿದಂತೆನಾ? ಜ್ಞಾನಸ್ವರೂಪ ವಾದುದು ಆತ್ಮಯೆಂದು ನೀವೇ ಹೇಳಿದ್ದೀರಾ. ಆತ್ಮಕ್ಕೆ ತಿಳಿಯದಿರುವು ದೆನ್ನುವುದು ಇಲ್ಲ ಎಂದಿದ್ದೀರಿ. ಹಾಗಿರುವಾಗ ಆತ್ಮ ಸ್ವತಃವಾಗಿ ಏಕೆ ಹಾಗೆ ಮಾತನಾಡಿದೆ? ಒಂದು ಪ್ರಶ್ನೆಗೆ ಉತ್ತರವನ್ನು ಸಹ ತಪ್ಪು ಹೇಳುವಾಗ ಆತ್ಮ ಹೇಳುತ್ತಿದೆಯೆಂಬ ನಿಮ್ಮ ಮಾತನ್ನು ಹೇಗೆ ನಂಬಬೇಕು?**

**ಉತ್ತರ:–** ಮನುಷ್ಯನಲ್ಲಿ ಆತ್ಮ ಮಾತನಾಡುತ್ತಿದೆಯೆಂದು ನಂಬಬಾರದೆಂಬ ಉದ್ದೇಶದಿಂದಲೇ ಆತ್ಮ ಹಾಗೆ ಅಸತ್ಯವನ್ನು ಹೇಳುತ್ತಿದೆ. ಒಂದು ಅಸತ್ಯವನ್ನೇ ಅಲ್ಲ, ಅಕ್ರಮವಾಗಿ, ಅನ್ಯಾಯವಾಗಿ ಸಹ ಮಾತನಾಡುತ್ತಿದೆ. ಹಾಗೆ ಮಾತನಾಡುವುದರಿಂದ ಯಾರ ದೃಷ್ಠಿ ಆತ್ಮ ಮೇಲೆ ಹೋಗದಂತೆ ಜೀವಾತ್ಮನ

ಮೇಲೆಯೇ ಹೋಗಬೇಕೆಂಬ ಉದ್ದೇಶದಿಂದಲೇ ಆತ್ಮ ಆ ವಿಧವಾಗಿ ಮಾತನಾಡುತ್ತಿದೆ. ಮನುಷ್ಯ ಮಾತನಾಡುವ ಕೆಟ್ಟ ಮಾತುಗಳನ್ನು, ಮನುಷ್ಯ ಮಾಡುವ ಅತ್ಯಾಚಾರಗಳನ್ನು, ಹತ್ಯೆಗಳನ್ನು ಆತ್ಮವೇ ಮಾಡುತ್ತಿದೆಯೆಂದು ಘಂಟಾಪಥವಾಗಿ ಹೇಳುತ್ತಿದ್ದೇನೆ. ಆ ವಿಧವಾಗಿ ಶರೀರದಲ್ಲಿನ ಆತ್ಮ ಶರೀರವನ್ನು ಕದಲಿಸಿ ಮಾಡಿಸುವ ಕಾರ್ಯಗಳನ್ನು ನೋಡಿಯಾಗಲಿ, ಮಾತನಾಡಿಸುವ ಮಾತಗಳನ್ನು ನೋಡಿಯಾಗಲಿ, ಯಾರೂ ಸಹ ಈ ಕೆಲಸ ಮಾಡುವುದು ಆತ್ಮಯೆಂದು, ಈ ಮಾತು ಮಾತನಾಡುವುದು ಆತ್ಮವೇಯೆಂದು ಯಾರೂ ನಂಬುವುದಿಲ್ಲ, ನಂಬುವುದಕ್ಕೆ ಸ್ವಲ್ಪವೂ ಅವಕಾಶ ಇಲ್ಲದಂತೆ ಆತ್ಮವೇ ಮಾಡುತ್ತಿದೆ. ಸತ್ಯವನ್ನು ತಿಳಿದ ನಮ್ಮಂಥವರು ಏನು ಹೇಳಿದರೂ ನಂಬದಂತೆ ಆತ್ಮ ಮಾಡುತ್ತಿದೆ. ಈ ವಿಧವಾಗಿ ಮಾಡುವುದರಿಂದ ಆಧ್ಯಾತ್ಮಿಕ (ಆತ್ಮವನ್ನು ಅಧ್ಯಯನ ಮಾಡುವುದು) ಎನ್ನುವುದರಕಡೆ ಯಾರೂ ಹೋಗಬಾರದೆಂಬ ಉದ್ದೇಶ ಹೊರತು ಬೇರೆ ಏನು ಇಲ್ಲ. ಅದರಿಂದ ಮನುಷ್ಯರು ಇಲ್ಲಿಯವರೆಗು ಆತ್ಮದಕಡೆ ದೃಷ್ಠಿ ಹರಿಸಲಿಲ್ಲ. ಎಷ್ಟು ದೊಡ್ಡ ಸ್ವಾಮಿಗಳಿಗಾದರೂ, ವೇದಾಂತಿಗಳೆಂದು ಹೇಳಿಕೊಳ್ಳುವವರಿಗಾದರೂ ಅವರ ಶರೀರದಲ್ಲಿನ ಆತ್ಮ ಅವರಿಗೆ ತಿಳಿದಿಲ್ಲ.

**ಪ್ರಶ್ನೆ :– ನಿಮ್ಮ ಮಾತುಗಳು ಒಂದುಕಡೆ ಸತ್ಯವೆನಿಸಿದರೂ, ಮತ್ತೊಂದುಕಡೆ ಅಸತ್ಯವೆನಿಸುತ್ತಿವೆ. ಯಾವುದು ನಂಬಬೇಕೋ ಯಾವುದು ನಂಬಬಾರದೋ ಅರ್ಥವಾಗಲಿಲ್ಲ. ಆತ್ಮ ಶರೀರದಲ್ಲಿರುವ ದೇವರೆಂದು ನೀವೇ ಕೆಲವು ಕಡೆ ಹೇಳಿದ್ದೀರಾ. ಆತ್ಮವನ್ನು ಶರೀರದಲ್ಲಿನ ದೇವರಾಗಿ, ಜೀವಿಗೆ ದೇವರಾಗಿ ಹೇಳಿದಾಗ ದೇವರು ಸಹ ಮೋಸಗಳು ಮಾಡುತ್ತಾನಾ? ಅಸತ್ಯಗಳು ಹೇಳುತ್ತಾನಾ? ಇದಕ್ಕೆ ಉತ್ತರ ನೀವೇ ಹೇಳಿರಿ!**

**ಜವಾಬು:–**ಶರೀರದಲ್ಲಿರುವ ಆತ್ಮವೇ ಜೀವಾತ್ಮಗೆ ದೇವರಾಗಿ, ಅಧಿಪತಿಯಾಗಿ ಇದ್ದಾನೆ. ಪ್ರಪಂಚವೆಲ್ಲಾ ವ್ಯಾಪಿಸಿರುವ ದೇವರೊಂದಿಗೆ ಜೀವಿಗೆ ಸಂಬಂಧ ಇಲ್ಲವಾಗಲಿ, ಜೀವಿಗೆ ಆತ್ಮವೇ ಎಲ್ಲಾ ವಿಧಗಳಲ್ಲಿ ದೇವರು ಎಂದು ಹೇಳಬಹುದು. ಪ್ರತಿ ಮನುಷ್ಯನನ್ನು ಆಡಿಸುವವನು ಆತ್ಮವೆ. ಎಲ್ಲಾ ತಿಳಿದವನು ಆತ್ಮ

ಆಗಿರುವುದರಿಂದ ಆತನಿಗೆ ಜ್ಞಾನವು ತಿಳಿದಿದೆ, ಅಜ್ಞಾನವು ತಿಳಿದಿದೆ, ಒಳ್ಳೆಯದು ತಿಳಿದಿದೆ. ಕೆಟ್ಟದು ತಿಳಿದಿದೆ. ಆತನು ಒಳ್ಳೆಯದಾಗಿಯಾದರೂ ಕಾಣಿಸಬಲ್ಲನು. ಕೆಟ್ಟದಾಗಿಯಾದರೂ ಕಾಣಿಸಬಲ್ಲನು. ಎರಡು ವಿಧಗಳು ಕಾಣಿಸುವುದರಿಂದ ಆತನನ್ನು ಇಂಥವನೆಂದು ಯಾರೂ ಹೋಲಿಸಿಕೊಳ್ಳಲಾರರು. ಆದುದರಿಂದ ತಮ್ಮ ಶರೀರದಲ್ಲಿಯೇ ಇರುವ ಆತ್ಮವನ್ನು ಇಲ್ಲಿಯವರೆಗೂ ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಕೆಲವರಲ್ಲಿ ಒಳ್ಳೆಯದಾಗಿ ಪ್ರವರ್ತಿಸುವ ಆತ್ಮ, ಕೆಲವರಲ್ಲಿ ಕೆಟ್ಟದಾಗಿ ಸಹ ಪ್ರವರ್ತಿಸುವುದಕ್ಕೆ ಕಾರಣವಿದೆ. ಮನುಷ್ಯ ಮಾಡಿಕೊಂಡ ಕರ್ಮವನ್ನು ಅನುಸರಿಸಿ ಆತ್ಮ ಹಾಗೆ ಪ್ರವರ್ತಿಸುತ್ತದೆ. ಹಾಗೆ ಕೆಟ್ಟದಾಗಿ ಒಳ್ಳೆಯದಾಗಿ ಪ್ರವರ್ತಿಸುವುದು ಆತ್ಮವೇ ಆದರೂ ಜೀವಿಯು ಅಜ್ಞಾನದಿಂದ ತನ್ನದಲ್ಲದ ಶರೀರವನ್ನು ತನ್ನದಂದುಕೊಂಡು ತಾನು ಮಾಡದ ಕಾರ್ಯಗಳನ್ನು, ಆತ್ಮ ಮಾಡಿದ ಕಾರ್ಯಗಳನ್ನು ತಾನೇ ಮಾಡಿದ್ದೇನೆಂದು ಅಂದುಕೊಳ್ಳುವುದರಿಂದ ಆ ಕೆಲಸಕ್ಕೆ ತಾನೇ ಹೊಣೆ ಆಗುತ್ತಿದ್ದಾನೆ. ನಡೆದ ಕಾರ್ಯದಲ್ಲಿನ ಕರ್ಮ ಯಾವುದಾದರೂ (ಪಾಪವಾದರೂ, ಪುಣ್ಯವಾದರೂ) ಜೀವಿಗೆ ತಗುಲಿಕೊಳ್ಳುತ್ತಿದೆ. ನಿತ್ಯವು ಆತ್ಮ ಮಾಡುವ ಅನೇಕ ಕಾರ್ಯಗಳಲ್ಲಿ ಕೆಲವು ಒಳ್ಳೆಯವು, ಕೆಲವು ಕೆಟ್ಟ ಕಾರ್ಯಗಳು ಮಿಶ್ರಮವಾಗಿರುತ್ತವೆ. ಮನುಷ್ಯ ಮಾಡಿದಂತೆ ಮೇಲ್ನೋಟಕ್ಕೆ ಕಾಣಿಸುವ ಕಾರ್ಯಗಳೆಲ್ಲವನ್ನು ಆತ್ಮವೇ ಮಾಡುತ್ತಿದ್ದರೂ ಒಬ್ಬೊಬ್ಬ ಮನುಷ್ಯ ಒಂದೊಂದು ವಿಧವಾಗಿ ಮಾಡುತ್ತಿರುತ್ತಾನೆ. ಹಾಗೆ ಬೇರೆಬೇರೆ ಮನುಷ್ಯರಲ್ಲಿ ಬೇರೆಬೇರೆಯಾಗಿ ಆತ್ಮ ಮಾಡುವುದಕ್ಕೆ ಕಾರಣ ಆ ಶರೀರದಲ್ಲಿರುವ ಜೀವಿಯು ಮಾಡಿಕೊಂಡ ಕರ್ಮವೇಯೆಂದು ಹೇಳಬಹುದು. ಗತ ಜನ್ಮದಲ್ಲಿ ಜೀವಿಯು ಮಾಡಿಕೊಂಡ ಕರ್ಮಪ್ರಕಾರ ಆತ್ಮ ಕಾರ್ಯಗಳನ್ನು ಮಾಡಿದರೆ ಆ ಕಾರ್ಯಗಳಲ್ಲಿ ಉಂಟಾಗುವ ಸುಖದುಃಖಗಳನ್ನು ಜೀವಿಯು ಅನುಭವಿಸುತ್ತಾನೆ. ಜೀವಿಯು ಮಾಡಿಕೊಂಡ ಪಾಪಪುಣ್ಯಗಳನ್ನು ಜೀವಿಯೇ ಅನುಭವಿಸುವುದಕ್ಕೆತಕ್ಕ ಕಾರ್ಯಗಳನ್ನು ಆತ್ಮ ಮಾಡಬೇಕಾಗಿದೆ. ಜೀವಿಯು ಸುಖದುಃಖಗಳನ್ನು ಅನುಭವಿಸುವುದಕ್ಕೆ ಅಂದರೆ! ಸ್ವರ್ಗ ನರಕಗಳನ್ನು ಅನುಭವಿಸುವುದಕ್ಕೆ ಶರೀರದಲ್ಲಿನ ಆತ್ಮವೇ ಕೆಲಸಮಾಡಿ, ಆ ಕೆಲಸದಲ್ಲಿ ಬರುವ ಸುಖದುಃಖಗಳನ್ನು

ಜೀವಿಯು ಅನುಭವಿಸುವಂತೆ ಮಾಡುತ್ತಿದೆ. ಆತ್ಮ ಶರೀರದಲ್ಲಿನ ಜೀವಿಗೆ ಸ್ವರ್ಗನರಕಗಳನ್ನು ಉಂಟುಮಾಡುವುದಕ್ಕೆ ಕೆಲವು ಒಳ್ಳೆಯ ಕೆಲಸಗಳು, ಕೆಲವು ಕೆಟ್ಟ ಕೆಲಸಗಳು ಮಾಡುತ್ತಿದೆ. ಆತ್ಮ ಕೆಟ್ಟ ಕೆಲಸವನ್ನು ಮಾಡಿದರೂ, ಒಳ್ಳೆಯ ಕೆಲಸವನ್ನು ಮಾಡಿದರೂ ಪ್ರತಿಯೊಂದಕ್ಕು ಒಂದು ಲೆಕ್ಕವಿದೆ. ಅದೇ ಕರ್ಮ ಗಣಿತ. ಕರ್ಮಪತ್ರದಲ್ಲಿ ಬರೆಯಲ್ಪಟ್ಟಿರುವುದನ್ನು ಜೀವಿಯು ಯಾವಾಗ ಎಷ್ಟು ಅನುಭವಿಸಬೇಕೋ ಆಗ ಅದಕ್ಕೆ ತಕ್ಕಾದ ಒಳ್ಳೆಯ ಕೆಲಸವನ್ನೊ ಅಥವಾ ಕೆಟ್ಟ ಕೆಲಸವನ್ನೊ ಆತ್ಮ ಶರೀರದಿಂದ ಮಾಡಿದಾಗ, ಒಳಗಿರುವ ಜೀವಿಯು ಒಳಗೆ ಅನುಭವಿಸುತ್ತಾನೆ. ಆತ್ಮ ಮಾಡಿದ ಕೆಲಸವನ್ನನುಸರಿಸಿ ಜೀವಿಯು ಸುಖವನ್ನೊ ದುಃಖವನ್ನೊ ಅನುಭವಿಸುವುದು ನಡೆಯುತ್ತಿದೆ. ಇದೆಲ್ಲವೂ ಒಂದು ಲೆಕ್ಕ ಪ್ರಕಾರ ನಡೆಯಬೇಕಾಗಿರುವುದರಿಂದ, ಅದೇ ವಿಧವಾಗಿ ಆತ್ಮ ಮಾಡುತ್ತಿದೆ. ಅಷ್ಟೇ ಹೊರತು ಆತ್ಮ ಸ್ವತಃವಾಗಿ ತಪ್ಪು ಮಾಡುವುದಿಲ್ಲ. ಸ್ವತಃವಾಗಿ ಒಪ್ಪು (ಒಳ್ಳೆಯದು) ಮಾಡಲಿಲ್ಲ. ಕರ್ಮ ವಿಧಾನಕ್ಕೋಸ್ಕರ, ಜೀವಿಯ ಅನುಭವಕ್ಕೊಸ್ಕರ ದೇವರ ಪಾಲನೆಯಲ್ಲಿ ಒಂದು ಭಾಗವಾಗಿ ಈ ಕೆಲಸಗಳು ನಡೆಯುವುದರಿಂದ ಆತ್ಮವನ್ನು ಒಳ್ಳೆಯ ಕೆಲಸ ಮಾಡಿದೆಂದಾಗಲಿ, ಕೆಟ್ಟ ಕೆಲಸವನ್ನು ಮಾಡಿದೆ ಯೆಂದಾಗಲಿ ಹೇಳಲಾರೆವು.

**ಪ್ರಶ್ನೆ :– ಮಾಡುವುದು ಒಬ್ಬರು ಅದನ್ನು ಅನುಭವಿಸುವುದು ಇನ್ನೊಬ್ಬರು. ಇದು ಅನ್ಯಾಯ ಅಲ್ಲವೆ! ಸರಣಿ ಇಲ್ಲದ ನಾಯಿ ಕೋಳಿಯನ್ನು ತಿಂದುಹೋದರೆ ಸರಣಿಯಿಂದ ಕಟ್ಟಿಹಾಕಿರುವ ನಾಯಿ ಅದನ್ನು ದೂರವಾಗಿದ್ದು ನೋಡಿದೆಯೆಂದು ಹೊಡೆದಿದ್ದಾರಂತೆ! ತಿಂದ ನಾಯಿಯನ್ನು ಹೊಡೆಯದಂತೆ ನೋಡಿದ ನಾಯಿಯನ್ನು ಹೊಡೆಯುವುದು ಪೂರ್ತಿ ಅನ್ಯಾಯ ಅಲ್ಲವೆ! ನೀವು ನ್ಯಾಯವನ್ನು ಸಮರ್ಥಿ ಸುತ್ತೀರಾ? ಅನ್ಯಾಯವನ್ನು ಸಮರ್ಥಿಸುತ್ತೀರಾ? ಹೇಳಿರಿ.**

**ಉತ್ತರ:–** ನಾವು ಹೇಳುವುದು ಆಧ್ಯಾತ್ಮಿಕ. ಪ್ರಪಂಚ ಸಂಬಂಧವಾದ ವಿಷಯ ಅಲ್ಲ. ಪ್ರಕೃತಿ ಸಂಬಂಧ ವಿಷಯಕ್ಕು ಪರಮಾತ್ಮ ಸಂಬಂಧ ವಿಷಯಕ್ಕು ಬಹಳ ವ್ಯತ್ಯಾಸವಿರುತ್ತದೆ. **ನೀತಿ ನ್ಯಾಯ ಪ್ರಪಂಚ ಸಂಬಂಧವಾದವು. ಜ್ಞಾನ, ಧರ್ಮ**

**ಆತ್ಮ ಸಂಬಂಧವಾದವು.** ಆತ್ಮ ಸಂಬಂಧ ವಿಷಯಗಳಲ್ಲಿ ಜ್ಞಾನ, ಧರ್ಮಗಳು ಲೆಕ್ಕಿಸಲ್ಪಡುತ್ತವೆ. ನೀತಿ ನ್ಯಾಯಗಳು ಇರುವುದಿಲ್ಲ. ಇದಕ್ಕೆ ಸಾಕ್ಷಿ ಬೇಕೆಂದರೆ ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕ ಈ ವಿಧವಾಗಿ ಹೇಳಿದ್ದಾರೆ ನೋಡಿರಿ...

***17ನೆ ಶ್ಲೋ॥ ಯಸ್ಯ ನಾಹಂಕೃತೋಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।***
***ಹತ್ವಾಪಿ ಸ ಇಮಾನ್ ಲೋಕಾನ್ನ ಹಂತಿ ನನಿ ಬಧ್ಯತೇ ॥***

**ಭಾವಾರ್ಥ :– "ಯಾರ ಭಾವನೆಯಲ್ಲಿ ಅಹಂಕಾರ ಇಲ್ಲವೋ, ಫಲಿತದ ಮೇಲೆ ಬುದ್ಧಿ ಯಾರಿಗೆ ಇಲ್ಲವೋ, ಆತನು ಈ ಲೋಕದಲ್ಲಿ ಇರುವವರೆಲ್ಲರನ್ನು ಸಾಯಿಸಿದರೂ, ಅವನು ಹಂತಕನು ಅಲ್ಲ, ಅವನಿಗೆ ಪಾಪ ಅಂಟಿಕೊಳ್ಳುವುದಿಲ್ಲ."** ಇಲ್ಲಿ ಅಹಂ ಇಲ್ಲದವನು ಎಷ್ಟು ಜನರನ್ನು ಸಾಯಿಸಿದರೂ ಅವನು ಹಂತಕನು ಅಲ್ಲ, ಪಾಪ ಬರುವುದಿಲ್ಲ ಎಂದು ಹೇಳುವ ಮಾತಿನಲ್ಲಿ ಪ್ರಪಂಚದಲ್ಲಿ ಪೂರ್ತಿ ಅನ್ಯಾಯವೇ ಕಾಣಿಸಿದರೂ, ದೈವಿಕವಾಗಿ ಅದು ಪೂರ್ತಿ ಧರ್ಮವಾಗಿದೆ. ಆದುದರಿಂದ ಪಾಪ ಬರುವುದಿಲ್ಲ ಅವನು ಹಂತಕನಲ್ಲ ಎಂದು ಹೇಳಿದ್ದಾರೆ.

ಇಂತಹ ವಿಷಯವನ್ನೇ 'ಮಧ್ಯ ದೈವಗ್ರಂಥವಾದ ಸುವಾರ್ತೆ ಬೈಬಲ್' ನಲ್ಲಿ ಮತ್ತಾಯ ಸುವಾರ್ತೆ 5ನೇ ಅಧ್ಯಾಯ, 28ನೇ ವಾಕ್ಯದಲ್ಲಿ ಹೀಗೆ ಹೇಳಿದ್ದಾರೆ. **"ಒಬ್ಬ ಸ್ತ್ರೀಯನ್ನು ಮೋಹದ ದೃಷ್ಟಿಯಿಂದ ನೋಡುವ ಪ್ರತಿಯೊಬ್ಬನು ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ"** ಇದು ಸಹ ಯಾವಕಡೆ ನೋಡಿದರು ಅನ್ಯಾಯದ ಮಾತೇ ಆಗುತ್ತದೆ. ಒಂದು ಕಾರ್ಯವನ್ನು ಮಾಡದಿದ್ದರೂ ಭಾವನೆಯಿಂದಲೇ ಮಾಡಿದಂತೆ ಲೆಕ್ಕಿಸಲ್ಪಡುತ್ತಿದೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಕೆಲಸವನ್ನು ಮಾಡಿದರೂ ಭಾವನೆಯಲ್ಲಿ ಇಲ್ಲದಿರುವುದರಿಂದ ಮಾಡದಂತೆಯೇ ಆಗುತ್ತದೆ. ಅದೇ ವಿಧವಾಗಿ ಭಾವನೆಯೇ ಪ್ರಧಾನವಾಗುವುದರಿಂದ ಮನಸ್ಸಿನಲ್ಲಿ ಭಾವನೆಯುನ್ನು ಹೊಂದಿದರೂ, ಕೆಲಸವನ್ನು ಮಾಡದಿದ್ದರೂ ಮಾಡಿದಂತೆಯೇ ಆಗುತ್ತಿದೆ. ಇದನ್ನೆಲ್ಲಾ ಗಮನಿಸಿದರೆ **ಆಧ್ಯಾತ್ಮಿಕದಲ್ಲಿ ಭಾವನೆಯೇ ಮುಖ್ಯವಾಗಿದೆ.** ಯಾವಾಗ

ಅಹಂಭಾವ ಇದೆಯೋ ಆಗ ಕೆಲಸವನ್ನು ಮಾಡದಿದ್ದರೂ ಮಾಡಿದಂತೆಯೇ ಆಗುತ್ತದೆ. ಯಾವಾಗ ಅಹಂಕಾರ ಇಲ್ಲವೋ ಆಗ ಕೆಲಸವನ್ನು ಮಾಡಿದರೂ ಮಾಡದಂತಾಗುತ್ತಿದೆ. ಇದು ಪ್ರಪಂಚ ಪ್ರಕಾರ ಅನ್ಯಾಯವಾಗಿಯೇ ಕಾಣಿಸುತ್ತದೆ. ಅದರೂ ದೈವಿಕವಾಗಿ ಧರ್ಮಬದ್ಧವಾಗಿದೆ. ಆದುದರಿಂದ ಶರೀರದಲ್ಲಿ ಜೀವಿಯು ಕೆಲಸವನ್ನು ಮಾಡದಿದ್ದರೂ, ಒಳಗಿದ್ದು ಅಹಂಕಾರ ಭಾವದಿಂದ ಕೂಡಿರುವುದರಿಂದ ಆತನು ಮಾಡಿದಂತೆ ಲೆಕ್ಕಿಸಲ್ಪಡುತ್ತಿದೆ. ನಡೆದಿರುವುದರಲ್ಲಿನ ಕರ್ಮ ಆತನಿಗೆ (ಜೀವಿಗೆ) ಅಂಟಿಸಟ್ಟಲ್ಪಡುತ್ತಿದೆ.

**ಪ್ರಶ್ನೆ :- ಒಬ್ಬರು ಜ್ಞಾನಿ, ಮತ್ತೊಬ್ಬರು ಅಜ್ಞಾನಿ ಇಬ್ಬರು ಮನುಷ್ಯರು ಸೇರಿ ಒಬ್ಬನನ್ನು ಸಾಯಿಸಿದ್ದಾರೆಂದುಕೊಳ್ಳೋಣ. ಆಗ ಇಬ್ಬರೂ ಸೇರಿ ಮಾಡಿದ್ದಾರೆ ಆದ್ದರಿಂದ ಅಲ್ಲಿ ಪಾಪ ಬರುವುದಿಲ್ಲವಾ? ಅದು ಹತ್ಯೆ ಅಲ್ಲವಾ? ಅವರು ಹಂತಕರು ಅಲ್ಲವಾ?**

**ಉತ್ತರ :-** ಭೂಮಿಮೇಲೆ ಒಂದು ಕಾರ್ಯ ನಡೆಯಬೇಕೆಂದರೆ ಅದನ್ನು ಒಬ್ಬರಾದರೂ ಮಾಡಬಹುದು ಅಥವಾ ಹೆಚ್ಚುಜನರಾದರೂ ಮಾಡಬಹುದು. ಇಬ್ಬರು ಸೇರಿ ಒಬ್ಬ ಮನುಷ್ಯನನ್ನು ಕೊಂದಿದ್ದಾರೆ. ಆಗ ಅಲ್ಲಿ ನಡೆದಿರುವುದು ಹತ್ಯವೇ. ಪ್ರಪಂಚ ಲೆಕ್ಕದಲ್ಲಿ ಅವರು ಇಬ್ಬರೂ ಹಂತಕರೇ. ಆದರೆ ಆ ಕೆಲಸವನ್ನು ಮಾಡಿದಾಗ ಒಬ್ಬನು ನಾನು ಈ ಕೆಲಸವನ್ನು ಮಾಡುತ್ತಿದ್ದೇನೆಂಬ ಭಾವನೆಯಿಂದ ಮಾಡಿದ್ದಾನೆ. ಇನೊಬ್ಬನು ಆತ್ಮಜ್ಞಾನ ತಿಳಿದವನಾಗಿ ಆತ್ಮವೇ ಈ ಕೆಲಸವನ್ನು ಮಾಡುತ್ತಿದೆಯೆಂಬ ಭಾವದಿಂದಿದ್ದಾನೆ. ಮತ್ತೊಬ್ಬನು ಆತ್ಮಜ್ಞಾನ ತಿಳಿಯದವನಾಗಿ ನಾನು ಮಾಡುತ್ತಿದ್ದೇನೆಂಬ ಅಹಂಭಾವನೆಯಿಂದ ಇದ್ದಾನೆ. ಈ ವಿಧವಾಗಿ ಒಂದೇ ಕೆಲಸವನ್ನು ಇಬ್ಬರು ಮಾಡಿದರೂ ಅದರಲ್ಲಿ ಅಹಂ (ನಾನು) ಎಂಬ ಭಾವನೆ ಒಬ್ಬನಿಗಿರುವಾಗ, ಇನ್ನೊಬ್ಬನಿಗೆ ಅಹಂ ಎಂಬ ಭಾವನೆ ಇಲ್ಲ. ಆಧ್ಯಾತ್ಮಿಕದ ಪ್ರಕಾರ ಭಾವನೆಯನ್ನನುಸರಿಸಿ ಕರ್ಮ ಬರುತ್ತದೆ. ಭಾವನೆಯನ್ನನುಸರಿಸಿ ಆ ಕೆಲಸವನ್ನು ಮಾಡಿದ್ದಾನಾ ಇಲ್ಲವಾ ಎಂದು ನಿರ್ಣಯಿಸಲ್ಪಡುತ್ತದೆ. ಇಬ್ಬರಲ್ಲಿ ಒಬ್ಬನಿಗೆ ನಾನು ಮಾಡುತ್ತಿದ್ದೇನೆಂಬ ಭಾವವಿದೆ,

ಇನ್ನೊಬ್ಬನಿಗೆ ಆತ್ಮ ಮಾಡುತ್ತಿದೆಯೆಂಬ ಭಾವನೆ ಇದೆ. ನಾನು ಮಾಡುತ್ತಿದ್ದೇನೆಂಬ ಭಾವಹೊಂದಿದವನು ಆ ಕೆಲಸವನ್ನು ಮಾಡಿದಂತಾಗುತ್ತಿದೆ. ನಾನು ಅಲ್ಲ ಶರೀರಕ್ಕೆ ಅಧಿಪತಿಯಾಗಿರುವ ಆತ್ಮವೇ ಮಾಡುತ್ತಿದೆಯೆಂಬ ಭಾವನೆಯಿರುವವನು ಆ ಕೆಲಸವನ್ನು ಮಾಡದಂತೆಯೇ ಆಗುತ್ತಿದೆ. ಆ ಕೆಲಸವನ್ನು ಆತ್ಮವೇ ಮಾಡಿದಂತೆ ಲೆಕ್ಕಿಸಲ್ಪಡುತ್ತಿದೆ. ನಿಜಕ್ಕೆ ಮಾಡಿರುವುದು ಸಹ ಆತ್ಮವೇ. ಆದುದರಿಂದ ಅವರಲ್ಲಿ 'ನಾನು ಮಾಡಿದ್ದೇನೆ' ಎಂಬ ಅಹಂಭಾವ ಹೊಂದಿದವನು ಮಾತ್ರವೇ ಆ ಕೆಲಸವನ್ನು ಮಾಡಿದಂತೆ ಲೆಕ್ಕಿಸಲ್ಪಟ್ಟು ಆತನನ್ನು "ಹಂತಕನು" ಎಂದು ಹೇಳಬೇಕಾಗಿ ಬಂದಿದೆ. ಹಂತಕನಾದವನಿಗೆ ಆ ಕೆಲಸದಲ್ಲಿ ಉಂಟಾಗುವ ಕರ್ಮ ಸೇರಿಹೋಗಿದೆ. ಆಗ ಅವನು ಹತ್ಯಾ ಪಾಪವನ್ನು ಹೊಂದಿದವನಾಗಿದ್ದಾನೆ. ಮತ್ತೊಬ್ಬನು ಸಹ ಆ ಕೆಲಸವನ್ನು ಮಾಡಿದರೂ ವಾಸ್ತವ ತಿಳಿದವನಾಗಿ, ತಾನು ಶರೀರದಲ್ಲಿ ಒಳಗೆ ತಲೆಯಲ್ಲಿ ಇದ್ದೇನೆಂದು, ತಾನು ಏನು ಮಾಡಲಾಗದ ಅಂಗವಿಕಲನೆಂದು ನಡೆಯುತ್ತಿರುವ ಕೆಲಸವನ್ನು ನೋಡುತ್ತಿದ್ದರೂ ಅದು ನನಗೆ ಸಂಬಂಧವಿಲ್ಲದ ಕೆಲಸವೆಂದು, ಆ ಕೆಲಸವನ್ನು ಮಾಡುವುದು ಶರೀರವೆಲ್ಲಾ ವ್ಯಾಪಿಸಿರುವ ಆತ್ಮವೆಯೆಂದು, ತಾನು ಮಾತ್ರ ಅಲ್ಲವೆಂಬ ಭಾವನೆಯಲ್ಲಿ ಇರುವುದರಿಂದ ಆ ಕೆಲಸವನ್ನು ಆತನು ಮಾಡದಂತೆಯೇ ಆಗುತ್ತಿದೆ. ಆದುದರಿಂದ ಆತನಿಗೆ ಆ ಕಾರ್ಯದಲ್ಲಿನ ಪಾಪ ಬರಲಿಲ್ಲ. ಆಗ ಅವನು ಹಂತಕನಾಗಿ ಲೆಕ್ಕಿಸಲ್ಪಡಲಿಲ್ಲ. ಈ ವಿಧವಾಗಿ ಪ್ರಪಂಚದಲ್ಲಿ ನಡೆಯುವ ಯಾವ ಕಾರ್ಯವನ್ನಾದರೂ ಮಾಡಿದವರ ಭಾವವನ್ನನುಸರಿಸಿ ಅವನು ಮಾಡಿದ್ದಾನಾ, ಮಾಡಲಿಲ್ಲವಾ ಎಂದು ನಿರ್ಣಯಿಸಲ್ಪಡುತ್ತದೆ. ಎಲ್ಲಾ ಕೆಲಸಗಳನ್ನು ಆತ್ಮವೇ ಮಾಡುತ್ತಿರುವಾಗ, ತಿಳುವಳಿಕೆಯಿಲ್ಲದೆ ನಾನು ಮಾಡಿದ್ದೇನೆಂದು ಅಂದು ಕೊಳ್ಳುವುದು ಅಜ್ಞಾನ ಅಲ್ಲವೆ! ಹುಟ್ಟಿದ ಪ್ರತಿಯೊಬ್ಬನು ಮೊದಲು ತನ್ನ ವಿಷಯವನ್ನು ತಾನು ತಿಳಿದು ಬದುಕಬೇಕು. ಅಂತಹವನನ್ನು "ಜ್ಞಾನಿ" ಎನ್ನುತ್ತಾರೆ. ಶರೀರದಲ್ಲಿ ತನ್ನ ಸ್ಥಾನವೇನೊ, ತನ್ನ ಬಲವೆಷ್ಟೋ ತಿಳಿಯದವನು ಅಜ್ಞಾನಿ ಆಗುತ್ತಾನೆ.

ಮೊದಲು ತನ್ನ ವಿವರ ತನಗೆ ತಿಳಿಯದಿದ್ದರೆ ಅವನಿರುವ ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವೂ ಅವನೇ ಮಾಡಿದ ಭಾವನೆಯನ್ನು ಹೊಂದುತ್ತಾನೆ. ಜೀವಿಯು ನಿವಾಸಿಸುತ್ತಿರುವ ಶರೀರದಲ್ಲಿ ಆತ್ಮ ಮಾಡುವ ಕೆಲಸಗಳನ್ನು ನಾನೇ ಮಾಡಿದ್ದೇನೆಂದು ಭ್ರಮಿಸಿ ಅಹಂಭಾವವನ್ನು ಹೊಂದಿ ಆ ಕೆಲಸಗಳಿಗೆ ತಾನೇ ಹೊಣೆಯಾಗುತ್ತಾನೆ. ಈದಿನ ಪ್ರಪಂಚದಲ್ಲಿ ಸಾಮಾನ್ಯ ಜೀವನವನ್ನು ಕಳೆಯುತ್ತಾ ಸ್ವಲ್ಪವೂ ದೈವಸಂಬಂಧ ಜ್ಞಾನ ತಿಳಿಯದವರಿಗೆ ಆತ್ಮ ವಿಷಯ ಸ್ವಲ್ಪವೂ ತಿಳಿದಿಲ್ಲ. ಸಾಧಾರಣ ಮನುಷ್ಯರನ್ನು ಬಿಟ್ಟು ನಾವು ಜ್ಞಾನಿಗಳು, ಭಕ್ತರು, ಯೋಗಿಗಳು, ಸನ್ಯಾಸಿಗಳು, ನಾವು ಅನ್ಯದೇವತಾರಾಧನೆ ಮಾಡದ ಮತದಲ್ಲಿನವರು, ನಮ್ಮ ಮತ ದೇವರಿಗೆ ಹತ್ತಿರವಾಗಿರುವ ಮತ, ನಮ್ಮನ್ನು ನಮ್ಮ ದೇವರು ನಮ್ಮ ಪಾಪವೆಲ್ಲವನ್ನು ಇಲ್ಲದಂತೆ ಮಾಡುತ್ತಾನೆ. ನಾವು ದೈವಮಾರ್ಗದಲ್ಲಿರುವವರು ಎಂದು ಅಂದುಕೊಳ್ಳುವವರನ್ನು ಗುರುತಿಸಿ ಅವರಲ್ಲಿ ಎಷ್ಟುಜನರಿಗೆ ಆತ್ಮವೊಂದರ ವಿಷಯ ತಿಳಿದಿದೆ ಎಂದು ನೋಡಿದರೆ, ಸುಮಾರು ಎಲ್ಲರಿಗೂ ಆತ್ಮಯೊಂದರ ವಿವರ ತಿಳಿದಿಲ್ಲವೆಂದು, ತಮ್ಮ ವಿವರವೂ ಸಹ ತಮಗೆ ತಿಳಿಯದೆಂದು, ಅವರೆಲ್ಲರೂ ನಾವೂ ಮನುಷ್ಯರೇಯೆಂದು, ಎಲ್ಲಾ ಕೆಲಸಗಳು ನಾವು ಮಾಡುತ್ತಿದ್ದೇವೆಂಬ ಭಾವನೆಯಲ್ಲಿದ್ದಾರೆ. ನಾನು ದೊಡ್ಡ ಜ್ಞಾನಿ ಎಂದು ಸನ್ಯಾಸತ್ವ ತೆಗೆದುಕೊಂಡು, ಪ್ರಜೆಗಳಿಗೆ ಭಾರತ, ಭಾಗವತ, ಪುರಾಣಗಳನ್ನು ಅಮೌಲ್ಯವಾಗಿ ಹೇಳುವ ಸ್ಥಿತಿಯಲ್ಲಿರುವ ಸ್ವಾಮೀಜಿಗಳು ಸಹ ನಾನು ಆ ಪೂಜೆ ಮಾಡಿದ್ದೇನೆ, ನಾನು ಈ ಯಜ್ಞ ಮಾಡಿದ್ದೇನೆ, ನಾನು ಪೂಜೆಯ ಕೊನೆಯಲ್ಲಿ ಮಂಗಳಹಾರತಿ ಕೊಟ್ಟಿದ್ದೇನೆಂದು ಹೇಳಿಕೊಳ್ಳುತ್ತಿದ್ದಾರೆ. ಮೇಲ್ನೋಟಕ್ಕೆ ಹೇಗೆ ಹೇಳಿದರೂ ಫರವಾಗಿಲ್ಲ ಆದರೆ, ಒಳಗೆ ಭಾವನೆಯಲ್ಲಿ "ನಾನು ಮಾಡಿದ್ದೇನೆ" ಎಂಬ ಭಾವನೆಯಿಂದಲೇ ಇದ್ದಾರೆ. ಆದ್ದರಿಂದ ಅವರು ಎಷ್ಟು ದೊಡ್ಡ ಸ್ವಾಮೀಜಿಗಳಾದರೂ, ಅವರಿಗೆ ಆತ್ಮಜ್ಞಾನ ತಿಳಿದಿಲ್ಲವೆಂದೇ ಹೇಳಬಹುದು. ಆತ್ಮಜ್ಞಾನ ತಿಳಿಯದಿರುವಾಗ ಆತನು ಎಷ್ಟು ದೊಡ್ಡ ಸ್ವಾಮಿ ಆದರೂ ಸಾಧಾರಣ ಮನುಷ್ಯನಂತೆ ಪಾಪಪುಣ್ಯಗಳನ್ನು ಪಡೆಯುತ್ತಿರುತ್ತಾನೆ. ಆತನು ಮಾಡುವ ಯಜ್ಞಗಳಿಂದ, ದಾನಗಳಿಂದ, ವೇದಾಧ್ಯಯನಗಳಿಂದ,

ತಪಸ್ಸುಗಳಿಂದ ಪುಣ್ಯ ಬರುತ್ತದೆ. ಯಜ್ಞ, ದಾನ, ವೇದಪಠನೆ, ತಪಸ್ಸುಗಳನ್ನು ನಾನೇ ಮಾಡುತ್ತಿದ್ದೇನೆಂಬ ಭಾವನೆಯಿರುವುದರಿಂದ ಅವುಗಳಿಂದ ಬರುವ ಕರ್ಮಫಲ ಆತನಿಗೇ ಸೇರುತ್ತಿದೆ. ಇದರಲ್ಲಿ ಮಾತ್ರ ಯಾವ ಅನುಮಾನ ಇಲ್ಲ.

**ಪ್ರಶ್ನೆ:– ನಾವು ಕೇಳಿರುವುದು ರವೆಯಷ್ಟು, ನೀವು ಹೇಳಿರುವುದು ಬಹಳಷ್ಟು. ನಮಗೆ ಸ್ವಲ್ಪಮಟ್ಟಿಗೆ ಅರ್ಥವಾಗಿದೆ. ನೀವು ಇರುವುದು ಇದ್ದಂತೆ ಹೇಳುತ್ತಿದ್ದೀರೆಂದು ಅರ್ಥವಾಗಿದೆ. ಈದಿನ ಎಷ್ಟೋ ದೊಡ್ಡ ಸ್ವಾಮೀಜಿಗಳಿದ್ದಾರೆ. ಭಗವದ್ಗೀತೆಯನ್ನು ವಿವರಿಸಿ ಬರೆದವರು ಸಹ ಇದ್ದಾರೆ. ಭಗವದ್ಗೀತೆಯಲ್ಲಿ ಆತ್ಮಗಳ ವಿವರವಿದೆಯೆಂದು ನೀವು ಹೇಳಿದ್ದೀರಾ. ನಿಮ್ಮ ಸಿದ್ಧಾಂತ ಸಹ ಭಗವದ್ಗೀತೆ ಆಧಾರದಿಂದ ಹೇಳಿರುವುದೆ. ಅಂತಹ ಭಗವದ್ಗೀತೆಗೆ ಭಾಷ್ಯವನ್ನು ಹೇಳಿದವರು ಎಷ್ಟೋಜನ ಇದ್ದಾರೆ. ಅವರಿಗೂ ಕೂಡಾ ಆತ್ಮ ವಿಷಯ ತಿಳಿದಿಲ್ಲವೆನ್ನುತ್ತೀರಾ?**

**ಉತ್ತರ:–** ಭಾರತ ದೇಶದಲ್ಲಿ ಆಧ್ಯಾತ್ಮಿಕ ಪೀಠಗಳನ್ನು ಸ್ಥಾಪಿಸಿದವರಿಗೇ ಆತ್ಮ ವಿಷಯ ತಿಳಿದಿಲ್ಲ. ಅವರಿಗೆ ಪರಮಾತ್ಮ ವಿಷಯ ಮಾತ್ರ ತಿಳಿದಿದೆ. ಜೀವಿಗು ದೇವರಿಗು ಮಧ್ಯದಲ್ಲಿರುವ ಆತ್ಮವನ್ನು ಯಾರೂ ಗುರುತಿಸಿಲ್ಲ. **ಭಗವದ್ಗೀತೆಯಲ್ಲಿ ಆತ್ಮವನ್ನು ಕುರಿತು ಸುಮಾರು 70 ಶಾತ ಭಗವಂತನು ಹೇಳಿದ್ದರೂ ಅದನ್ನು ಯಾರೂ ತಿಳಿಯಲಿಲ್ಲ.** ಭಗವದ್ಗೀತೆಗೆ ಅನೇಕ ಭಾಷೆಗಳಲ್ಲಿ ವಿವರ ಬರೆದವರು ಸಹ ಆತ್ಮವನ್ನು ಕುರಿತು ಹೇಳಿದಕಡೆ ಅದನ್ನು ಪರಮಾತ್ಮವಾಗಿ ಹೇಳಿಕೊಂಡಿದ್ದಾರೆ. ಕೆಲವರು ಕೆಲವು ಸಂದರ್ಭಗಳಲ್ಲಿ ಆತ್ಮವನ್ನು ಜೀವಾತ್ಮವಾಗಿ ಲೆಕ್ಕಿಸಿಕೊಂಡಿದ್ದಾರೆ. ಮೂರು ಆತ್ಮಗಳು ನಮ್ಮ ಶರೀರದಲ್ಲಿ ಇವೆಯೆಂಬ ವಿಷಯವೇ ತಿಳಿಯ ದವರಾಗಿದ್ದಾರೆ. ಆದುದರಿಂದ ಗತದಲ್ಲಿ ಆಧ್ಯಾತ್ಮಿಕ ಸಿದ್ಧಾಂತಗಳನ್ನು ಕಂಡುಹಿಡಿದ ಸಿದ್ಧಾಂತಕರ್ತರು ಸಹ ಎರಡು ಆತ್ಮಗಳನ್ನು ಕೆಲವರು ಹೇಳಿದರೆ, ಆದಿಶಂಕರಾ ಚಾರ್ಯನು ಇರುವುದು ಒಂದು ಆತ್ಮವೆಯೆಂದು ಹೇಳಿ ಅದನ್ನು ಅದ್ವೈತ ಸಿದ್ಧಾಂತವಾಗಿ ಪ್ರತಿಪಾದಿಸಿದ್ದಾನೆ. ಈ ವಿಧವಾಗಿ ಆಧ್ಯಾತ್ಮಿಕ ವಿದ್ಯೆಯಲ್ಲಿ ದೊಡ್ಡವರೆಂದು ಹೆಸರುವಾಸಿಯಾದ ಮೂವರು ಸಿದ್ಧಾಂತಕರ್ತರು ಆತ್ಮವನ್ನು

ವಿಸ್ಮರಿಸಿ ತಮ್ಮ ಸಿದ್ಧಾಂತಗಳನ್ನು ಹೇಳಿದ್ದಾರೆ. ಮನುಷ್ಯರಿಗೆ ದೈವಜ್ಞಾನ ಕಲಿಸುವವರಾಗಿ ಎಲ್ಲರಿಗೂ ಮಾರ್ಗದರ್ಶಕರಾದವರೇ ಮಾರ್ಗ ತಪ್ಪಿ ಆತ್ಮವನ್ನು ತಿಳಿಯದಿರುವುದರಿಂದ, ಅವರನ್ನು ಅನುಸರಿಸುವವರಿಗೆ ಆತ್ಮಜ್ಞಾನವೇ ತಿಳಿಯದಂತೆ ಹೋಗಿದೆ.

**ಪ್ರಶ್ನೆ:– ಹಿಂದೂ ಮತಕ್ಕೆ ಬುನಾದಿಯಂತಹ ಸಿದ್ಧಾಂತಕರ್ತರಿಗೇ ಆತ್ಮಜ್ಞಾನ ತಿಳಿದಿಲ್ಲವೆನ್ನುತ್ತೀರಾ?**

**ಉತ್ತರ:–** ನಾನು ಹೇಳುವುದನ್ನು ಬಿಟ್ಟು, ಅವರು ಹೇಳಿದ ಸಿದ್ಧಾಂತಗಳನ್ನು ನೀನೇ ನೋಡು. ಅದರಲ್ಲಿ ಆತ್ಮವನ್ನು ಕುರಿತಾದ ಸಮಾಚಾರ ಎಲ್ಲಿಯಾದರೂ ಇದೆಯೇನೊ ತೋರಿಸಬಲ್ಲೆಯಾ?

**ಪ್ರಶ್ನೆ:– ಆದರೆ ಅವರು ಹೇಳಿರುವುದು ಏನು? ಮೂವರು ಸಿದ್ಧಾಂತಕರ್ತರು ಆತ್ಮವನ್ನು ಕುರಿತು ಹೇಳಲಿಲ್ಲವಾ?**

**ಉತ್ತರ :–** ಮೊದಲ ಸಿದ್ಧಾಂತಕರ್ತನಾದ ಆದಿಶಂಕರಾಚಾರ್ಯರು ಒಂದೇ ಪರಮಾತ್ಮನನ್ನು ಕುರಿತು ಹೇಳಿದ್ದಾರೆ. ಮೂರನೆಯ ಸಿದ್ಧಾಂತಕರ್ತ ದೇವರನ್ನು ಮತ್ತು ಜೀವಿಯನ್ನು ಕುರಿತು ಹೇಳಿದ್ದಾರೆ. ಮಧ್ಯದಲ್ಲಿ ಎರಡನೆ ಸಿದ್ಧಾಂತಕರ್ತ ಅದ್ವೈತವನ್ನೇ ಸಮರ್ಥಿಸುತ್ತಾ ಅದರಲ್ಲಿನ ಭಕ್ತಿಯನ್ನು ವಿಶಿಷ್ಟವಾಗಿ ಹೇಳಿದ್ದಾರೆ. ಅದನ್ನೇ 'ವಿಶಿಷ್ಟಾದ್ವೈತ' ಎಂದಿದ್ದಾರೆ. ಮೂರನೆ ಆತನು ಹೇಳಿರುವುದು ಜೀವಿಯು, ದೇವರು ಎಂದು ಇಬ್ಬರನ್ನು ಹೇಳುವುದರಿಂದ ಅದನ್ನು "ದ್ವೈತ ಸಿದ್ಧಾಂತ" ಎನ್ನುತ್ತಿದ್ದೇವೆ.

**ಪ್ರಶ್ನೆ:– ದೇವರು ದ್ವಾಪರಯುಗದ ಕೊನೆಯಲ್ಲಿ, ಕಲಿಯುಗ ಮೊದಲಿನಲ್ಲಿಯೇ ಭಗವದ್ಗೀತೆಯನ್ನು ಹೇಳಿ ಅದರಲ್ಲಿ ಸಂಪೂರ್ಣ ಜ್ಞಾನವನ್ನು ಕೊಟ್ಟಿದ್ದಾನೆ ಅಲ್ಲವೆ! ಹಾಗಿರುವಾಗ ಈ ಸಿದ್ಧಾಂತಗಳೇನು? ಇವರೆಲ್ಲಾ ಏಕೆ ಬಂದಿದ್ದಾರೆ?**

**ಉತ್ತರ:–** ರಾಜ್ಯಾಂಗ ಒಂದೇ ಆದರೆ ಸರ್ಕಾರದಲ್ಲಿ ನಾನೇ ಪ್ರಭುವು ಆಗಬೇಕೆಂಬ

ಉದ್ದೇಶದಿಂದ ಈದಿನ ಅನೇಕ ರಾಜಕೀಯಪಾರ್ಟಿಗಳು ಬಂದಿವೆ. ಒಂದೊಂದು ಪಾರ್ಟಿ ಒಂದೊಂದು ರಾಜಕೀಯ ಸಿದ್ಧಾಂತದೊಂದಿಗೆ ಬರುವುದು ನಡೆಯುತ್ತಿದೆ. ಹಾಗೆಯೇ ದೇವರು ಒಬ್ಬನೇ ಆ ದೈವತ್ವದಲ್ಲಿ " ನಾವೇ ದೊಡ್ಡವರು" ಎಂದು ಅನಿಸಿಕೊಳ್ಳುವುದಕ್ಕೆ ರಾಜಕೀಯಪಾರ್ಟಿಗಳಂತೆ ಒಬ್ಬೊಬ್ಬರು ಒಂದೊಂದು ಸಿದ್ಧಾಂತದಿಂದ ಬಂದಿದ್ದಾರೆ. ಆ ವಿಧವಾಗಿ ಗತದಲ್ಲಿ ಬಂದವರು ಮೂವರಾಗಿದ್ದು ಪ್ರಸ್ತುತ ಮತ್ತೊಂದು ಸಿದ್ಧಾಂತ ಹೊರಗೆ ಬಂದಿದೆ. ಅದರೊಂದಿಗೆ ಈಗ ಹಿಂದೂಮತದಲ್ಲಿ ಒಟ್ಟು ನಾಲ್ಕು ಸಿದ್ಧಾಂತಗಳಿವೆಯೆಂದು ಹೇಳಬಹುದು.

**ಪ್ರಶ್ನೆ:- ಈದಿನ ಹಿಂದೂಗಳಾಗಿ ಇರುವವರಿಗೆ ಹಿಂದೂಮತದಲ್ಲಿ ಇಷ್ಟು ಸಿದ್ಧಾಂತಗಳಿವೆಯೆಂದು, ಇಷ್ಟುಜನ ಸಿದ್ಧಾಂತಕರ್ತರಿದ್ದಾರೆಂದು ಯಾವುದು ಗೊತ್ತಿಲ್ಲ. ಹಿಂದೂಗಳಿಗೆ ಹಿಂದೂ ಸಿದ್ಧಾಂತಗಳನ್ನು ಕುರಿತಾಗಲಿ, ಸಿದ್ಧಾಂತ ಕರ್ತರನ್ನು ಕುರಿತಾಗಲಿ ತಿಳಿಯದಿರುವುದರಿಂದ ಹಿಂದೂಮತ ಶ್ರೇಷ್ಠವಾದುದೆಂದು ತಿಳಿಯದೆ ಸಿದ್ಧಾಂತಕರ್ತರು ಇಲ್ಲದ ಮತದೊಳಗೆ ಹಿಂದೂಗಳು ಸೇರುವುದು ನಡೆಯುತ್ತಿದೆ. ದ್ವಾಪರಯುಗದ ಕೊನೆಯಲ್ಲಿ ಭಗವಂತನು ಹೇಳಿದ ಭಗವದ್ಗೀತೆಯಲ್ಲಿನ ಜ್ಞಾನವೇ ಉಳಿದ ಮತ ಗ್ರಂಥಗಳಲ್ಲಿಯೂ ಸಹ ಇದೆಯೆಂಬ ವಿಷಯ ಮೂರು ಮತದವರಿಗೆ ತಿಳಿಯದಂತೆಹೋಗಿದೆ. ಕ್ರೈಸ್ತ ಮತದಲ್ಲಿ ಯೇಸುನನ್ನೇ ಸಿದ್ಧಾಂತಕರ್ತನಾಗಿ ಹೇಳಬೇಕು. ಇಸ್ಲಾಮ್ ಮತದೊಳಗೆ ಬಂದರೆ ಮುಹಮ್ಮದ್ ಪ್ರವಕ್ತರನ್ನೇ ಆ ಮತದ ಸಿದ್ಧಾಂತಕರ್ತನಾಗಿ ಹೇಳಬಹುದು. ಅವರು ಆ ಮತವನ್ನು ಸ್ಥಾಪಿಸಿದಾಗ ಮಾತ್ರವೇ ಜ್ಞಾನವನ್ನು ಹೇಳಿಹೋಗಿದ್ದಾರೆ. ಅವುಗಳೆ ಅವರ ಗ್ರಂಥಗಳಾಗಿವೆ. ಆದರೆ ಹಿಂದೂ ಮತಕ್ಕೆ ಪ್ರಸ್ತುತ ನಾಲ್ಕುಜನ ಸಿದ್ಧಾಂತ ಕರ್ತರಿದ್ದರೂ ಮೊದಲು ಭಗವಂತನು ಹೇಳಿದ ಭಗವದ್ಗೀತೆಯೇ ಆಧಾರ ಗ್ರಂಥ. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು ಹೇಳಿದ ಸಿದ್ಧಾಂತಗಳು ಶಾಸ್ತ್ರ ಸಮ್ಮತವೇನಾ? ಎಂಬ ಅನುಮಾನ ಬರುತ್ತಿದೆ. ಭಗವದ್ಗೀತೆಯನ್ನು ಹೇಳಿದ ಭಗವಂತನು ಭಗವದ್ಗೀತೆಯೇ ನಿಜವಾದ ಜ್ಞಾನವೆಂದು, ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವೇ ಭಗವದ್ಗೀತೆಯೆಂದು ಹೇಳಿದಾಗ**

**ಅದನ್ನು ಅಲ್ಲವೆಂದು ವೇದಗಳನ್ನು ಕೆಲವರು ಸಿದ್ಧಾಂತಕರ್ತರು ತರುವುದು ನಡೆದಿದೆ. ಅಷ್ಟೇಯಲ್ಲದೆ ಮೊದಲು ಬಂದ ಸಿದ್ಧಾಂತಕರ್ತರು ಒಬ್ಬರ ಸಿದ್ಧಾಂತವನ್ನು ಮತ್ತೊಬ್ಬ ಸಿದ್ಧಾಂತಕರ್ತ ಖಂಡಿಸುವುದು ನಡೆದಿದೆ. ಈ ವಿಷಯಗಳೆಲ್ಲವೂ ಬಹಳಜನ ಹಿಂದೂಗಳಿಗೆ ತಿಳಿದಿಲ್ಲ. ತಿಳಿದವರು ಕೂಡಾ ಯಾವುದು ನಂಬಬೇಕೋ ತಿಳಿಯದ ಸ್ಥಿತಿಯಲ್ಲಿ ಇತರ ಮತಗಳನ್ನು ಆಶ್ರಯಿಸಿದ್ದಾರೆ. ತಿಳಿಯದವರು ಇತರ ಮತಗಳಲ್ಲಿನ ಬೋಧನೆಯನ್ನು ನೋಡಿ ಕೆಲವರು  ಹೋಗುವುದು ನಡೆಯುತ್ತಿದೆ. ಈ ವಿಧವಾಗಿ ಸಿದ್ಧಾಂತಕರ್ತರಿಂದ ಹಿಂದೂಮತ ಅಭಿವೃದ್ಧಿ ಆಗಿರುವುದು ಏನುಯಿಲ್ಲ ಆದರೆ, ಇನ್ನೂ ಕ್ಷೀಣಿಸಿದೆಯೆಂದೇ ತಿಳಿಯುತ್ತಿದೆ. ಈಗಿನ ಕೆಲವರು ಹಿಂದೂಗಳಲ್ಲಿ ಹಿಂದೂ ಮತಗ್ರಂಥ ಭಗವದ್ಗೀತೆಯೇನಾ? ಭಗವದ್ಗೀತೆಗಿಂತ ಮೊದಲು ಬಂದಿರುವ ವೇದಗಳಾ? ಯಾವುದೆಂದು ತಿಳಿಯದಂತಿದೆ. ಇದನ್ನು ಕುರಿತು ನೀವೇನು ಹೇಳುತ್ತೀರಾ?**

**ಉತ್ತರ:–** ಮನುಷ್ಯನಾಗಿ ನಿನ್ನೊಂದಿಗೆ ಮಾತನಾಡಿದರೂ ಹೇಳುವುದು ನಾನು (ಜೀವಿ) ಅಲ್ಲವೆಂದು, ಹೇಳುವುದೆಲ್ಲಾ ಆತ್ಮವೆಯೆಂಬ ಜ್ಞಾಪಕದಿಂದ ಕೇಳಿರೆಂದು ಮೊದಲೇ ಹೇಳುತ್ತಿದ್ದೇನೆ. ಜೀವಿಯಾಗಿ ನಾನು ಸಹ ನಿಮ್ಮೊಂದಿಗೆ ಕೇಳುವವನೆ, ಹೇಳುವವನಲ್ಲ. ಆತ್ಮಪಾತ್ರ ಎಲ್ಲವೂ ಅಪರಿಚಿತ ಪಾತ್ರ ಇದ್ದಂತಿರುತ್ತದೆ. ಸ್ವತಃವಾಗಿ ಆತ್ಮ ಮಾತನಾಡುತ್ತಿದ್ದರೂ ಮನುಷ್ಯರೆಲ್ಲರೂ ಜೀವಾತ್ಮವೇ ಮಾತನಾಡುತ್ತಿದೆ ಯೆಂದು ಯಾರೂ ಗುರುತಿಸುವುದಿಲ್ಲ. ಮಾತನಾಡುವ ಆತ್ಮ ಸಹ ನಾನು ಜೀವಾತ್ಮನಲ್ಲ ಆತ್ಮನು ಎಂದು ಸಹ ಹೇಳುವುದಿಲ್ಲ. ಜೀವಾತ್ಮ ಹೇಳಿದಂತೆ ನಂಬಿಸಿ ಹೇಳುತ್ತಾನೆ. ಆದುದರಿಂದ ಎಲ್ಲರೂ ಆತ್ಮವನ್ನು ಗುರುತಿಸಲಾರದೆ ಹೋಗುತ್ತಿದ್ದಾರೆ. ಆದುದರಿಂದ ನೀವು ಮೋಸ ಹೋಗದಂತೆ ಮಾಡುವುದು ನಾನು ಅಲ್ಲ ಆತ್ಮವೆಯೆಂದು ಜೀವಿಯಾಗಿ ನನ್ನನ್ನು ಜವಾಬ್ದಾರನನ್ನಾಗಿ ಮಾಡಬಾರದೆಂದು ನಾನು ಮೊದಲೆ ಹೇಳುತ್ತಿದ್ದೇನೆ. ಹಿಂದೂಗಳಿಗೆ ಅಸಲಾದ ಜ್ಞಾನ ಗ್ರಂಥ ಭಗವದ್ಗೀತೆಯೇ. ಆದರೂ ಕೆಲವರು ಹಿಂದೂಮತದಲ್ಲಿನ ಪ್ರಮುಖರೇ ವೇದಗಳನ್ನು ಪ್ರಮಾಣ ಗ್ರಂಥಗಳಾಗಿ ಹೇಳುತ್ತಿದ್ದಾರೆ. ಅದರಿಂದ

ನಿಜವಾದ ಜ್ಞಾನಿಗಳಲ್ಲಿ ಸ್ವಲ್ಪ ಅಸಂತೃಪ್ತಿ ಏರ್ಪಡುತ್ತಿದೆ. ದೇವರ ಜ್ಞಾನವನ್ನು ತಿಳಿದವರು ಹಿಂದೂಮತದಲ್ಲಿ ಪ್ರಮುಖರಾಗಿ ಇಲ್ಲದಿರುವುದರಿಂದ, ಪ್ರಮುಖರಾಗಿ ಇರುವವರೆಲ್ಲರೂ ಜ್ಞಾನ ತಿಳಿಯದವರಾಗಿರುವುದರಿಂದ ವೇದಗಳು ಹಿಂದೂಗಳ ಪ್ರಮಾಣ ಗ್ರಂಥಗಳೆಂಬ ಮಾತು ಸ್ವಲ್ಪಮಟ್ಟಿಗೆ ವ್ಯಾಪಿಸಿದೆ. ಆದರೆ ಆತ್ಮ ಜ್ಞಾನ ತಿಳಿದ ವ್ಯಕ್ತಿಯಾಗಿ ಪ್ರಬೋಧಾನಂದ ಯೋಗೀಶ್ವರರಾಗಿ ನಾನು 'ವೇದಗಳು ಪ್ರಮಾಣ ಗ್ರಂಥಗಳು' ಎಂಬ ಮಾತನ್ನು ಖಂಡಿಸುತ್ತಿದ್ದೇನೆ.

ಇಂದೂ ಸಮಾಜ ಇಂದೂಮತವಾಗಿ ಬದಲಾಗುವುದಕ್ಕಿಂತ ಮೊದಲು, ಇಂದೂ ಮತ ಸ್ವಲ್ಪ ಬದಲಾವಣೆಹೊಂದಿ ಹಿಂದೂ ಮತವಾಗಿ ಬದಲಾಗುವುದಕ್ಕಿಂತ ಮೊದಲು ಇಂದೂಗಳೆಲ್ಲರೂ ವೇದಗಳನ್ನು ದೂರವಾಗಿಟ್ಟು ಭಗವದ್ಗೀತೆಯನ್ನು ತಮ್ಮ ಜ್ಞಾನ ಗ್ರಂಥವಾಗಿ ಹೇಳಿಕೊಳ್ಳುತ್ತಿದ್ದರು. ಕಲಿಯುಗ ಪ್ರಾರಂಭವಾದ ನಂತರ ಸುಮಾರು ಮೂರು ಸಾವಿರ ವರ್ಷಗಳಿಗೆ ಭಾರತ ದೇಶವೆಲ್ಲಾ ಒಂದಾಗಿರುವ ಇಂದೂ ಸಮಾಜ ಇಂದೂಮತವಾಗಿ ಬದಲಾಗಿ ಹೋಗಿದೆ. ಇಂದೂ ಸಮಾಜದಲ್ಲಿ ಅಲ್ಲಿಯವರೆಗು ಇಲ್ಲದ ಸಿದ್ಧಾಂತ ಹೊರಗೆ ಬಂದಿದೆ. ಕೆಲವು ಸಾವಿರಾರು ವರ್ಷಗಳಿಂದ ಇಂದೂ ಸಮಾಜವನ್ನು ಬದಲಾಯಿಸಿ ತಮಗೆ ಅನುಕೂಲವಾದ ಸಮಾಜವಾಗಿ ಮಾರ್ಪಡಿಸಿಕೊಳ್ಳ ಬೇಕೆಂದುಕೊಂಡ ಆರ್ಯಸಮಾಜದವರು ಇಂದೂಗಳಲ್ಲಿ ತ್ರೇತಾಯುಗದಿಂದ ಬದಲಾವಣೆ ತರಬೇಕೆಂದು ಪೂರ್ತಿ ಪ್ರಯತ್ನ ಮಾಡುತ್ತಾ ಬಂದಿದ್ದಾರೆ. ಆದರೂ ಆಗಿನಕಾಲದಲ್ಲಿ ಇಂದೂಗಳಲ್ಲಿನ ಜ್ಞಾನ ಆರ್ಯರ ಮಾತನ್ನು ನಡೆಯಲು ಬಿಡಲಿಲ್ಲ. ತ್ರೇತಾಯುಗದಲ್ಲಿ ರಾವಣಬ್ರಹ್ಮ ಪ್ರಭಾವದಿಂದ ಆರ್ಯರ ಆಟಗಳು ಸಾಗಲಿಲ್ಲ. ದ್ವಾಪರಯುಗದಲ್ಲಿ ಅವರಿಗೆ ಸ್ವಲ್ಪ ಬಲ ಕೈಗೂಡಿ ಇಂದೂಗಳಲ್ಲಿ ಬದಲಾವಣೆ ತರುತ್ತಾ ಬಂದಿದ್ದಾರೆ. ದ್ವಾಪರಯುಗದ ಕೊನೆಯಲ್ಲಿ ಆರ್ಯರು ಪೂರ್ತಿ ಪಟ್ಟು ಸಾಧಿಸಿ ತಮಗೆ ಇಷ್ಟವಾದ ವೇದಗಳನ್ನು, ಯಜ್ಞಗಳನ್ನು, ದಾನಗಳನ್ನು, ತಪಸ್ಸುಗಳನ್ನು ಚೆನ್ನಾಗಿ ಪ್ರಚಾರ ಮಾಡಿ ಇಂದೂ ಜ್ಞಾನವನ್ನು ಇಲ್ಲದಂತೆ ಮಾಡಿದ್ದಾರೆ. ಭಾರತದೇಶವೆಲ್ಲಾ ಇರುವ

ದ್ರಾವಿಡಜಾತಿಯನ್ನು ಉತ್ತರ ಭಾರತದೇಶದಲ್ಲಿ ಇಲ್ಲದಂತೆ ಮಾಡಿ, ಕೇವಲ ದಕ್ಷಿಣ ಭಾರತದೇಶಕ್ಕೇ ಪರಿಮಿತಿ ಮಾಡಿದ್ದಾರೆ. ಈಗಿರುವ ಕರ್ನಾಟಕ, ಆಂಧ್ರ, ತಮಿಳನಾಡು, ಕೇರಳ ನಾಲ್ಕು ರಾಷ್ಟ್ರಗಳ ಪ್ರಾಂತಗಳವರೆಗೇ ದ್ರಾವಿಡರು ಇದ್ದು ಹೋಗಿದ್ದಾರೆ. ದಕ್ಷಿಣ ದೇಶದವರೆಗು ಪರಿಮಿತವಾದ ದ್ರಾವಿಡರನ್ನು ಸಹ ತಮ್ಮಕಡೆ ಸೆಳೆದುಕೊಳ್ಳುವುದಕ್ಕೆ ಆರ್ಯರು ಅನೇಕ ಪ್ರಯತ್ನಗಳು ಮಾಡಿದ್ದಾರೆ. ಆದರೆ ದ್ವಾಪರಯುಗ ಅಂತ್ಯದಲ್ಲಿ ಭಗವಂತನಾದ ಕೃಷ್ಣನು ಹೇಳಿದ ಬೋಧನೆ ಆರ್ಯರಿಗೆ ಸ್ವಲ್ಪ ಅಡ್ಡಕಟ್ಟೆ ಹಾಕಿದರೂ ಅದು ಸ್ವಲ್ಪಕಾಲದವರಗೇ ನಡೆದಿದೆ. ಭಗವದ್ಗೀತೆಯನ್ನು ಹೇಳಿದ ಮೂರುಸಾವಿರ ವರ್ಷಗಳಿಗೆ ದಕ್ಷಿಣ ದೇಶದಲ್ಲಿ ಆರ್ಯರ ಪ್ರಯತ್ನಗಳು ಸ್ವಲ್ಪಕ್ಕೆಸ್ವಲ್ಪ ಸಫಲೀಕೃತವಾಗಿವೆ. ಹಾಗೆ ಚಿಕ್ಕಚಿಕ್ಕದಾಗಿ ದಕ್ಷಿಣ ಭಾರತದೇಶದಲ್ಲಿ ಪಟ್ಟು ಸಾಧಿಸಲು ಪ್ರಾರಂಭಮಾಡಿದ್ದಾರೆ. ಅಂತಹ ಪ್ರಯತ್ನಗಳಲ್ಲಿ ಪೂರ್ತಿ ದಕ್ಷಿಣದಲ್ಲಿ ಕೊನೆಯಲ್ಲಿರುವ ಮಲಯಾಳ ರಾಷ್ಟ್ರದಲ್ಲಿ ಅವರ ಕ್ರಿಯೆಯನ್ನು ಪ್ರಾರಂಭಿಸಿದ್ದಾರೆ. ಅಲ್ಲಿ ಒಬ್ಬ ಪ್ರಮುಖ ವ್ಯಕ್ತಿಯನ್ನು ತಯಾರುಮಾಡಿ, ಆತನ ಮೂಲಕ ಇಂದೂಗಳಿಗೆ ವೇದಗಳು ಪ್ರಮಾಣ ಗ್ರಂಥಗಳೆಂದು ಹೇಳಿಸುವುದು ನಡೆದಿದೆ. ಆರ್ಯರಾದ ತಾವು ಹೇಳಿದರೇ ದ್ರಾವಿಡರು ತಮ್ಮ ಕುತಂತ್ರವನ್ನು ಕಂಡುಹಿಡಿಯಬಲ್ಲರೆಂದೂ, ಆರ್ಯರಾದವರು ಹೊರಗೆ ಕಾಣಿಸದಂತೆ, ದ್ರಾವಿಡರಲ್ಲಿ ಬೆರೆತುಹೋಗಿ, ದ್ರಾವಿಡರಲ್ಲಿಯೇ ತಮಗೆ ಸರಿಹೋಗುವ ವ್ಯಕ್ತಿಯನ್ನು ತಯಾರು ಮಾಡಿ ದ್ರಾವಿಡರಿಂದಲೇ ದ್ರಾವಿಡರೆಲ್ಲಗೂ ತಿಳಿಯುವಂತೆ ವೇದಗಳನ್ನು ಕುರಿತು ಹೇಳಿ ಭಗವದ್ಗೀತೆಯನ್ನು ಅಡಗಿ ಸಬೇಕೆಂದಿದ್ದಾರೆ. ಆಗ ಅವರು ಮಾಡಿದ ಕುತಂತ್ರದ ಫಲಿತವಾಗಿ ಈದಿನ ಬಹಳಜನ ಹಿಂದೂಗಳ ಪ್ರಮಾಣ ಗ್ರಂಥ ವೇದಗಳು ಅನ್ನುತ್ತಿದ್ದಾರೆ.

ಈದಿನ ಯಾರೂ ಗುರುತಿಸದ ಆರ್ಯರ ಕುತಂತ್ರಗಳನ್ನು ಗುರುತಿಸಿ ತ್ರೇತಾಯುಗದಿಂದ ಆರ್ಯರು ಹೇಗೆ ಭಾರತದೇಶದಲ್ಲಿ ಪ್ರವೇಶಿಸಿದ್ದಾರೋ, ಹೇಗೆ ಉತ್ತರ ಭಾರತ ದೇಶವೆಲ್ಲವನ್ನು ಆಕ್ರಮಿಸಿಕೊಂಡಿದ್ದಾರೋ, ಆಂದಿನಿಂದ ಅವರು ಮಾಡುತ್ತಿರುವ ಆಚರಣೆಗಳೇನೋ, ತಿಳಿಸುತ್ತಾ ಬಂದಿದ್ದೇವೆ.

ತ್ರೇತಾಯುಗದಲ್ಲಿ ದಕ್ಷಿಣ ಭಾರತದೇಶಕ್ಕೆ ಅನುಬಂಧವಾಗಿದ್ದು ಭಾರತದೇಶದಲ್ಲಿ ಒಂದು ಭಾಗವಾಗಿ ಹೇಳುವ ಶ್ರೀಲಂಕಗೆ ರಾಜನಾದ ರಾವಣಬ್ರಹ್ಮ ಆಗಿನ ಕಾಲದಲ್ಲಿ ಆರ್ಯರನ್ನು ದಕ್ಷಿಣ ದೇಶದಕಡೆ ಬರದಂತೆ ಮಾಡಿದ್ದಾನೆ. ಅಷ್ಟೇ ಅಲ್ಲದೆ ತಮ್ಮ ಸೈನ್ಯದೊಂದಿಗೆ ಅವರ ಯಜ್ಞ ಯಾಗಾದಿಗಳನ್ನು ಮಾಡದಂತೆ ನೋಡುತ್ತಿದ್ದನು. ಕಾಲ ಕಳೆದಂತೆಲ್ಲ ರಾವಣಬ್ರಹ್ಮನಂತಹ ಜ್ಞಾನಿಗಳು ಇಲ್ಲದಿರುವುದರಿಂದ ಆರ್ಯರ ಬಲ ಹೆಚ್ಚಾಗುತ್ತಾ ಬಂದಿದೆ. ಈ ವಿಷಯ ಗಳೆಲ್ಲವೂ ತಿಳಿಸಿ ಈದಿನ ದ್ರಾವಿಡರಿಗೆ ಸ್ವಲ್ಪ ಕಣ್ಣು ತೆರೆಸಿದ್ದೇವೆ. ಆದರೂ ಆರ್ಯರ ಮುಂದೆ ನಮ್ಮ ಕೃಷಿ ಬಹಳ ಚಿಕ್ಕದು. ಆದುದರಿಂದ ಬಹಳಜನ ವೇದಗಳೆ ಮುಖ್ಯ ಗ್ರಂಥಗಳೆಂದು ಹೇಳುತ್ತಾ ಯಜ್ಞಗಳನ್ನು ಮಾಡುತ್ತಲೇ ಇದ್ದಾರೆ. ಸತ್ಯವನ್ನು ಹೇಳುತ್ತಿರುವ ನಮ್ಮ ಮೇಲೆ ಆರ್ಯರು ಕೆಟ್ಟ ಬುದ್ಧಿಯಿಂದಲೇ ಕುತಂತ್ರಗಳು ಮಾಡುತ್ತಿದ್ದಾರೆ. ಆದರೂ ನಮ್ಮ ಕೆಲಸವನ್ನು ನಾವು ಬಿಡಲಿಲ್ಲ. ಭಗವದ್ಗೀತೆಯನ್ನು ಕುರಿತೇ ಹೇಳುತ್ತಿದ್ದೇವೆ. ಅದೇ ಹಿಂದೂಗಳ ಪ್ರಮಾಣ ಗ್ರಂಥವೆನ್ನುತ್ತಿದ್ದೇವೆ. ವೇದಗಳನ್ನು ನಿರಾಕರಿಸುತ್ತಿದ್ದೇವೆ.

**ಪ್ರಶ್ನೆ :– ದಕ್ಷಿಣ ದೇಶಕ್ಕೆ ಬಂದಿರುವ ಆರ್ಯರು ಕೇರಳ ರಾಷ್ಟ್ರದಲ್ಲಿ ತಮಗೆ ಅನುಕೂಲವಾಗಿ ಯಾರನ್ನು ಬದಲಾಯಿಸಿದ್ದಾರೆ? ಯಾರನ್ನು ದೊಡ್ಡದಾಗಿ ತಯಾರು ಮಾಡಿ ಆತನಿಂದ ವೇದಗಳೆ ದೊಡ್ಡವೆಂದು ಹೇಳಿಸಿದ್ದಾರೋ ಹೇಳುತ್ತೀರಾ?**

**ಉತ್ತರ :–** ಹೇಳುತ್ತೇವೆ. ನಡೆದ ಚರಿತ್ರೆಯನ್ನು ಹೇಳುವುದರಲ್ಲಿ ತಪ್ಪಿಲ್ಲ ಅಲ್ಲವೇ! ನಾನು ಹೇಳುವುದು ನಡೆದ ಚರಿತ್ರೆಯೇ ಆದರೂ ಅದು ಬಹಳಜನರಿಗೆ ತಿಳಿದಿಲ್ಲ. ಕೆಲವರಿಗೆ ತಿಳಿದರೂ, ಅವರಿಗೆ ತಿಳಿದಿರುವುದೆಲ್ಲಾ ಸತ್ಯವಲ್ಲ. ಆದುದರಿಂದ ಚರಿತ್ರೆಯಲ್ಲಿ ಮರೆಯಾಗಿರುವ ವಿಷಯಗಳನ್ನು ಹೊರಗೆ ತಂದು ಹೇಳಬೇಕೆಂದು ಅಂದುಕೊಂಡಿದ್ದೇವೆ. ಕಲಿಯುಗ ಬಂದ ನಂತರ ಸುಮಾರು ಎರಡುಸಾವಿರದ ಐದುನೂರು (2500) ವರ್ಷಗಳು ಕಳೆದ ನಂತರ ಗೌತಮ ಬುದ್ಧನು ಜನ್ಮಿಸಿ, ಆತನು ದೊಡ್ಡವನಾಗಿ ತಾನು ಅನುಭವದಲ್ಲಿ ಹೊಂದಿದ ಜ್ಞಾನವನ್ನು ಪ್ರಜೆಗಳಿಗೆ ಹೇಳುವುದಕ್ಕೆ ಪ್ರಾರಂಭಿಸಿದನು. ಇಲ್ಲಿಗೆ 2600 ವರ್ಷಗಳ

ಕೆಳಗೇ ಆರ್ಯರಿಗೆ ಬುದ್ಧನು ಹೇಳಿದ ಮಾತನ್ನು ಕೇಳದ ಮೂರ್ಖನಾಗಿ ಬದಲಾಗಿಹೋಗಿದ್ದಾನೆ. ಬುದ್ಧನು ತನಗೆ ತಿಳಿದ ಅಷ್ಟಾಂಗ ಸೂತ್ರಗಳನ್ನು ಪ್ರಚಾರ ಮಾಡಿದಾಗ, ಆಗಲೇ ಕುಲ ವಿವಕ್ಷಗಳಿಂದ ತೊಂದರೆ ಪಡುತ್ತಿರುವ ಪ್ರಜಾನಿಕವೆಲ್ಲವೂ ಬುದ್ಧನು ಪ್ರತಿಪಾದಿಸಿದ **"ಎಲ್ಲರೂ ಸಮಾನವೇ, ಯಾರನ್ನು ಕಡಿಮೆಯಾಗಿ ನೋಡಬಾರದು. ಎಲ್ಲರಿಗೂ ಒಳ್ಳೆಯದು ನಡೆಯಬೇಕೆಂದು ಕೋರಿಕೊಳ್ಳಬೇಕು. ಎಲ್ಲರನ್ನು ಕ್ಷಮಿಸುವ ಸ್ವಭಾವವಿರಬೇಕು. ಇತರರ ಆನಂದವೇ ತನ್ನ ಆನಂದವೆಂದು ತಿಳಿಯಬೇಕು. ಇತರರು ಬಾಧೆಪಡುವ ಕೆಲಸಗಳನ್ನು ಮಾಡಬಾರದು, ಎಲ್ಲರ ಕ್ಷೇಮವನ್ನು ಕೋರಿಕೊಳ್ಳಬೇಕು. ಸರ್ವಪ್ರಾಣಿಗಳನ್ನು ಸಮದೃಷ್ಠಿಯಿಂದ ನೋಡಬೇಕು"** ಎನ್ನುವ ಎಂಟು ಸೂತ್ರಗಳಕಡೆ ಆಕರ್ಷಿತರಾಗಿ, ಆರ್ಯರಿಂದ ಬುದ್ಧನಕಡೆ ಹೆಚ್ಚಾಗಿ ದೃಷ್ಠಿಯನ್ನು ಹರಿಸಿದ್ದಾರೆ.

ಯುದ್ಧಗಳಲ್ಲಿ ಎಲ್ಲರನ್ನು ಹಿಂಸಿಸಿ ಜಿಗುಪ್ಸೆಗೊಂಡ ಅಶೋಕಚಕ್ರವರ್ತಿ ಬುದ್ಧನ ಸೂತ್ರಗಳಿಗೆ ಪೂರ್ತಿಯಾಗಿ ಆಸಕ್ತನಾಗಿದ್ದಾನೆ. ಅಷ್ಟೇಯಲ್ಲದೆ ಆಶೋಕಚಕ್ರವರ್ತಿ ಮಗಳು, ಮಗ ಇಬ್ಬರೂ ದೇಶದಲ್ಲಿಯೂ, ಇತರ ಪ್ರಾಂತದಲ್ಲಿಯೂ, ಬುದ್ಧನ ಸೂತ್ರಗಳನ್ನು ಪ್ರಚಾರ ಮಾಡಸಾಗಿದರು, ಆತನು ಹೇಳಿದ ಅಷ್ಟ ಸೂತ್ರಗಳನ್ನು ದೊಡ್ಡ ಸ್ಮಾರಕ ಸ್ಥಂಭಗಳ ಮೇಲೆ ಬರೆಸಿ ಎಲ್ಲರಿಗೂ ತಿಳಿಯುವಂತೆ ಮಾಡಿದ್ದಾರೆ. ಇದೆಲ್ಲವೂ ಪಕ್ಕದಲ್ಲಿದ್ದು ಗಮನಿಸಿದ ಆರ್ಯರು ಬುದ್ಧನು ಪ್ರಚಾರ ಆಗುವುದು ಇಷ್ಟವಿಲ್ಲದೆ ಬುದ್ಧನ ಮೇಲೆ ಕೂಡಾ ಅಸೂಯೆ ಪಡತೊಡಗಿದ್ದಾರೆ. ದ್ರಾವಿಡರನ್ನೇ ಭ್ರಷ್ಟು ಹಿಡಿಸಿದ ಆರ್ಯರಿಗೆ ಬುದ್ಧನು ಒಂದು ಲೆಕ್ಕವಾ ಎನ್ನುವಂತೆ, ಬುದ್ಧನು ಹಿಂದೂಮತದವನೇ ಅಲ್ಲ ಎಂದು ಪ್ರಚಾರ ಮಾಡಿ, ಯಾರನ್ನು ಬುದ್ಧನಕಡೆ ಹೋಗದಂತೆ ನೋಡಬೇಕೆಂದು ಒಳಸಂಚು ಹಾಕಿದ್ದಾರೆ. ಅದರಪ್ರಕಾರವೇ ಬುದ್ಧನು ಪರಮತದವನೆಂದು, ಹಿಂದೂಗಳಾದ ಆರ್ಯರಿಗೆ ವಿರುದ್ಧವಾಗಿ ಬೋಧಿಸುತ್ತಿದ್ದಾನೆಂದು, ಹಾಗೆ ಬೋಧಿಸುವುದರಿಂದ ಹಿಂದೂಮತ ಕ್ಷೀಣಿಸಿಹೋಗಿ ಕೊನೆಗೆ ಎಲ್ಲರೂ ಬೌದ್ಧ ಮತಸ್ಥರಾಗಿ ಬದಲಾಗುತ್ತಿದ್ದಾರೆಂದು ಪ್ರಚಾರ ಮಾಡಿದ್ದಾರೆ. ಅಲ್ಲಿಯವರೆಗು

ಮತಗಳ ಪ್ರಸ್ತಾವನೆ ಇಲ್ಲದ ಹಿಂದೂಗಳಲ್ಲಿ ಬೌದ್ಧಮತವೆನ್ನುವುದನ್ನು ಆರ್ಯರೇ ಮೊದಲು ಹೆಸರಿಟ್ಟು ಹೇಳಿದ್ದಾರೆ. ಗೌತಮಬುದ್ಧನು ಮೊದಲಿನಿಂದ ಹಿಂದೂ ಸಮಾಜದಲ್ಲಿಯೇ ಇದ್ದರೂ, ಆತನು ತಮಗಿಂತ ಬೇರೆ ಮತಸ್ಥನಾಗಿ ಇದ್ದಾನೆಂದು ಆರ್ಯರು ಪ್ರಚಾರ ಮಾಡತೊಡಗಿದರು.

ಹಿಂದೂದೇಶವಾಗಿ ಬದಲಾಗಿಹೋದ ಇಂದೂದೇಶದಲ್ಲಿ, ಕಲಿಯುಗ ಬಂದ ನಂತರ ಸಹ 2500 ವರ್ಷಗಳು ಮತ ಎಂಬಮಾತೆ ಇಲ್ಲ. ಇರುವುದು ಹಿಂದೂ ಸಮಾಜ ಮತ್ತು ಆರ್ಯ ಸಮಾಜ. ಅಂತಹ ಸಮಯದಲ್ಲಿ ಬುದ್ಧನು ಹಿಂದೂಸಮಾಜದಲ್ಲಿಯೇ ಹುಟ್ಟಿದ್ದಾನೆ. ಬುದ್ಧನು ಸನ್ಯಾಸತ್ವ ತೆಗೆದುಕೊಂಡು, ಕಾಷಾಯವಸ್ತ್ರಗಳು ಧರಿಸಿ ಗುಂಡು ಮಾಡಿಸಿಕೊಂಡು, ಹಿಂದೂಸನ್ಯಾಸಿಗಳಂತೆ ಹೆಂಡತಿಯನ್ನು ಸಹ ಬಿಟ್ಟು, ಎಲ್ಲವನ್ನು ಸನ್ಯಾಸಿಸಿದ ಹಿಂದೂಸನ್ಯಾಸಿಯೇ. ಅಂತಹ ಸನ್ಯಾಸಿಯಾದ ಬುದ್ಧನ ಸೂತ್ರಗಳಿಗೆ, ಆತನ ಜ್ಞಾನಕ್ಕೆ ಪ್ರಜೆಗಳು, ಪ್ರಭುಗಳು ಆಕರ್ಷಿತರಾಗುತ್ತಿದ್ದಾರೆಂದು ಸಹಿಸಲಾರದೆ ತಮ್ಮ ಆರ್ಯರ ಪ್ರಾಬಲ್ಯವನ್ನು ಬುದ್ಧನಿಂದ ಕಡಿಮೆಯಾಗುತ್ತದೇನೋ ಎಂಬ ಅನುಮಾನದಿಂದ, ಬುದ್ಧನ ಮೇಲೆ ಅಸೂಯಪಟ್ಟು, ಬುದ್ಧನು ಹಿಂದೂ ಸನ್ಯಾಸಿಯಾಗಿ ಇದ್ದರೂ ಆತನನ್ನು ಪರಮತಸ್ಥನೆಂದು, ಹಿಂದೂ ಮತದವನಲ್ಲವೆಂದು, ಭೌದ್ಧಮತ ಬೇರೆ ಹಿಂದೂಮತ ಬೇರೆಯೆಂದು, ಬುದ್ಧನನ್ನು ಹಿಂದೂ ಸಮಾಜದಿಂದ ಬೇರೆಮಾಡಿ, ಬೌದ್ಧಮತಸ್ಥನನ್ನಾಗಿ ವರ್ಣಿಸಿ ಹೇಳಿದ್ದಾರೆ. ಆಗಲೇ ಸ್ವಲ್ಪಕಾಲದಿಂದ ಪ್ರಚಾರವಾಗುತ್ತಿರುವ ಬೌದ್ಧ ಸೂತ್ರಗಳನ್ನು ಭಾರತದೇಶದಲ್ಲಿ ಯಾರೂ ತಿಳಿದುಕೊಳ್ಳದಂತೆ ಆರ್ಯರು ನಿರ್ಬಂಧಿಸಿದ್ದಾರೆ. ಆರ್ಯರ ಮಾತುಗಳು ಕೇಳುತ್ತಿರುವವರೆಲ್ಲರೂ ಬೌದ್ಧ ಸೂತ್ರಗಳನ್ನು ಬಿಟ್ಟಾಗ, ಬೌದ್ಧ ಮತ ಭಾರತದೇಶದಲ್ಲಿ ಅಭಿವೃದ್ಧಿ ಹೊಂದಲಾರದೆ ಹೋಗಿದೆ. ಆದರೆ ಆರ್ಯರ ಪ್ರಭಾವವಿಲ್ಲದ ಚೈನಾ, ಟಿಬೆಟ್, ರಷ್ಯಾ ಮೊದಲಾದ ಆಸಿಯಾ ದೇಶಗಳಲ್ಲಿಯೂ, ಯುರೋಪಾ ಖಂಡದಲ್ಲಿಯೂ ಬೌದ್ಧಮತ ಚೆನ್ನಾಗಿ ಅಭಿವೃದ್ಧಿ ಹೊಂದಿದೆ. ಆರ್ಯರ ಅಸೂಯೆಯಿಂದ ಭಾರತದೇಶದಲ್ಲಿ ಹುಟ್ಟಿದ ಬೌದ್ಧಮತ

ಭಾರತದೇಶದಲ್ಲಿ ಅಭಿವೃದ್ಧಿ ಹೊಂದಲಾರದೆ ಹೋದರೂ, ಈದಿನ ಉಳಿದ ದೇಶಗಳಲ್ಲಿ ಹಿಂದೂ ಮತಕ್ಕಿಂತ ದೊಡ್ಡದಾಗಿದೆ.

ಆದಿನ ಅಸೂಯೆಯಿಂದ ಹಿಂದೂಗಳಲ್ಲಿನ ಬುದ್ಧನನ್ನು ಹಿಂದೂಗಳಿಂದ ಬಹಿಷ್ಕರಿಸದೆ ಬುದ್ಧನು ಸಹ ಭಾರತದೇಶದಲ್ಲಿನ ಹಿಂದೂವೇ ಅಲ್ಲವೆ! ಎಂದು ಅಂದುಕೊಂಡಿದ್ದರೆ ಬೌದ್ಧವು ಈದಿನ ಹಿಂದೂಗಳಲ್ಲಿ ಹಿಂದೂ ಸಮಾಜವಾಗಿಯೇ ಇರುತ್ತಿತ್ತು. ಹಾಗೆ ಬೌದ್ಧವು ಹಿಂದೂ ಸಮಾಜವಾಗಿ ಇದ್ದಿದ್ದರೆ ಈದಿನ ಬೌದ್ಧಮತವೆನ್ನುವುದು ಇರುವ ದೇಶಗಳಲ್ಲಿ ಸಹ ಹಿಂದೂ ಮತವಿದೆಯೆಂದು ಹೇಳಿಕೊಳ್ಳುವ ಅವಕಾಶ ಇರುತ್ತಿತ್ತು. ಹಾಗೆ ಹಿಂದೂ ಮತ ಎಷ್ಟೋ ದೇಶಗಳಲ್ಲಿ ವಿಸ್ತರಿಸಿರುವುದಾಗಿ ಇರುತ್ತಿತ್ತು. ಆದರೆ ಆರ್ಯರು ಸ್ವಾರ್ಥ ಬುದ್ಧಿಯಿಂದ ಮಾಡಿದ ಕೆಲಸದಿಂದ, ಬುದ್ಧನನ್ನು ಹಿಂದೂಮತದಿಂದ ಬಹಿಷ್ಕರಿಸಿರುವುದರಿಂದ, ಆರ್ಯರು ಹಿಂದೂ ಸಮಾಜವನ್ನು ನಾಶ ಮಾಡಿದ್ದಾರೆಂದೇ ಹೇಳಬಹುದು ಆದರೇ ಉದ್ಧರಿಸಿದ್ದಾರೆಂದು ಹೇಳಲಾರೆವು. ತಮ್ಮ ಅಧಿಪತ್ಯಕ್ಕಾಗಿ, ತಮ್ಮ ಸುಖಗಳಿಗಾಗಿ ಹಿಂದೂಮತಕ್ಕೆ ತೀರದ ದ್ರೋಹ ಮಾಡಿದ್ದಾರೆಂದು ಹೇಳಬಹುದು. ಆರ್ಯರು ತಿಳುವಳಿಕೆ ಉಳ್ಳವರಾದ್ದರಿಂದ ಅವರು ತಪ್ಪು ಮಾಡಿದರೂ ಯಾವುದೂ ಹೊರಬೀಳದಂತೆ ಇತರರ ದೃಷ್ಟಿಯಲ್ಲಿ ತಮ್ಮ ತಪ್ಪು ಇಲ್ಲವೆನ್ನುವಂತೆ ಈ ದಿನ ಹಿಂದೂ ಧರ್ಮರಕ್ಷಣೆ ಎಂಬ ಪಕ್ಷಪಾತವನ್ನು ಮೊದಲುಮಾಡಿದ್ದಾರೆ. ಅವರು ಹಾಗಿರುವಾಗ ಆರ್ಯ ಸಂತತಿಯಲ್ಲದ ದ್ರಾವಿಡರು ತಿಳುವಳಿಕೆಯಿಲ್ಲದಂತಿದ್ದೂ ಸಮಾಜದಲ್ಲಿ ಆರ್ಯರಿಂದ ಯಾವ ಕೆಲಸ ನಡೆದರೂ, ಇದು ಒಳ್ಳೆಯದಾ ಕೆಟ್ಟದಾ ಎಂದಾಗಲಿ, ಆರ್ಯರು ಹಿಂದೂ ಸಮಾಜವನ್ನು ಉದ್ಧರಿಸುತ್ತಿದ್ದಾರಾ ಅಥವಾ ನಾಶ ಮಾಡುತ್ತಿದ್ದಾರಾ ಎಂದಾಗಲಿ ಗ್ರಹಿಸದಿದ್ದಾರೆ. ಅಷ್ಟೇ ಅಲ್ಲದೆ ದ್ರಾವಿಡ ಜಾತಿಯಿಂದ ಮೋಸಹೋಗಿ ಶೂದ್ರರಾದವರನ್ನು ಆರ್ಯರಾದವರು ಬಳಸಿಕೊಳ್ಳುತ್ತಾ, ತಮಗೆ ಯಾರಾದರೂ ಶತ್ರುಗಳಾಗಿ ಅಥವಾ ವಿಮರ್ಶಕರಾಗಿ ಕಾಣಿಸಿದರೆ ಶೂದ್ರರನ್ನೇ ಪ್ರೇರೇಪಿಸಿ ಅವರನ್ನೇ ಬಳಸಿಕೊಂಡು, ಅವರಿಂದಲೇ

ಇತರರನ್ನು ಅಡಗಿಸುತ್ತಿದ್ದಾರೆ. ತಮಗೆ ಆತಂಕವಾಗಿರುವ ಶೂದ್ರರನ್ನು ಶೂದ್ರರಿಂದಲೇ ಹೊಡೆಸಿ, ಬೈಯಿಸಿ ತಮಗೆ ಅಡ್ಡವಿಲ್ಲದಂತೆ ಮಾಡಿಕೊಳ್ಳುತ್ತಿದ್ದಾರೆ.

ಹಿಂದೂಗಳಲ್ಲಿ ಶೂದ್ರನಾದ ಬುದ್ಧನನ್ನು ತಮ್ಮವನು ಅಲ್ಲವೆನ್ನುತ್ತಾ ದುರ್ಬುದ್ಧಿಯಿಂದ, ಶೂದ್ರರಿಂದಲೇ ದೂರಮಾಡಿದ ಆರ್ಯರು, ಯಾರಾದರೂ ಶೂದ್ರನು ನಮಗೆ ವಿರುದ್ಧವಾಗಿ ಕಾಣಿಸಿದರೆ, ಅವರನ್ನು ಪರಮತದವನೆಂದು ಮುದ್ರೆಹಾಕಿ, ಶೂದ್ರನಾದವನನ್ನು ಶೂದ್ರರಿಂದಲೇ ಹಿಂಸಿಸಿ, ಅವರ ದಾರಿಗೆ ಅಡ್ಡ ಇಲ್ಲದಂತೆ ಮಾಡಿಕೊಳ್ಳುವುದು ನಡೆಯುತ್ತಿದೆ. ಆದರೆ ಶೂದ್ರರು ಆರ್ಯರ ಕೈಯಲ್ಲಿನ ಆಯುಧದಂತೆ ತಯಾರಾಗಿ, ಶೂದ್ರರಾದವರನ್ನೆ ಶೂದ್ರರೇ ಹಿಂಸಿಸುವುದರಲ್ಲಿ ಆರ್ಯರ ತಿಳುವಳಿಕೆ ಕಾಣಿಸಿದರೂ, ಅವರಿಗೆ ಉಪಯೋಗ ಪಡುವ ಶೂದ್ರರ ತಿಳುವಳಿಕೆ ಇಲ್ಲದ ಕೆಲಸ ಚೆನ್ನಾಗಿ ಕಾಣಿಸುತ್ತಿದೆ. ಈದಿನ ಶೂದ್ರರಾದವರು ಎಷ್ಟೋ ಕಲಿತುಕೊಳ್ಳಬೇಕಾಗಿದೆ. ಯಾರೋ ಏನೊ ಹೇಳಿದರೆ ಅದೇ ನಿಜವೆಂದು ನಂಬಿ, ಒಬ್ಬ ಶೂದ್ರನು ಮತ್ತೊಬ್ಬ ಶೂದ್ರನನ್ನು ಬಾಧಿಸುವುದು, ಹಿಂಸಿಸುವುದು ಶೂದ್ರರ ತಿಳುವಳಿಕೆಯಿಲ್ಲದ ಕೆಲಸ ಅಲ್ಲವೆ! ಎಂದು ಕೇಳುತ್ತಿದ್ದೇವೆ. ಶೂದ್ರರು ಆರ್ಯರ ಮನೆ ನಾಯಿಗಳಂತೆ ವ್ಯವಹರಿಸುತ್ತಾ, ಅವರು ಯಾರನ್ನು ಕಚ್ಚು ಎಂದರೆ ಅವರನ್ನು ಕಚ್ಚುತ್ತಾಹೋದರೆ, ಹಿಂದೂಸಮಾಜ ಕ್ಷೀಣಿಸದೆ ಹೇಗೆ ಅಭಿವೃದ್ಧಿ ಆಗುತ್ತದೆ? ಹಿಂದೂ ಧರ್ಮರಕ್ಷಣೆ ಎಂಬ ನೆಪದಿಂದ ಹಿಂದೂವನ್ನೇ ಹಿಂದೂಗಳ ಮೇಲಕ್ಕೆ ಪ್ರೇರೇಪಿಸುವ ಆರ್ಯರು ಇರುವವರೆಗೂ, ಆರ್ಯರು ಪ್ರೇರೇಪಿಸಿದರೆ ಹಿಂದೆಮುಂದೆ ನೋಡದೆ ಇತರರ ಮೇಲೆ ದಾಳಿಮಾಡುವ ಶೂದ್ರರು ಇರುವವರೆಗೂ, ಹಿಂದೂ ಸಮಾಜ ಕ್ಷೀಣಿಸುವುದು ಹೊರತು, ಅಭಿವೃದ್ಧಿಯಾಗುವುದು ಇರುವುದಿಲ್ಲ.

ಈ ಗ್ರಂಥವನ್ನು ಓದುವವರು ಯಾರಾದರೂ ನ್ಯಾಯವಾಗಿ ಬುದ್ಧನ ವಿಷಯವನ್ನು ಕುರಿತು ಹೇಳಿರಿ. ಅಲ್ಲಿಯವರೆಗೂ ಎಲ್ಲಿಯೂ ಇತರ ಮತವೇ ಇಲ್ಲದ ಆ ದಿನಗಳಲ್ಲಿ, ಬುದ್ಧನು ನನ್ನ ಮತ ಬೇರೆಯೆಂದು ಎಲ್ಲಿಯಾದರೂ ಹೇಳಿದ್ದಾನಾ? ನಾನು ಸಹ ಹಿಂದೂ ಸಮಾಜದವನೆಯೆಂದು, ಹಿಂದೂತ್ವಕ್ಕೆ

ಗುರುತಾಗಿ ಬಣ್ಣವಾಗಿರುವ ಕಾಷಾಯವನ್ನು ಧರಿಸಿದರೂ, ಸನ್ಯಾಸಿಯಾಗಿ ಬದಲಾದರೂ, ನೀನು ಬೇರೆ ನಿನ್ನ ಜ್ಞಾನ ಬೇರೆ, ನಿನ್ನ ಮತ ಬೇರೆಯೆಂದು ಹಿಂದೂ ಸಮಾಜದಿಂದ ಬಹಿಷ್ಕರಿಸಿದವರು ಹಿಂದೂತ್ವವನ್ನು ಉದ್ಧರಿಸುವವರಾ? ಹಿಂದೂ ಧರ್ಮರಕ್ಷಣೆ ಮಾಡುವವರಾ? ಈ ಪ್ರಶ್ನೆಗಳಿಗೆ ಉತ್ತರವನ್ನು ನ್ಯಾಯವಾಗಿ ಹೇಳಿದರೆ ಹಿಂದೂತ್ವವನ್ನು ಸರ್ವನಾಶ ಮಾಡಿದವರೆಂದು ಹೇಳಬಹುದು. ಹಿಂದೂ ಧರ್ಮಗಳನ್ನು ಭಕ್ಷಿಸಿದವರೆಂದು ಹೇಳಬಹುದು. ಆದಿನ ಆರ್ಯರು ಅಸೂಯೆಯಿಂದ ಬುದ್ಧನನ್ನು ಬಹಿಷ್ಕರಿಸಿ, ಈದಿನ ಬೌದ್ಧವು ಹಿಂದೂತ್ವದಲ್ಲಿನ ಭಾಗವೇ ಎಂದು ಹೇಳಿಕೊಳ್ಳಲಾರದ ಸ್ಥಿತಿಯೊಳಗೆ ಹೋಗಿ, ಹಿಂದೂತ್ವಕ್ಕು, ಹಿಂದೂ ಧರ್ಮಗಳಿಗು ತೀರದ ದ್ರೋಹ ಮಾಡಿದ್ದಾರೆಂದೇ ಹೇಳಬಹುದು.

**ಪ್ರಶ್ನೆ :– ಇಲ್ಲಿಯವರೆಗು ಆರ್ಯರಿಗೆ ಯಾರೂ ತಡೆ ಹಾಕಲಿಲ್ಲವಾ? ಅವರ ತಿಳುವಳಿಕೆಗಿಂತ ಮೀರಿದವರು ಹುಟ್ಟಲಿಲ್ಲವಾ?**

**ಉತ್ತರ:–** ಆರ್ಯರಿಗೆ ತಡೆಹಾಕಿದವನು ಗೌತಮ ಬುದ್ಧನು, ಕಲಿಯುಗ ಎರಡು ಸಾವಿರದ ಐದುನೂರು (2500) ವರ್ಷಗಳು ಕಳೆದನಂತರ ಇಂದೂ ದೇಶವೆಂದು ಹೇಳಲ್ಪಡುತ್ತಿರುವ ಭಾರತದೇಶದಲ್ಲಿ ಕಾಶಿಗೆ ಉತ್ತರದಲ್ಲಿ, ಅಯೋಧ್ಯಗೆ ಈಶಾನ್ಯದಲ್ಲಿ ಭುಯಿಲಾ ಎಂಬ ಗ್ರಾಮದಲ್ಲಿ ಗೌತಮ ಬುದ್ಧನು ಜನ್ಮಿಸಿದ್ದಾನೆ. ತಾಯಿ ಮಾಯಾದೇವಿ, ತಂದೆ ಶುದ್ಧೋಧನನಾದರೆ ಬುದ್ಧ ಎಂಬ ಹೆಸರು ಆತನಿಗೆ ಜ್ಞಾನೋದಯವಾದ ನಂತರ ಬಂದಿದೆ. ಹುಟ್ಟಿದಾಗ ಇಟ್ಟಿರುವ ಹೆಸರು ಸಿದ್ಧಾರ್ಥ. ಸಿದ್ಧಾರ್ಥನು ಎಂದರೆ ಮೋಕ್ಷವನ್ನು ಅರ್ಥಿಸುವವನು ಅಥವಾ ಮುಕ್ತಿಯನ್ನು ಕೇಳುವವನೆಂದು ಅರ್ಥ. ಆ ದಿನ ಅವರ ತಾಯಿ ತಂದೆಯರಾದ ಶುದ್ಧೋಧನನು ಮಾಯಾದೇವಿ ತಿಳಿದೋ, ತಿಳಿಯದೆಯೋ ಒಳ್ಳೆಯ ಅರ್ಥವಿರುವ ಹೆಸರನ್ನು ಸಿದ್ಧಾರ್ಥನೆಂದು ಇಡುವುದು ನಡೆದಿದೆ. ಸಿದ್ಧಾರ್ಥನು ಹುಟ್ಟಿದ ಸ್ವಲ್ಪಕಾಲಕ್ಕೆ, ವರ್ಷಕಳೆಯದಮುಂಚೆಯೇ ತಾಯಿ ಕ್ಷಯ ರೋಗದಿಂದ ಮರಣಿಸಿದರೆ, ಆತನ ಮಲತಾಯಿಯಾದ ಗೌತಮಿದೇವಿ ಚಿಕ್ಕವಯಸ್ಸಿನಿಂದ

ಪೋಷಿಸಿರುವುದರಿಂದ, ಆತನನ್ನು ಎಲ್ಲರೂ ಗೌತಮನು ಎಂದು ಕರೆಯುತ್ತಿದ್ದರು. ಈ ವಿಧವಾಗಿ ಗೌತಮನೆಂಬ ಎರಡನೆ ಹೆಸರು ಆತನಿಗೆ ಬರುವುದು ನಡೆದಿದೆ. ಗೌತಮನು ಬೆಳೆದು ದೊಡ್ಡವನಾಗಿ ವಿವಾಹ ನಡೆದು, ಕುಮಾರನು ಹುಟ್ಟಿದ ನಂತರ ಜ್ಞಾನಜಿಜ್ಞಾಸೆ ಇರುವವನಾಗಿ, ವೈರಾಗ್ಯವನ್ನು ಹೊಂದಿ ಒಂದು ದಿನ ಅರ್ಧರಾತ್ರಿ ಹೆಂಡತಿ ಯಶೋಧರಾದೇವಿಯನ್ನು, ವರ್ಷದ ಕುಮಾರನನ್ನು ಬಿಟ್ಟು ಮನೆಯಿಂದ ಹೋದವನು ಪುನಃ ಮನೆಗೆ ಬರಲಿಲ್ಲ. ಭಾರತದೇಶದಲ್ಲಿನ ಬೀಹಾರ್ ರಾಷ್ಟ್ರ ಪ್ರಾಂತದಲ್ಲಿ ಹುಟ್ಟಿರುವವನಾದ್ದರಿಂದ ಭಾರತದೇಶದಲ್ಲಿನ ಇಂದೂ ಸಾಂಪ್ರದಾಯಗಳ ಪ್ರಕಾರ ಶಿರೋಮುಂಡನೆ ಮಾಡಿಸಿಕೊಂಡು, ಕಾಷಾಯ ವಸ್ತ್ರಗಳನ್ನು ಧರಿಸಿ, ಸರ್ವಸಂಗಸನ್ಯಾಸಿಯಾಗಿ ಬದಲಾದ ಗೌತಮನು ಜನ್ಮದಿಂದ ಕೊನೆಕಾಣುವ ಜ್ಞಾನಕ್ಕಾಗಿ ಅನೇಕ ಗುರುಗಳನ್ನು, ಮಹರ್ಷಿಗಳನ್ನು, ಪಂಡಿತರನ್ನು ಬೇಟಿಯಾಗಿ ಜ್ಞಾನವನ್ನು ತಿಳಿದುಕೊಂಡರೂ, ಅವರು ಹೇಳಿದ ಮಾತುಗಳಿಗೆ ಅಸಂತೃಪ್ತಿಹೊಂದಿ, ಕೊನೆಗೆ 'ಗಯ' ಎಂಬ ಪ್ರಾಂತದಲ್ಲಿ ಬೋಧಿ ಮರದಕೆಳಗೆ (ಅರಳಿಮರದ ಕೆಳಗೆ) ಕುಳಿತುಕೊಂಡು ಯೋಚಿಸುತ್ತಿರುವಾಗ ಆತನಿಗೆ ಜ್ಞಾನೋದಯವಾಗಿದೆಯೆಂದು ತಿಳಿದಿದೆ. ಆಂದಿನಿಂದ ಗೌತಮನು ಗೌತಮಬುದ್ಧನಾಗಿ ಕರೆಯಲ್ಪಟ್ಟನು. ಈ ವಿಧವಾಗಿ ಬುದ್ಧ ಎಂಬ ಮೂರನೆ ಹೆಸರು ಬಂದಿದೆ. ಬುದ್ಧ ಎಂದರೆ ಬುದ್ಧಿ ಪ್ರಕಾಶಿಸಿದವನೆಂದು, ಜ್ಞಾನಿ ಎಂದೂ ಅರ್ಥ ಬರುತ್ತದೆ. ಈ ವಿಧವಾಗಿ ಜ್ಞಾನಿಯಾಗಿ ಬದಲಾದ ಗೌತಮನು ಆತನು ಪ್ರತಿಪಾದಿಸಿದ ಎಂಟು ಸೂತ್ರಗಳನ್ನು ಎಲ್ಲರಿಗೂ ಬೋಧಿಸಿದನು. ಅಷ್ಟಾಂಗ ಮಾರ್ಗಗಳೆಂಬ ಆ ಎಂಟು ಸೂತ್ರಗಳೇ ಬುದ್ಧನ ಬೋಧನೆಯಲ್ಲಿ ಮುಖ್ಯ ಅಂಶಗಳು.

ಆಂದಿನ ಆರ್ಯರು ಸೃಷ್ಠಿಸಿದ ಕುಲ ವಿವಕ್ಷಗಳಿಗೆ ಬುದ್ಧನ ಸೂತ್ರಗಳು ಆತಂಕಗಳಾಗಿರುವುದು, ಅದಕ್ಕೆ ಬುದ್ಧನ ಮೇಲೆ ಅಸೂಯೆಹೊಂದಿದ ಆರ್ಯರು ಹಿಂದೂ ಆದ ಬುದ್ಧನನ್ನು ಬೇರೆ ಮತದವನಾಗಿ ಸೃಷ್ಠಿಸಿ, ಹಿಂದೂ ಸಮಾಜದಿಂದ ಬೌದ್ಧಮತ ಎನ್ನುವುದನ್ನು ಬೇರ್ಪಡಿಸಿರುವುದು ಎಲ್ಲರಿಗೂ ತಿಳಿದ ವಿಷಯವೇ.

ಈದಿನ ಅದೇ ಬೌದ್ಧಿಯವು ಆಸಿಯಾ ಖಂಡದಲ್ಲಿಯೇ ಅಲ್ಲದೇ ಯುರೋಪಾ ಖಂಡದೊಳಗು ಸಹ ಹರಡಿದೆ. ಈದಿನ ಎಷ್ಟೋ ದೊಡ್ಡ ಸಮಾಜವಾಗಿ ತಯಾರಾದ ಬೌದ್ಧ ಸಮಾಜವನ್ನು ಆರ್ಯರು ಅಸೂಯೆಯಿಂದ ಹಿಂದೂ ಸಮಾಜದಿಂದ ಬೇರ್ಪಡಿಸಿ ಹೊರಗೆ ಹಾಕಿದೆಯೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಇದರ ಪ್ರಕಾರ ಆರ್ಯರು ಹಿಂದೂ ಸಮಾಜಕ್ಕೆ ಬಹಳ ದ್ರೋಹ ಮಾಡಿದ್ದಾರೆ. ಅಷ್ಟೇ ಅಲ್ಲದೆ ಬುದ್ಧನು ಹುಟ್ಟಿದ ನಂತರ ಸುಮಾರು ಐದುನೂರು ವರ್ಷಗಳ ಕಾಲದಲ್ಲಿ ಭಾರತದೇಶದಲ್ಲಿ ಎಷ್ಟೋ ಜನ ಆರ್ಯ ಸಾಂಪ್ರದಾಯಗಳನ್ನು ಬಿಟ್ಟು ಬೌದ್ಧ ಸೂತ್ರಗಳನ್ನು ಅನುಸರಿಸುತ್ತಿರುವುದನ್ನು ಸಹಿಸಲಾರದೆ ಭಾರತದೇಶದಲ್ಲಿರುವ ಬುದ್ಧ ಸಮಾಜವನ್ನು ಇಲ್ಲದಂತೆ ಮಾಡುವುದಕ್ಕೆ, ಬುದ್ಧನಂತೆ ಪೂರ್ತಿಯಾಗಿ ಸನ್ಯಾಸಿಸಿದವನಾಗಿ, ಬುದ್ಧನಂತೆ ಶಿರೋಮುಂಡನೆ ಮಾಡಿಸಿಕೊಂಡು ಬುದ್ಧನಂತೆ ಪೂರ್ತಿಯಾಗಿ ಮನೆ ಬಿಟ್ಟವನಾಗಿರುವಂತೆ, ದಕ್ಷಿಣ ದೇಶದಲ್ಲಿ ಪೂರ್ತಿ ದ್ರಾವಿಡ ದೇಶ ಎನಿಸಿಕೊಂಡ ಕೇರಳ (ಮಲಯಾಳ) ಬ್ರಾಹ್ಮಣನನ್ನು ಅತಿ ಚಿಕ್ಕ ವಯಸ್ಸಿನಲ್ಲಿಯೇ ಹೊರಗೆ ತಂದು, ಆತನಿಗೆ ಶಂಕರನೆಂದು ಹೆಸರಿಟ್ಟಿದ್ದಾರೆ. ಆತನೆ ಆದಿಶಂಕರಾಚಾರ್ಯರಾಗಿ ಹೇಳಲ್ಪಟ್ಟಿದ್ದಾನೆ. ಆದಿಶಂಕರಾಚಾರ್ಯರು ಆದಿನ ಬೌದ್ಧಮತದಿಂದ ಹಿಂದೂ ಮತವನ್ನು ಕಾಪಾಡುವುದಕ್ಕೆ ಆಕಾಶದಿಂದ ಭುವಿಗೆ ಬಂದಿರುವ ಸಾಕ್ಷಾತ್ತು ಕೈಲಾಸ ಶಂಕರನೆಂದು ಆರ್ಯರು ಪ್ರಚಾರ ಮಾಡಿದ್ದಾರೆ. ತಮ್ಮ ಪರವಾಗಿ ಬುದ್ಧನಿಗೆ ಸಮಾನರೂಪವಾಗಿ ಕಾಣಿಸುವ ಶಂಕರಚಾರ್ಯನನ್ನು ತಯಾರುಮಾಡಿ, ಆದಿನ ಆರ್ಯರ ಮಾತೃಭಾಷೆಯಾದ ಸಂಸ್ಕೃತ ಭಾಷೆಯನ್ನು ಶಂಕರಾಚಾರ್ಯನಿಗೆ ಪೂರ್ತಿಯಾಗಿ ಕಲಿಸಿ, ಇಪ್ಪತ್ತು ವರ್ಷಗಳ ವಯಸ್ಸಿಗೇ ಆತನನ್ನು ಹಿಂದೂ ಸಮಾಜವೆಲ್ಲದಕ್ಕು ಗುರುವಾಗಿ ಪ್ರಕಟಿಸಿದ್ದಾರೆ.

ಬುದ್ಧನ ಸೂತ್ರಗಳಿಗೆ ಆಕರ್ಷಿತರಾದವರನ್ನು ಪುನಃ ಹಿಂದೂ ಸಮಾಜದೊಳಗೆ ಬರುವಂತೆ, ಬುದ್ಧನಿಗೆ ಬದ್ಧಶತ್ರುವಾಗಿ ಶಂಕರಾಚಾರ್ಯನನ್ನು ತಯಾರು ಮಾಡಿ ಕಳಿಸಿದರು. ದಕ್ಷಿಣ ಭಾರತದೇಶದಿಂದ ಉತ್ತರ ಭಾರತದೇಶ

ದವರೆಗು ಅಂದರೇ ಹಿಮಾಲಯಗಳವರೆಗು (ದಕ್ಷಿಣದಲ್ಲಿ ಭಾರತದೇಶದ ಕೊನೆಯಲ್ಲಿರುವ ಸಮುದ್ರತೀರದ ಮರಳುದಿನ್ನೆಗಳಿಂದ ಹಿಮಾಲಯಗಳಲ್ಲಿನ ಪರ್ವತಗಳವರೆಗು ಶಂಕರಾಚಾರ್ಯನು ಎರಡುಬಾರಿ ಕಾಲುನಡೆಯಿಂದ (ಪಾದಯಾತ್ರೆ) ಪ್ರಯಾಣ ಸಾಗಿಸಿದ್ದಾನೆ. ಹಾಗೆ ಕಾಲುನಡೆಯಿಂದ ತಿರುಗುತ್ತಾ ಎಲ್ಲಿ ಬುದ್ಧನ ಸೂತ್ರಗಳಿವೆಯೋ ಅಲ್ಲಿ ವಾದೋಪವಾದಗಳಿಗೆ ಇಳಿದು ತನ್ನವಾದನೆಯೇ ಉತ್ತಮವಾದುದೆಂದು ಹೇಳಿ ವಾದಿಸುವುದೇ ಆತನಸರದಿ. ನಂತರ ಶಂಕರನೇ ಗೆದ್ದಿದ್ದಾನೆಂದು ಪ್ರಚಾರ ಮಾಡುವುದು ಆರ್ಯರಸರದಿ. ಈ ವಿಧವಾಗಿ 20 ವರ್ಷಗಳ ಚಿಕ್ಕಹುಡುಗನಾದ ಶಂಕರನಿಗೆ ಆಚಾರ್ಯನೆಂದು ಬೋರ್ಡುತಗಲಿಸಿ, ಎರಡುಬಾರಿ ಭಾರತದೇಶವೆಲ್ಲಾ ಪಾದಯಾತ್ರೆ ಮಾಡಿಸಿದ್ದಾರೆ. ಎರಡುಬಾರಿ ತಿರುಗುವುದಕ್ಕೆ ಹನ್ನೆರಡು ವರ್ಷಗಳು ಹಿಡಿದಿದೆ. ಹನ್ನೆರಡು ವರ್ಷಗಳು ನಡೆಯುವುದಕ್ಕೆ ಶರೀರದಲ್ಲಿನ ಸಾರವೆಲ್ಲವೂ ಮುಗಿದುಹೋಗಿ ಕೊನೆಗೆ ನಡೆಯುವುದರಿಂದಲೇ ಆತನು ಮೂವತ್ತೆರಡು (32) ವರ್ಷಗಳಿಗೆ ಮರಣಿಸಿದ್ದಾನೆ. ಹದಿನಾರು ವರ್ಷಗಳ ವಯಸ್ಸಿನಲ್ಲಿಯೇ ಸನ್ಯಾಸತ್ವವನ್ನು ತೆಗೆದುಕೊಂಡ ಶಂಕರನು ಪೂರ್ತಿಯಾಗಿ ನಾಲ್ಕು ವರ್ಷಗಳು ಸಂಸ್ಕೃತದಲ್ಲಿನ ವೇದಗಳನ್ನು, ಉಪನಿಷತ್ತುಗಳನ್ನು ಕಲಿತುಕೊಂಡಿದ್ದಾನೆ. ನಂತರ ಪ್ರಣಾಳಿಕೆ ಪ್ರಕಾರ ಎಲ್ಲರೊಂದಿಗೆ ವಾದಿಸುತ್ತಾ ಹನ್ನೆರಡು ವರ್ಷಗಳು ತಿರುಗಿದ್ದಾನೆ. ಕೊನೆಗೆ ಚಿಕ್ಕವಯಸ್ಸಿನಲ್ಲಿಯೇ ಮರಣಿಸಿದ್ದಾನೆ.

ಶಂಕರಾಚಾರ್ಯರ ಪರ್ಯಟನೆಯಲ್ಲಿ ಎಷ್ಟೋ ಜನ ಪಂಡಿತರು, ಜ್ಞಾನಿಗಳು ಸೇರಿ ಶಂಕರಾಚಾರ್ಯರು ಬೋಧಿಸುವ ಅದ್ವೈತ ಸಿದ್ಧಾಂತವನ್ನು ಕುರಿತು ವಾದಿಸಿದ್ದಾರೆ. ಆದರೆ ಎಲ್ಲಕಡೆ ಶಂಕರಾಚಾರ್ಯನು ವಾದನೆಯಲ್ಲಿ ಗೆಲ್ಲಲಿಲ್ಲ. ಎಷ್ಟೋ ಕಡೆ ತನ್ನ ಮಾತುಗಳ ಚಾಕಚಕ್ಯದಿಂದ ಗೆದ್ದರೂ, ಕೆಲವುಕಡೆ ತಪ್ಪದೆ ಸೋಲಬೇಕಾಗಿ ಬಂದಿದೆ. ಹಾಗೆ ಸೋತವುಗಳನ್ನು ಹೊರಗೆ ಹರಡದಂತೆ ಮಾಡಿ, ಗೆದ್ದಿರುವ ವಾದನೆಗಳನ್ನು ಮಾತ್ರ ಹೊರಗೆ ತಿಳಿಸಿ ಶಂಕರನು ದೊಡ್ಡವನು, ಶಂಕರನ ಅದ್ವೈತ ಸಿದ್ಧಾಂತ ದೊಡ್ಡದೆಂದು ಆರ್ಯರು ಶಂಕರಾಚಾರ್ಯನನ್ನು

ಸಂರಕ್ಷಿಸುತ್ತಾ ಬರುತ್ತಿದ್ದರು. ಈ ವಿಧವಾಗಿ ಶಂಕರಾಚಾರ್ಯನನ್ನು ದ್ರಾವಿಡರಿಂದಲೇ ತೆಗೆದು, ಅವರ ಸ್ವಾರ್ಥಕ್ಕಾಗಿ ಆರ್ಯರು ಶಂಕರನನ್ನು ಕೈಗೊಂಬೆಯಂತೆ ಬಳಸಿಕೊಂಡಿದ್ದಾರೆ. ಉತ್ತರ ದೇಶ ಬ್ರಾಹ್ಮಣನನ್ನು ಶಂಕರಾಚಾರ್ಯರಾಗಿ ಪ್ರಕಟಿಸುವುದಕ್ಕಿಂತ, ದ್ರಾವಿಡಜಾತಿಯಿಂದಲೇ ತೆಗೆದುಕೊಂಡು ಗುರುವಾಗಿ ಮಾಡಿ, ದ್ರಾವಿಡರಿಗು ಬೌದ್ಧರಿಗು ಬುದ್ಧಿ ಹೇಳಿಸಿ ತಮ್ಮಕಡೆ ತಿರುಗಿಸಿಕೊಳ್ಳಬೇಕೆಂದು ಅಂದುಕೊಂಡಿದ್ದಾರೆ. ದ್ರಾವಿಡರಿಂದ ತಮಗೆ ಅನುಕೂಲವಾಗಿ ತಯಾರು ಮಾಡಿದರೆ, ಉಳಿದ ದ್ರಾವಿಡರೆಲ್ಲರೂ ದಾರಿಗೆ ಬರುತ್ತಾರೆಂಬ ಉದ್ದೇಶದಿಂದಲೇ, ಶಂಕರಾಚಾರ್ಯರನ್ನು ಆಯ್ಕೆಮಾಡಿಕೊಂಡು ದಕ್ಷಿಣ ದೇಶದವನನ್ನೇ ತೆಗೆದುಕೊಂಡಿದ್ದಾರೆ. ಹಾಗೆ ತೆಗೆದುಕೊಳ್ಳವುದಲ್ಲದೆ ಬುದ್ಧನು ಯಾವ ವಿಧವಾಗಿ ಸನ್ಯಾಸಿಯಾಗಿದ್ದಾನೊ, ಅದೇ ವಿಧವಾಗಿ ಕಾಣಿಸುವಂತೆ ಸನ್ಯಾಸಿಯನ್ನು ಮಾಡಿದ್ದಾರೆ. (ಬುದ್ಧನು ಮುಸುಗುಹಾಕದ ಸನ್ಯಾಸಿಯಾದರೆ, ಶಂಕರಾಚಾರ್ಯನು ಮುಸುಗು ಹಾಕಿದ ಸನ್ಯಾಸಿಯಾಗಿದ್ದಾನೆ.) ಹಿಂದೂ ಸಮಾಜವೆಲ್ಲವೂ ಬೌದ್ಧ ಸಮಾಜದಲ್ಲಿ ಬೆರೆತುಹೋಗುವ ಸಮಯದಲ್ಲಿ, ಆದಿಶಂಕರಾಚಾರ್ಯನು ಬಂದು ಹಿಂದೂ ಸಮಾಜವನ್ನು ರಕ್ಷಿಸಿದ್ದಾನೆಂದು ಬಹಳಜನ ಹೇಳುತ್ತಿರುವಾಗ ನಾವು ಕೇಳಿದ್ದೇವೆ. ಚರಿತ್ರೆ ತಿಳಿಯದವರು ಮಾತನಾಡುವ ವಿಧಾನ ಅಷ್ಟೇ ಅಲ್ಲವೆ! ಎಂದು ಅಂದುಕೊಂಡಿದ್ದೇವೆ. ಹಿಂದೂ ಸಮಾಜವನ್ನು ವಿದೇಶಗಳಲ್ಲಿ ಇತರ ಖಂಡಗಳಲ್ಲಿ ಹರಡುವಂತೆ ಮಾಡಿದ ಬುದ್ಧನನ್ನು ಪತಮತದವನೆಂದು ಹೇಳುವುದು, ಹಿಂದೂತ್ವವನ್ನು ರಕ್ಷಿಸುವುದೋ ಅಥವಾ ಭಕ್ಷಿಸುವುದೋ ನೀವೇ ಅರ್ಥಮಾಡಿಕೊಳ್ಳಿ. ಇಂದಿಗೂ ತಮಗೆ ಮೀರಿದ ಬೋಧನೆಯನ್ನು ಯಾರು ಹೇಳಿದರೂ, ವೇದಗಳನ್ನು ಯಜ್ಞಗಳನ್ನು ಯಾರು ಖಂಡಿಸಿದರೆ ಅವರೆಲ್ಲರನ್ನು ಪರಮತದವರೆಂದು ಹೆಸರಿಟ್ಟು ಮುದ್ರೆಹಾಕುತ್ತಿದ್ದರು. ಈದಿನ ಸಹ ಆರ್ಯರು ಅದೇ ಕೆಲಸವನ್ನೇ ಮಾಡುತ್ತಲೇ ಇದ್ದಾರೆ. ಆರ್ಯರ ಅದ್ವೈತ ಸಿದ್ಧಾಂತವನ್ನು ಅತಿಕ್ರಮಿಸಿದ ತ್ರೈತ ಸಿದ್ಧಾಂತವನ್ನು ನಾವು ಪ್ರತಿಪಾದಿಸಿದಾಗ, ನಮ್ಮನ್ನು ಸಹ ಪರಮತವೆಂದು ಹೇಳಿ, ಶೂದ್ರನಾದ ನನ್ನ ಮೇಲೆ ಶೂದ್ರರನ್ನೇ ದಾಳಿಗೆ ಕಳಿಸಿದ ಸಂಘಟನೆ, ನಾಲ್ಕು ವರ್ಷಗಳ

ಕೆಳಗೆ ಇಲ್ಲಿಯೇ ಅನಂತಪುರಂ ಜಿಲ್ಲೆಯಲ್ಲಿನ ಗುಂತಕಲ್ಲು ಊರಿನಲ್ಲಿ ನಡೆದಿದೆ. ಇದನ್ನನುಸರಿಸಿ ಆರ್ಯರು ಇಂದಿಗೂ ತಮಗಿಂತ ಇತರರು ಮುಂದಕ್ಕೆ ಬರಬಾರದೆಂಬ ಕೆಟ್ಟ ಉದ್ದೇಶದಿಂದಲೇ ಇದ್ದಾರೆಂದು ತಿಳಿಯುತ್ತಿದೆ.

**ಪ್ರಶ್ನೆ :– ಬುದ್ಧನ ನಂತರ ಭಾರತದೇಶದಲ್ಲಿ ಆರ್ಯರಿಗೆ ವಿರುದ್ಧವಾಗಿ ಸ್ಪರ್ಧೆಗೆ ನಿಲ್ಲುವವರು ಯಾರೂ ಬರಲಿಲ್ಲವಾ?**

**ಉತ್ತರ :–** ಬುದ್ಧನು ಬಂದುಹೋದ ಐದುನೂರು ವರ್ಷಗಳಿಗೆ ದ್ರಾವಿಡ ಬ್ರಾಹ್ಮಣನಾದ (ಕೇರಳ ಬ್ರಾಹ್ಮಣನಾದ) ಶಂಕರಾಚಾರ್ಯನನ್ನು ಒಂದು ಗೊಂಬೆಯಾಗಿ ಬಳಸಿಕೊಂಡು, ತಮ್ಮ ಅದ್ವೈತವನ್ನು ಶಂಕರಾಚಾರ್ಯರರ ಮೂಲಕ ಪ್ರಚಾರ ಮಾಡಿ, ಮೊದಲಿನಿಂದಿರುವ ತಮ್ಮ ಅದ್ವೈತ ಸಿದ್ಧಾಂತವನ್ನು, ಆಗಲೇ ಶಂಕರನು ಕಂಡುಹಿಡಿದಂತೆ ತೋರಿಸಿದ್ದಾರೆ. ಆದರೆ ಹಿಂದೂತ್ವದಲ್ಲಿ ಒಂದು ಸಿದ್ಧಾಂತ ಅದ್ವೈತ ಸಿದ್ಧಾಂತವೆಂದು ಅವರು ಹೇಳಿದಾಗ, ಇದು ಇಂತಹ ಸಿದ್ಧಾಂತವೆಂದು ಎಲ್ಲರಿಗೂ ತಿಳಿದಿದೆ. ಶಂಕರಾಚಾರ್ಯನು ಮರಣಿಸಿದ ನಂತರ ಆರ್ಯರಿಗೆ ಆತಂಕ ಇಲ್ಲದಂತೆ ಹದಿನೈದುನೂರು (1500) ವರ್ಷಗಳು ಕಳೆದುಹೋಗಿದೆ. ನಂತರ ಪೂರ್ತಿ ದ್ರಾವಿಡ ರಾಜ್ಯವಾಗಿರುವ ತಮಿಳನಾಡಿನಲ್ಲಿ ಆರ್ಯಸಿದ್ಧಾಂತವನ್ನು ವಿರೋಧಿಸುತ್ತಾ ವಿಶಿಷ್ಟಾದ್ವೈತ ಸಿದ್ಧಾಂತದೊಂದಿಗೆ ರಾಮಾನುಜಾಚಾರ್ಯರು ಹುಟ್ಟಿಬಂದಿದ್ದಾರೆ. ರಾಮಾನುಜಾಚಾರ್ಯರು ದ್ರಾವಿಡ ಬ್ರಾಹ್ಮಣನೆ ಆದರೂ, ಸ್ವಲ್ಪ ಆರ್ಯರಿಗೆ ವಿರುದ್ಧವಾಗಿರುವ ದ್ರಾವಿಡರಿಗೆ ಮಾತ್ರ ಅನುಕೂಲವಾಗಿರುವವನು ಅಲ್ಲ. ಆರ್ಯರು ತಮಗಿಂತ ದೊಡ್ಡವರಾಗಬೇಕೆಂದು ಕೊಂಡವರನ್ನು ಯಾರನ್ನು ಬಿಡುವುದಿಲ್ಲವೆನ್ನುವಂತೆ, ರಾಮಾನುಜಾಚಾರ್ಯರನ್ನು ಆರ್ಯರು ಭಯವಿಟ್ಟು ರಹಸ್ಯ ಜೀವನ ಸಾಗಿಸುವಂತೆ, ಹೊರಗೆ ಬಾರದಂತೆ ಮಾಡಿದ್ದಾರೆ. ಆದರೂ ರಾಮಾನುಜಾಚಾರ್ಯರು 120 ವರ್ಷಗಳು ಪೂರ್ತಿಯಾಗಿ ಬದುಕಿ, ತನ್ನ ವಿಶಿಷ್ಟಾದ್ವೈತ ಸಿದ್ಧಾಂತವನ್ನು, ವೈಷ್ಣವ ಸಂಪ್ರದಾಯವಾಗಿ ಬೋಧಿಸಿದನು. ಆರ್ಯರದು ಶೈವ ಸಂಪ್ರದಾಯವಾಗಿದ್ದು, ರಾಮಾನುಜಾಚಾರ್ಯರದು ವೈಷ್ಣವ ಸಂಪ್ರದಾಯ. ರಾಮಾನುಜಾಚಾರ್ಯರಿಂದ

ದೇಶದಲ್ಲಿ ಎಷ್ಟೋ ಜನ ವೈಷ್ಣವರು ತಯಾರಾಗಿ ವಿಶಿಷ್ಟಾದ್ವೈತವನ್ನು ಅನುಸರಿಸಿದರು. ಅದನ್ನು ಸಹಿಸಲಾರದ ಆರ್ಯರು ಅದ್ವೈತರೆಂಬ ಹೆಸರಿನಿಂದ ವಿಶಿಷ್ಟಾದ್ವೈತರ ಮೇಲೆ ಆಗಾಗ ವಾದಿಸುತ್ತಾ, ಸಾಧ್ಯವಾದರೆ ದಾಳಿಗಳು ಮಾಡುತ್ತಾ ವೈಷ್ಣವರಾದವರನ್ನು ಅಡಗಿಸಬೇಕೆಂದು ಎಷ್ಟೋ ಪ್ರಯತ್ನಮಾಡಿದ್ದಾರೆ. ಆದರೂ ಅವರ ಪ್ರಯತ್ನ ಪೂರ್ತಿ ಆಗಲಿಲ್ಲ. ಈವತ್ತಿಗೂ ವೈಷ್ಣವ ಸಂಪ್ರದಾಯಗಳಿಂದ ಕೂಡಿದ ವಿಶಿಷ್ಟಾದ್ವೈತ ಸಿದ್ಧಾಂತ ದೇಶವೆಲ್ಲಾ ಅಲ್ಲಲ್ಲಿ ಕಾಣಿಸುತ್ತಿದೆ. ರಾಮಾನುಜಾ ಚಾರ್ಯರು ಬಂದುಹೋದ ಸ್ವಲ್ಪಕಾಲಕ್ಕೆ ಮಧ್ವಾಚಾರ್ಯರು ಕರ್ನಾಟಕ ರಾಷ್ಟ್ರದಲ್ಲಿ ಹುಟ್ಟಿ, ತನ್ನದಾದ ದ್ವೈತ ಸಿದ್ಧಾಂತವನ್ನು ಬೋಧಿಸಿದ್ದಾನೆ. ದ್ವೈತ ಸಿದ್ಧಾಂತ ಸಹ ಅದ್ವೈತ ಸಿದ್ಧಾಂತಕ್ಕೆ ಪೂರ್ತಿ ವಿರುದ್ಧವಾಗಿ ಇರುತ್ತದೆ. ಮಧ್ವಾಚಾರ್ಯರನ್ನು ಅನುಸರಿಸಿದವರು ಬಹಳಸ್ವಲ್ಪಜನ ಇದ್ದರೂ, ಅವರು ಸಹ ಇಂದಿಗೂ ಅಲ್ಲಲ್ಲಿ ಕಾಣಿಸುತ್ತಿದ್ದಾರೆ. ಮಂತ್ರಾಲಯ ರಾಘವೇಂದ್ರಸ್ವಾಮಿ ಯವರು ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದವರೇ. ದ್ವೈತ ಸಿದ್ಧಾಂತ ಪ್ರತ್ಯೇಕವಾಗಿದ್ದರೂ ನೋಡುವುದಕ್ಕೆ ಮಾತ್ರ ಆಚಾರ ಸಾಂಪ್ರದಾಯ ರೂಪದಲ್ಲಿ ವಿಶಿಷ್ಟಾದ್ವೈತದವರನ್ನು ಹೋಲಿರುತ್ತದೆ. ವಿಶಿಷ್ಟಾದ್ವೈತರು, ದ್ವೈತರು ಇಬ್ಬರು ವೈಷ್ಣವ ನಾಮವನ್ನೇ ಧರಿಸುವುದು ವಿಶೇಷ.

ಈ ದಿನ ಪ್ರಸ್ತುತ ಕಾಲದಲ್ಲಿ ತ್ರೈತ ಸಿದ್ಧಾಂತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರೆಂಬ ನಮ್ಮಿಂದಲೇ ಪ್ರಾರಂಭವಾಗಿದೆ. ತ್ರೈತ ಸಿದ್ಧಾಂತ ಇಂದೂತ್ವದಲ್ಲಿ ಮುಖ್ಯವಾದ ಸಿದ್ಧಾಂತವಾದರೂ, ಇದು ಉಳಿದ ಅದ್ವೈತ, ದ್ವೈತ ಸಿದ್ಧಾಂತಗಳಿಗು ಪೂರ್ತಿ ಭಿನ್ನವಾಗಿರುತ್ತದೆ. ಆದರೆ ತ್ರೈತ ಸಿದ್ಧಾಂತ ಸೃಷ್ಠಿ ಆದಿಯಲ್ಲಿ ದೇವರಿಂದ ಮೊಟ್ಟಮೊದಲು ಬೋಧಿಸಲ್ಪಟ್ಟ ಮೂರು ಆತ್ಮಗಳ ಜ್ಞಾನ, ಇದನ್ನೇ ಆಕಾಶವಾಣಿ ಹೇಳಿದಾಗ, ಸೂರ್ಯನು ಸಹ ಇದನ್ನೇ ಭೂಮಿಮೇಲೆ ಮನುಷ್ಯರಿಗೆ ಹೇಳುವುದು ನಡೆದಿದೆ. ಇಲ್ಲಿಯವರೆಗು ಆರ್ಯರ ಅದ್ವೈತಕ್ಕು ಮೊದಲು ಬುದ್ಧನ ಸೂತ್ರಗಳು ಅಡ್ಡಬಂದರೆ, ಅದನ್ನು ಆರ್ಯರು ಪೂರ್ತಿಯಾಗಿ ಅತಿಕ್ರಮಿಸಿದ್ದಾರೆ. ನಂತರ ಬಂದಿರುವ ವಿಶಿಷ್ಟಾದ್ವೈತ,

ದ್ವೈತಗಳಿಂದ ಸ್ವಲ್ಪ ಘರ್ಷಣೆ ಏರ್ಪಟ್ಟರೂ, ಅವುಗಳನ್ನು ಆರ್ಯರು ಪೂರ್ತಿಯಾಗಿ ತೊಲಗಿಸಲಾರದೆಹೋಗಿದ್ದಾರೆ. ಆದರೆ ಈಗ ಬಂದಿರುವುದು ಆದಿಯಲ್ಲಿನ ತ್ರೈತ ಸಿದ್ಧಾಂತ ಜ್ಞಾನ ಆಗಿರುವುದರಿಂದ, ಅಸಲಾದ ದ್ರಾವಿಡರ ಮೂರು ಆತ್ಮಗಳ ಜ್ಞಾನ ಆಗಿರುವುದರಿಂದ, ಪೂರ್ವದಂತೆ ಪ್ರಸ್ತುತ ಕಾಲದಲ್ಲಿ ತಿಳುವಳಿಕೆ ಇಲ್ಲದ ದ್ರಾವಿಡರು ಇಲ್ಲದಿರುವುದರಿಂದ, ಇರುವವರೆಲ್ಲರೂ ತಿಳುವಳಿಕೆಯುಳ್ಳ ದ್ರಾವಿಡರೇ ಇರುವುದರಿಂದ, ಮುಖ್ಯವಾಗಿ ಮೂರು ಆತ್ಮಗಳ ದ್ರಾವಿಡ ಜ್ಞಾನ ಈದಿನ ಸಿದ್ಧಾಂತವನ್ನು ಸಂತರಿಸಿಕೊಂಡು ತ್ರೈತ ಸಿದ್ಧಾಂತವಾಗಿ ಬಂದಿರುವುದರಿಂದ, ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿರುವುದು, ಮಹರ್ಷಿಯಾಗಲಿ, ತಪಸ್ವಿಯಾಗಲಿ, ವೇದಾಂತಿಯಾಗಲಿ ಅಲ್ಲದೆ ಯೋಗಿಯಾದ **ಪ್ರಬೋಧಾನಂದ ಯೋಗೀಶ್ವರರು** ಆಗಿರುವುದರಿಂದ, ಈ ಜ್ಞಾನ ಆರ್ಯರಿಗೆ ಹೆಜ್ಜೆಹೆಜ್ಜೆಗು ಆತಂಕವಾಗಿರುತ್ತದೆ.

ಕೃತಯುಗ ಅಂತ್ಯದಿಂದ, ತ್ರೇತಾಯುಗ ಮೊದಲಿನಿಂದ, ಆತಂಕಗಳಿಲ್ಲದ ಅಧಿಕಾರವನ್ನು ಚಲಾಯಿಸಿದ ಆರ್ಯರು ಈದಿನ ತ್ರೈತ ಜ್ಞಾನದ ಮುಂದೆ ತಮ್ಮ ಅಧಿಕಾರವನ್ನು ಮೂಟೆಕಟ್ಟಿ ಪಕ್ಕಕ್ಕೆ ಇಡಬೇಕಾಗಿ ಬರುತ್ತಿದೆ. ಆದುದರಿಂದ ಬುದ್ಧನ ಕಾಲದಿಂದ ಆರಂಭವಾಗಿ ಕೊನೆಗೆ ಆರ್ಯರಿಗೆ ಈಗ ಗಟ್ಟಿ ಪೋಟಿ ಏರ್ಪಡುತ್ತಿದೆ. “ಸಾವಿರ ಆನೆಗಳನ್ನು ತಿಂದ ರಣಹದ್ದುಗಳಾದರೂ ಒಂದೇವೊಂದು ಗಾಳಿಮಳೆಯಿಂದ ಮರಣಿಸುತ್ತದೆಯೆಂದು” ಹಿರಿಯರು ಹೇಳಿದ ವಾಕ್ಯದ ಪ್ರಕಾರ ಎರಡು ಯುಗಗಳ ಕಾಲ ಭಾರತದೇಶದಲ್ಲಿ ಅಧಿಕಾರ ಚಲಾಯಿಸಿದ ಆರ್ಯರು ಈದಿನ ತ್ರೈತ ಸಿದ್ಧಾಂತದ ಮುಂದೆ ತಲೆತಗ್ಗಿಸಬೇಕಾದ ಅವಶ್ಯಕತೆಬರುತ್ತದೆಂದು ಹೇಳದೆ ತಪ್ಪಲಿಲ್ಲ. ಆರ್ಯರು ಗತದಲ್ಲಿ ಮಾಡಿದ ತಪ್ಪುಗಳಿಗೆ ತಪ್ಪದೆ ಶಿಕ್ಷೆಯನ್ನು ಅನುಭವಿಸಿಬೇಕಾಗಿ ಬರುತ್ತದೆ.

**ಪ್ರಶ್ನೆ :– ಭಾರತದೇಶದಲ್ಲಿ ಹುಟ್ಟಿದ ಗೌತಮ ಬುದ್ಧನದು ಇತರ ಮತವಾಗಿ ಹೇಳಿದ ಆರ್ಯರು, ರಾಮಾನುಜಾಚಾರ್ಯರನ್ನು ರಹಸ್ಯ ಜೀವನ ಕಳೆಯುವಂತೆ ಭಯವಿಟ್ಟಿರುವ ಆರ್ಯರು., ಈ ಮಧ್ಯ ಕಾಲದಲ್ಲಿ ಪದ್ಯ ರೂಪದಲ್ಲಿ ಜ್ಞಾನವನ್ನು ಹೇಳಿದ ವೇಮನನನ್ನು ಸಹ ಕೆಟ್ಟದಾಗಿ ಹೇಳದೆ ಬಿಟ್ಟಿರುತ್ತಾರಾ?**

**ಉತ್ತರ :–** ತಾವು ಹೊರತು ಯಾರೂ ತಮಗಿಂತ ದೊಡ್ಡದಾಗಿ ಇರಬಾರದೆಂಬ ಸ್ವಭಾವ ಇರುವವರು ಆರ್ಯರು. ಆದ್ದರಿಂದ ಕೈಲಾದರೂ ಕೈಲಾಗದಿದ್ದರೂ ತಮ್ಮ ಅಸೂಯೆ ಕೆಲಸಗಳು ಮಾಡುತ್ತಲೇ ಹೋಗುತ್ತಿದ್ದಾರೆ. ಮೊದಲಿನಿಂದ ನಾವು ಬುದ್ಧಿವಂತರೆಂಬ ಗರ್ವ ಅವರನ್ನು ಹಾಗೆ ಮಾಡಿಸುತ್ತದೆ. ಮೊದಲಿನಿಂದ ಒಳಸಂಚು ಮಾಡಿ, ಕುತಂತ್ರಗಳು ಮಾಡಿ, ಅವರ ಕಣ್ಣನ್ನು ಅವರ ಬೆರಳಿನಿಂದ ಹಿರಿಯುವುದು ಆರ್ಯರಿಗೆ ಬೆಣ್ಣೆಯಿಂದಿಟ್ಟಿರುವ ವಿದ್ಯೆಯಾಗಿದೆ. ಆದುದರಿಂದ ಶೂದ್ರರಾದ ಬ್ರಹ್ಮಯ್ಯನವರನ್ನಾಗಲಿ, ವೇಮನ ಯೋಗಿಯನ್ನಾಗಲಿ ಅವರು ಬಿಡಲಿಲ್ಲ. ಒಂದು ಗ್ರಂಥದಲ್ಲಿನ ಸಾರಾಂಶವನ್ನು ಒಂದು ಪದ್ಯದಲ್ಲಿ ಆಳವಡಿಸಿ ಹೇಳಿದ ಘನತೆ ವೇಮನ ಯೋಗಿಗೆ (ವೇಮಾರೆಡ್ಡಿಗೆ) ಇದೆ. ವೇಮನಯೋಗಿ ಪ್ರತಿ ವಿಷಯವನ್ನು ನೇರವಾಗಿ ಚಿಕ್ಕ ವಾಕ್ಯಗಳಲ್ಲಿಯೇ ಹೇಳಿದ ಮನುಷ್ಯ. ವೇಮನಯೋಗಿ ಯಾರು ತಪ್ಪುಮಾಡಿದರೂ ಬಿಡದಂತೆ ಅವರ ಬಂಡಾರವನ್ನು ಇರುವುದಿದ್ದಂತೆ ಹೇಳಿದ ವ್ಯಕ್ತಿ. ತನ್ನ ಪದ್ಯಗಳಲ್ಲಿ ಆರ್ಯರನ್ನು ಸಹ ಬಿಡದೆ, ಪ್ರಜೆಗಳಿಗೆ ಅವರು ಮಾಡಿದ ಮೋಸಗಳನ್ನು ಕೆಲವು ಪದ್ಯಗಳಲ್ಲಿ ಬಿಡಿಸಿ ಹೇಳಿದ್ದಾನೆ. ವೇಮನ ತಮ್ಮನ್ನು ನೂರಕ್ಕೆನೂರರಷ್ಟು ವಿಮರ್ಶಿಸಿರುವುದಕ್ಕೆ ಬದಲು ಆರ್ಯರು ವೇಮನನ್ನು ಹುಚ್ಚನಕೆಳಗೆ ಜಮಕಟ್ಟಿ ಹೇಳಿದ್ದಾರೆ. ವೇಮನನಿಗೆ ಹುಚ್ಚು ಹಿಡಿದು ಬಟ್ಟೆಗಳನ್ನು ಬಿಚ್ಚಿಕೊಂಡು ತಿರುಗುತ್ತಾ ಹೇಳಿದ ಮಾತುಗಳು ಹುಚ್ಚನಮಾತುಗಳಲ್ಲದೆ ಏನಾಗುತ್ತವೆಯೆಂದು ಆರ್ಯರಾದ ಬ್ರಾಹ್ಮಣರು ಕೆಲವರು ವೇಮನನ್ನು ಕುರಿತು ಹೇಳುವುದು ಕೇಳಿದ್ದೇನೆ. ಹುಚ್ಚನ ಮಾತುಗಳು ಹುಚ್ಚರಲ್ಲದೆ ಒಳ್ಳೆಯವರು ಕೇಳುವುದಿಲ್ಲವೆಂದು, ವೇಮನ ಮಾತನ್ನು ಕೇಳುವವರೆಲ್ಲರನ್ನು ಆರ್ಯರು ಹುಚ್ಚರೆಂದ ಸಂದರ್ಭಗಳು ಇವೆ. ವೇದಗಳು ತಿಳಿದವರು ಜ್ಞಾನಿಗಳಾಗುವುದಕ್ಕೆ ಅವಕಾಶವಿದೆಯೆಂದು, ವೇದಗಳು ತಿಳಿಯದವರಿಗೆ ನಿಜಜ್ಞಾನ ತಿಳಿಯದೆಂದು ಹೇಳಿದವರು, ವೇದಗಳು ವೇಶ್ಯರಂತಹವೆಂದು ಹೇಳಿದ ವೇಮನ ಜ್ಞಾನಿ ಹೇಗಾಗುತ್ತಾನೆಂದು ಆರ್ಯರು ಪ್ರಶ್ನಿಸಿದ ಸಂದರ್ಭಗಳು ಸಹ ಇವೆ. ತಮ್ಮ ಕೈಲಾದಷ್ಟು ಕೆಲಸಮಾಡಿ, ವೇಮನ ಪದ್ಯಗಳನ್ನು ತಾವು ಎಲ್ಲಿಯೂ ಹೇಳದಂತೆ ಅಡಗಿಸಿದ್ದಾರೆ. ಕೆಲವರೊಂದಿಗೆ ವೇಮನ ಪದ್ಯಗಳಲ್ಲಿ

ಜ್ಞಾನವಿಲ್ಲವೆಂದು ಹೇಳಿದ್ದಾರೆ. ಹೀಗೆ ತಮಗೆ ಕೈಲಾದಷ್ಟು ವೇಮನ ಪದ್ಯಗಳನ್ನು ಆರ್ಯರು ಎಲ್ಲಿಯೂ ಹೊರಗೆ ಹೇಳುತ್ತಿಲ್ಲ. ಆರ್ಯರು ಎಲ್ಲಿ ಉಪನ್ಯಾಸ ಹೇಳಿದರೂ ಅಲ್ಲಿ ಸಂಸ್ಕೃತ ಶ್ಲೋಕಗಳನ್ನು ಹೇಳುತ್ತಾರೆ ಆದರೇ, ವೇಮನ ಪದ್ಯವನ್ನು ಮಾತ್ರ ಹೇಳುವುದಿಲ್ಲ. ಉಳಿದ ಬ್ರಾಹ್ಮಣರೆಲ್ಲರಿಗೂ ವೇಮನ ಸಾಹಿತ್ಯವನ್ನು ಯಾರೂ ಓದಬಾರದೆಂದು ಹೇಳುವುದಲ್ಲದೆ, ವೇಮನ ಬ್ರಾಹ್ಮಣ ದ್ವೇಷಿ ಎಂದು ಪ್ರಚಾರ ಮಾಡಿದ್ದಾರೆ.  ಅಷ್ಟೇ ಅಲ್ಲದೆ, ವೇಮನಯೋಗಿ ಎಂದು ಹೆಸರಿಟ್ಟುಕೊಂಡು ಪ್ರಜೆಗಳಲ್ಲಿ ನಾಸ್ತಿಕತ್ವವನ್ನು ಪ್ರಜೆಗಳಿಗೆ ಬೋಧಿಸಿದ್ದಾನೆಂದು, ಕಲ್ಲಿನ ಬೊಂಬೆಗಳು ದೇವರುಗಳು ಹೇಗಾಗುತ್ತವೆಯೆಂದು ಹಿಂದೂ ದೇವತೆಗಳನ್ನು ವೇಮನ ದೂಷಿಸಿದ್ದಾನೆಂದು, ವೇಮನನಲ್ಲಿ ದೈವಭಕ್ತಿ ಇಲ್ಲವೆಂದು, ಬಹಳ ಪದ್ಯಗಳಲ್ಲಿ ದೇವತೆಗಳನ್ನು, ಬ್ರಾಹ್ಮಣರನ್ನು ದೂಷಿ ಸಿದ್ದಾನೆಂದು ಸಹ ಹೇಳಿದ್ದಾರೆ. ಈ ವಿಧವಾಗಿ ತಮಗೆ ಕೈಲಾದಷ್ಟು ವೇಮನನ್ನು ಕುರಿತು ಕೆಟ್ಟದಾಗಿಯೇ ಪ್ರಚಾರ ಮಾಡಿದ್ದಾರೆ.

ಇನ್ನೂ ಪೋತಲೂರಿ ವೀರಬ್ರಹ್ಮಯ್ಯನವರು ಕಾಲಜ್ಞಾನವೆಂಬ ಹೆಸರಿನಿಂದ ನಡೆಯುವಂತಹ ಎಷ್ಟೋ ವಿಷಯಗಳನ್ನು ಬರೆದು ಹೆಸರುವಾಸಿಯಾದ ವ್ಯಕ್ತಿ.  ಆದರೆ ಆಚಾರಿ (ವಿಶ್ವಬ್ರಾಹ್ಮಣ)ಕುಲದಲ್ಲಿ ಹುಟ್ಟಿದವನಾದ್ದರಿಂದ, ಬ್ರಹ್ಮಯ್ಯನವರು ಆರ್ಯಬ್ರಾಹ್ಮಣನು ಅಲ್ಲದಿರುವುದರಿಂದ, ಆಚಾರಿಕುಲ ಶೂದ್ರರ ಕುಲಗಳಲ್ಲಿ ಇರುವುದರಿಂದ ಬ್ರಹ್ಮಯ್ಯನವರನ್ನು ಸಹ ಹೇಳನವಾಗಿ ಮಾತನಾಡಿ, ಬ್ರಹ್ಮಯ್ಯನವರು ಆಚಾರಿಗಳ ಕುಲದವರಿಗೆ ಮಾತ್ರ ಗುರುವೆಂದು, ಉಳಿದವರಿಗೆ ಗುರುವು ಅಲ್ಲವೆಂದು, ಅವರ ಕುಲದವರಿಗೆ ಜ್ಞಾನ ಹೇಳಿದ್ದಾನೆಂದು, ಬ್ರಹ್ಮಯ್ಯನವರು ಆಚಾರಿಗಳ ಕುಲಗುರುವಾಗಿ ಇದ್ದಾನೆಂದು ಆರ್ಯರು ಹೇಳಿದ್ದಾರೆ. ಅಷ್ಟೇ ಅಲ್ಲದೆ ಆತ್ಮಜ್ಞಾನವನ್ನು ತತ್ತ್ವಗಳ ರೂಪದಲ್ಲಿ ಬರೆದ ಬ್ರಹ್ಮಯ್ಯನವರನ್ನು, ಪದ್ಯಗಳ ರೂಪದಲ್ಲಿ ಬರೆದ ವೇಮನಯೋಗಿಯನ್ನು ಅವರ ರಚನೆಗಳಲ್ಲಿ ಬರೆದ ವಿಧಾನವನ್ನನುಸರಿಸಿ, ಬಳಸಿದ ಭಾಷೆಯನ್ನನುಸರಿಸಿ ಶೂದ್ರರಾದ ಬ್ರಹ್ಮಯ್ಯನವರಮೇಲೆ ವೇಮನಮೇಲೆ

ಎಷ್ಟು ಅಸೂಯೆ ಇದೆಯೋ ತಿಳಿಯಬಲ್ಲದು. ನಿಮಗೆ ಸ್ವತಃವಾಗಿ ಅರ್ಥ ವಾಗುವಂತೆ "ಜ್ಞಾನ ಸೂರ್ಯೋದಯ" ಎಂಬ ಗ್ರಂಥದಲ್ಲಿ ಬರೆದ ಕೆಲವು ವಾಕ್ಯಗಳನ್ನು ಯಥಾರೀತಿಯಲ್ಲಿ ಒದಗಿಸುತ್ತಿದ್ದೇವೆ ನೋಡಿರಿ. ಹಾಗೆ ನಾವು ಈ ಗ್ರಂಥದಲ್ಲಿನ ವೇದಗಳು ಆರ್ಯರ ಕಲ್ಪನೆಯೆಂದೂ, ರಾಮಾಯಣ ಸಹ ಆರ್ಯರಾದವರು ಬರೆಸಿರುವುದೇಯೆಂದೂ, ಅದು ಅಸತ್ಯಗಳಿಂದ ಕೂಡಿಕೊಂಡಿರುವುದೆಂದೂ ಹೇಳಿದ್ದೇವೆ ಅಲ್ಲವೆ! ನಾನೇ ಅಲ್ಲ ನನ್ನಂಥವರು ನನಗಿಂತ ಮೊದಲು ಸಹ ಹೇಳಿದ್ದಾರೆ. ಕಲ್ಪಿತವೆಂದು ನಾವು ಹೇಳಿರುವ ಮಾತುಗಳಿಗೆ ಬದುಲು, ಅವರ ಗ್ರಂಥದಲ್ಲಿ ಹೇಗೆ ಬರೆದಿದ್ದಾರೋ ಒಂದುಬಾರಿ ನೀವೆ ಗ್ರಹಿಸಿರಿ.

*"ಸ್ವಯಂಭುಗಳಾದ ವೇದಗಳನ್ನು ಕೆಲವರು ಕಲ್ಪಿತಗಳೆನ್ನುತ್ತಿದ್ದಾರೆ. ಹಾಗೆಯೇ ರಾಮಾಯಣವನ್ನು ಸಹ ಕಲ್ಪಿಸಿದ್ದಾರೆಂದು ಹೇಳುತ್ತಿದ್ದಾರೆ. ಕಲ್ಪಿಸಿದ್ದಾರೆಂದರೆ ಯಾರು ಕಲ್ಪಿಸಿದ್ದಾರೆ? ಕಲ್ಪಿತಗಳಾದವುಗಳನ್ನು ಸಮಕಾಲೀಕರು ಒಪ್ಪಿಕೊಳ್ಳುತ್ತಾರಾ? ಭಿನ್ನಾಭಿಪ್ರಾಯಗಳು ಇರುವವರೊಬ್ಬರು ಸೃಷ್ಟಿಸಿರುವುದನ್ನು ಮತ್ತೊಬ್ಬರು ಸಹಿಸುತ್ತಾರಾ? ರಾಮಾಯಣ ಕಲ್ಪಿತವೆಂದರೇ ಇಂದಿಗೂ ಸರ್ವ ಪ್ರಪಂಚದಲ್ಲಿ 'ಆಚರಿಸುವಂತಹ ರಾಮಜಯಂತಿ (ಶ್ರೀರಾಮನವಮಿ) ಹೇಗೆ ಪ್ರಜೆಗಳಲ್ಲಿ ಪ್ರವೇಶಿಸಿದೆ? ಆಯಾ ಗ್ರಂಥ ಪ್ರಸ್ತಾವನೆಗಳಾದ ಮಹಾ ವಿಷಯಗಳು ಕಾಲ ಪರಿಣಾಮದಿಂದ ಅಜ್ಞಾನಿಗಳಾದ ಈಗಿನವರಿಗೆ ವಿಚಿತ್ರವಾಗಿ ಕಾಣಿಸಬಹುದು. ಅಷ್ಟುಮಾತ್ರಕ್ಕೆ ಅವು ಕಲ್ಪಿತಗಳಾ? ವಾಲ್ಮೀಕಿ ಇಲ್ಲದಸಲ್ಲದ ವಿಷಯಗಳೆಲ್ಲವನ್ನು ರಾಮಾಯಣ ಗ್ರಂಥವಾಗಿ ತಯಾರಿಸಿ ಲೋಕವನ್ನು ಮೋಸಮಾಡುತ್ತಿರುವಾಗ, ಆಗಿನ ಸಮಕಾಲಿಕರು ಹೇಗೆ ಸುಮ್ಮನಿದ್ದಾರೆ? ಸಮಕಾಲಿಕರೆಲ್ಲರೂ ವಾಲ್ಮೀಕಿ ಮಾಡುತ್ತಿರುವುದು ಮೋಸವೆಂದು ತಿಳಿಯಲಾರದಷ್ಟು ಮೂರ್ಖರಾ? ಹಾಗಾದರೂ ಮೂಢನಿಕ್ಷಿಪ್ತವಾದ ಅಪವಿತ್ರ ಗ್ರಂಥವೇ ಆದರೆ, ಅದು ಇಂದಿನವರೆಗು ನಮ್ಮ ಮಧ್ಯದಲ್ಲಿ ಹೇಗೆ ನಿಲ್ಲಲಾಗಿದೆ? ಒಂದುವೇಳೆ ಆಂದಿನವರು ರಾಮಾಯಣ ಕಲ್ಪಿತ ಎಂದು ವಿಮರ್ಶಿಸಿದ್ದರೆ ರಾಮಾಯಣ ಇಲ್ಲಿಯವರೆಗೂ ಬಂದಂತೆ ಅವರ ವಿಮರ್ಶೆಗಳು ಇಲ್ಲಿಯವರೆಗೂ ಆ ಗ್ರಂಥದ ಹಿಂದೆ ಏಕೆ ಬರಲಿಲ್ಲ?*

*ಒಂದೊಂದು ಶಾಸ್ತ್ರ (ವೇದ, ರಾಮಾಯಣ) ಎಷ್ಟು ವಿಸ್ತಾರವಾಗಿ, ಎಷ್ಟು ಘಾಢವಾಗಿ, ಎಷ್ಟು ಗಂಭೀರವಾಗಿದೆಯೋ ಪರಿಶೀಲಿಸಿ. ಗುರು ಸಮಕ್ಷದಲ್ಲಿ ಕೇಳಿಯೂ ಅರ್ಥ ಮಾಡಿಕೊಳ್ಳದೆ ಬಾಧೆಪಡುತ್ತಿದ್ದೇವೆ. ಅಂತವುಗಳನ್ನು ಯಾರೋ ಗಾಳಿಗೆ ಹೋಗುವವನು ಕಲ್ಪಿತಗಳೆಂದರೇ ಸರಿಹೋಗುತ್ತದಾ? ಗುರುಕುಲವಾಸ ಮಾಡಿ ಶಾಸ್ತ್ರಗಳನ್ನು, ವೇದಗಳನ್ನು ಅಭ್ಯಾಸಿಸಿದವರಿಗೆ ಅವುಗಳ ಯಥಾರ್ಥ ಸ್ವರೂಪವೂ, ಅವುಗಳ ಮಹಿಮೆ ಅರ್ಥವಾಗುತ್ತದೆ. ಹಾಗೆ ಗುರುಕುಲವಾಸ ಮಾಡದೆ, ವೇದ, ಪುರಾಣ, ಇತಿಹಾಸ ಗ್ರಂಥಗಳನ್ನು ಓದದೆ, ಭಾಷಾ ಪರಿಜ್ಞಾನವನ್ನು ಕಲಿಯದೆ, ಆ ಗ್ರಂಥಗಳನ್ನು ಬರೆದ ಮಹರ್ಷಿಗಳ ಶಕ್ತಿ ಎಂಥದೋ ತಿಳಿಯದೆ, ಆರ್ಯ ಸಂಪ್ರದಾಯಗಳನ್ನು ಪರಿಶೀಲಿಸದೆ, ಇಂದ್ರಿಯಾಲೋಲನಾಗಿ ಇಷ್ಟಬಂದಂತೆ ಮುಗಿಯುತ್ತಾ, ಇಷ್ಟಬಂದ ರೀತಿಯಲ್ಲಿ ನಡೆಸುತ್ತಾ, ಬಾಯಿಗೆ ಬಂದಂತೆ ಮಾತನಾಡುತ್ತಾ, ಬೊಜ್ಜು ಸೊಂಡಿಲನ್ನು ನೋಡಿ ಬ್ರಹ್ಮದೇವರೆಂದು ಕೊಂಡಿದ್ದೇನೆ ಎಂದಂತೆ, ವೇದ ಉಪನಿಷತ್ ಶಾಸ್ತ್ರಗಳನ್ನು ನೋಡಿ ಕಲ್ಪಿತಗಳೆಂದೂ, ಅಸತ್ಯಗಳೆಂದೂ ಹೇಳಿದರೆ ಲಾಭವೇನು? ಯಾರು ಏನೆಂದರೂ ಸಾಮಾನ್ಯ ಮಾನವನ ಯುಕ್ತಿವಾದವು ವೇದಗಳನ್ನು ಅಸತ್ಯವೆಂದು ಹೇಳಿದರೂ, ಸಿಂಹದ ಮುಂದೆ ನರಿ ಮೌನ ವಹಿಸಿದಂತೆ, ವೇದಾಂತಶಾಸ್ತ್ರದ ಮುಂದೆ ವಿಮರ್ಶಕರು ಮೌನ ವಹಿಸದೆ ತಪ್ಪುವುದಿಲ್ಲ ಎಂದು ಒಬ್ಬ ಸುಭಾಷಿತಕಾರನು ಸಮಸ್ತ ಶಾಸ್ತ್ರಸಾರವಾದ ವೇದಗಳನ್ನು ಪ್ರಶಂಶಿಸಿದನು. ಆದುದರಿಂದ ವೇದಾಂತಶಾಸ್ತ್ರಗಳು (ವೇದಗಳು) ಸರ್ವದಾ ಸತ್ಯಗಳು,*

('ವೈದಿಕ ವೇಷಧಾರಣ' ಎಂಬ ಹೆಸರಿನಿಂದ ಬ್ರಾಹ್ಮಣರಾದವರು ಇದೇ ವಸ್ತ್ರಧಾರಣೆ, ಇದೇ ವೇಷಧಾರಣೆ ಇರಬೇಕೆಂಬ ನಿಯಮವನ್ನು ಪಾಟಿಸುತ್ತಿದ್ದಾರೆ. ಹಾಗೆ ವೇಷಧಾರಣೆ ವಸ್ತ್ರಧಾರಣೆ ಬ್ರಾಹ್ಮಣರಿಗೆ ಬೇರೆ ಯಾಗಿರುವುದನ್ನು ನೋಡಿ, ಉಳಿದ ಪ್ರಜೆಗಳೆಲ್ಲರಲ್ಲಿ ಬ್ರಾಹ್ಮಣರು ಪವಿತ್ರರಾಗಿ ಕಾಣಿಸುತ್ತಿರುವಾಗ ಆ ವೇಷಧಾರಣೆ ಇಲ್ಲದ ಉಳಿದ ಪ್ರಜೆಗಳೆಲ್ಲರೂ ಅಪವಿತ್ರರಾಗಿ ಕಾಣಿಸುತ್ತಿದ್ದಾರೆ. ಆ ವಿಧ ವೇಷಧಾರಣೆ ಉಳಿದವರೆಲ್ಲರೂ ನೀಚರು, ಶೂದ್ರರು,

ಅಂಟಬಾರದವರು ಎಂದು ಸೂಚಿಸಿದಂತಿರುತ್ತದೆ. ಆದುದರಿಂದ ವೈದಿಕ ವೇಷಧಾರಣೆ ಎನ್ನುವುದು ಜೀವನೋಪಾಧಿಗಾಗಿಯೇ ಆದರೇ, ಭಕ್ತಿಯಲ್ಲ. ಅದರಲ್ಲಿ ಇತರರನ್ನು ಹೀನವಾಗಿ ನೋಡುವುದೆ ಹೆಚ್ಚಾಗಿ ಕಾಣಿಸುತ್ತದೆಯೆಂದು, **"ಭಕ್ತಿ ಶ್ರದ್ಧೆಗಳು ಮನಸ್ಸಿನಲ್ಲಿ ಇರಬೇಕು ಆದರೇ, ಶರೀರದ ಮೇಲೆ ವಸ್ತ್ರಧಾರಣೆಯಿಂದ ಭಕ್ತಿ ಶ್ರದ್ಧೆಗಳು ಬರುವುದಿಲ್ಲ"** ಎಂಬ ನಮ್ಮಂತವರಿಗೆ ಬದುಲು ಅವರು ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ.)

**ವೈದಿಕ ವೇಷಧಾರಣೆ ಜೀವನೋಪಾಯ ಹೇಗಾಗುತ್ತದೆ? ತಮಗದು ವರೆಗಿರುವ ಜೀವನಗಳನ್ನು ನಿಷ್ಪ್ರಯೋಜಕವಾಗಿ ವಿಸರ್ಜಿಸಿ, ಇಂದ್ರಿಯಗಳ ಸಹಜ ಪ್ರವೃತ್ತಿಯನ್ನು ಕಷ್ಟ ಪಟ್ಟು ಸಾಧನೆಯಿಂದ ನಿಲ್ಲಿಸಿ, ಯಮ ನಿಯಮಾದಿಗಳನ್ನು ಆಚರಿಸಿ, ಭಗವಂತನ ಆರಾಧನಾ ತತ್ಪರರಾಗಿ, ಲೋಕವನ್ನು ಬಿಟ್ಟು ತಮ್ಮ ಮಾರ್ಗವನ್ನು ಅನುಸರಿಸಿ ಬಂದವರಿಗೆ ವೇದಗಳು ಬೋಧಿಸುವ ವೈದಿಕರು ವಂಚಕರಾ? ವೇಷಧಾರರಾ? ಇತರರನ್ನು ಅವಹೇಳನ ಮಾಡುವವರಾ? ಎಂಥಹ ಅನ್ಯಾಯವಾದ ಮಾತು?**

**ವೈದಿಕ ಜ್ಞಾನ ಶೂನ್ಯರಾದವರು, ಈ ಲೋಕವೇ ಸತ್ಯವೆಂದುಕೊಂಡು, ಅದರಲ್ಲಿಯೇ ಲಗ್ನರಾಗಿರುವವರ ದೃಷ್ಠಿಯಲ್ಲಿ ಲೋಕವನ್ನು ಅರಿತು ವೇದ ಶಾಸ್ತ್ರಗಳ ದೃಷ್ಠಿಯಿಂದ ದೂರವಾಗಿರುವ ಪರಲೋಕಗಳನ್ನು ಸಹ ದರ್ಶಿಸುವ ಕೂಪಸ್ಥಮಂಡೂಕ ಹೇಗಾಗುತ್ತಾರೆ? (ಬಾವಿಯಲ್ಲಿನ ಕಪ್ಪೆಗಳು ಹೇಗಾಗುತ್ತಾರೆ?) ಪುತ್ರಕಾಮೇಷ್ಠಿ ಯಜ್ಞಮುಂತಾದ ಕಾರ್ಯಗಳಿಂದ ಅವುಗಳ ಫಲಿತಗಳು ಪ್ರತ್ಯಕ್ಷವಾಗಿ ದೊರೆತರೂ, ವೈದಿಕ ಕರ್ಮಗಳು, ಯಜ್ಞಗಳು ಸತ್ಯ ಅಲ್ಲವೆನ್ನುತ್ತೀರಾ? ಅವು ಜೀವನೋಪಾಧಿಯೆಂದು ಹೇಳುತ್ತಾರಾ? ಆರ್ಯ ಸಂಪ್ರದಾಯಗಳನ್ನು ಅಸತ್ಯಗಳೆಂದು ಹೇಳುತ್ತಾರಾ?**

(ಇಲ್ಲಿ ವೇಮನನ್ನು, ವೀರಬ್ರಹ್ಮಯ್ಯನವರನ್ನು ಸೇರಿಸಿ ಆರ್ಯ ಬ್ರಾಹ್ಮಣರು ಏನೆಂದು ಹೇಳುತ್ತಿದ್ದಾರೋ ನೋಡಿರಿ.)

"ಐಹಿಕ ವಶ್ಯತತ್ತ್ವ ತಿಳಿದು ನಿತ್ಯ ಸುಖಾಭಿಲಾಷಿಗಳಾಗಿ ಸರಿಯಾದ ಮಾರ್ಗ ಸಿಗದೆ, ಸದ್ಗುರು ಲಭಿಸದೆ, ಸತ್ಸಾಂಗತ್ಯ ಇಲ್ಲದೆ, ಶಾಸ್ತ್ರ ಪರಿಚಯ ಯಾವುದೂ ಇಲ್ಲದೆ, ವೇದಗಳ ಜ್ಞಾನ ತಿಳಿಯದೆ, ಕುಮತ (ಕೆಟ್ಟಬುದ್ಧಿ) ಪತಿಷ್ಠರಾಗಿ ಪರದಾಡುತ್ತಾ, ಅಚಲ ಸಂಪ್ರದಾಯವೆಂದು ಇಲ್ಲದಿರುವುದನ್ನು ಹೇಳುತ್ತಾ, ಕೆಲವರು ಪದ್ಯಗಳನ್ನು, ಕೆಲವರು ಹಾಡುಗಳನ್ನು (ತತ್ತ್ವಗಳನ್ನು) ಹಾಡುತ್ತಾ ಗುರುಗಳಾಗಿ ಚಲಾವಣೆ ಆಗಬೇಕೆಂದು ಒದ್ದಾಡುವವರು ಕೆಲವರು ಇದ್ದಾರೆ. ಅಂಥವರು ಪಾಂಡಿತ್ಯವಿಲ್ಲದ ಪ್ರಜೆಗಳ ಮಧ್ಯದಲ್ಲಿ ಚಲಾವಣೆ ಆಗುತ್ತಾ, ಪ್ರಯೋಜನವಿಲ್ಲದ ಕವಿತ್ವವನ್ನು ಹೇಳುತ್ತಿರುತ್ತಾರೆ. ಅದರಲ್ಲಿ ತತ್ತ್ವಜ್ಞಾನಿಗಳೆಂದು ಕೆಲವರು ಹೀಗೆ ಹಾಡು ಹೇಳುತ್ತಿದ್ದಾರೆ.

1) ನೋಡಲು ಸುಂದರ ಹುಡುಗಿ ಮೇಲಿನ ಕೊನೆಯ ಮಹಡಿಯಲ್ಲಿದ್ದಾಳೆ. ಏಳು ಬಣ್ಣದ ಸರೋವರದಲ್ಲಿ ಜಲಕ್ರೀಡೆಗಳಾಡುತ್ತಿದ್ದಾಳೆ.
2) ರೆಕ್ಕೆ ಪುಕ್ಕ ಇಲ್ಲದ ಪಕ್ಷಿ ರಾತ್ರಿ ಹಗಲು ತಪಸ್ಸು ಮಾಡಿ ಒಂದೇ ಕೆರೆಯ ಮೀನುಗಳನ್ನು ಒಂದೇ ನುಂಗಿತು.

3) ಹೋಗುತ್ತಾ ಹೋಗುತ್ತಾ ಗೋಡೆಯಿದೆ
ಗೋಡೆಗೆ ತಕ್ಕ ಗೂಡು ಇದೆ,
ಗೂಡಿಗೆ ತಕ್ಕ ದೀಪವಿದೆ.
4) ಚಪ್ಪಲಿಯಲ್ಲಿನ ಕಲ್ಲು ಕಿವಿಯಲ್ಲಿನ ಗುಂಗಾರಿ
ಕಣ್ಣಿನಲ್ಲಿನ ಧೂಳು ಕಾಲಿನ ಮುಳ್ಳು
ಮನೆಯಲ್ಲಿನ ಕಲಹ ಇಷ್ಟಿಷ್ಟು ಅಲ್ಲವಯ್ಯ
ವಿಶ್ವಾದಾಭಿರಾಮ ಕೇಳಯ್ಯ ವೇಮ.
5) ಹನ್ನೆರಡು ಕೊಂಬೆಗಳ ಅರಳಿ ಮರ
ಅದರ ಮೇಲೆ ಪಂಚರಂಗಿನ ಗಿಳಿ,
ಅದರ ಮೇಲೆ ಚುಕ್ಕೆಯಂತೆ ಪ್ರಕಾಶಿಸುವ ನರಿ,
ಅದರಲ್ಲಿಯೇ ಭಗವಂತನಿರುತ್ತಾನೆ.

6) ಗುಂಟೂರು ಆಚೆಗಿರುವ ಚಿಂತಲಕಾಡ
ಕುದುರೆ ಹೊಟ್ಟೆಯಲ್ಲಿ ಕುರಿ ಹುಟ್ಟಿತಯ್ಯ
ನಂದಾಮಯಾ ಗುರು ನಂದಾಮಯಾ
**ಆನಂದ ದೇವಿಗೆ ನಂದಾಮಯಾ.**

**ಇವು ಇವರ ಉಪನಿಷತ್ ಸೂಕ್ತಗಳು, ತತ್ತ್ವ ವಾಚಕಗಳು. ಇವುಗಳಿಗೇನೋ ಅಂತರಾರ್ಥವಂತೆ ಇವರ ಶ್ರಾದ್ಧವಂತೆ!! ಉಭಯ ಭ್ರಷ್ಟರಾಗಿ ಕೆಡುವುದು ಹೊರತು ಇವರಿಗೆ ಬೇರೆ ಫಲವಿಲ್ಲ. ಇದೂ ಇವರ ವೇದಾಂತ? ಇಂತಹ ಹುಚ್ಚು ಮತಗಳನ್ನು ನೋಡಿಯೇ ನವೀನರು ಮಹಾಪವಿತ್ರಗಳಾದ ವೈದಿಕ ಮತಗಳನ್ನು ಸಹ ಇಂಥವೆಯೆಂದು ದೂಷಿಸುತ್ತಿದ್ದಾರೆ.**

**"ತಿಳಿದಿದೆ ಎನ್ನುವವನಿಗೆ ಏನೂ ತಿಳಿದಿಲ್ಲ, ತಿಳಿದಿಲ್ಲ ಎಂದು ಕೊಳ್ಳುವವನಿಗೆ ಎಲ್ಲಾ ತಿಳಿದಿದೆ"** ಎಂಬ ಗಾದೆ ಪ್ರಕಾರ ಮೇಲಿನ ವಿಷಯಗಳನ್ನು ಬರೆದ ಗ್ರಂಥಕರ್ತ ತನ್ನನ್ನು ತಾನು ಎಲ್ಲಾ ತಿಳಿದಿದೆಯೆಂದುಕೊಳ್ಳುವುದರಿಂದ, ಏನೂ ತಿಳಿಯದವನಾಗಿದ್ದಾನೆಂದು ಹೇಳಬಹುದು. ಮೇಲೆ ಉದಾಹರಣೆಗೆ ಗ್ರಂಥಕರ್ತ ಬರೆದ ತತ್ತ್ವಗಳ ವಾಕ್ಯಗಳು, ಪದ್ಯಗಳ ವಾಕ್ಯಗಳು ಎಷ್ಟೋ ದೊಡ್ಡ ಅರ್ಥದಿಂದ ಕೂಡಿಕೊಂಡಿವೆಯೆಂದು ತಿಳಿಯುತ್ತಿದೆ. ಆದರೂ ಗ್ರಂಥಕರ್ತಗೆ ವೇದಗಳ, ಉಪನಿಷತ್ತುಗಳ ಸ್ಥೂಲ ಜ್ಞಾನ ತಿಳಿದಿರುವುದರಿಂದ, ಶರೀರದಲ್ಲಿನ ಆತ್ಮಗಳ ವಿಷಯ ತಿಳಿಯದಿರುವು ದರಿಂದ, ನಾಲಿಗೆ ಇಲ್ಲದವನಿಗೆ ರುಚಿಯೇ ತಿಳಿಯುವುದಿಲ್ಲ ಎನ್ನುವಂತೆ, ತತ್ತ್ವಗಳಲ್ಲಿನ ಜ್ಞಾನ, ಪದ್ಯಗಳಲ್ಲಿನ ಜ್ಞಾನ ಸ್ವಲ್ಪವೂ ತಿಳಿಯದಂತೆಹೋಗಿದೆ.

ಇಲ್ಲಿ ವಿವರವಾಗಿ ಜ್ಞಾನದಿಂದ ಕೂಡಿಕೊಂಡ ತತ್ತ್ವಗಳನ್ನು, ಪದ್ಯಗಳನ್ನು ಬರೆದು, ಅವುಗಳಿಗೆ ಬೆಲೆಕೊಡದಂತೆ ದೂಷಿಸುವುದು, ಅವುಗಳನ್ನು ಓದುವವರನ್ನು "ಇವರ ಶ್ರಾದ್ಧವಂತೆ" ಎಂದು ದೂಷಿಸುವುದು ನೋಡಿದರೆ, ವೇಮನ ಯೋಗಿಮೇಲೆ, ಕಾಲಜ್ಞಾನಿಯಾದ ಬ್ರಹ್ಮಯ್ಯನವರ ಮೇಲೆ ಎಷ್ಟು

ಅಸೂಯೆ ಇದೆಯೋ ನೋಡದೆಯೇ ಹೊರಗೆ ಕಾಣಿಸುತ್ತಿದೆ. ಆರ್ಯರಾದವರ ದೃಷ್ಠಿಯಲ್ಲಿ ವೇದಗಳು, ಉಪನಿಷತ್‌ಗಳೇ ಮುಖ್ಯವಾದ ಶಾಸ್ತ್ರಗಳಾಗಿ ಇವೆ. ವೇದಗಳನ್ನು ಶಾಸ್ತ್ರಗಳೆನ್ನುವುದು ಎಮ್ಮೆಯನ್ನು ಎತ್ತು ಎನ್ನುವಂತಿದೆ. ವೇದಗಳು ಬೇರೆ, ಶಾಸ್ತ್ರಗಳು ಬೇರೆ. "ವೇದಗಳು ನಾಲ್ಕು, ಶಾಸ್ತ್ರಗಳು ಆರು" ಎಂದು ತಿಳಿಯದವರು ವೇದ ಶಾಸ್ತ್ರಗಳೆಂದು ಹೇಳುತ್ತಾ ವೇದಗಳನ್ನು ಶಾಸ್ತ್ರಗಳೆನ್ನುವುದು ತಪ್ಪು. ಇದರಿಂದ ಇನ್ನೊಬ್ಬರನ್ನು ಅಪಹಾಸ್ಯಮಾಡುವ ಜ್ಞಾನ ಹೊರತು, ಇನ್ನೊಂದು ವಿಷಯವನ್ನು, ಇನ್ನೊಬ್ಬ ವ್ಯಕ್ತಿಯನ್ನು ಅರ್ಥಮಾಡಿಕೊಳ್ಳುವ ಶಕ್ತಿ ಆರ್ಯ ಬ್ರಾಹ್ಮಣರಿಗೆ ಇಲ್ಲವೆಂದು ಅರ್ಥವಾಗುತ್ತಿದೆ.

**ಪ್ರಶ್ನೆ:– ಶಂಕರಾಚಾರ್ಯರು ಆರ್ಯರಿಂದ ತಯಾರು ಮಾಡಲ್ಪಟ್ಟವನೆಂಬ ವಿಷಯ ನೀವೇ ಮೊದಲು ಹೇಳುತ್ತಿದ್ದೀರ. ಇಲ್ಲಿಯವರೆಗು ಆ ಮಾತನ್ನು ಯಾರೂ ಹೇಳಲಿಲ್ಲ. ಶಂಕರಾಚಾರ್ಯರೇ ಸ್ವತಃವಾಗಿ ಹಾಗೆ ತಯಾರಾಗಿ ಸಿದ್ಧಾಂತಕರ್ತ ಆಗಿದ್ದಾನೆಂದುಕೊಂಡಿದ್ದೆವು. ಬುದ್ಧನಿಗೆ ಪೋಟಿಯಾಗಿ ತಯಾರು ಮಾಡಲಾದವ ನೆಂದು ನಮಗೆ ತಿಳಿದಿಲ್ಲ. ಶಂಕರಾಚಾರ್ಯರು ಬಹಳ ತಿಳುವಳಿಕೆಯುಳ್ಳವರೆಂದು, ಚಿಕ್ಕ ವಯಸ್ಸಿನಲ್ಲಿಯೇ ಸಕಲ ವಿದ್ಯೆಗಳನ್ನು ಕಲಿತವನೆಂದು, ಸಂಸ್ಕೃತದಲ್ಲಿ ಮೇಧಾವಿಯೆಂದು ಏನನ್ನಾದರೂ ತಕ್ಷಣ ಗ್ರಹಿಸಿಕೊಳ್ಳುವ ಶಕ್ತಿ ಇರುವವನೆಂದು ಕೇಳಿದ್ದೇವೆ. ಅಂಥವನು ಆರ್ಯರ ಕುತಂತ್ರವನ್ನು ಗ್ರಹಿಸಲಾರದೆ ಹೋಗಿದ್ದಾನಾ?**

**ಉತ್ತರ :–** 'ಮನೆ ಕಳ್ಳನನ್ನು ಈಶ್ವರನಾದರೂ ಹಿಡಿಯಲಾರನೆಂಬ' ಗಾದೆಯ ಪ್ರಕಾರ ಅನುಕೂಲ ಶತ್ರುಗಳಾಗಿರುವ ಆರ್ಯರನ್ನು ಶಂಕರನು ಗ್ರಹಿಸಲಾರದಿದ್ದಾನೆ. ಮೇಲಾಗಿ ಸ್ವಕುಲಸ್ಥರೆಂಬ ಭ್ರಮೆಯಲ್ಲಿ ಅವರನ್ನು ಪೂರ್ತಿಯಾಗಿ ನಂಬಿದ್ದು ಅವರು ಹೇಳುವುದೆಲ್ಲಾ ತನ್ನ ಒಳ್ಳೆಯದಕ್ಕೆ ಅಂದುಕೊಂಡಿದ್ದಾನೆ. ಚಿಕ್ಕವಯಸ್ಸಿನಲ್ಲಿಯೇ ತನನ್ನು ಚೆನ್ನಾಗಿ ಪ್ರಚಾರ ಮಾಡಿದ ಆರ್ಯರನ್ನು ಪೂರ್ತಿ ವಿಶ್ವಾಸಿಸಿದ್ದಾನೆ. ತನ್ನನ್ನು ಒಬ್ಬ ಸಿದ್ಧಾಂತಕರ್ತನನ್ನಾಗಿ ತಿದ್ದಿ ಎಲ್ಲರಲ್ಲಿ ದೊಡ್ಡವನಾಗಿ ಮಾಡಿದವರನ್ನು ಶಂಕರಾಚಾರ್ಯರು ಎಂಥಹ ಅನುಮಾನ ಇಲ್ಲದಂತೆ ನಂಬಿದನು. ಆರ್ಯರು ತಮ್ಮ ಸ್ವಾರ್ಥದಿಂದ ತನ್ನನ್ನು

ಗೊಂಬೆಯಾಗಿ ಬಳಸಿಕೊಳ್ಳುತ್ತಿರುವಂತೆ ಶಂಕರನಿಗೆ ತಿಳಿದಿಲ್ಲ. ಯಾವಾಗಾದರೆ ತನ್ನಿಂದ ದೇಶದಲ್ಲಿ ನಾಲ್ಕು ಕಡೆ ನಾಲ್ಕು ರಾಷ್ಟ್ರಗಳಲ್ಲಿ ನಾಲ್ಕು ಅದ್ವೈತ ಪೀಠಗಳನ್ನು ಸ್ಥಾಪಿಸಿ ದೇಶಪರ್ಯಟನೆ ಮಾಡಿದ ನಂತರ ಆರ್ಯರ ಮೇಲೆ ಸ್ವಲ್ಪ ಅನುಮಾನ ಬಂದಿದೆ. ಆದರೂ ಅದನ್ನು ಎಲ್ಲಿಯೂ ಬಹಿರ್ಗತ ಮಾಡದಂತೆ ತನ್ನಲ್ಲಿಯೇ ಮುಚ್ಚಿಟ್ಟಿಕೊಳ್ಳುವುದು ನಡೆದಿದೆ. ಆದರೆ ಪೂರ್ವದಲ್ಲಿ ಒರಿಸ್ಸಾ ರಾಷ್ಟ್ರದಲ್ಲಿ ಪೂರಿ ಜಗನ್ನಾಥನಲ್ಲಿಯೂ, ಪಶ್ಚಿಮದಲ್ಲಿ ಗುಜರಾತ್ ರಾಷ್ಟ್ರದಲ್ಲಿ ದ್ವಾರಕಾ ಜಾಮ್‌ನಗರದಲ್ಲಿಯೂ, ಉತ್ತರದಲ್ಲಿ ಉತ್ತರಾಖಂಡ ರಾಷ್ಟ್ರದಲ್ಲಿ ಬದ್ರಿನಾಥ್‌ನಲ್ಲಿಯೂ, ದಕ್ಷಿಣದಲ್ಲಿ ಕರ್ನಾಟಕ ರಾಷ್ಟ್ರದಲ್ಲಿ ಶೃಂಗೇರಿಯಲ್ಲಿಯೂ ನಾಲ್ಕು ಪೀಠಗಳನ್ನು ಸ್ಥಾಪಿಸಿದ್ದಾನೆ. ನಂತರ ತನ್ನಲ್ಲಿ ಬದಲಾವಣೆಯನ್ನು ಯಾರೂ ಗುರುತಿಸದಂತೆ **ಐದನೆ ಪೀಠವನ್ನು** ಸಹ ತಮಿಳುನಾಡಿನಲ್ಲಿ ಕಂಚಿಯಲ್ಲಿ ಸ್ಥಾಪಿಸುವುದು ನಡೆದಿದೆ.

ಶಂಕರಾಚಾರ್ಯನು ಭಾರತದೇಶಕ್ಕೆ ಪಶ್ಚಿಮ ಭಾಗದಲ್ಲಿರುವ ಗುಜರಾತ್‌ನಲ್ಲಿ ದ್ವಾರಕಾಯಲ್ಲಿ ದ್ವಾರಕ ಪೀಠವನ್ನು 491 B.C. ಯಲ್ಲಿಯೇ ಸ್ಥಾಪಿಸಿದ್ದಾನೆ. ನಂತರ ಎರಡನೆ ಪೀಠವನ್ನು ಉತ್ತರಾಖಂಡ್‌ನಲ್ಲಿನ ಬದ್ರಿನಾಥ್‌ನಲ್ಲಿ 486 B.C. ಯಲ್ಲಿ ಅಂದರೆ 5 ವರ್ಷಗಳ ನಂತರ ಎರಡನೆ ಪೀಠವಾದ ಜ್ಯೋತಿರ್ ಪೀಠವನ್ನು ಸ್ಥಾಪಿಸಿದ್ದಾನೆ. ಮೂರನೆ ಪೀಠವನ್ನು ಭಾರತದೇಶಕ್ಕೆ ಪೂರ್ವದಕಡೆಯಲ್ಲಿ ಒರಿಸ್ಸಾದಲ್ಲಿನ ಪೂರಿಯಲ್ಲಿ ಪೂರಿಪೀಠವನ್ನು 485 B.C. ಯಲ್ಲಿ ಸ್ಥಾಪಿಸಿದ್ದಾನೆ. ಎರಡನೆ ಪೀಠಕ್ಕು ಮೂರನೆ ಪೀಠಕ್ಕು ಒಂದು ವರ್ಷ ವ್ಯತ್ಯಾಸವೆಂದು ಗ್ರಹಿಸಿರಿ. ಇನ್ನು ನಾಲ್ಕನೆ ಫಿಠವನ್ನು ದಕ್ಷಿಣ ದೇಶದಲ್ಲಿ ಕರ್ನಾಟಕ ರಾಷ್ಟ್ರದಲ್ಲಿ ಶೃಂಗೇರಿಯಲ್ಲಿ ಶಾರದಾ ಪೀಠವನ್ನು 484 B.C. ಯಲ್ಲಿ ಸ್ಥಾಪಿಸಿದ್ದಾನೆ. ಮೂರನೆ ಪೀಠಕ್ಕು ನಾಲ್ಕನೆ ಪೀಠಕ್ಕು ಸಹ ಕೇವಲ ಒಂದು ವರ್ಷ ವ್ಯತ್ಯಾಸವಿದೆ. ಈ ವಿಧವಾಗಿ ನಾಲ್ಕು ಪೀಠಗಳನ್ನು ನಾಲ್ಕು ವೇದಗಳಿಗೆ ಗುರುತಾಗಿ ಸ್ಥಾಪಿಸುವುದು ನಡೆದಿದೆ.

ದೇಶದ ನಾಲ್ಕುಮೂಲೆಗಳಲ್ಲಿ ತಿರುಗಿದ ಶಂಕರನು ನಾಲ್ಕು ಪೀಠಗಳನ್ನು ನಾಲ್ಕು ವೇದಗಳಿಗೆ ಗುರುತಾಗಿ ಸ್ಥಾಪಿಸಿದಾಗ ಆತನದು ಹೆಸರು ಮಾತ್ರವೆ. ಶಂಕರನು ಮೊದಲ ಪೀಠವನ್ನು ಗುಜರಾತ್‌ನಲ್ಲಿ ಸ್ಥಾಪಿಸಿದಾಗ ಅಲ್ಲಿ ಅದ್ವೈತ ಮಠವನ್ನು ಆರ್ಯರೇ ಕಟ್ಟಿಸಿ ಸಿದ್ಧವಾಗಿಟ್ಟಿರುವ ಮಠಕ್ಕೆ ಶಂಕರನನ್ನು ಗೊಂಬೆಯಂತೆ ತೆಗೆದುಕೊಂಡು ಹೋಗಿ ಆತನಿಂದ ದ್ವಾರಕಾಪೀಠವನ್ನು ಸ್ಥಾಪಿಸಿದ್ದಾರೆ. ನಂತರ ಐದು ವರ್ಷಗಳ ವ್ಯವಧಿಯಲ್ಲಿ ಉತ್ತರದೇಶದ ಕೊನೆಯಲ್ಲಿರುವ ಬದ್ರಿನಾಥ್‌ದಲ್ಲಿ ಜೋತಿರ್‌ಪೀಠವನ್ನು ಸ್ಥಾಪಿಸುವುದು ನಡೆದಿದೆ. ಶಂಕರನು ಅಲ್ಲಿಗೆ ಬರುವುದಕ್ಕಿಂತ ಮುನ್ನವೇ ಬದ್ರಿನಾಥದಲ್ಲಿ ಅದ್ವೈತ ಪೀಠವನ್ನು ಸ್ಥಾಪಿಸುವುದು ನಡೆದಿದೆ. ಅಲ್ಲಿಂದ ಮೂರನೆ ಪೀಠಕ್ಕಾಗಿ ಒರಿಸ್ಸಾಗೆ ಬಂದಿದ್ದಾರೆ. ಉತ್ತರಾಖಂಡ್‌ನಿಂದ ಕಾಲುನಡೆಯಲ್ಲಿ ಒರಿಸ್ಸಾಗೆ ಬರುವುದಕ್ಕೆ ಸುಮಾರು ಒಂದು ವರ್ಷಕಾಲ ಬೇಕಾಗುತ್ತದೆ. ಅಷ್ಟರೊಳಗೇ ಆರ್ಯರು ಪೂರಿ ಪಟ್ಟಣದಲ್ಲಿ ಅದ್ವೈತ ಮಠವನ್ನು ತಯಾರು ಮಾಡಿ ಶಂಕರಾಚಾರ್ಯರನ್ನು ತೆಗೆದುಕೊಂಡು ಹೋಗಿ ಮೂರನೆ ಪೀಠವನ್ನು ಸ್ಥಾಪಿಸಿದ್ದಾರೆ. ನಾಲ್ಕನೆ ಪೀಠವಾದ ಶಾರದಾ ಪೀಠವನ್ನು ಕರ್ನಾಟಕದಲ್ಲಿನ ಶೃಂಗೇರಿ ಪಟ್ಟಣದಲ್ಲಿ ಸ್ಥಾಪಿಸಿದ್ದಾರೆ. ಒರಿಸ್ಸಾದಲ್ಲಿನ ಪೂರಿ ಯಿಂದ ಕರ್ನಾಟಕದಲ್ಲಿನ ಶೃಂಗೇರಿಯವರೆಗು ಕಾಲುನಡೆಯಲ್ಲಿ ಬರುವುದಕ್ಕೆ ಸುಮಾರು ವರ್ಷಕಾಲ ಬೇಕಾಗುತ್ತದೆ. ಕರ್ನಾಟಕದಲ್ಲಿ ವರ್ಷಕ್ಕೇ ಅಲ್ಲಿ ಪೀಠವನ್ನು ಶಂಕರನು ಹೋಗಿ ಸ್ಥಾಪಿಸಿದ್ದಾನೆ. ಶಂಕರನು ಅಲ್ಲಿಗೆ ಹೋಗದ ಮುಂಚೆಯೇ ಅಲ್ಲಿ ಎರಡು ಮೂರು ವರ್ಷಗಳಿಂದ ಅಲ್ಲಿ ಮಠವನ್ನು ನಿರ್ಮಿಸಬೇಕಾಗಿದೆ. ಒಂದು ಮಠವನ್ನು ನಿರ್ಮಿಸುವುದಕ್ಕೆ ಸುಮಾರು ಎರಡರಿಂದ ಮೂರು ವರ್ಷಗಳ ಅವಧಿಯಾದರೂ ಬೇಕಾಗುತ್ತದೆ. ಚೆನ್ನಾಗಿ ಆಲೋಚಿಸಿದರೂ ಆಲೋಚಿಸದಿದ್ದರೂ, ತಿಳುವಳಿಕೆ ಇರುವವರಿಗಾದರೂ, ತಿಳುವಳಿಕೆ ಇಲ್ಲದವರಿಗಾದರೂ ಆ ಪೀಠಗಳಿಗೆ ಸಂಬಂಧಿಸಿದ ಮಠಗಳನ್ನು ತಯಾರು ಮಾಡಿರುವುದು ಶಂಕರನು ಅಲ್ಲವೆಂದು, ಶಂಕರನು ದೃಶ್ಯರೂಪವಾದ ಗೊಂಬೆಯಂತೆ ಇದ್ದಾನೆಂದು, ಕಾರ್ಯರೂಪ ವಾದವರು ಆರ್ಯರೇಯೆಂದು ಆರ್ಯರು ಮೊದಲೇ ನಿರ್ಣಯಿಸಿಕೊಂಡಂತೆ ಶಂಕರನು ಆ ಪ್ರಾಂತದೊಳಗೆ

ಬರುವುದಕ್ಕಿಂತ ಮುನ್ನವೆ ಮಠಗಳನ್ನು ತಯಾರು ಮಾಡಿದ್ದಾರೆಂಬ ವಿಷಯ ತಿಳಿದುಹೋಗುತ್ತದೆ.

ಒಂದು ಪೀಠವನ್ನು ಸ್ಥಾಪಿಸುವುದಕ್ಕೆ ಅಲ್ಲಿ ಒಂದು ಮಠವಿರಬೇಕು. ಹಾಗೆಯೇ ನಾಲ್ಕು ಪೀಠಗಳಿಗೆ ಬೇಕಾದ ನಾಲ್ಕು ಮಠಗಳನ್ನು ಆರ್ಯರು ಸುಮಾರು ಮೂರು ವರ್ಷಗಳ ಕಾಲವಾದರೂ ಶ್ರಮಪಟ್ಟು ತಯಾರು ಮಾಡಿಸಿರಬೇಕು. ಪ್ರತಿ ಮಠದಲ್ಲಿಯೂ ಒಬ್ಬ ದೇವತೆಯನ್ನು ಪ್ರತಿಷ್ಠಿಸಿದ್ದಾರೆ. ಪೀಠಕ್ಕೆ ಮಠಗಳೆ ಇರಬೇಕು ಆದರೇ, ದೇವತಾಲಯಗಳು ಇರಬಾರದು. ಶರೀರದಲ್ಲಿನ ತತ್ತ್ವವನ್ನು ತಿಳಿಸುವುದು ಪೀಠವಾದಾಗ ಆ ಪೀಠವು ಮಠದಲ್ಲಿಯೇ ಇರಬೇಕು. ಆತ್ಮಗಳು ಶರೀರದಲ್ಲಿಯೇ ಇರುತ್ತವೆ. ಆದಿ ಶಂಕರಾಚಾರ್ಯರ ಸಿದ್ಧಾಂತ **"ಅದ್ವೈತ ಸಿದ್ಧಾಂತ"**. ಅದ್ವೈತ ಆತ್ಮಕ್ಕೆ ಸಂಬಂಧಿಸಿರುವುದೇ ಹೊರತು ಬೇರೆಯಲ್ಲ. ಎರಡು ಆತ್ಮಗಳಿಲ್ಲ, ಇರುವುದು ಒಂದೇ ಆತ್ಮ ಎನ್ನುವುದೇ ಶಂಕರಾಚಾರ್ಯರ ಸಿದ್ದಾಂತ. ಸಿದ್ಧಾಂತ ಎಂದರೇ ಕಂಡುಹಿಡಿದಿರುವುದೆಂದು ಮೊದಲೇ ತಿಳಿದುಕೊಂಡಿದ್ದೇವೆ. ಶಂಕರನು ತನ್ನ ಸಿದ್ಧಾಂತದಲ್ಲಿ 'ದ್ವೈತ ಇಲ್ಲ' ಎಂದು ಹೇಳಿದ್ದಾನೆ. ದ್ವೈತ ಎಂದರೇ ಎರಡು ಎಂದು ಅರ್ಥ. ಏಕ ಎಂದರೆ ಒಂದು ಎಂದು ಅರ್ಥ. ಏಕಕ್ಕೆ ಮುಂದೆ "ಅ" ಎನ್ನುವ ಅಕ್ಷರವನ್ನಿಟ್ಟರೆ 'ಅನೇಕ' ಎಂದು ಹೇಳಬಹುದು. ಅನೇಕ ಎಂದರೇ ಒಂದು ಅಲ್ಲದಿರುವುದೆಂದು ಒಂದಕ್ಕಿಂತ ಹೆಚ್ಚಾಗಿರುವುದೆಂದು ಅರ್ಥ. ಹೆಚ್ಚು ಸಂಖ್ಯೆಯಿರುವಾಗ ಅನೇಕ ಎಂಬಮಾತನ್ನು ಎಲ್ಲರೂ ಕೇಳಿರುತ್ತಾರೆ. ಅದೇ ವಿಧವಾಗಿ ದ್ವೈತ ಎಂದಾಗ ಎರಡು ಆದರೆ ಅದಕ್ಕೆ 'ಅ' ಅನ್ನು ಸೇರಿಸಿ ಅದ್ವೈತ ಎಂದರೆ ಎರಡು ಅಲ್ಲದಿರುವುದು ಒಂದೇ ಎಂದು ಹೇಳಬಹುದು. ಪ್ರಪಂಚದಲ್ಲಿ ದೇವರು ಒಬ್ಬನೇ ಹೊರತು ಇತರ ಏನು ಇಲ್ಲವೆಂದು, ಎಲ್ಲಾ ಪರಬ್ರಹ್ಮ ಸ್ವರೂಪವಾಗಿದೆಯೆಂದು ಹೇಳುವುದೆ ಅದ್ವೈತ. ಪ್ರತಿಯೊಂದನ್ನು ದೈವವಾಗಿಯೇ ನೋಡಬೇಕೆಂದು, ಪ್ರತಿ ವಸ್ತುವಿನಲ್ಲಿ, ಪ್ರತಿ ಪ್ರಾಣಿಯಲ್ಲಿ ಏಕೈಕ ಪರಬ್ರಹ್ಮ ಸ್ವರೂಪವೇ ತುಂಬಿದೆಯೆಂಬ ಸೂತ್ರವೇ ಅಥವಾ ಸಿದ್ಧಾಂತವೇ ಶಂಕರಾ ಚಾರ್ಯರ ಅದ್ವೈತ ಸಿದ್ಧಾಂತ.

ಶಂಕರಾಚಾರ್ಯನು ಬರುವುದಕ್ಕಿಂತ ಪೂರ್ವದಲ್ಲಿ ಭಾರತದೇಶ ದಲ್ಲಿರುವ ಭಗವದ್ಗೀತಾ ಜ್ಞಾನವನ್ನು ಇಲ್ಲದಂತೆ ಮಾಡುವುದಕ್ಕೆ ಕಂಕಣ ಕಟ್ಟಿಕೊಂಡ ಆರ್ಯರು ಗೌತಮ ಬುದ್ಧನನ್ನು ನೆಪವಾಗಿ ತೋರಿಸಿ ಹಿಂದೂವೇ ಯಾದ ಬುದ್ಧನನ್ನು ಹಿಂದೂ ಅಲ್ಲವೆಂದು, ಕಾಷಾಯ ವಸ್ತ್ರಗಳು ಧರಿಸಿ ತಲೆಗಳು ಬೋಡು ಮಾಡಿಸಿಕೊಂಡು ಸನ್ಯಾಸಿಸಿದವರನ್ನು ಸಹ ಹಿಂದೂಗಳಲ್ಲ ವೆಂದು ಬುದ್ಧನನ್ನು ಪರ ಮತವನ್ನು ಸೃಷ್ಠಿಸಿದವನಾಗಿ ಪ್ರಜೆಗಳಿಗೆ ತೋರಿಸಿ ಬುದ್ಧನು ಹೇಳಿದ ಜ್ಞಾನವನ್ನು ಹಿಂದೂಮತ ಜ್ಞಾನವೇ ಅಲ್ಲವೆಂದು, ಆತನು ಹೇಳಿರುವುದನ್ನು ಬೌದ್ಧಮತವಾಗಿ ಪ್ರಕಟಿಸಿದ್ದಾರೆ. ಬುದ್ಧನ ಬೋಧನೆಗಳಿಗೆ ಆಕರ್ಷಿತರಾದ ಅಶೋಕ ಚಕ್ರವರ್ತಿಯೊಂದಿಗೆ ಸಹ ಉಳಿದೆಲ್ಲರನ್ನು ಹಿಂದೂಗಳಲ್ಲವೆಂದು, ಹಿಂದೂಮತವನ್ನು ಉದ್ಧರಿಸುವುದಕ್ಕೆ ಆದಿಶಂಕರನು ಬಂದಿದ್ದಾನೆಂದು ಪ್ರಚಾರ ಮಾಡಿದ್ದಾರೆ. ವೃಕ್ಷದಿಂದ ಹುಟ್ಟಿದ ಕಟ್ಟಿಗೆಯನ್ನು ತೆಗೆದುಕೊಂಡು, ಅದೇ ಕಟ್ಟಿಗೆಗೆ ಗೊಡ್ಡಲಿಯನ್ನು ತಗುಲಿಸಿ, ಅದೇ ವೃಕ್ಷವನ್ನು ಕಡಿದಂತೆ, ಹಿಂದೂಗಳಲ್ಲಿ ದ್ರಾವಿಡನಾಗಿ ಹುಟ್ಟಿದ ಶಂಕರಾಚಾರ್ಯರನ್ನು 'ಕಟ್ಟಿಗೆಯಾಗಿ' ತಯಾರುಮಾಡಿ ತಮ್ಮ 'ಮೋಸ ಕುತಂತ್ರಗಳೆಂಬ' ಗೊಡ್ಡಲಿಯನ್ನು ತಗುಲಿಸಿ ದ್ರಾವಿಡ ವೃಕ್ಷವನ್ನೇ ಕಡಿಯಲು ಆರ್ಯರು ಪ್ರಯತ್ನ ಮಾಡಿದ್ದಾರೆಂದು ಶಂಕರನು ಸಹ ಮೊದಲು ಗ್ರಹಿಸಲಿಲ್ಲ. ದ್ರಾವಿಡರ ಬೆರಳು ತೆಗೆದು ದ್ರಾವಿಡರ ಕಣ್ಣನ್ನೇ ಇರಿದಂತೆ ಸ್ವಚ್ಛವಾದ ಆಧ್ಯಾತ್ಮಿಕ ಜ್ಞಾನವಿರುವ ದ್ರಾವಿಡರನ್ನು ಇಲ್ಲದಂತೆ ಮಾಡುವುದಕ್ಕೆ ಮಾಡಿದ ಕುತಂತ್ರವೇ ಶಂಕರಾಚಾರ್ಯರನ್ನು ಅದ್ವೈತ ಸಿದ್ಧಾಂತ ಕರ್ತನಾಗಿ ಪ್ರಚಾರ ಮಾಡಿದ್ದಾರೆ.

ಹಿಂದೂಮತದವರು ಹೊರತು ಸನ್ಯಾಸತ್ವವನ್ನು ತೆಗೆದುಕೊಳ್ಳುವವರು ಇಲ್ಲ, ಕಾಷಾಯವನ್ನು ಧರಿಸುವವರು ಇಲ್ಲ. ಹಿಂದೂತ್ವಕ್ಕೆ ಕಾಷಾಯ ಗುರುತಾಗಿದೆ. ಆದರೂ ಕಾಷಾಯವನ್ನು ಧರಿಸಿದ ಬೌದ್ಧರನ್ನು ಪ್ರತ್ಯೇಕ ಮತವಾಗಿ ವರ್ಣಿಸಿ ಹೇಳುವುದು ಹಿಂದೂಮತವನ್ನು ಸೀಳಿಸಿದಂತೆ ಅಲ್ಲವೆ! ಹಿಂದೂಗಳೇ ಆದ ಬುದ್ಧರನ್ನು ಬೇರೆಮಾಡುವುದರಿಂದ ಸುಮಾರು 60 ಕೋಟಿ ಜನಸಂಖ್ಯೆಯಿದ್ದು

ಜನಸಂಖ್ಯೆಯಲ್ಲಿ ನಾಲ್ಕನೆ ಸ್ಥಾನವಾದ ಬುದ್ಧರನ್ನು ಬಿಡುವುದರಿಂದ ಇಂದೂಮತ ಕ್ಷೀಣಿಸಿದಂತೆ ಅಲ್ಲವೆ! ಈದಿನ ಹಿಂದೂಮತ ಜನಸಂಖ್ಯೆ 120 ಕೋಟಿಗಳವರೆಗು ಇದೆ. ಮತ ಜನಸಂಖ್ಯೆಯಲ್ಲಿ ಮೂರನೆ ಸ್ಥಾನದಲ್ಲಿ ಹಿಂದೂಗಳಿರುವಾಗ, ಎರಡನೆ ಸ್ಥಾನದಲ್ಲಿ ಮುಸ್ಲಿಮ್‌ರು 170 ಕೋಟಿಗಳವರೆಗು ಇದ್ದಾರೆ. ಜನಸಂಖ್ಯೆಯಲ್ಲಿ ಮೂರನೆ ಸ್ಥಾನದಲ್ಲಿರುವ ಹಿಂದೂಗಳು, ನಾಲ್ಕನೆ ಸ್ಥಾನದಲ್ಲಿರುವ ಬುದ್ಧರನ್ನು ಸೇರಿಸಿದರೆ 180 ಕೋಟಿ ಜನಸಂಖ್ಯೆ ಆಗುತ್ತದೆ. ಈದಿನ ಎರಡಾಗಿ ಸೀಳಿಹೋದ ಹಿಂದೂ, ಬೌದ್ಧರು ಬೆರೆತಿದ್ದರೆ ಈದಿನ ಹಿಂದೂಮತ ಎರಡನೆ ಸ್ಥಾನದಲ್ಲಿ ಇರುತ್ತಿತ್ತು. 50 ಅಥವಾ 60 ಲಕ್ಷ ಜನರು ಹಿಂದೂಗಳು ಕ್ರೈಸ್ತರಾಗಿ ಬದಲಾದರೆ ಹಿಂದೂಮತ ಕ್ಷೀಣಿಸಿಹೋಗುತ್ತದೆಂದು ಘೋಷಣೆ ಮಾಡುವ ಹಿಂದೂ ರಕ್ಷಕರು ಆರ್ಯರು ಮಾಡಿದ ಕೆಲಸವನ್ನು ನೋಡಿನೋಡದಂತೆ ಏಕೆ ಮಾತನಾಡದಂತಿದ್ದಾರೊ! ಶಂಕರಾಚಾರ್ಯರು ಬುದ್ಧರಿಂದ ಹಿಂದೂ ಮತವನ್ನು ಕಾಪಾಡಿದ್ದಾನೆಂದು ಹೇಳಿಕೊಳ್ಳುವುದು ಎಷ್ಟರಮಟ್ಟಿಗೆ ಸಮಂಜಸವಾದ ಮಾತೊ ನೀವೇ ಆಲೋಚಿಸಿರಿ!!

ಪ್ರಜೆಗಳಿಗೆ ತಿಳಿಯದ ವಾಸ್ತವಗಳೆಷ್ಟೋ ಇವೆ. ಆರ್ಯರು ಒಂದು ಘತಕದ ಪ್ರಕಾರ ದ್ರಾವಿಡ ರಾಷ್ಟ್ರವಾದ ಮಳಯಾಲ ರಾಷ್ಟ್ರದಲ್ಲಿ ಬಡ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಶಂಕರಾಚಾರ್ಯರನ್ನು ಆಯ್ಕೆಮಾಡಿಕೊಂಡಿದ್ದಾರೆ. ಆತನಿಗೆ 14 ವರ್ಷಗಳ ವಯಸ್ಸಿರುವಾಗಲೇ ಆರ್ಯರ ಕಣ್ಣು ಶಂಕರಾಚಾರ್ಯರ ಮೇಲೆ ಬಿದ್ದಿದೆ. ಬಡ ಬ್ರಾಹ್ಮಣ ಕುಟುಂಬವಾದ್ದರಿಂದ ಅವರಿಗೆ ಧನವೊಂದರ ಆಸೆ ತೋರಿಸಿ ತಮ್ಮ ಮಾತನ್ನು ಕೇಳುವಂತೆ ಮಾಡಿಕೊಂಡಿದ್ದಾರೆ. ಶಂಕರನು 14 ವರ್ಷಗಳ ವಯಸ್ಸಿರುವಾಗಲೇ ಸನ್ಯಾಸ ಸ್ವೀಕರಿಸುವಂತೆ ಮಾಡಿದ್ದಾರೆ. ನಂತರ 15ನೇ ವರ್ಷ ಅಂದರೇ ಒಂದು ವರ್ಷದಕಾಲ ಶಂಕರನಿಗೆ ವೇದವಿದ್ಯೆಗಳು ಕಲಿಸಿದ್ದಾರೆ. ಶಂಕರನು ಚುರುಕುತನ ಇರುವವನಾದ್ದರಿಂದ ಒಂದು ವರ್ಷಕಾಲದಲ್ಲಿ ಶ್ರಮಪಟ್ಟು ಸ್ವಲ್ಪಮಟ್ಟಿಗೆ ವೇದಗಳನ್ನು ಓದಿದ್ದಾನೆ. ಆದರೂ 15 ವರ್ಷಗಳ ಹುಡುಗನು ಎಷ್ಟು ಯೋಗ್ಯನಾಗಿರುತ್ತಾನೋ ನಾವು

ಸಹ ಸ್ವಲ್ಪ ಆಲೋಚಿಸಬಹುದು. ಯಾವ ಮನುಷ್ಯನಿಗಾದರೂ ಸುಮಾರು 18 ವರ್ಷಗಳು ಪೂರ್ತಿಯಾಗಿ ತುಂಬಿದಾಗ ಆತನಲ್ಲಿ ವ್ಯಕ್ತಿತ್ವ ಛಾಯೆಗಳು ಹೊರಬೀಳುವುದಕ್ಕೆ ಮೊದಲುಮಾಡುತ್ತವೆ. ಆಂದಿನಿಂದ ಆತನು ಜೀವನದಲ್ಲಿ ಹೆಜ್ಜೆಇಟ್ಟು ನಡೆಯುವುದು ಪ್ರಾರಂಭಿಸುವನು. ಆದರೆ ಆರ್ಯರ ಆತುರದಿಂದ ಶಂಕರನನ್ನು ಅತಿ ಚಿಕ್ಕವಯಸ್ಸಿನಲ್ಲಿಯೇ 15 ವರ್ಷಗಳಿಗೆ ಅದ್ವೈತ ಸಿದ್ಧಾಂತ ಕರ್ತನಾಗಿ ಪ್ರಕಟಿಸಿದ್ದಾರೆ. ಆರ್ಯರು ಆ ಕೆಲಸವನ್ನು ಮಾಡಿದಾಗ ಶಂಕರನಿಗೆ ಅದ್ವೈತವೆಂದರೆ ಸಹ ಏನೊ ತಿಳಿದಿಲ್ಲ.

ಶಂಕರಾಚಾರ್ಯನ 16ನೇ ವರ್ಷ ಅದ್ವೈತವನ್ನು ಕುರಿತು ಆತನಿಗೆ ಅವಗಾಹನೆ ಬರುವಂತೆ ಮಾಡಿದ್ದಾರೆ. 16 ವರ್ಷಗಳು ಪೂರ್ತಿ ತುಂಬದೆಯೇ ಶಂಕರನಿಂದ ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡುತ್ತಾ ದೇಶದಲ್ಲಿ ತಿರುಗುವಂತೆ ಅದ್ವೈತ ಸಿದ್ಧಾಂತ ಪ್ರಚಾರಯಾತ್ರೆಯನ್ನು ಪ್ರಾರಂಭಮಾಡಿದ್ದಾರೆ. ಬಾಲ್ಯವು ಸಹ ಪೂರ್ತಿ ತುಂಬದ ಶಂಕರನ ಕೈಯಿಂದ, ಎಳೆಯ ವಯಸ್ಸಿನಲ್ಲಿಯೇ ಶಂಕರಾಚಾರ್ಯನನ್ನು ದೇಶ ಪರ್ಯಟನೆ ಮಾಡುವಂತೆ ಮಾಡಿದ್ದಾರೆ. ಕಾಲುನಡೆಯಲ್ಲಿ ಊರೂರೂ ತಿರುಗಿಸುತ್ತಾ ಶಂಕರನನ್ನು ಗೊಂಬೆಯಂತೆ ಮಾಡಿ ತೋರಿಸುತ್ತಾ ತಮ್ಮ ಅದ್ವೈತ ಸಿದ್ಧಾಂತವನ್ನು ಆರ್ಯರು ಪ್ರಚಾರ ಮಾಡತೊಡಗಿದ್ದಾರೆ. ಶಂಕರನನ್ನು ಒಂದು ಕೈಗೊಂಬೆಯಂತೆ ತಿರುಗಿಸುತ್ತಾ, ಒಬ್ಬ ಬ್ರಾಹ್ಮಣ ಸನ್ಯಾಸಿ ಚಿಕ್ಕವಯಸ್ಸಿನಲ್ಲಿಯೇ ಅದ್ವೈತವನ್ನು ಪ್ರಚಾರ ಮಾಡುತ್ತಿದ್ದಾನೆಂದು ದೇಶವೆಲ್ಲಾ ತಿಳಿಯುವಂತೆ ಮೊದಲೆ ರೂಪಿಸಿಕೊಂಡ ನಿರ್ಣಯದ ಪ್ರಕಾರ ಭಾರತದೇಶದ ನಾಲ್ಕುಮೂಲೆಗಳಲ್ಲಿ ನಾಲ್ಕು ವೇದಗಳಿಗೆ ಗುರುತಾಗಿ ನಾಲ್ಕು ಅದ್ವೈತ ಪೀಠಗಳನ್ನು ಸ್ಥಾಪಿಸಬೇಕೆಂದುಕೊಂಡಿದ್ದಾರೆ. ಆ ಒಳಸಂಚಿನಲ್ಲಿನ ಭಾಗವಾಗಿ ಮೊದಲು ಗುಜರಾತ್ ರಾಷ್ಟ್ರದಲ್ಲಿರುವ ದ್ವಾರಕಾ ಜಾಮ್‌ನಗರಕ್ಕೆ ಶಂಕರಾಚಾರ್ಯರನ್ನು ಆರ್ಯರು ಕರೆದುಕೊಂಡು ಹೋಗುವುದು ನಡೆದಿದೆ. ಶಂಕರಾಚಾರ್ಯರಿಂದ 16 ವರ್ಷಗಳಿಗೆ ಕಾಲುನಡೆಯಲ್ಲಿ ದೇಶಪರ್ಯಟನೆ ಪ್ರಾರಂಭಿಸಿ ಸುಮಾರು ಎರಡು ವರ್ಷಗಳಿಗೆ ದ್ವಾರಕಾಜಾಮ್

ನಗರವನ್ನು ಸೇರುವುದು ನಡೆದಿದೆ. ಶಂಕರಾಚಾರ್ಯರು ಅಲ್ಲಿಗೆ ಸೇರುವಮೊದಲೇ ಆರ್ಯರು ತಮ್ಮ ನಿರ್ಣಯದ ಪ್ರಕಾರ ಒಂದು ದೊಡ್ಡ ಆಲಯವನ್ನು ತಯಾರು ಮಾಡಿ ಅದರಲ್ಲಿ ಕಾಳಿಕಾದೇವಿಯನ್ನು ಪ್ರತಿಷ್ಠಿಸಿದ್ದಾರೆ. ಶಂಕರಾಚಾರ್ಯರ ಕೈಗಳಿಂದಲೇ ಅದನ್ನು ಪ್ರಾರಂಭಿಸಬೇಕೆಂದುಕೊಂಡಿದ್ದಾರೆ. ಶಂಕರನು ಗುಜರಾತ್ ರಾಷ್ಟ್ರದಲ್ಲಿನ ದ್ವಾರಕಾ ಜಾಮ್‌ನಗರ್ ಸೇರುವಷ್ಟರಲ್ಲಿ ಆತನಿಗೆ 18 ವರ್ಷಗಳ ವಯಸ್ಸು ನಡೆಯುತ್ತಿತ್ತು. ಆ ವಯಸ್ಸಿನಲ್ಲಿ ಶಂಕರನಿಗೆ ಪೂರ್ತಿಯಾಗಿ ಕಾಳಿಕಾದೇವಿ ಚರಿತ್ರೆ ಸಹ ತಿಳಿದಿಲ್ಲ. ಆದರೂ ಶಂಕರನನ್ನು ಒಂದು ಗೊಂಬೆಯಂತೆ ತೋರಿಸುತ್ತಾ, ಆತನು ಬಹಳ ದೊಡ್ಡವನೆಂದು ಪ್ರಜೆಗಳಲ್ಲಿ ಪ್ರಚಾರ ಮಾಡಿ, ಆತನಿಂದಲೇ ದ್ವಾರಕಾ ಜಾಮ್‌ನಗರದಲ್ಲಿನ ಕಾಳಿಕಾ ಪೀಠವನ್ನು ಸ್ಥಾಪಿಸಿದ್ದಾರೆ. ಗುಡಿಯನ್ನು ಪ್ರಾರಂಭಿಸಿ ಅದಕ್ಕೆ ಶಂಕರಾಚಾರ್ಯರ ಮಠವೆಂದು ಹೆಸರಿಟ್ಟಿದ್ದಾರೆ.

ಶರೀರದಲ್ಲಿನ ಆತ್ಮವನ್ನು ಪರಿಶೋಧಿಸುವವರು ನಿವಾಸಿಸುವುದನ್ನು **"ಮಠ"** ಎನ್ನುತ್ತಾರೆ. ಅದನ್ನೇ ಮತ್ತೊಂದು ವಿಧವಾಗಿ **"ಘಟ ಶೋಧಕರು ಮಠದಲ್ಲಿ ಇರುತ್ತಾರೆ"** ಎಂದು ಕೆಲವರು ಹಿರಿಯರು ಹೇಳುವುದು ನಡೆದಿದೆ. ಇದರಿಂದ **"ಆತ್ಮ ಶೋಧಕರು ನಿವಾಸಿಸುವುದು ಮಠ"** ಎಂಬ ಹೆಸರು ಇದೆ. ಆದರೆ ಪೂರ್ತಿ ಮಠಕ್ಕೆ ವಿರುದ್ಧವಾಗಿ ಅವರು ಸ್ಥಾಪಿಸಿದ ಮಠದಲ್ಲಿ ಕಾಳಿಕಾದೇವತೆಯನ್ನು ಪ್ರತಿಷ್ಠಿಸಿ, ಅದು ಕಾಳಿಕಾ ಪೀಠ ಎಂದಿದ್ದಾರೆ. ಆಗಲೇ ಬುದ್ಧನ ಬೋಧನೆಗಳು ದೇಶವೆಲ್ಲಾ ವ್ಯಾಪಿಸಿರುವುದರಿಂದ, ಬುದ್ಧನ ಬೋಧನೆಗಳಲ್ಲಿ ವೇದಗಳ ಪ್ರಸಕ್ತಿಯೇ ಇಲ್ಲದಿರುವುದರಿಂದ, ಅಷ್ಟೇ ಅಲ್ಲದೆ ಬುದ್ಧರು ಯಾರು ಯಜ್ಞ ಯಾಗಗಳು ಮಾಡದೆ ಕೇವಲ ಧ್ಯಾನಕ್ಕೆ ಪ್ರಾಧಾನ್ಯತೆ ಕೊಡುವುದರಿಂದ, ವೇದಗಳಿಗು, ಯಜ್ಞಗಳಿಗು ಬುದ್ಧರು ವಿರುದ್ಧವಾಗಿರುವು ದರಿಂದ ಅದು ಆರ್ಯರಿಗೆ ಸಹಿಸಲಾರದ ವಿಷಯವಾಗಿದೆ. ದ್ವಾಪರಯುಗದ ಕೊನೆಯಲ್ಲಿ ಭಗವಂತನು ಹೇಳಿದ ಭಗವದ್ಗೀತೆಯಲ್ಲಿ ವೇದಗಳನ್ನು, ಯಜ್ಞಗಳನ್ನು ದೇವರ ಮಾರ್ಗದಲ್ಲಿ ಕೆಲಸಕ್ಕೆಬಾರದ ಕ್ರಿಯೆಗಳೆಂದು ಗೀತೆಯಲ್ಲಿ ಹೇಳುವುದು

ಆರ್ಯರಿಗೆ ಸ್ವಲ್ಪವೂ ಸರಿಹೋಗಲಿಲ್ಲ. ಭಗವದ್ಗೀತೆಯಲ್ಲಿ ಹೇಳಿದ ಜ್ಞಾನದ ಪ್ರಕಾರ ಬೌದ್ಧರು ನಡೆಯುವುದರಿಂದ ಬೌದ್ಧರನ್ನು ಅಡಗಿಸಿದರೆ ಅವರ ಹಿಂದಿರುವ ಭಗವದ್ಗೀತೆಯಲ್ಲಿನ ಜ್ಞಾನ ಅಡಗಿಹೋಗುತ್ತದೆಯೆಂದು ತಿಳಿದ ಆರ್ಯರು ಭಾರತದೇಶದಲ್ಲಿ ಯಜ್ಞಗಳನ್ನು ಕುರಿತು, ವೇದಗಳನ್ನು ಕುರಿತು ಹೆಚ್ಚಾಗಿ ಪ್ರಚಾರ ಮಾಡಬೇಕೆಂದುಕೊಂಡಿದ್ದಾರೆ.

ದ್ವಾಪರಯುಗದಲ್ಲಿ ಭಗವಂತನು ಧರ್ಮಪರಿರಕ್ಷಣೆಗಾಗಿ ಬಂದು ಭಗವದ್ಗೀತೆಯನ್ನು ಬೋಧಿಸಿದ್ದಾನೆ. ಭಗವದ್ಗೀತಾ ಜ್ಞಾನ ಆಗ ಕೃಷ್ಣನು ಹೇಳಿದರೂ ಅದು ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಬೋಧನೆಯೆಂದು ಭಗವದ್ಗೀತೆಯಲ್ಲಿಯೇ ತಿಳಿದುಹೋಗಿದೆ. ದ್ವಾಪರಯುಗಕ್ಕಿಂತ ಮೊದಲು ತ್ರೇತಾಯುಗದಲ್ಲಿ ರಾವಣಬ್ರಹ್ಮ ಲಂಕಾ ರಾಜ್ಯಕ್ಕೆ ರಾಜನಾಗಿದ್ದಾಗ, ಆತನು ಬ್ರಹ್ಮಜ್ಞಾನಿ ಆಗಿರುವುದರಿಂದ ಆತನು ಸಹ ಸೃಷ್ಠಿ ಆದಿಯಲ್ಲಿನ ಜ್ಞಾನದ ಪ್ರಕಾರ ವೇದಪಠನವನ್ನು, ಯಜ್ಞಗಳನ್ನು ವಿರೋಧಿಸುತ್ತಿದ್ದನು. ಆಗಾಗಲೇ ಆರ್ಯರು ಯಜ್ಞಗಳನ್ನು ಭಾರತದೇಶದಲ್ಲಿ ಆರಂಭಿಸಿ ಕೆಲವರಿಂದ ಆಚರಿಸುವಂತೆ ಮಾಡಿದಾಗ, ರಾವಣಬ್ರಹ್ಮ ಯಜ್ಞಗಳನ್ನು ಅಡಗಿಸಿದ್ದಾನೆ. ಯಜ್ಞಗಳನ್ನು ಮಾಡುವವರನ್ನು ಶಿಕ್ಷಿಸುವುದು ಸಹ ಮಾಡಿದ್ದಾನೆ. ಎಲ್ಲಿಯಾದರೂ ಮರೆಯಲ್ಲಿ ನಡೆಯುವ ಯಜ್ಞಗಳನ್ನು ತನ್ನ ಮನುಷ್ಯರಿಂದ ಧ್ವಂಸ ಮಾಡಿಸಿದ್ದಾನೆ. **"ಧರ್ಮಸ್ಥಾಪನೆ"** ಎಂಬ ಹೆಸರಿನಿಂದ ಭಗವದ್ಗೀತೆಯನ್ನು ಹೇಳಿದಾಗ ಅದೇ ವಿಷಯವನ್ನೇ ಹೇಳುತ್ತಾ ಯಜ್ಞಗಳಿಂದ, ವೇದಾಧ್ಯಯನಗಳಿಂದ ದೇವರು ತಿಳಿಯುವುದಿಲ್ಲ ಎಂದು ವಿಶ್ವರೂಪ ಸಂದರ್ಶನಯೋಗದಲ್ಲಿ 48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ಹೇಳಿರುವುದು ಆರ್ಯರಿಗೆ ಸಹಿಸಲಾರದ ವಿಷಯವಾಗಿದೆ. ಭಗವದ್ಗೀತೆಯಲ್ಲಿನ ಜ್ಞಾನವನ್ನು ನಾಶ ಮಾಡುವುದಕ್ಕೆ ವೇದಗಳನ್ನು ಯಜ್ಞಗಳನ್ನು ಪ್ರಜೆಗಳಲ್ಲಿ ಪ್ರವೇಶ ಇಡುವುದಕ್ಕೆ ಅನೇಕ ಪ್ರಯತ್ನಗಳು ಮಾಡಿ ಅವುಗಳಿಂದ ಆಶಿಸಿದ ಫಲಿತವಿಲ್ಲವೆಂದು ಗ್ರಹಿಸಿ ಕೊನೆಗೆ 'ಅದ್ವೈತ ಸಿದ್ಧಾಂತ' ಎಂಬ ಪ್ರಚಾರದಿಂದ ಒಬ್ಬ ಸ್ವಾಮೀಜಿಯಿಂದಲೇ ಯಜ್ಞಗಳನ್ನು,

ವೇದಗಳನ್ನು ಪ್ರವೇಶ ಮಾಡಬೇಕೆಂದುಕೊಂಡಿದ್ದಾರೆ. ಅದಕ್ಕಾಗಿಯೇ ಶಂಕರಾಚಾರ್ಯರನ್ನು ಅದ್ವೈತ ಸಿದ್ಧಾಂತ ಕರ್ತನಾಗಿ ಸೃಷ್ಟಿಸಿದ್ದಾರೆ. ಆರ್ಯರು ಎಲ್ಲಿಯೂ ಕಾಣಿಸದಂತೆ ದ್ರಾವಿಡನಾದ ಶಂಕರನಿಂದಲೇ ವೇದಗಳನ್ನು ಯಜ್ಞಗಳನ್ನು ಪ್ರಚಾರ ಮಾಡಿಸಿದ್ದಾರೆ. ಅದ್ವೈತವನ್ನು ಅಡ್ಡ ಇಟ್ಟುಕೊಂಡು ತಮ್ಮ ಕಾರ್ಯಕ್ರಮವನ್ನು ನಡೆಸಿಕೊಳ್ಳಬೇಕೆಂದುಕೊಂಡರು. ಹಾಗೆಯೇ ಮಾಡುತ್ತಾ ಬಂದಿದ್ದಾರೆ.

491 B.C.ಯಲ್ಲಿ ದೇಶಕ್ಕೆ ಪಶ್ಚಿಮದಕಡೆ ಇರುವ ಗುಜರಾತ್‌ನಲ್ಲಿನ ದ್ವಾರಕಾ ಜಾಮ್‌ನಗರ್‌ನಲ್ಲಿ ಕಾಳಿಕಾ ಪೀಠವನ್ನು ಸ್ಥಾಪಿಸಿ ಆ ಪೀಠ ಸಾಮವೇದಕ್ಕೆ ಗುರುತಾಗಿದೆಯೆಂದು ಹೇಳಿದ್ದಾರೆ. ಈ ವಿಧವಾಗಿ ವೇದಗಳ ವಿರೋಧತೆ ಪ್ರಜೆಗಳಲ್ಲಿ ಇಲ್ಲದಂತೆ ಹೋಗಬೇಕೆಂಬ ಉದ್ದೇಶದಿಂದಲೇ ಆ ವಿಧವಾಗಿ ದ್ವಾರಕಾದಲ್ಲಿನ ಕಾಳಿಕಾ ಪೀಠ ಸಾಮವೇದಕ್ಕೆ ಗುರುತೆಂದು ಹೇಳಿದ್ದಾರೆ. ಹಿಂದೂಮತದಲ್ಲಿ ದೊಡ್ಡ ಸಿದ್ಧಾಂತಕರ್ತ, ಸನ್ಯಾಸಿ ವೇಷಧಾರಣೆ ಅಲ್ಲಿಯವರೆಗು ಯಾರೂ ಸ್ಥಾಪಿಸದ ಅದ್ವೈತ ಪೀಠವನ್ನು ಸ್ಥಾಪಿಸಿ ಸಾಮವೇದಕ್ಕೆ ಗುರುತೆಂದು ಹೇಳುವುದರಿಂದ ಹಿಂದೂಗಳಲ್ಲಿರುವ ವೇದ ವಿರೋಧತೆ ಇಲ್ಲದಂತೆ ಹೋಗುತ್ತದೆಂದು ಆರ್ಯರು ಶಂಕರಾಚಾರ್ಯರಿಂದ ಮಾಡಿಸಿದ್ದಾರೆ. ಆಗ ಕೇವಲ 18 ವರ್ಷಗಳೇ ಇರುವ ಶಂಕರನಿಗೆ ಅದ್ವೈತವನ್ನು ಆರ್ಯರೇ ಬೋಧಿಸಿ, ಆತನಿಂದ ಹೇಳಿಸಿದ್ದಾರೆ. ಇದರಿಂದ ಬಾಲ್ಯದಲ್ಲಿಯೇ ಇರುವ ಶಂಕರನನ್ನು ಪ್ರಜೆಗಳೆಲ್ಲರಿಗೂ ಕಾಣಿಸುವ ಗೊಂಬೆಯನ್ನು ಮಾಡಿ, ಅವರ ಇಷ್ಟಬಂದಂತೆ ಆಡಿಸಿದ್ದಾರೆಂದು ತಿಳಿದಿದೆ. ಆರ್ಯರ ದುರುದ್ದೇಶದಿಂದ ಚಿಕ್ಕವಯಸ್ಸಿನಲ್ಲಿನ ಶಂಕರನು ತಾಯಿತಂದೆಯರನ್ನು ಬಿಟ್ಟುಬಂದು, ಒಬ್ಬಂಟಿಗನಾಗಿ ಆರ್ಯರಿಂದ ಎಷ್ಟೋ ಬಾಧೆಪಟ್ಟಿದ್ದಾನೆ. ಆದರೂ ಆ ವಿಷಯವನ್ನು ಪ್ರಜೆಗಳು ಯಾರೂ ಗ್ರಹಿಸಲಿಲ್ಲ. ಶಂಕರನು ಹೊರಗೆ ಹೇಳಿಕೊಳ್ಳಲೂ ಇಲ್ಲ.

ಗುಜರಾತ್‌ನಿಂದ ಹೊರಟು ಎರಡನೆ ಪೀಠವನ್ನು ಉತ್ತರದೇಶದಲ್ಲಿ ಸ್ಥಾಪಿಸಬೇಕೆಂದುಕೊಂಡಿದ್ದಾರೆ. ಅದಕ್ಕಾಗಿ ಮೊದಲೇ ಎಲ್ಲಾ ಪ್ರಯತ್ನಗಳು

ಮಾಡಿದ ಆರ್ಯರು ಆ ಕಾಲದಲ್ಲಿ ದಾರಿ ಎಲ್ಲೂಯಿಲ್ಲದ ಆತನ ಮಾರ್ಗ, ಪರ್ವತ ಮಾರ್ಗಗಳಲ್ಲಿ ಶಂಕರನನ್ನು ಉತ್ತರಾಖಂಡದಲ್ಲಿರುವ ಕೇದಾರ್‌ನಾಥ್, ಬದ್ರಿನಾಥ್‌ವರೆಗು ತೆಗೆದುಕೊಂಡು ಹೋಗಿದೆ. 2013ನೇ ಸಂವತ್ಸ ವರ್ಷಾಕಾಲದಲ್ಲಿ ಕೇದಾರ್‌ನಾಥ್, ಬದ್ರಿನಾಥ್‌ಗೆ ಹೋದ ಭಕ್ತರೆಲ್ಲರೂ ಸಾವಿರಾರೂ ಸಂಖ್ಯೆಯಲ್ಲಿ ಮರಣಿಸಿದ ವಿಷಯ ಎಲ್ಲರಿಗೂ ತಿಳಿದಿದೆ. ಎಷ್ಟೋ ದೊಡ್ಡ ಪ್ರವಾಹಗಳು ಬಂದು ಅಲ್ಲಿರುವ ಊರುಗಳೊಂದಿಗೆ ಸಹ ಕೊಚ್ಚಿಕೊಂಡು ಹೋದ ವಿಷಯ ಬಹಳಜನರಿಗೆ ತಿಳಿದಿದೆ. ಈ ಕಾಲದಲ್ಲಿ ಸಹ ಕಾಡು ಪ್ರದೇಶದಲ್ಲಿ ಕಾಲುನಡೆಯಲ್ಲಿ ಹೋಗುವುದಕ್ಕೆ ಸರಿಯಾದ ದಾರಿ ಕೂಡಾ ಇಲ್ಲ. ಆ ಕಾಲದಲ್ಲಿ ಮತ್ತಷ್ಟು ಕಷ್ಟವಾಗಿರಬಹುದು. ಆದರೂ ಅಲ್ಲಿಗೆ ಬಹಳ ಕಷ್ಟಪಟ್ಟು ಸೇರಿಕೊಳ್ಳುವುದು ನಡೆದಿದೆ. ಮೊದಲ ಪೀಠವನ್ನು ಗುಜರಾತ್‌ನಲ್ಲಿ ಸ್ಥಾಪಿಸಿದ ನಂತರ ಐದು (5) ವರ್ಷಗಳಿಗೆ ಎರಡನೆ ಪೀಠವನ್ನು ಬದ್ರಿನಾಥ್‌ನಲ್ಲಿ ಸ್ಥಾಪಿಸಿದ್ದಾರೆ. ಇದನ್ನನುಸರಿಸಿ ನೋಡಿದರೆ ಪೂರ್ತಿ ಉತ್ತರ ದೇಶವಾದ ಆ ಪ್ರದೇಶವನ್ನು ಸೇರುವುದಕ್ಕೆ ಬಹಳ ಕಷ್ಟಪಡಬೇಕಾಗಿ ಬಂದಿದೆಯೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಆ ಕಾಲದಲ್ಲಿ ಅದು ನಿರ್ಮಾನುಷ ಸ್ಥಳವಾಗಿರುವುದರಿಂದ ಅಲ್ಲಿ ಮಠವನ್ನು ನಿರ್ಮಿಸುವುದಕ್ಕೆ ಹೊರಗಿನ ಪ್ರದೇಶದಿಂದ ಮನುಷ್ಯರನ್ನು ಕರೆದುಕೊಂಡು ಹೋಗಬೇಕಾಗಿರುವುದರಿಂದ ಅಲ್ಲಿ ಮಠವನ್ನು ತಯಾರು ಮಾಡುವುದಕ್ಕೆ ಬಹಳ ನಿಧಾನವಾಗಿದೆ. ಐದು ವರ್ಷಗಳ ನಂತರ ಅಂದರೆ 486 B.C. ಕಾಲದಲ್ಲಿ ಆದಿಶಂಕರಾಚಾರ್ಯರಿಂದ ಎರಡನೆ ಪೀಠವಾದ ಜ್ಯೋತಿರ್ಲಿಂಗ ಪೀಠವನ್ನು ಅಥರ್ವಣ ವೇದಕ್ಕೆ ಗುರುತಾಗಿ ಸ್ಥಾಪಿಸುವುದು ನಡೆದಿದೆ. ಅಲ್ಲಿ ಮಠದಲ್ಲಿ ಲಿಂಗಪ್ರತಿಷ್ಠೆ ಮಾಡಿ ಶಂಕರನಿಂದ ಪ್ರಾರಂಭಿಸಿರುವುದರಿಂದ ಅದನ್ನು ಎರಡನೆ ಪೀಠವಾಗಿ ಶಂಕರನು ಸ್ಥಾಪಿಸಿದಂತಾಗಿದೆ.

ಉತ್ತರಾಖಂಡದಲ್ಲಿ ಸ್ಥಾಪಿಸಿದ ಎರಡನೆ ಜ್ಯೋತಿರ್ಲಿಂಗ ಪೀಠ ಅಥರ್ವಣ ವೇದಕ್ಕೆ ಗುರುತಾಗಿ ಹೆಸರಿಡಲಾಗಿದೆ. ಈ ವಿಧವಾಗಿ ಭಾರತ ದೇಶಕ್ಕೆ ಪಶ್ಚಿಮದಲ್ಲಿ ಸಾಮವೇದ, ಉತ್ತರದಲ್ಲಿ ಅಥರ್ವಣ ವೇದವೊಂದರ

ಗುರುತಾಗಿ ಎರಡು ಪೀಠಗಳನ್ನು ಶಂಕರರಿಂದ ಆರ್ಯರು ಸ್ಥಾಪಿಸಿದ್ದಾರೆ. ಅಲ್ಲಿಂದ ದೇಶಕ್ಕೆ ಪೂರ್ವದಲ್ಲಿರುವ ಒರಿಸ್ಸಾ ರಾಜ್ಯದಲ್ಲಿ ಪೂರಿ ಜಗನ್ನಾಥ್ ಪಟ್ಟಣದಲ್ಲಿ ಗೋವರ್ಧನ ಪೀಠವನ್ನು ಸ್ಥಾಪಿಸುವುದಕ್ಕೆ ಹೊರಟು ಶ್ರಮಪಟ್ಟು ವರ್ಷದ ಕಾಲದಲ್ಲಿಯೇ ಅಲ್ಲಿಗೆ ಸೇರಿ 485 B.C. ವರ್ಷದಲ್ಲಿ ಪೂರಿ ಜಗನಾಥ್ ಪಟ್ಟಣದಲ್ಲಿ ಗೋವರ್ಧನ ಪೀಠವನ್ನು ಸ್ಥಾಪಿಸುವುದು ನಡೆದಿದೆ. ಗೋವರ್ಧನ ಪೀಠ ಋಗ್ವೇದಕ್ಕೆ ಗುರುತಾಗಿ ಹೇಳಲಾಗಿದೆ. ಉತ್ತರಾಖಂಡದಿಂದ ಶಂಕರನು ಒರಿಸ್ಸಾದಲ್ಲಿನ ಜಗನ್ನಾಥ್‌ಪುರವನ್ನು ಸೇರಿಕೊಳ್ಳುವಮೊದಲೇ ಆರ್ಯರು ಗೋವರ್ಧನ ಪೀಠಕ್ಕೆ ತಕ್ಕ ಆಲಯವನ್ನು ನಿರ್ಮಿಸಿಟ್ಟಿದ್ದಾರೆ. ಆ ಕೆಲಸವನ್ನು ಮಾಡುವುದಕ್ಕೆ ಆರ್ಯರಿಗೆ ಕನಿಷ್ಟ ಮೂರು ವರ್ಷಗಳಾದರೂ ಹಿಡಿಸಿರಬಹುದು. ಹಾಗೆ ಶಂಕರನು ಬರುವುದಕ್ಕಿಂತ ಮೊದಲೇ ತಯಾರಾದ ಗೋವರ್ಧನ ಪೀಠ ಋಗ್ವೇದಕ್ಕೆ ಪ್ರತೀಕವಾಗಿ ನಿಂತಿದೆ. ಭಾರತದೇಶಕ್ಕೆ ಪೂರ್ವದಕಡೆ ಗೋವರ್ಧನ ಪೀಠ ತಯಾರಾಗಿ, ಅಲ್ಲಿಂದ ಕಾಲುನಡೆ (ಪಾದಯಾತ್ರೆ) ಯಲ್ಲಿ ಕರ್ನಾಟಕ ರಾಜ್ಯದಲ್ಲಿನ ಶೃಂಗೇರಿ ಪಟ್ಟಣಕ್ಕೆ ಸೇರಿಕೊಳ್ಳುವುದಕ್ಕೆ ಒಂದು ವರ್ಷಕಾಲ ಹಿಡಿಸಿದೆ. ಅಲ್ಲಿಯೂ ಸಹ ಶಂಕರಾಚಾರ್ಯರು ಬರುವಮೊದಲೇ ತಯಾರು ಮಾಡಲಾದ ಶಾರದಾ ಪೀಠಕ್ಕೆ ಸಂಬಂಧಿಸಿದ ಕಟ್ಟಡಗಳನ್ನು ಆರ್ಯರು ಮೊದಲೇ ತಯಾರು ಮಾಡಿಟ್ಟಿದ್ದಾರೆ. ಸರಸ್ವತಿ ದೇವಿಯನ್ನು ಪ್ರತಿಷ್ಟಿಸಿ ಅದನ್ನು ಶಾರದಾ ಪೀಠವಾಗಿ ಹೆಸರು ಇಟ್ಟಿದ್ದಾರೆ.

ಭಾರತದೇಶಕ್ಕೆ ಪೂರ್ತಿ ದಕ್ಷಿಣದಲ್ಲಿರುವ ಶೃಂಗೇರಿ ಪಟ್ಟಣಕ್ಕೆ ಶಂಕರಾಚಾರ್ಯರು ಸೇರಿಕೊಂಡು ಅಲ್ಲಿ ನಾಲ್ಕನೆ ಪೀಠವಾದ ಶಾರದಾ ಪೀಠವನ್ನು ಸ್ಥಾಪಿಸಿದ್ದಾರೆ. ಶಾರದಾಪೀಠ ಯಜುರ್ವೇದಕ್ಕೆ ಗುರುತಾಗಿ ಹೇಳಲಾಗಿದೆ. ಈ ವಿಧವಾಗಿ ನಾಲ್ಕು ಪೀಠಗಳನ್ನು ನಾಲ್ಕು ದಿಕ್ಕುಗಳಲ್ಲಿ, ನಾಲ್ಕು ಹೆಸರುಗಳಿಂದ, ನಾಲ್ಕು ವೇದಗಳಿಗೆ ಗುರುತಾಗಿ ಸ್ಥಾಪಿಸಲಾಗಿದೆ. ನಾಲ್ಕನೆ ಪೀಠವಾದ ಶಾರದಾ ಪೀಠವನ್ನು 484 B.C. ನಲ್ಲಿ ಸ್ಥಾಪಿಸಿದ್ದಾರೆ.

**1) ಪಶ್ಚಿಮ ದಿಕ್ಕಿನಲ್ಲಿ 'ಸಾಮವೇದ' ಗುರುತಾಗಿ ಕಾಳಿಕಾ ಪೀಠವನ್ನು**

**ಗುಜರಾತ್‌ನಲ್ಲಿನ ದ್ವಾರಕಾ ಜಾಮ್‌ನಗರದಲ್ಲಿ, 491 B.C. ಶಂಕರನಿಗೆ 18 ವರ್ಷಗಳ ವಯಸ್ಸಿನಲ್ಲಿ ಮಖಶುಕ್ಲ ಸಪ್ತಮಿ ದಿನದಂದು ಸ್ಥಾಪಿಸಿದ್ದಾರೆ.**

**2) ದೇಶಕ್ಕೆ ಉತ್ತರದಲ್ಲಿ 'ಅಥರ್ವಣ' ವೇದಕ್ಕೆ ಗುರುತಾಗಿ, ಉತ್ತರಾಖಂಡ್ ರಾಷ್ಟ್ರದಲ್ಲಿ ಬದ್ರಿನಾಥ್‌ನಲ್ಲಿ ಜ್ಯೋತಿರ್ಲಿಂಗ ಪೀಠವನ್ನು 486 B.C. ಪುಷ್ಯಶುದ್ಧ ಹುಣ್ಣಿಮೆ ದಿನ ಶಂಕರನ 23 ವರ್ಷಗಳ ವಯಸ್ಸಿನಲ್ಲಿ ಸ್ಥಾಪಿಸಿದ್ದಾರೆ.**

**3) ದೇಶಕ್ಕೆ ಪೂರ್ವದಿಕ್ಕಿನಲ್ಲಿ 'ಋಗ್ವೇದ'ಕ್ಕೆ ಗುರುತಾಗಿ. ಒರಿಸ್ಸಾ ರಾಷ್ಟ್ರದಲ್ಲಿನ ಪೂರಿ ಜಗನ್ನಾಥ್ ಪುರದಲ್ಲಿ 485 B.C. ನಲ್ಲಿ ವೈಶಾಖ ಶುದ್ಧ ನವಮಿ ದಿನದಂದು ಶಂಕರನಿಗೆ 24 ವರ್ಷಗಳ ವಯಸ್ಸಿನಲ್ಲಿ ಗೋವರ್ಧನ ಪೀಠವನ್ನು ಸ್ಥಾಪಿಸಿದ್ದಾರೆ.**

**4) ದೇಶಕ್ಕೆ ದಕ್ಷಿಣದಲ್ಲಿ 'ಯಜುರ್ವೇದ'ಕ್ಕೆ ಗುರುತಾಗಿ ಕರ್ನಾಟಕ ರಾಷ್ಟ್ರದಲ್ಲಿನ ಶೃಂಗೇರಿ ಪಟ್ಟಣದಲ್ಲಿ ಶಾರದಾ ಪೀಠವನ್ನು 484 B.C. ನಲ್ಲಿ ಪುಷ್ಯ ಹುಣ್ಣಿಮೆ ದಿನ ಶಂಕರನಿಗೆ 25 ವರ್ಷಗಳ ವಯಸ್ಸಿನಲ್ಲಿ ಸ್ಥಾಪಿಸಿದ್ದಾರೆ.**

ಈ ವಿಧವಾಗಿ 25 ವರ್ಷಗಳ ವಯಸ್ಸಿನಲ್ಲಿಯೇ ಶಂಕರನು ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪೀಠಗಳನ್ನು ಸ್ಥಾಪಿಸಿದ್ದಾನೆಂದು ಹೇಳಬಹುದು, ಅಥವಾ ಸ್ಥಾಪಿಸಲ್ಪಟ್ಟಿದ್ದಾನೆಂದು ಸಹ ಹೇಳಬಹುದು. ಆರ್ಯರ ಕೈಯಲ್ಲಿ ಕೈಗೊಂಬೆಯಂತೆ ಶಂಕರನು ನಡೆಯಬೇಕಾಗಿ ಬಂದಿದೆ. 16 ವರ್ಷಗಳ ವಯಸ್ಸಿನಿಂದ ನಿರಂತರವಾಗಿ ಒಂಭತ್ತು (9) ವರ್ಷಗಳು ಅಂದರೇ 25 ವರ್ಷಗಳ ವಯಸ್ಸಿನವರೆಗು ಕಾಲುನಡೆಯಲ್ಲಿ ನಾಲ್ಕು ದಿಕ್ಕುಗಳಲ್ಲಿ ಭಾರತದೇಶದಲ್ಲಿ ತಿರುಗಬೇಕಾಗಿ ಬಂದಿದೆ. ಹೆಸರಿಗೆ ಶಂಕರಾಚಾರ್ಯನ ಪರ್ಯಟನೆ ಎಂದು ಹೇಳಿದರೂ ಆತನ ಹಿಂದೆ ಆರ್ಯರು ಸುಮಾರು ನೂರರಿಂದ ನೂರೈವತ್ತರ ವರೆಗು ಇರುತ್ತಿದ್ದರು. ಶಂಕರಾಚಾರ್ಯನು ಪಂಡಿತರೊಂದಿಗೆ ವಾದೋಪ ವಾದಗಳು ಮಾಡುತ್ತಾ ಅವರನ್ನು ಸೋಲಿಸಿ ಮುಂದಕ್ಕೆ ಹೋಗುತ್ತಿದ್ದನೆಂದು ಪ್ರಚಾರ ಮಾಡಿದ್ದಾರೆ. ಹಾಗೆ ಮಾಡಿದ್ದರೆ ಭಾರತ ದೇಶದ ನಾಲ್ಕು ದಿಕ್ಕುಗಳಲ್ಲಿ ತಿರುಗುವುದಕ್ಕೆ ಒಂಭತ್ತು ವರ್ಷಗಳು ಅಲ್ಲ ತೊಂಭತ್ತು (90) ವರ್ಷಗಳು

ಬೇಕಾಗುತ್ತಿತ್ತು. ಆಗ ಊರೂರಿಗೆ ಅಷ್ಟೋ ಇಷ್ಟೋ ಭಗವದ್ಗೀತೆ ಜ್ಞಾನ ತಿಳಿದವರಿರುತ್ತಿದ್ದರು. ಹಾಗೆ ಪ್ರತಿ ಊರಿನಲ್ಲಿಯೂ ವಾದೋಪವಾದಗಳು ಮಾಡುವುದಕ್ಕೆ ಬಹಳಕಾಲ ಬೇಕಾಗುತ್ತದೆ. ಒಬ್ಬರೊಂದಿಗೆ ವಾದೋಪವಾದಗಳು ಮಾಡುವುದಕ್ಕೆ ಒಂದು ದಿನದಲ್ಲಿ ಸರಿಹೋಗುವುದಿಲ್ಲ. ಕನಿಷ್ಠ ಒಬ್ಬರೊಂದಿಗೆ ಪರಿಚಯ, ಅವರ ವಾದನೆಗೆ ಸಿದ್ಧರಾಗುವುದು, ವಾದನೆಯಲ್ಲಿನ ನಿಬಂಧನೆಗಳು ಹೇಳಿಕೊಳ್ಳುವುದು ಇವೆಲ್ಲವೂ ಒಂದುದಿನವಾದರೆ, ವಾದೋಪವಾದಗಳಿಗೆ ಎರಡರಿಂದ ಐದು ದಿನಗಳವರೆಗು ಹಿಡಿಸುತ್ತದೆ. ನಂತರ ಅವರು ಊರು ಬಿಟ್ಟುಹೋಗುವುದಕ್ಕೆ, ಎರಡನೆ ಊರಿನಲ್ಲಿ ಇರುವುದಕ್ಕೆ ಬೇಕಾದ ಸ್ಥಳ ನೋಡಿಕೊಳ್ಳುವುದಕ್ಕೆ ಕನಿಷ್ಟ ಒಂದುದಿನವಾದರೂ ಬೇಕಾಗುತ್ತದೆ. ಮಾರ್ಗ ಮಧ್ಯದಲ್ಲಿ ಊರಿಗು ಊರಿಗು ಮಧ್ಯಕಾಲ ಒಂದು ದಿನವಾದರೂ ಬೇಕಾಗುತ್ತದೆ. ಈ ವಿಧವಾಗಿ ಲೆಕ್ಕಿಸಿ ನೋಡಿದರೆ ಅವರು ವಾದೋಪವಾದಗಳು ಹೆಚ್ಚಾಗಿ ಮಾಡಲಿಲ್ಲವೆಂದು ಪೀಠಕ್ಕು ಪೀಠಕ್ಕು ಮಧ್ಯೆ ಒಂದು ಎರಡು ವಾದನೆಗಳು ಹೊರತು ಹೆಚ್ಚಾಗಿ ಇರುವುದಿಲ್ಲವೆಂದು ಅಂದುಕೊಳ್ಳುತ್ತಿದ್ದೇವೆ. ನಡೆದ ಪ್ರತಿವಾದನೆಯಲ್ಲಿಯೂ ಶಂಕರನೇ ಗೆದ್ದಿದ್ದಾನೆಂದು ಹೇಳಲಾರೆವು. ಈ ವಿಧವಾಗಿ ಇರುವವು ಇಲ್ಲದವು ಆರ್ಯರು ಶಂಕರನನ್ನು ಅಡ್ಡ ಇಟ್ಟುಕೊಂಡು ಹೇಳುತ್ತಾ ಹೋಗಿದ್ದಾರೆ.

ಒಂದುಕಡೆ ಒಬ್ಬ ಹರಿಜನನಿಗು ಶಂಕರನಿಗು ವಾದ ನಡೆದರೆ ಅದರಲ್ಲಿ ಶಂಕರನು ಸೋತುಹೋದಂತೆ ಒಪ್ಪಿಕೊಂಡಿದ್ದಾನೆ. ಶಂಕರನು ಸೋತುಹೋದ ವಿಷಯ ಎಲ್ಲರಿಗೂ ತಿಳಿದುಹೋದರೂ ನಡೆದ ಚರ್ಚೆ "ಶರೀರ, ಶರೀರದಲ್ಲಿ ನಿವಾಸಿಸುವ ಜೀವಾತ್ಮ"ವನ್ನು ಕುರಿತು, ಅದ್ವೈತವೆಂಬ ಹೆಸರಿಟ್ಟುಕೊಂಡ ಜೀವಾತ್ಮ ವಿಷಯ ಶಂಕರನಿಗೆ ಪೂರ್ತಿ ತಿಳಿದಿಲ್ಲ. ಆರ್ಯರಿಗೂ ಸಹ ಅವರ ಅದ್ವೈತದ ಬಗ್ಗೆ ಅವರು ಹೇಳುತ್ತಾರೆ ಆದರೇ, ಜೀವಿಯ ವಿಷಯ ಅವರಿಗೂ ಸಹ ತಿಳಿದಿಲ್ಲ. ಒಂದು ದಾರಿಯಲ್ಲಿ ಹೋಗುತ್ತಾ ಅಂಟಬಾರದವನೆಂದು ಹರಿಜನನನ್ನು ಅಂದಾಗ ಅಲ್ಲಿ ಇಬ್ಬರಿಗು ಮಧ್ಯ ಅಂಟಬಾರದ್ದು **'ಶರೀರವಾ ಅಥವಾ ಜೀವಾತ್ಮವಾ'** ಎಂದು ಚರ್ಚೆ ಬಂದಾಗ ಶಂಕರನಿಗೆ ಜೀವಾತ್ಮ ವಿಷಯವೇ

ತಿಳಿಯದೆ ಇರುವುದರಿಂದ ಅಲ್ಲಿ ಆ ಚರ್ಚೆಯಲ್ಲಿ ಹರಿಜನನ ಕೈಯಲ್ಲಿ ಸೋತುಹೋಗಬೇಕಾಗಿ ಬಂದಿದೆ. ಆದರೆ ಆ ಸೋಲನ್ನು ಒಪ್ಪಿಕೊಂಡರೂ ಹರಿಜನನು ಮನುಷ್ಯನಲ್ಲವೆಂದು ಸಾಕ್ಷ್ಯಾತ್ತು ಪರಮೇಶ್ವರನೇ ಹರಿಜನನ ರೂಪದಲ್ಲಿ ಬಂದಿದ್ದಾನೆಂದು, ಈಶ್ವರನ ಕೈಯಲ್ಲಿ ಸೋತುಹೋಗಿದ್ದೇವೆ ಆದರೆ ಮನುಷ್ಯನ ಕೈಯಲ್ಲಿ ಸೋತುಹೋಗಲಿಲ್ಲವೆಂದು ಸಾರಿಕೊಂಡಿದ್ದಾರೆ. ಅಷ್ಟೇ ಅಲ್ಲದೆ ಎಲ್ಲಿಯಾದರೂ ಸೋತಿರುವ ವಿಷಯಗಳನ್ನು ಹೊರಗೆ ಹೇಳಿಕೊಳ್ಳಲಿಲ್ಲ. ಅವರ ದೇಶ ಪರಿರ್ಯಟನೆಯೆಲ್ಲವೂ ಹತ್ತು ಅಥವಾ ಹದಿನೈದು ವಾದನೆಗಳು ಹೊರತು ಹೆಚ್ಚಾಗಿ ನಡೆದಿರುವುದಿಲ್ಲವೆಂದು ನಾವು ಅಂದುಕೊಳ್ಳುತ್ತಿದ್ದೇವೆ. ನಾವು ಹೇಳುವುದೆಲ್ಲಾ ಹೊಸದಾಗಿ ಕಾಣಿಸಿದರೂ ನಾವು ಹೇಳುವ ಮಾತುಗಳಲ್ಲಿ ಸತ್ಯವೇ ಇದೆಯೆಂದು ನಾವು ಹೇಳುತ್ತಿದ್ದೇವೆ. ಅಷ್ಟೇಕೆ ನೀವೇ ಸ್ವತಃವಾಗಿ ಆಲೋಚಿಸಿರಿ. ನಿಮಗೆ ಕೆಲವು ವಿಷಯಗಳಲ್ಲಿ ನಾವು ಹೇಳುವುದೇ ಸತ್ಯವೆಂದು ತಿಳಿಯಬಲ್ಲದು. ಆದರೂ ಆರ್ಯರು ತಿಳುವಳಿಕೆಯುಳ್ಳವರು ಆದ್ದರಿಂದ ಶಂಕರನನ್ನು ಕೈಗೊಂಬೆಯಂತೆ ಆಡಿಸುವುದಲ್ಲದೆ, ಅವರು ಹೇಳುವ ಮಾತುಗಳನ್ನು ಎಲ್ಲರೂ ನಂಬುವಂತೆ ಮಾಡಿದ್ದಾರೆ.

**ಪ್ರಶ್ನೆ :– ಆರ್ಯರೇ ಅಲ್ಲ ಶಂಕರನು ಸಹ ಧೀಶಾಲಿಯೇ (ಬುದ್ಧಿಯುಳ್ಳವನು), ಮೇಧಾವಿಯೇ ಎಂದು ನೀವೇ ಹೇಳಿದ್ದೀರಿ. ಹಾಗಿರುವಾಗ ಶಂಕರನು ಅವರ ಕುತಂತ್ರವನ್ನು ಗ್ರಹಿಸಲಾರದೆ ಹೋಗಿದ್ದಾನಾ? ತನಗೆ ಒಳ್ಳೆಯದು ಮಾಡುತ್ತಿದ್ದಾರಾ, ಕೆಟ್ಟದು ಮಾಡುತ್ತಿದ್ದಾರಾ ಎಂದು ತಿಳಿಯಲಾರದೆ ಹೋಗಿದ್ದಾನಾ?**

**ಉತ್ತರ :–** ಅನುಕೂಲ ಶತ್ರುಗಳನ್ನು ಅಷ್ಟು ಬೇಗನೆ ಯಾರೂ ಗ್ರಹಿಸಲಾರರು. ಎಷ್ಟು ದೊಡ್ಡ ಮೇಧಾವಿಯಾದರೂ ತಕ್ಷಣ ಗುರುತಿಸಲಾರನು ಆದರೆ, ಮೊದಲು ಸ್ವಲ್ಪ ಅನುಮಾನ ಬರುತ್ತದೆ. ನಂತರ ಆ ಅನುಮಾನಕ್ಕೆ ತಕ್ಕಂತೆ ಸಾಕ್ಷಿ ಆಧಾರಗಳು ದೊರೆತಂತೆಲ್ಲ ಅನುಮಾನ ಬಲವಾಗಿ ಕೊನೆಗೆ ಸತ್ಯ ತಿಳಿದುಹೋಗುತ್ತದೆ. ಹಾಗೆಯೇ ಶಂಕರಾಚಾರ್ಯರಿಗು ಸಹ ಆರ್ಯರಮೇಲೆ ಮೊದಲು ಅನುಮಾನ ಮೊದಲಾಗಿ ಕಾಲ ಕಳೆದಂತೆಲ್ಲ ಅನುಮಾನಕ್ಕೆ ಸರಿಯಾದ ಉತ್ತರ ಸಿಕ್ಕಿದೆ.

ಆಗ ಆರ್ಯರು ಜಾಣ್ಮೆಯಿಂದ ಮಾಡುವ ಮೋಸಪೂರಿತ ಕಾರ್ಯ ಶಂಕರಾಚಾರ್ಯರು ಗ್ರಹಿಸಿದ್ದಾರೆ.

**ಪ್ರಶ್ನೆ :– ಶಂಕರನಿಗೆ ಮೊದಲು ಆರ್ಯರ ಮೇಲೆ ಹೇಗೆ ಅನುಮಾನ ಬಂದಿದೆ? ನಂತರ ಅವರ ಮೋಸವನ್ನು ಹೇಗೆ ಗುರುತಿಸಿದ್ದಾನೆ?**

**ಉತ್ತರ :–** ನನಗೆ ತಿಳಿದಿರುವುದು ನಾನು ಹೇಳುತ್ತೇನೆ ಆದರೆ, ಈಗ ಹೇಳುವಂತಹ ವಿಷಯ ಚರಿತ್ರೆಯಲ್ಲಿ ಯಾರಿಗೂ ತಿಳಿಯದಂತಹ ವಿಷಯ. ಶಂಕರಾಚಾರ್ಯರ ಚರಿತ್ರೆ ಓದಿದವರಿಗೆ ಆರ್ಯರು ಅದರಲ್ಲಿ ಕಾಣಿಸುವುದಿಲ್ಲ. ಆರ್ಯರ ಮಾತೇ ಕೇಳಿಸುವುದಿಲ್ಲ. ಅದುದರಿಂದ ನಾವು ಈಗ ಹೇಳಿದರೂ ಆರ್ಯರ ವಿಷಯ ನಂಬಲುಸಾಧ್ಯವಾಗದಂತೆ ಇರುತ್ತದೆ. ಆದರೂ ನಿಮ್ಮ ಬುದ್ಧಿಗೆ ಸ್ವಲ್ಪ ಕೆಲಸವಿಟ್ಟರೆ ನಾವು ಹೇಳುವ ಮಾತುಗಳಲ್ಲಿನ ಸತ್ಯ ತಿಳಿಯಬಲ್ಲದು. ಶಂಕರಾಚಾರ್ಯರು ಚಿಕ್ಕಂದಿನಿಂದ ಮೇಧಾವಿಯೇ. ಆದರೆ ಆ ಮೇಧಾಶಕ್ತಿ ಆತನು ಕಲಿಯುವ ವಿದ್ಯೆಗಳಲ್ಲಿ ಕೆಲಸಮಾಡಿದೆ. ಚಿಕ್ಕಂದಿನಲ್ಲಿಯೇ ಅಂದರೆ ಹದಿನೈದು ವರ್ಷಗಳಿಗೆ ಆರ್ಯರ ಮಾತನ್ನನುಸರಿಸಿ ನಾಲ್ಕು ವೇದಗಳನ್ನು ಕಲಿತಿದ್ದಾನೆ. ನಾಲ್ಕುವೇದಗಳನ್ನು ಕಂಠಾಪಾಟವಾಗಿ ಹೇಳುತ್ತಿದ್ದನು. ತನ್ನನ್ನು ವಿದ್ಯಾವಂತನನ್ನಾಗಿ ಮಾಡಿದಕ್ಕೆ ಸಂಬಧಿಕರಂತಿರುವ ಆರ್ಯರಿಗೆ ತಾನು ಋಣವಾಗಿದ್ದೇನೆಂದು ಮೊದಲು ಅಂದುಕೊಳ್ಳುತ್ತಿದ್ದನು. ತನ್ನ ಕುಲದವರೇ ಎಂದು ಅವರನ್ನು ನಂಬಿದ್ದಾನೆ. ಶಂಕರನು ವಯಸ್ಸಿನಲ್ಲಿ ಬಹಳ ಚಿಕ್ಕವನು ಆಗಿರುವುದರಿಂದ ತನಗೆ ಆಸರೆಯಾಗಿದ್ದು ಕೀರ್ತಿ ಪ್ರತಿಷ್ಟೆಯನ್ನು ಕಲ್ಪಿಸುತ್ತಾ ಸಿದ್ಧಾಂತಕರ್ತನಾಗಿ ಅದ್ವೈತ ಸಿದ್ಧಾಂತಕ್ಕೆ ಅಧಿಕರ್ತನನ್ನಾಗಿ, ಅದ್ವೈತ ಪೀಠಕ್ಕೆ ಅಧಿಪತಿಯಾಗಿ ಮಾಡಿ ಪ್ರಜೆಗಳಲ್ಲಿ ದೊಡ್ಡ ವ್ಯಕ್ತಿಯಾಗಿ ಪ್ರಚಾರ ಮಾಡುವುದರಿಂದ ಅಂಥವರನ್ನು ಯಾರಾದರೂ ಒಳ್ಳೆಯವರಾಗಿ, ತನ್ನ ಶ್ರೇಯೋಭಿಲಾಷಿಗಳಾಗಿ ತಪ್ಪದೆ ನಂಬುತ್ತಾರೆ. ಶಂಕರಾಚಾರ್ಯರು ಸಹ ತನಗೆ ಎಲ್ಲಾ ವಿಧಗಳಲ್ಲಿ ಒಳ್ಳೆಯದನ್ನು ಮಾಡುವ ಆರ್ಯರನ್ನು ಪೂರ್ತಿಯಾಗಿ ನಂಬಿದ್ದಾನೆ. ಅವರ ಸ್ವಾರ್ಥಕ್ಕಾಗಿ ತನಗೆ ಒಳ್ಳೆಯದನ್ನು ಮಾಡುತ್ತಿದ್ದಾರೆಂದು ಮೊದಲು ಗ್ರಹಿಸಲಾರದೆ ಹೋಗಿದ್ದಾನೆ.

ಆದರೆ ತನ್ನನ್ನು ವೇದಗಳನ್ನು ಓದಲು ಹೇಳಿ, ಭಗವದ್ಗೀತೆ ಕಡೆ ಹೋಗದಂತೆ ಮಾಡಿ, ಅದನ್ನು ನಾವು ಓದಬಾರದೆಂದು, ಭಗವದ್ಗೀತೆ ವೇದಗಳಿಗು ಯಜ್ಞಗಳಿಗು ಶತ್ರುವಿದ್ದಂತೆಯೆಂದು ಹೇಳುವುದರಿಂದ ಏಕೆ ಹಾಗೆ ಹೇಳುತ್ತಿದ್ದಾರೆಂಬ ಅನುಮಾನ ಶಂಕರನಲ್ಲಿ ಮೊದಲಾಗಿದೆ. ಧರ್ಮಸಂಸ್ಥಾಪನೆಗಾಗಿ ಬಂದಿರುವ ಭಗವಂತನು ಹೇಳಿರುವುದು ಭಗವದ್ಗೀತೆಯೆಂದು ಎಲ್ಲರೂ ಹೇಳುತ್ತಿರುವಾಗ, ಅದರಲ್ಲಿ ಏನಿದೆಯೋ ತಿಳಿಯದಂತೆ ಮಾಡಿ, ಕನಿಷ್ಟ ಒಂದುಬಾರಿ ಸಹ ಅದನ್ನು (ಭಗವದ್ಗೀತೆಯನ್ನು) ನೋಡದಂತೆ ಎಚ್ಚರವಹಿಸಿರುವುದರಿಂದ ಚಿಕ್ಕಸಸಿಯಂತೆ ಸಂಶಯ ಮೊದಲಾಗಿದೆ. ಶಂಕರನು ಹುಟ್ಟಿನಿಂದಲೇ ದ್ರಾವಿಡ ಬ್ರಾಹ್ಮಣನಾದರೂ, ಆತನನ್ನು ಆರ್ಯರು ದ್ರಾವಿಡ ಬ್ರಾಹ್ಮಣನಲ್ಲವೆಂದು ಆರ್ಯ ಬ್ರಾಹ್ಮಣನೆಂದು ಹೇಳುವುದರಲ್ಲಿ ಕೆಲವು ವಿಷಯಗಳಲ್ಲಿ ಮಾತ್ರ ಏಕೆ ಹಾಗೆ ಮಾಡುತ್ತಿದ್ದಾರೋ ತಿಳಿಯದಿದ್ದರೂ ಆತನಲ್ಲಿ ಆರ್ಯರ ಮೇಲೆ ಉಂಟಾದ ಅನುಮಾನ ಕೆಲವು ಆರ್ಯರ ಕಾರ್ಯಗಳಿಂದ ಬಲವಾಗುತ್ತಾ ಬಂದಿದೆ.

ಶಂಕರಾಚಾರ್ಯರನ್ನು ಎಷ್ಟೋ ಚೆನ್ನಾಗಿ ನೋಡಿಕೊಳ್ಳುವ ಆರ್ಯರು, ಶಂಕರನನ್ನು ಕುರಿತು ದೊಡ್ಡದಾಗಿ ಹೇಳುವ ಆರ್ಯರು, ದೇಶದ ನಾಲ್ಕುಮೂಲೆಗಳಲ್ಲಿ ಶಂಕರನನ್ನು ಪಾದಯಾತ್ರೆ ಮಾಡಿಸುವುದರಿಂದ ಶಂಕರನು ಸ್ವಲ್ಪ ಅಸ್ವಸ್ಥೆಗೆ ಗುರಿ ಆಗಬೇಕಾಗಿ ಬಂದಿದೆ. ಚಿಕ್ಕಹುಡುಗನೆಂದು ತಿಳಿಯದೆ, ಕಾಲುನಡೆ ಅಭ್ಯಾಸವಿಲ್ಲದವನೆಂದು ತಿಳಿಯದೆ ಕಾಲುನೋವುಗಳಿಂದ ಬಾಧೆಪಡುತ್ತಿದ್ದರೂ ಲೆಕ್ಕಮಾಡದೆ ಪ್ರತಿ ದಿನ ಶಂಕರನನ್ನು ಪ್ರತಿ ಊರಿನಲ್ಲಿಯೂ ಊರು ಮೆರವಣಿಗೆಯಂತೆ ಪ್ರಜೆಗಳಿಗೆ ತೋರಿಸುತ್ತಾ ತಿರುಗಿಸುವುದರಿಂದ, ಹಾಗೆ ಮಾಡುವುದರಲ್ಲಿ ಆರ್ಯರಿಗೆ ಯಾವುದೋ ಲಾಭವಿದೆಯೆಂದು ಶಂಕರನು ಅಂದುಕೊಳ್ಳಬೇಕಾಗಿಬಂದಿದೆ. ಅದಕ್ಕೆ ಜೊತೆಯಾಗಿ ಅತಿವೇಗವಾಗಿ ದೇಶದ ಎಲ್ಲಾ ಮೂಲೆಗಳಲ್ಲಿ ನಾಲ್ಕು ಅದ್ವೈತ ಪೀಠಗಳನ್ನು ಸ್ಥಾಪಿಸುವುದೂ, ಅವುಗಳಿಗೆ ನಾಲ್ಕು ವೇದಗಳನ್ನು ಗುರುತಾಗಿಡುವುದರಿಂದ ತನಗೆ ಪೂರ್ತಿ ತಿಳಿಯದ

ಕೆಲಸವನ್ನು ಹರಕೆಯಂತೆ ಆರ್ಯರು ಹೇಳಿದಂತೆ ಮಾಡಬೇಕಾಯಿತು. ಅದರಿಂದ ಆತನಲ್ಲಿ ಆರ್ಯರ ಮೇಲೆ ಅನುಮಾನ ಶುರುವಾಗಿ ಅದು ಕೊನೆಗೆ ದೊಡ್ಡದಾಗಿ ಬದಲಾಗಿದೆ. ಸ್ವಲ್ಪವೂ ಎಲ್ಲಿಯೂ ವಿಳಂಬ (ತಡ) ವಿಲ್ಲದೆ ಯುದ್ಧಪ್ರಾತಿಪದಿಕವಾಗಿ ನಾಲ್ಕು ಪೀಠಗಳನ್ನು ನೆಲೆಗೊಳಿಸುವುದರಲ್ಲಿ ತನ್ನ ಅನುಮಾನ ಇನ್ನೂ ಹೆಚ್ಚಾಯಿತು. ಯಾವ ವಿಧವಾಗಿ ಆಲೋಚಿಸಿದರೂ ಅಷ್ಟು ವೇಗವಾಗಿ ಮಾಡಬೇಕಾದ ಅವಶ್ಯಕತೆ ಏನೂ ಇಲ್ಲ. ಶಂಕರನು ತಿಳುವಳಿಕೆಯುಳ್ಳವನೆಂದು ತಮ್ಮ ಉದ್ದೇಶವನ್ನು ಎಲ್ಲಿ ಯಾವಾಗ ತಿಳಿದು ಕೊಳ್ಳುತ್ತಾನೋ ಎಂಬ ಅನುಮಾನ ಆರ್ಯರಲ್ಲಿ ಇರುವುದರಿಂದ ಶಂಕರನು ಬದಲಾಗದಮುನ್ನವೇ, ಶಂಕರನು ತಮ್ಮಕೈಯಿಂದ ಜಾರಿಹೋಗದ ಮೊದಲೆ ತಮ್ಮ ಕಾರ್ಯಗಳನ್ನು ಶಂಕರನಿಂದ ಮಾಡಿಸಿದರೆ ನಂತರ ಕಾಲದಲ್ಲಿ ದ್ರಾವಿಡರಿಂದ ಯಾವುದೆ ಆಪತ್ತು ಅಥವಾ ಗೊಂದಲ ಇರುವುದಿಲ್ಲ ಎಂದು ಕೊಂಡರು.

ಆರ್ಯರ ತಲೆಯಲ್ಲಿ ಆ ಉದ್ದೇಶ ಇರುವುದರಿಂದ ಶಂಕರನಿಂದ ಸಾಧ್ಯವಾದಷ್ಟು ವೇಗವಾಗಿ ಆ ಕಾರ್ಯಗಳನ್ನು ಮಾಡಿಸಿದ್ದಾರೆ. 16 ವರ್ಷಗಳ ವಯಸ್ಸಿನಿಂದ ದೇಶವೆಲ್ಲಾ ಒಂಭತ್ತು ವರ್ಷಗಳು ಕಾಲ ತಿರುಗಿಸಿ 25 ವರ್ಷಗಳ ವಯಸ್ಸು ಬರುವಷ್ಟರೊಳಗೆ ನಾಲ್ಕು ಪೀಠಗಳನ್ನು ಸ್ಥಾಪಿಸಿದ್ದಾರೆ. ತನ್ನ 25 ವರ್ಷಗಳ ವಯಸ್ಸಿನಲ್ಲಿ ದೇಶವೆಲ್ಲಾ ತಿರುಗಿ ನೋಡಿದ ಶಂಕರನಿಗೆ ಸ್ವಲ್ಪ ಪ್ರಪಂಚ ಅನುಭವ, ಸ್ವಲ್ಪ ಸ್ವಂತ ತಿಳುವಳಿಕೆಯನ್ನು ಉಪಯೋಗಿಸಿ ಯಾರಿಗೂ ತಿಳಿಯದಂತೆ ತನ್ನ ಜಾಗ್ರತೆಯಲ್ಲಿ ನಾನೀರಬೇಕೆಂದುಕೊಂಡನು. ಶಂಕರನನ್ನು ಒಬ್ಬನನ್ನೇ ಬಿಟ್ಟು ಆರ್ಯರಿರುವವರಲ್ಲ. ಶಂಕರನೊಂದಿಗೆ ಆರ್ಯರ ಅನುಮತಿ ಇಲ್ಲದ್ದು ಯಾರನ್ನು ಬೇಟಿಮಾಡಿಸುತ್ತಿರಲಿಲ್ಲ. ಅದೆಲ್ಲಾ ಶಂಕರನ ಗೌರವಾರ್ಥ ಆರ್ಯರು ಹಾಗೆ ಮಾಡುತ್ತಿದ್ದಾರೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರು. ಆದರೆ ಶಂಕರನಿಗೆ ಯಾರಾದರೂ ಆರ್ಯರ ಉದ್ದೇಶವನ್ನು ವಿವರಿಸುತ್ತಾರೇನೋ ಎಂಬ ಭಯದಿಂದ ಆತನ ಹತ್ತಿರಕ್ಕೆ ತಮ್ಮ ಅನುಮತಿ ಇಲ್ಲದೆ ಯಾರನ್ನು ಹೋಗಲು ಬಿಡುತ್ತಿರಲಿಲ್ಲ.

**ಪ್ರಶ್ನೆ :– ಇಲ್ಲಿಯವರೆಗು ಈ ವಿಷಯ ಯಾರ ಊಹೆಗು ಬರಲಿಲ್ಲ. ಈಗ ಆಲೋಚಿಸಿ ನೋಡಿದರೆ ಆಗ ನಡೆದಿರುವುದಕ್ಕು ನೀವು ಹೇಳುವುದಕ್ಕು ಬಹಳ ಹತ್ತಿರ ಸಂಬಂಧವಿದ್ದಂತೆ ಕಾಣಿಸುತ್ತಿದೆ. ನಿಮ್ಮ ಮಾತಿನ ಪ್ರಕಾರ ಆರ್ಯರು ಎಷ್ಟೋ ತಿಳುವಳಿಕೆಯಿಂದ ಪ್ರವರ್ತಿಸುತ್ತಿದ್ದರೂ ಶಂಕರನಿಗೆ ಸ್ವಲ್ಪ ಅನುಮಾನ ಬಂದಿದೆಯೆಂದು ಹೇಳಿದ್ದೇವೆ. ಆರ್ಯರ ಮೇಲೆ ಅನುಮಾನ ಬಂದು ಅದು ಅಲ್ಪಸ್ವಲ್ಪ ದೃಢವಾದ ನಂತರ ಶಂಕರನು ಆರ್ಯರಿಂದ ಏಕೆ ಬೇರೆಯಾಗಲಿಲ್ಲ? ಆತನು ಮರಣಿಸುವವರೆಗು ಆರ್ಯರೊಂದಿಗೆ ಏಕೆ ಕೂಡಿದ್ದಾನೆ?**

**ಉತ್ತರ :–** ಯಾರು ಎಷ್ಟು ತಿಳುವಳಿಕೆಯುಳ್ಳವರಾದರೂ ವಿಧಿ ಕೈಯಲ್ಲಿ ಎಲ್ಲರೂ ಕೀಲು ಗೊಂಬೆಗಳೇ! ಮೊದಲೇ ನಿರ್ಣಯಿಸಲ್ಪಟ್ಟಿರುವ ಕರ್ಮಪ್ರಕಾರವೇ ಮೇಲೆ ಕಾಣಿಸುವ ವ್ಯವಹಾರಗಳೆಲ್ಲವೂ ನಡೆಯುತ್ತಿರುತ್ತವೆ. ಆರ್ಯರ ವಿಷಯದಲ್ಲಿಯೂ, ಶಂಕರನ ವಿಷಯದಲ್ಲಿಯೂ ಅದೇ ನಡೆದಿದೆ. ಪ್ರತಿ ಮನುಷ್ಯನ ಶರೀರದಲ್ಲಿರುವ ಕಾಣಿಸದ ಕರ್ಮ ಪ್ರತಿ ಮನುಷ್ಯನನ್ನು ಪ್ರೇರೇಪಿಸಿ ಆಡಿಸುತ್ತಿರುವಂತೆ ತತ್ತ್ವಜ್ಞರಾದವರು ಹೇಳುತ್ತಾರೆ. ಒಳಗಿರುವ ಕರ್ಮ ನಡೆಯುವ ಕೆಲಸಗಳಲ್ಲಿ ತಿಳಿಯಲ್ಪಡುತ್ತದೆ. ಅದೇ ವಿಧವಾಗಿ ಶಂಕರನ ವಿಷಯದಲ್ಲಿ ಸಹ ಏನು ನಡೆಯಬೇಕೊ ಅದೇ ನಡೆದಿದೆ. ನೀವು ಕೇಳಿದ ಪ್ರಶ್ನೆಗೆ ಉತ್ತರವನ್ನು ಈ ವಿಧವಾಗಿ ಹೇಳಬಹುದು.

ಶಂಕರನು ಭಾರತದೇಶದಲ್ಲಿನ ಎಲ್ಲಾ ಮೂಲೆಗಳನ್ನು ತಿರುಗಿ ಬಂದ ನಂತರ ತನ್ನ ಸ್ವಗ್ರಾಮಕ್ಕೆ ಬಂದು ಒಂದು ತಿಂಗಳು ತನ್ನ ಮನೆಯಲ್ಲಿಯೇ ವಿಶ್ರಾಂತಿ ತೆಗೆದುಕೊಂಡಿದ್ದಾನೆ. ಶಂಕರನು ತನ್ನ ಸ್ವಗ್ರಾಮದಲ್ಲಿ ಇರುವುದರಿಂದ, ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ ಕಾಲವನ್ನು ವಿನಿಯೋಗಿಸುವುದರಿಂದ, ಆರ್ಯರು ಶಂಕರನನ್ನು ಸ್ವತಂತ್ರವಾಗಿ ಬಿಟ್ಟು ತಮ್ಮ ತಮ್ಮ ಕೆಲಸಗಳಲ್ಲಿ ಲಗ್ನವಾಗಿದ್ದು ಅವರು ಸಹ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಶಂಕರನ ಸ್ವಗ್ರಾಮವಾದ 'ಕಾಲಡಿ' ಗ್ರಾಮ ಬಹಳ ಚಿಕ್ಕ ಗ್ರಾಮ. ಅಲ್ಲಿ ಆರ್ಯರು ಶಂಕರನೊಂದಿಗೆ ಇರುವುದಕ್ಕೆ ಅನುಕೂಲವಿಲ್ಲ. ಅವರಿಗೆ ತಕ್ಕ ವಸತಿಗಳು ಇಲ್ಲ. ಶಂಕರನು ಚಿಕ್ಕ ಗುಡಿಸಿಲಲ್ಲಿ

(ಕುಟೀರದಲ್ಲಿ) ನಿವಾಸಿಸುತ್ತಿದ್ದನು. ಆದ್ದರಿಂದ ಒಂದು ತಿಂಗಳು ಶಂಕರನನ್ನು ಬಿಟ್ಟು ಬೇರೆ ಪ್ರಾಂತ್ಯದಲ್ಲಿ ಇರುತ್ತಿದ್ದರು. ಆಗಾಗ ಬಂದು ಶಂಕರನನ್ನು ಮಾತನಾಡಿಸುತ್ತಿದ್ದರು. ಹಾಗಿರುವ ತಿಂಗಳ ಕಾಲದಲ್ಲಿ ಶಂಕರನು ಭಾರತದಲ್ಲಿನ ಭಗವದ್ಗೀತೆಯನ್ನು ಆರ್ಯರಿಗೆ ತಿಳಿಯದಂತೆ ಓದಿದ್ದಾನೆ. ಶಂಕರನು ತನ್ನ 26ನೇ ವರ್ಷದಲ್ಲಿ ಭಗವದ್ಗೀತೆಯನ್ನು ಓದಿ ಅದರಲ್ಲಿನ ಜ್ಞಾನವನ್ನೆಲ್ಲಾ ತಿಳಿಯದಿದ್ದರೂ ಸ್ವಲ್ಪಮಟ್ಟಿಗೆ ತಿಳಿದುಕೊಂಡಿದ್ದಾನೆ. ಶಂಕರನಿಗೆ ತಿಳಿದ ಅದ್ವೈತವೇ ಆತನಿಗೆ ಕಾಣಿಸಿದೆ. ಭಗವದ್ಗೀತೆಯಲ್ಲಿರುವ ಪೂರ್ತಿ ಜ್ಞಾನ ತಿಳಿಯದಂತೆ ಹೋದರೂ ಸ್ವಲ್ಪಮಟ್ಟಿಗಾದರೂ ಅರ್ಥವಾಗಿದೆ. ಭಗವದ್ಗೀತೆಯಲ್ಲಿನ ಜ್ಞಾನ ಯಾರಿಗಾದರೂ ಒಂದೇಬಾರಿಗೆ ಅರ್ಥ ಆಗಬೇಕೆಂದರೆ ಬಹಳ ಕಷ್ಟ.

ಆದ್ದರಿಂದ ಶಂಕರನಿಗೆ ಪೂರ್ತಿ ಅರ್ಥವಾಗದಿದ್ದರೂ, ಭಗವದ್ಗೀತೆಯಲ್ಲಿರುವ ಅದ್ವೈತ, ದ್ವೈತ, ತ್ರೈತದಲ್ಲಿ ಅದ್ವೈತ ಮಾತ್ರ ಅರ್ಥವಾಗಿದೆ. ಉಳಿದ ಎರಡು ತತ್ತ್ವಗಳು ಅರ್ಥವಾಗಲಿಲ್ಲ. ಆದರೆ ಭಗವದ್ಗೀತೆಯಲ್ಲಿ ಭಗವಂತನು ವೇದಗಳನ್ನು ಕುರಿತು ಹೇಳಿದ ವಿಷಯ ಮಾತ್ರ ಚೆನ್ನಾಗಿ ಅರ್ಥವಾಗಿದೆ. **"ತ್ರೈಗುಣ್ಯಾ ವಿಷಯಾ ವೇದಾ"** ಎಂಬ ಮಾತು ಶಂಕರನಲ್ಲಿ ಕ್ಷೋಭೆಯನ್ನು ಉಂಟುಮಾಡಿದೆ. ಧರ್ಮರಕ್ಷಣೆ ನಿಮಿತ್ತವಾಗಿ ಬಂದಿರುವ ಭಗವಂತನ ಮಾತುಗಳಲ್ಲಿ ಆ ಮಾತು ಇರುವುದು ಶಂಕರನಿಗೆ ಆಶ್ಚರ್ಯವನ್ನು ಉಂಟುಮಾಡಿದೆ. ಭಗವದ್ಗೀತೆ ಪ್ರಾರಂಭದಲ್ಲಿ ಸಾಂಖ್ಯಯೋಗವೆಂಬ ಅಧ್ಯಾಯದಲ್ಲಿರುವ 45ನೇ ಶ್ಲೋಕದಲ್ಲಿನ ಆ ಮಾತು ಶಂಕರನ ಮನಸ್ಸಿನಲ್ಲಿ ಶಾಶ್ವತವಾಗಿ ನಿಂತುಹೋಗಿದೆ. ಅದಕ್ಕೆ ಜೊತೆಯಾಗಿ ವಿಶ್ವರೂಪ ಸಂದರ್ಶನಯೋಗವೆಂಬ ಅಧ್ಯಾಯದಲ್ಲಿ 48, 53 ಶ್ಲೋಕಗಳು ಸಹ ಚೆನ್ನಾಗಿ ಅರ್ಥವಾಗಿವೆ. ಅಲ್ಲಿರುವ ಎರಡು ಶ್ಲೋಕಗಳಲ್ಲಿ **"ವೇದಗಳಿಂದ ದೇವರು ತಿಳಿಯುವುದಿಲ್ಲ"** ಎಂಬ ವಿಷಯವು ಪೂರ್ತಿಯಾಗಿ ತಿಳಿದುಹೋಗಿದೆ. ಅಷ್ಟೇಯಲ್ಲದೆ ಅದಕ್ಕಿಂತ ಮುಂದಿರುವ ಅಕ್ಷರ ಪರಬ್ರಹ್ಮ ಯೋಗವೆಂಬ ಅಧ್ಯಾಯದಲ್ಲಿ 28ನೇ ಶ್ಲೋಕದಲ್ಲಿ ವೇದಗಳಿಂದ, ಯಜ್ಞಗಳಿಂದ ಪುಣ್ಯಫಲ

ಬರುತ್ತದೆಯೆಂದು ತಿಳಿದುಹೋಗಿದೆ. ಅದೇ ಭಗವದ್ಗೀತೆಯಲ್ಲಿ ಪುಣ್ಯದಿಂದ ಸುಖಗಳು ಉಂಟಾಗುತ್ತವೆಯೆಂದು, ಮೋಕ್ಷ ಬರುವುದಿಲ್ಲವೆಂದು ಹೇಳಿರುವು ದರಿಂದ ಶಂಕರನು ಗ್ರಹಿಸಿದ್ದಾನೆ.

ಈ ವಿಧವಾಗಿ ಶಂಕರನು ಭಗವದ್ಗೀತೆಯನ್ನು ಓದಿದ ನಂತರ ಭಗವದ್ಗೀತೆಯಲ್ಲಿ ಭಗವಂತನು ಹೇಳಿದನ್ನು ಅನುಸರಿಸಿ ತಾನು ಅಲ್ಲಿಯವರೆಗು ವೇದಗಳು ಶ್ರೇಷ್ಟವಾದವೆಂದು, ಅವುಗಳೇ ಆಧ್ಯಾತ್ಮಿಕ ವಿದ್ಯೆಗೆ ಪ್ರಮಾಣವೆಂದು ಹೇಳಿದ ಮಾತುಗಳು ಪೂರ್ತಿ ಅಸತ್ಯವೆಂದು ಶಂಕರನಿಗೆ ತಿಳಿದುಹೋಗಿದೆ. ನಾಲ್ಕು ವೇದಗಳನ್ನು, ಅಷ್ಟಾದಶ ಪುರಾಣಗಳನ್ನು, ನೂರಾರು ಸಂಖ್ಯೆಯಲ್ಲಿ ಉಪನಿಷತ್‌ಗಳನ್ನು ಬರೆದ ವ್ಯಾಸನು ತನ್ನ ರಚನೆಯಲ್ಲಿ ವೇದಗಳನ್ನು ದೊಡ್ಡದಾಗಿ ಹೇಳಿ ಚತುರ್‌ವೇದ ರಚನೆ ಮಾಡಿ 'ವೇದ ವ್ಯಾಸನೆಂದು' ಹೆಸರುವಾಸಿಯಾದ ವ್ಯಾಸನು ಕೊನೆಯಲ್ಲಿ ಅರ್ಜುನನ ಮೂಲಕ ಕೃಷ್ಣನು ಹೇಳಿದ ಭಗವದ್ಗೀತೆಯನ್ನು ತಿಳಿಯಲ್ಪಟ್ಟು, ಆತ್ಮಜ್ಞಾನವೇನೋ ಗ್ರಹಿಸಿದವನಾಗಿ, ತಾನು ಬರೆದ ವೇದಗಳಿಗು ಆತ್ಮಜ್ಞಾನಕ್ಕು ಸ್ವಲ್ಪವೂ ಸಂಬಂಧ ಇಲ್ಲವೆಂದು ತಿಳಿದವನಾಗಿ, ತಾನು ವೇದಗಳನ್ನು ರಚಿಸಿ ಪ್ರಜೆಗಳನ್ನು ತಪ್ಪುದಾರಿ ಹಿಡಿಸಿರುವುದಕ್ಕೆ ಬಾಧೆಪಟ್ಟು ತನ್ನ ಜೀವನದಲ್ಲಿ ಕೊನೆಯದಾಗಿ ಒಳ್ಳೆಯ ಕೆಲಸವನ್ನು ಮಾಡಬೇಕೆಂದುಕೊಂಡನು. ಆ ಒಳ್ಳೆಯಕೆಲಸವೇ 'ಭಗವದ್ಗೀತೆಯನ್ನು ಬರೆಯುವುದು' ಎಂದು ಅಂದುಕೊಂಡನು. ಭಗವದ್ಗೀತೆ ಅಲ್ಲಿಯವರೆಗು ಮಾತುಗಳ ರೂಪದಲ್ಲಿರುವುದನ್ನು ಅಕ್ಷರ ರೂಪದೊಳಗೆ ಬದಲಾಯಿಸಿ ಭಗವದ್ಗೀತೆ ಗ್ರಂಥವನ್ನು ಬರೆದಿದ್ದಾನೆ. ವೇದಗಳನ್ನು ಬರೆದು ಅಸಂತೃಪ್ತಿ ಹೊಂದಿದ ವ್ಯಾಸನು ಕೊನೆಯಲ್ಲಿ ಭಗವದ್ಗೀತೆಯನ್ನು ಬರೆದು ತನ್ನ ಜೀವನ ಧನ್ಯವಾಗಿದೆ ಎಂದು ಅಂದುಕೊಂಡನು.

ಕೃಷ್ಣನು ಭಗವಂತನಾಗಿ ಭೂಮಿಮೇಲೆ ಧರ್ಮಸಂಸ್ಥಾಪನೆಗಾಗಿ ಭಗವದ್ಗೀತೆ ರೂಪದಲ್ಲಿ ಹೇಳಿದ ಜ್ಞಾನ ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಮೂಲಕ ಸೂರ್ಯನಿಗೆ ತಿಳಿದ ಜ್ಞಾನವೆಂದು ಶಂಕರನು ತಿಳಿದುಕೊಂಡಿದ್ದಾನೆ. ಅದೇ ಜ್ಞಾನವನ್ನೇ ಕೃಷ್ಣನು ಅರ್ಜುನನಿಗೆ ಹೇಳಿದಾಗ ಅದನ್ನು ವ್ಯಾಸನು ಕೇಳಿ

ಇದಕ್ಕಿಂತ ಒಳ್ಳೆಯ ಅವಕಾಶ ತನ್ನ ಜೀವನದಲ್ಲಿ ಬರುವುದಿಲ್ಲವೆಂದು ತಿಳಿದು, ಆದಿನ ಗ್ರಂಥಗಳನ್ನು ಬರೆಯುವ ಸಾಮರ್ಥ್ಯ ವ್ಯಾಸನಿಗೆ ಇರುವುದರಿಂದ ಭಗವದ್ಗೀತೆಯನ್ನು ಗ್ರಂಥರೂಪದಲ್ಲಿ ಬರೆಯುವುದು ಮಹಾ ಪ್ರಸಾದವಾಗಿ ಭಾವಿಸಿ, ಎಷ್ಟೋ ಉತ್ಸಾಹದಿಂದ ವ್ಯಾಸನು ಭಗವದ್ಗೀತೆಯನ್ನು ಬರೆದಿದ್ದಾನೆ. ತನಗೆ ಭಗವಂತನು ಧರ್ಮಗಳ ರೂಪದಲ್ಲಿ ಹೇಳಿದ ಆತ್ಮಗಳ ಜ್ಞಾನ ತಿಳಿಯದೆ, ಗುಣಮಯವಾದ ವೇದಗಳನ್ನು ಬರೆದು ತಪ್ಪು ಮಾಡಿರುವುದಕ್ಕೆ ಎಷ್ಟೋ ಪಶ್ಚಾತ್ತಾಪ ಪಟ್ಟು ವ್ಯಾಸನು ಭಗವದ್ಗೀತೆಯನ್ನು ಬರೆದು ತನ್ನ ಜೀವನ ಧನ್ಯವಾಗಿದೆಯೆಂದು ಅಂದುಕೊಂಡಿದ್ದಾನೆ. ವ್ಯಾಸನು ತನ್ನ ಜೀವನದಲ್ಲಿ ಭಗವದ್ಗೀತೆಯನ್ನು ಬರೆದು ತೃಪ್ತಿಹೊಂದಿದಂತೆ ಶಂಕರನು ಗ್ರಹಿಸಿದ್ದಾನೆ. ದ್ವಾಪರಯುಗದಲ್ಲಿ ಇರುವ ವ್ಯಾಸನು ವೇದಗಳನ್ನು ಕುರಿತು **'ಗುಣಮಯಿ'** ಎಂದು ತನ್ನ ಶ್ಲೋಕದಲ್ಲಿ ಹೇಳುವುದು ಶಂಕರನ ಕಣ್ತೆರೆಸಿದಂತಾಗಿದೆ. ಅಲ್ಲಿಯವರೆಗು ನಾಲ್ಕು ವೇದಗಳನ್ನು ಕುರಿತು ಹೇಳಿದ ತನ್ನ ಮಾತುಗಳೇ ತನಗೆ ತಪ್ಪಾಗಿ ಕಾಣಿಸಿವೆ. ಅಲ್ಲಿಯವರೆಗು ಗುಣ ವಿಷಯಗಳ ಸಂಬಂಧ ಜ್ಞಾನವಿರುವ ವೇದಗಳ ಮೇಲಿನ ಶ್ರದ್ಧೆ ವೈರಾಗ್ಯವಾಗಿ ಬದಲಾಗಿದೆ. ಆಂದಿನಿಂದ ಆತ್ಮಗಳ ವಿಷಯ ಜ್ಞಾನವನ್ನು ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ ಮೇಲೆ ಶ್ರದ್ಧೆ ಬೆಳೆದು ಅದು ಆಸಕ್ತಿಯಾಗಿ ಬದಲಾಗಿದೆ. ವೇದಗಳ ಮೇಲೆ ವಿರಕ್ತಿ ಭಗವದ್ಗೀತೆ ಮೇಲೆ ಆಸಕ್ತಿ ಉಂಟಾದ ತಕ್ಷಣ ತನ್ನಿಂದ ವೇದಗಳನ್ನು ಪ್ರಚಾರ ಮಾಡಿಸಿದ ಆರ್ಯರ ಮೇಲೆ ಶಂಕರನಿಗೆ ಕೋಪ ಉಂಟಾಯಿತು.

ಆರ್ಯರ ಅಂತರಂಗದಲ್ಲಿನ ಉದ್ದೇಶವು ಶಂಕರನಿಗೆ ಸ್ವಲ್ಪಸ್ವಲ್ಪವಾಗಿ ಅರ್ಥವಾಯಿತು. ಆರ್ಯರು ಏನಾದರೆ ಶಂಕರನಿಗೆ ತಿಳಿಯ ಬಾರದೆಂದು ಕೊಂಡಿದ್ದರೋ ಅದು ಶಂಕರನಿಗೆ ಪೂರ್ತಿಯಾಗಿ ತಿಳಿದುಹೋಗಿದೆ. ತಾನು ದ್ರಾವಿಡ ಬ್ರಾಹ್ಮಣನಾಗಿರುವುದರಿಂದ ತನ್ನಿಂದ ವೇದಗಳನ್ನು, ಯಜ್ಞಗಳನ್ನು ಪ್ರಚಾರ ಮಾಡಿಸಿ ದ್ರಾವಿಡರೆಲ್ಲರನ್ನು ಸುಲಭವಾಗಿ ತಮ್ಮಕಡೆ ಸೆಳೆದುಕೊಳ್ಳುವುದಕ್ಕೆ ಮಾಡಿದ ಪ್ರಯತ್ನವೇ ತನ್ನನ್ನು ದೊಡ್ಡದಾಗಿ ಆರ್ಯರು ಪ್ರಚಾರ ಮಾಡಿ,

ಅದ್ವೈತ ಸಿದ್ಧಾಂತ ಕರ್ತನಾಗಿ ತೋರಿಸಿದ್ದಾರೆಂದು ಅರ್ಥವಾಗಿದೆ. ಆಂದಿನಿಂದ ಆರ್ಯರಿಗೆ ತನ್ನಲ್ಲಿನ ಬದಲಾವಣೆ ಕಾಣಿಸದೆ ನಡೆದುಕೊಂಡು, ಅವರು ಹೇಳಿದ ಮಾತುಗಳನ್ನು ಕೇಳಿದಂತೆ ನಟಿಸಬೇಕೆಂದುಕೊಂಡನು. ಒಂದೇಬಾರಿಗೆ ಅಲ್ಲದೇ ಕ್ರಮೇಣ ಆರ್ಯರೊಂದಿಗೆ ಸಂಬಂಧ ಇಲ್ಲದಂತೆ ದೂರವಾಗಬೇಕೆಂದು ಕೊಂಡನು. ಅಷ್ಟೇ ಅಲ್ಲದೆ ಅಲ್ಲಿಯವರೆಗು ಮಾಡಿದ ವೇದ ಪ್ರಚಾರವನ್ನು ಸ್ವಲ್ಪಸ್ವಲ್ಪವಾಗಿ ಬಿಡುತ್ತಾ, ಅಂದಿನಿಂದ ಭಗವದ್ಗೀತಾ ಪ್ರಚಾರವನ್ನು ಸ್ವಲ್ಪಸ್ವಲ್ಪವಾಗಿ ಮಾಡಬೇಕೆಂದುಕೊಂಡನು. ಅಲ್ಲಿಯವರೆಗು ಶಂಕರನು ಆಚಾರ್ಯನಾಗಿ (ಗುರುವಾಗಿ) ಅದ್ವೈತ ಸಿದ್ಧಾಂತಕರ್ತನಾಗಿ ತಯಾರು ಮಾಡಿದ ದೇಶದಲ್ಲಿನ ನಾಲ್ಕು ಮೂಲೆಗಳ ಪೀಠಗಳು ನಾಲ್ಕು ವೇದಗಳಿಗೆ ಪ್ರತೀಕವಾಗಿ ಮಾಡಿರುವು ದಾದ್ದರಿಂದ, ಆ ನಾಲ್ಕು ಪೀಠಗಳನ್ನು ಅಲ್ಲದೇ **ವೇದ ರಹಿತವಾಗಿ ಆತ್ಮಜ್ಞಾನ ಸಹಿತವಾಗಿ** ಇರುವಂತೆ ತನಗಂತೂ ಪ್ರತ್ಯೇಕವಾಗಿ ಒಂದು ಪೀಠವನ್ನು ನಿರ್ಮಿಸಬೇಕೆಂದುಕೊಂಡನು.

**ಪ್ರಶ್ನೆ :– ಆರ್ಯರು ದ್ರಾವಿಡರನ್ನು ತಮ್ಮ ಮಾತು ಕೇಳುವಂತೆ, ತಮ್ಮ ಆಧೀನದಲ್ಲಿ ಇರುವಂತೆ ಮಾಡುವುದಲ್ಲದೆ, ದ್ರಾವಿಡರಲ್ಲಿ ವೇದಸಂಪ್ರದಾಯಗಳನ್ನು, ಯಜ್ಞ ಆಚರಣೆಯನ್ನು ಪ್ರಾರಂಭಿಸುವುದಕ್ಕೆ ಮಾಡಿದ ಕುತಂತ್ರದಲ್ಲಿನ ಭಾಗವಾಗಿ ಶಂಕರನನ್ನು ಆಚಾರ್ಯನನ್ನಾಗಿ ಮಾಡಿ ದೇಶವೆಲ್ಲಾ ಪ್ರಚಾರ ಮಾಡುವುದೇಯೆಂದು ಶಂಕರನಿಗೆ ತಿಳಿದ ನಂತರ ಅವರ ಸಂಬಂಧ ಅಲ್ಲಿಗೆ ರದ್ದುಮಾಡದೆ ಏಕೆ ಮುಂದುವರೆಸಬೇಕು? ಶಂಕರನ ಅವಶ್ಯಕತೆ ಆರ್ಯರಿಗಿರಬಹುದು ಆದರೇ, ಆರ್ಯರ ಅವಶ್ಯಕತೆ ಶಂಕರನಿಗೆ ಇಲ್ಲ ಅಲ್ಲವೆ! ಶಂಕರನು ಸಹ ತಿಳುವಳಿಕೆ ಯುಳ್ಳವನೇ ಅಲ್ಲವೆ!**

**ಉತ್ತರ :–** ಆರ್ಯರ ಕುತಂತ್ರವೆಲ್ಲವೂ ಶಂಕರನಿಗೆ ತಿಳಿದ ನಂತರ ಅವರೊಂದಿಗೆ ಇನ್ನೂ ಸ್ವಲ್ಪಕಾಲ ಸಂಬಂಧಪಟ್ಟು ಇರಬೇಕೆಂದುಕೊಳ್ಳುವುದಕ್ಕೆ ಒಂದೇ ಒಂದು ಕಾರಣವಿದೆ. "ಧನಮೂಲ ಮಿದಮ್ ಜಗತ್" ಎನ್ನುವಂತೆ ಪ್ರಪಂಚದಲ್ಲಿ ಧನ ಎಲ್ಲದಕ್ಕು ಮೂಲವಾಗಿದೆ. ಪ್ರಪಂಚದಲ್ಲಿ ಕೆಲಸಗಳು ನಡೆಯುವುದಕ್ಕೆ

ಕಾಣಿಸದ ಕರ್ಮ ಹಿಂದಿದ್ದರೂ, ಕಾಣಿಸುವ ಧನ ಪ್ರತ್ಯಕ್ಷವಾಗಿ ನಮ್ಮ ಮುಂದಿರಬೇಕು. ಆರ್ಯರಿಗಿರುವುದು, ಶಂಕರಾಚಾರ್ಯನಿಗೆ ಇಲ್ಲದಿರುವುದು ಧನವೊಂದೇ. ಆರ್ಯರು ಧನಿಕರು, ಶಂಕರನು ಬಡವನು. ಶಂಕರನು ತಿಳುವಳಿಕೆಯುಳ್ಳವನು ಆದ್ದರಿಂದ ಆರ್ಯರೊಂದಿಗೆ ಸತ್‌ಸಂಬಂಧ ಹೊಂದಿದ್ದು, ಅವರಿಂದಲೇ ತನಗಂತೂ ಒಂದು ಪ್ರತ್ಯೇಕ ಮಠವನ್ನು (ಪೀಠವನ್ನು) ತಯಾರು ಮಾಡಿಸಿಕೊಳ್ಳಬೇಕೆಂದುಕೊಂಡನು. ಆ ಆಲೋಚನೆ ಸಂಬಂಧವಾಗಿ ಆರ್ಯ ರೊಂದಿಗೆ ಮೊದಲು ಹೇಗಿದ್ದನೋ ನಂತರ ಸಹ ಹಾಗೆ ಇದ್ದನು. ಆರ್ಯರೊಂದಿಗೆ ಬೆರೆತಿದ್ದು ಆರ್ಯರು ತನ್ನಕಡೆ ಭಕ್ತಿಯಾಗಿದ್ದು ತನ್ನನ್ನು ಗೌರವಿಸುವುದರಿಂದ ಅವರಿಗೆ ಐದನೆ ಪೀಠವನ್ನು ದಕ್ಷಿಣದೇಶವಾದ ತಮಿಳನಾಡಿನಲ್ಲಿ ತಯಾರು ಮಾಡುವಂತೆ ಹೇಳಿದನು. ನಾಲ್ಕುವೇದಗಳ ಸಾರಾಂಶಕ್ಕೆ ಗುರುತಾಗಿ ಐದನೆ ಪೀಠವನ್ನು ಸ್ಥಾಪಿಸುವಂತೆ ಶಂಕರನು ಆರ್ಯರಿಗೆ ಸಲಹೆ ಕೊಟ್ಟನು. ಅಷ್ಟೇ ಅಲ್ಲದೆ ನಾಲ್ಕು ವೇದಗಳನ್ನು ವೇದವ್ಯಾಸನು ಬರೆದರೆ ಐದನೆ ವೇದವನ್ನು ಸ್ವತಃವಾಗಿ ಶಂಕರನೇ ಬರೆಯುವಂತೆ ಆರ್ಯರಿಗೆ ಹೇಳಿದ್ದಾನೆ. ತಾನು ಬರೆಯುವ ಐದನೆ ವೇದದ ಹೆಸರು **'ಆಯುಸ್ ವೇದ'** ಎಂದು ಸಹ ಹೇಳುವುದರಿಂದ ವೇದಗಳ ಪ್ರಚಾರವೇ ಪರಮಾವಧಿಯಾಗಿ (ಅಂತಿಮ ಗಮ್ಯವಾಗಿ) ಇಟ್ಟುಕೊಂಡ ಆರ್ಯರು ಶಂಕರನ ಮಾತನ್ನು ಕೇಳಿ ಸಂತೋಷಪಟ್ಟಿದ್ದಾರೆ. ಶಂಕರನಿಂದ ಐದನೆ ವೇದವನ್ನು ಬರೆಸಿ ದ್ರಾವಿಡ ಬ್ರಾಹ್ಮಣರೆಲ್ಲರನ್ನು ತಮ್ಮಕಡೆ ಸೆಳೆದುಕೊಳ್ಳಬೇಕೆಂದುಕೊಂಡರು.

ಶಂಕರನು ಹೇಳಿದ ಮಾತನ್ನು ಕೇಳಿದ ಆರ್ಯರು ತಕ್ಷಣ ಯುದ್ಧ ಪ್ರಾತಿಪದಿಕದ (ಮೂಲತತ್ತ್ವದ) ಮೇಲೆ ಕೆಲಸಗಳು ಪ್ರಾರಂಭಿಸಿ ಎರಡು ವರ್ಷಗಳಲ್ಲಿ ಕಂಚಿಯಲ್ಲಿ **"ಕಾಮಕೋಟಿ ಪೀಠ"** ವನ್ನು ತಯಾರು ಮಾಡಿದ್ದಾರೆ. ಕಾಮಕೋಟಿ ಪೀಠ ಎಂದು ಐದನೆ ಪೀಠಕ್ಕೆ ಹೆಸರು ಇಡುವುದರಲ್ಲಿ ಸಹ ಸ್ವಲ್ಪ ವಿಶೇಷವಿದೆ. ಕಾಮ ಎಂದರೆ 'ಆಸೆ' ಎಂದು ಅರ್ಥವಿದೆ. ಕೋಟಿ ಎಂದರೇ ಲೆಕ್ಕವಿಲ್ಲದಷ್ಟು, ಹೇಳಲಾರದಷ್ಟು ಎಂದು ಅರ್ಥ ಇದೆ. ಹಾಗಲ್ಲದಿದ್ದರೂ

"ಕೋಟಿ ಆಸೆಗಳು" ಎಂದು ಸಹ ಹೇಳಬಹುದು. ಕನ್ನಡದಲ್ಲಿ ಒಂದು ಗಾದೆಯನ್ನು ನೀವು ಕೇಳಿಯೇ ಇರುತ್ತೀರಾ. ಅದು "ಕೋಟಿ ವಿದ್ಯೆಗಳು ಹೊಟ್ಟೆಗಾಗಿ" ಎಂದು ಹೇಳುತ್ತಾರೆ. ಅಂತಹದ್ದೆ ಕೋಟಿ ಆಸೆಗಳು ಅಥವಾ ಕೋಟಿ ಕೋರಿಕೆಗಳು ಎಂದು ಹೇಳಬಹುದು. ಮನುಷ್ಯನಿಗೆ ತನ್ನ ಪ್ರಾಣದ ಮೇಲೆ ಹೇಳಲಾರದಷ್ಟು ಆಸೆ ಇರುವುದರಿಂದ ಮನುಷ್ಯ ಯಾವಾಗಲೂ ಬದುಕಬೇಕೆಂದುಕೊಳ್ಳುತ್ತಾನೆ. ಎಲ್ಲಾ ಆಸೆಗಳಿಗಿಂತ ತಾನು ಬದುಕಬೇಕೆಂಬ ಆಸೆ ಪ್ರತಿ ಮನುಷ್ಯನಿಗು ಹೆಚ್ಚಾಗಿರುತ್ತದೆ. ಆದ್ದರಿಂದ **"ಕೋಟಿ ವಿದ್ಯೆಗಳು ಹೊಟ್ಟೆಗಾಗಿ" "ಕೋಟಿ ಆಸೆಗಳು ಪ್ರಾಣಕ್ಕಾಗಿ"** ಎಂದಿದ್ದಾರೆ. ಪ್ರಾಣವು ಆಯುಸ್ಸನ್ನು ಅನುಸರಿಸಿ ಇರುತ್ತದೆ. ಆದುದರಿಂದ ಎಲ್ಲರಿಗೂ ಆಯಸ್ಸು ಅಗತ್ಯವೆನ್ನುವಂತೆ ಶಂಕರನು ತನ್ನ ಪೀಠಕ್ಕೆ ಆ ಹೆಸರನ್ನು ಇಡಬೇಕೆಂದುಕೊಂಡಿದ್ದಾನೆ. ಇದು ಭೌತಿಕವಾಗಿ ಅರ್ಥವಾಗಿದ್ದರೆ, ಅಭೌತಿಕವಾದ ದೈವಿಕವಾದ ಅರ್ಥ ಸಹ ಈ ವಾಕ್ಯಕ್ಕೆ ಇದೆ. ಜನನ ಮರಣವಿಲ್ಲದ ಆಯಸ್ಸನ್ನು ಅಂದರೇ ಮೋಕ್ಷವನ್ನು ಕೋರಿಕೊಳ್ಳುವುದಕ್ಕೆ ಸಹ "ಕಾಮಕೋಟಿ" ಎಂಬ ಪದವನ್ನು ಬಳಸಬಹುದು. ಎಲ್ಲದಕ್ಕಿಂತ ಸಂಖ್ಯೆಗಳಲ್ಲಿ ದೊಡ್ಡ ಸಂಖ್ಯೆ 'ಕೋಟಿ' ಆಗಿರುವುದರಿಂದ ಆ ವಿಧವಾಗಿ ಹೇಳಿದಂತೆ ಇದೆ. ಆ ದಿನ ಶಂಕರನು ಆರ್ಯರಿಗೆ ಈ ವಿಧವಾದ ಎರಡು ಅರ್ಥಗಳನ್ನು ಹೇಳಿ ಅವರಿಂದ ಒಪ್ಪಿಸಿದ್ದಾನೆ.

ತಮಿಳನಾಡು ರಾಷ್ಟ್ರದಲ್ಲಿ ಕಂಚಿ ಪಟ್ಟಣದಲ್ಲಿ ಕಾಮಕೋಟಿ ಪೀಠ 482 B.C.ಯಲ್ಲಿ ತಯಾರಾಗಿದೆ. ಆ ವಿಧವಾಗಿ ತನ್ನ ಪೀಠವನ್ನು ನಾಲ್ಕುವೇದಗಳಲ್ಲಿ ಯಾವ ವೇದಕ್ಕೆ ಸಂಬಂಧವಿಲ್ಲದೆ ಮಾಡಿಕೊಂಡ ಶಂಕರನು ಒಂದು ವರ್ಷ ಕಾಲದಲ್ಲಿ ಅಂದರೆ 481 B.C. ಭಗವದ್ಗೀತೆಗೆ ಭಾವನೆಯನ್ನು ಬರೆದಿದ್ದಾರೆ. ಅದನ್ನೇ ಈದಿನ "ಆದಿಶಂಕರಾಚಾರ್ಯ ಭಾಷ್ಯ ಭಗವದ್ಗೀತೆ"ಯಾಗಿ ಹೇಳುತ್ತಿದ್ದಾರೆ. ಶಂಕರನು ಆರ್ಯರಿಗೆ ತಿಳಿಯದಂತೆ, ಅವರು ನೋಡದಂತೆ ಐದನೆ ವೇದವನ್ನು ಬರೆಯುತ್ತಿದ್ದಂತೆ ಹೇಳಿ ನೇರವಾಗಿ ಭಗವದ್ಗೀತೆಯನ್ನು ತನ್ನ ಭಾವನೆಯನ್ನು ಬರೆದಿದ್ದಾನೆ. ಶಂಕರನು ಪೂರ್ತಿಯಾಗಿ ಭಗವದ್ಗೀತೆಯನ್ನು

ಬರೆದ ನಂತರ ಆ ವಿಷಯ ಆರ್ಯರಿಗೆ ತಿಳಿದಿದೆ. ಆರ್ಯರು ತಿಳುವಳಿಕೆಯುಳ್ಳ ವರಾದ್ದರಿಂದ ಶಂಕರಾಚಾರ್ಯರಲ್ಲಿನ ಬದಲಾವಣೆಯನ್ನು ಗಮನಿಸಿದ್ದಾರೆ. ಶಂಕರನು ತನ್ನ 28ನೇ ವರ್ಷವೇ ಭಗವದ್ಗೀತಾ ಭಾಷ್ಯ ಬರೆಯಲ್ಪಟ್ಟರೆ ನಂತರ ಮುಂಬರುವ ಕಾಲದಲ್ಲಿ ತಮ್ಮ ಮಾತು ಕೇಳುವುದಿಲ್ಲವೆಂದು ಅವರು ಅಂದುಕೊಳ್ಳುವುದು ನಡೆದಿದೆ. ಶಂಕರನ ಅಂತರ್ಭಾವವನ್ನು ಗ್ರಹಿಸಿದ ಆರ್ಯರು ತಮ್ಮಲ್ಲಿ ಯಾವ ಬದಲಾವಣೆಯಿಲ್ಲದಂತೆ ನಟಿಸುತ್ತಾ ಶಂಕರರೊಂದಿಗೆ ಎಂಥಹ ಭಾವಬೇಧ ಇಲ್ಲದಂತೆ ಪ್ರವರ್ತಿಸುತ್ತಿದ್ದರು. ಹಾಗಿರುತ್ತಾ ಪುನಃ ವೇದಗಳ ಕಡೆ ಬರುವಂತೆ ಭಗವದ್ಗೀತೆಗೆ ವಿರುದ್ಧವಾಗಿ ಬದಲಾಗುವಂತೆ ಅನೇಕ ಪ್ರಯತ್ನಗಳು ಮಾಡುತ್ತಿದ್ದರು. ಶಂಕರನು ಅವರ ಉಪಾಯಗಳನ್ನು ಆಗಿಂದಾಗಲೇ ಗ್ರಹಿಸುವುದರಿಂದ ಅವರ ಭಾವನೆಯೊಳಗೆ ಶಂಕರನು ಬದಲಾಗಲಿಲ್ಲ. ಆದರೂ ಶಂಕರನು ಸಹ ಅವರ ಮಾತನ್ನು ಕೇಳಿದಂತೆ ನಟಿಸುತ್ತಿದ್ದನು. ಈ ವಿಧವಾಗಿ ಎರಡೂಕಡೆ ನಟನೆಗಳೇ ಇದ್ದವಾಗಲಿ ವಾಸ್ತವ ಇರಲಿಲ್ಲ.

ಆರ್ಯರು ಶಂಕರನಲ್ಲಿನ ಬದಲಾವಣೆಗಾಗಿ ಸುಮಾರು ಒಂದು ವರ್ಷಕಾಲ ಕಾದು ನೋಡಿದ್ದಾರೆ. ಆದರೂ ಶಂಕರನಲ್ಲಿ ಬದಲಾವಣೆ ಕಾಣಿಸಲಿಲ್ಲ. ಶಂಕರನ ಮನೋಭಾವನೆ ಹೇಗಿದೆಯೋ ಗುರುತಿಸದಿದ್ದರೂ ಆರ್ಯರು ಶಂಕರನು ಇನ್ನು ಬದಲಾಗುವುದಿಲ್ಲವೆಂದು, ಭವಿಷ್ಯತ್ತಿನಲ್ಲಿ ಅವರಮಾತು ಕೇಳುವುದಿಲ್ಲವೆಂದು ಅವರಿಗೆ ಅರ್ಥವಾಗಿದೆ. ಅಷ್ಟೇಅಲ್ಲದೆ ಅಲ್ಲಿಯವರೆಗು ಸುಮ್ಮನೆಯಿದ್ದ ಶಂಕರನು ಭವಿಷ್ಯತ್ತಿನಲ್ಲಿ ಸುಮ್ಮನಿರದೆ ವೇದಗಳಿಗೆ ವಿರುದ್ಧವಾಗಿ ಭಗವದ್ಗೀತೆಯನ್ನು ಪ್ರಚಾರ ಮಾಡುತ್ತಾನೇನೊ! ಎಂಬ ಭಯ ಆರ್ಯರಲ್ಲಿ ನೆಲೆಗೊಂಡಿದೆ. ಅದೇ ನಡೆದರೆ ಶಂಕರನು ದೊಡ್ಡವನೆಂದು, ತಾವೇ ಪ್ರಜೆಗಳಲ್ಲಿ ಮಾಡಿರುವುದೆಲ್ಲಾ ಶಂಕರನಿಗೆ ಅನುಕೂಲವಾಗಿ, ತಮಗೆ ವಿರುದ್ಧವಾಗಿ ಬದಲಾಗಿ ಹೋಗುತ್ತಾನೆಂದು, ಪ್ರಜೆಗಳಲ್ಲಿ ಚೆನ್ನಾಗಿ ಪ್ರಚಾರವಾದ ಶಂಕರನಮಾತನ್ನೆ ಪ್ರಜೆಗಳೆಲ್ಲರೂ ಕೇಳುತ್ತಾರೆಂದು ಅಂದುಕೊಂಡಿದ್ದಾರೆ. ಆ ವಿಧವಾಗಿ ಭಗವದ್ಗೀತಾ ಪ್ರಚಾರ ನಡೆದು ವೇದಗಳ ಬೆಲೆ ಕಡಿಮೆಯಾದರೆ ತಾವು 12 ವರ್ಷಗಳಿಂದ

ಶಂಕರನನ್ನು ಬೆಳೆಸಿ ಪೋಷಿಸಿ ದೊಡ್ಡವನಾಗಿ ಮಾಡಿರುವುದೆಲ್ಲಾ ತಮಗೆ ಅಡ್ಡ ತಿರುಗುತ್ತದೆಂದು ಆರ್ಯರಿಗೆ ಚೆನ್ನಾಗಿ ತಿಳಿದುಹೋಗಿದೆ. ಶಂಕರನನ್ನು ಪೋಷಿಸಿದ ಆರ್ಯರೆಲ್ಲರೂ ಸೇರಿ ಶಂಕರನಿಗೆ ತಿಳಿಯದಂತೆ ಒಂದುಕಡೆ ರಹಸ್ಯವಾಗಿ ಸಮಾವೇಶಗೊಂಡು ಶಂಕರನ ವಿಷಯವನ್ನು ಚೆನ್ನಾಗಿ ಚರ್ಚೆಮಾಡಿಕೊಂಡಿದ್ದಾರೆ. ಎಲ್ಲರೂ ಸೇರಿ ಶಂಕರನ ಬದಲಾವಣೆಗಾಗಿ ಉತ್ತರದೇಶ ಪರ್ಯಟನೆ ಮಾಡಿಸಬೇಕೆಂದು, ಆತನ ಬದಲಾವಣೆಗಾಗಿ ಅದು ಕೊನೆಯ ಪ್ರಯತ್ನ ಎಂದುಕೊಂಡಿದ್ದಾರೆ. ನಂತರ ಸ್ವಲ್ಪದಿನಗಳಿಗೆ ಉತ್ತರ ದೇಶ ಪರ್ಯಟನೆಯನ್ನು ಕುರಿತು ಶಂಕರನಿಗೆ ತಿಳಿಸಿದ್ದಾರೆ. ನಾಲ್ಕು ಪೀಠಗಳಲ್ಲಿ ಪ್ರಸ್ತುತವಿರುವ ಪೀಠಾಧಿಪತಿಗಳನ್ನು ಮಾತನಾಡಿಸಿ ಅವರ ಕಾರ್ಯಕ್ರಮಗಳನ್ನು ಪರಿಶೀಲಿಸಿ ಬರಬೇಕೆಂದು ಶಂಕರನಿಗೆ ಹೇಳಿದ್ದಾರೆ. ಅವರ ಕೆಲಸವನ್ನು ನೋಡಿ ಅವರನ್ನು ಉತ್ತೇಜಪಡಿಸುವುದಕ್ಕೆ ಮಾತನಾಡಿಸುವುದು ಅಗತ್ಯವೆಂದು ತಿಳಿದ ಆರ್ಯರ ಮಾತನ್ನು ಶಂಕರನು ವಿರೋಧಿಸಲಿಲ್ಲ. ಆರ್ಯರು ಹೇಳಿದ ತಕ್ಷಣ ಒಪ್ಪಿಕೊಂಡಿದ್ದಾನೆ. ಆಗ ಅಂದರೇ! 480 B.C. ಯಲ್ಲಿ ಶಂಕರನು ಉತ್ತರದೇಶ ಪ್ರಯಾಣವನ್ನು ಸಾಗಿಸಿದನು. ಎರಡನೆಬಾರಿ ಪ್ರಯಾಣದಲ್ಲಿ ಕೇವಲ ಕಾಲುನಡೆಯಿಂದಲೇ ಅಲ್ಲದೇ ವಾಹನಗಳಾಗಿ ಕುದುರೆಗಳನ್ನು ಸಹ ವಿನಿಯೋಗಿಸಿಕೊಂಡಿದ್ದಾರೆ. ಅವರ ಪರ್ಯಟನೆ ಕರ್ನಾಟಕದಲ್ಲಿ ಶೃಂಗೇರಿ ಪೀಠವನ್ನು ಸೇರಿ, ಅಲ್ಲಿಂದ ಒರಿಸ್ಸಾದಲ್ಲಿನ ಪೂರಿ ಜಗನ್ನಾಥ ಪೀಠಕ್ಕೆ ಹೋಗುವುದು ನಡೆದಿದೆ. ಅಲ್ಲಿಂದ ಗುಜರಾತ್‌ನಲ್ಲಿನ ದ್ವಾರಾಕಾ ಪೀಠವನ್ನು ಸೇರಿ ಅಲ್ಲಿಂದ ಪೀಠದಲ್ಲಿ ಹತ್ತು ದಿನಗಳು ಕಳೆದು ಕೊನೆಯದಾದ ಹಿಮಾಲಯಗಳಲ್ಲಿರುವ ಬದ್ರಿನಾಥ್ ಪೀಠಗಳವರೆಗು ಹೋಗಲಾಗಿದೆ. ಶಂಕರಾಚಾರ್ಯರಿಗೆ ಕೆಲವರು ಶಿಷ್ಯರು ಸಹ ಆತನಹಿಂದೆ ಹೋಗಿದ್ದಾರೆ. ಆತನ ಶಿಷ್ಯರು ಸಹ ಎಲ್ಲರೂ ಆರ್ಯರೇ ಆಗಿರುವುದು ವಿಶೇಷ.

ಕೇದಾರ್‌ನಾಥ್ ಶಿವಾಲಯದಲ್ಲಿ ಶಂಕರರ ವಸತಿಗೃಹ ಇತ್ತು. ಆಲಯದಲ್ಲಿ ಎಲ್ಲರೂ ಇರುವುದಕ್ಕೆ ಅವಕಾಶವಿಲ್ಲ. ಉಳಿದವರೆಲ್ಲರೂ ಬೇರೆಬೇರೆ

ಸ್ಥಳಗಳಲ್ಲಿ ನಿವಾಸಿಸಿದರೆ ಶಂಕರನು ಆತನೊಂದಿಗೆ ಇಬ್ಬರು ಶಿಷ್ಯರು ಅಲ್ಲಿಯೇ ಆಲಯದಲ್ಲಿ ಇದ್ದರು. ಅಲ್ಲಿ ಶಂಕರನು ವಾರದದಿನಗಳು ಇರಬೇಕೆಂದು ನಿರ್ಣಯಿಸಿಕೊಂಡಿದ್ದಾರೆ. ಕೇದಾರ್‌ನಾಥ್ ಗುಡಿ ಅರಣ್ಯಪ್ರಾಂತ್ಯದಲ್ಲಿ ಇದೆ. ಅಲ್ಲಿಗೆ ಹೋಗುವುದಕ್ಕೆ ಆಗಿನಕಾಲದಲ್ಲಿ ಸರಿಯಾದ ದಾರಿ ಸಹ ಇಲ್ಲ. ಪರ್ವತದ ಅಂಚುಗಳಲ್ಲಿ ಜಾಗ್ರತೆಯಾಗಿ ನಡೆಯುತ್ತಾ ಹೋಗಬೇಕು. ಜನವಾಸರಿಗೆ ಬಹಳ ದೂರವಾಗಿರುವುದರಿಂದ ಅಲ್ಲಿಗೆ ಇತರ ಮನುಷ್ಯರು ಕಾಣಿಸುತ್ತಿರಲಿಲ್ಲ. ಅದು ಅರಣ್ಯ ಪ್ರಾಂತ ಆಗಿರುವುದರಿಂದ, ದಾರಿ ಇಲ್ಲದಿರುವುದರಿಂದ ಕೇದಾರ್‌ನಾಥ್ ಹೊರಗಿನ ಪ್ರಪಂಚದೊಂದಿಗೆ ಸಂಬಂಧ ಇಲ್ಲದಂತೆ ಇರುತ್ತಿತ್ತು. ಅಲ್ಲಿನ ವಿಷಯ ಹೊರಗಿನ ಪ್ರಪಂಚಕ್ಕೆ ತಿಳಿಯಬೇಕೆಂದರೆ ಆಗಿನಕಾಲದಲ್ಲಿ ಸುಮಾರು ವಾರದ ದಿನಗಳು ಹಿಡಿಸುತ್ತಿತ್ತು. ವರ್ಷಕ್ಕೆ ಒಂದು ತಿಂಗಳಲ್ಲಿ ಶಿವ ಭಕ್ತರು ಅಲ್ಲಿಗೆ ಬಂದು ದರ್ಶನ ಮಾಡಿಕೊಂಡು ಹೋಗುತ್ತಿದ್ದರು. ವರ್ಷದಲ್ಲಿ ಹನ್ನೊಂದು ತಿಂಗಳು ಅಲ್ಲಿರುವ ಪೂಜಾರಿಗಳು ಹೊರತು ಯಾರೂ ಇರುತ್ತಿರಲಿಲ್ಲ. ಅದು ಹಿಮಾಲಯ ಪರ್ವತ ಪ್ರದೇಶವಾಗಿರುವುದರಿಂದ ಅಲ್ಲಿ ಇತರ ಮನುಷ್ಯರು ಬದುಕುವ ಸೌಕಾರ್ಯ ಯಾವುದು ಇಲ್ಲ. ಆದ್ದರಿಂದ ಹೊರಗಿನ ಜನರು ಅಲ್ಲಿ ಯಾರೂ ಇರಲಿಲ್ಲ. ಅಂಥಹ ವಾತಾವರಣವಿರುವ ಕಡೆ ಕೇದಾರ್‌ನಾಥ್ ಗುಡಿ ಕಟ್ಟಲಾಗಿದೆ.

ಶಂಕರಾಚಾರ್ಯರ ಪರ್ಯಟನೆಯಲ್ಲಿ ಹತ್ತು ದಿನಗಳು ಕೇದಾರ್‌ನಾಥ್ ನಲ್ಲಿ ಇರಬೇಕೆಂದುಕೊಂಡರು. ವಾರದ ದಿನಗಳು ಕಳೆದಿದೆ, ಹತ್ತು ದಿನಗಳಿಗೆ ಎರಡು ದಿನಗಳು ಉಳಿದಿರುವುದರಿಂದ, ಆ ದಿನ ರಾತ್ರಿ ಆಲಯದೊಳಗೆ ಕಳ್ಳರು ಪ್ರವೇಶಿಸಿದ್ದಾರೆ. ಆಗ ಗುಡಿಯಲ್ಲಿ ಶಂಕರನು ಆತನ ಶಿಷ್ಯನು ಒಬ್ಬನಿದ್ದಾನೆ. ಮತ್ತೊಬ್ಬ ಶಿಷ್ಯನು ಜ್ವರದಿಂದ ಬಾಧೆಪಡುತ್ತಿರುವುದರಿಂದ ಉಳಿದವರೊಂದಿಗೆ ಆಲಯಕ್ಕೆ ಸ್ವಲ್ಪ ದೂರದಲ್ಲಿರುವ ಗುಡಾರದಲ್ಲಿದ್ದನು. ಕೇದಾರ್‌ನಾಥ್ ಗುಡಿ ಮಂದಾಕಿನಿ ನದಿ ತೀರದಲ್ಲಿ ಇರುವುದರಿಂದ ಅಲ್ಲಿ ಭೂಮಿ ಸಮವಾಗಿಲ್ಲದಿರುವು ದರಿಂದ ಉಳಿದವರೆಲ್ಲರೂ ಆಲಯಕ್ಕೆ ಸ್ವಲ್ಪ ದೂರದಲ್ಲಿ ಅವರ ಗುಡಾರಗಳನ್ನು

ನಿರ್ಮಿಸಿಕೊಂಡಿದ್ದಾರೆ. ಬದ್ರಿನಾಥ್ ಯಾತ್ರೆ ಬಹಳ ಕಷ್ಟವಾದುದಾಗಿರುವುದರಿಂದ, ಶಂಕರನ ಹಿಂದೆ ಹೋದ ಹತ್ತುಜನರಲ್ಲಿ ಅರ್ಧಜನ ಕೆಳಗೆ ನಿಂತುಹೋಗಿದ್ದಾರೆ. ದೊಡ್ಡ ವಯಸ್ಸಿರುವವರು, ನಡೆಯಲಾಗದವರು ಪರ್ವತದ ಕೆಳಗಿನ ಪ್ರಾಂತದಲ್ಲಿಯೇ ನಿಂತುಹೋಗಿ, ನಡೆಯುವಂತವರು ಚಿಕ್ಕವಯಸ್ಸಿನವರು ಮಾತ್ರ ಪರ್ವತಗಳ ಮೇಲಕ್ಕೆ ಹೋಗಿದ್ದಾರೆ. ಕೇದಾರ್‌ನಾಥ್‌ನಲ್ಲಿ ಇರುವ ಸುಮಾರು ಐವತ್ತುಜನ ಕೇದಾರ್‌ನಾಥ್ ಗುಡಿಗೆ ಸ್ವಲ್ಪ ದೂರದಲ್ಲಿರುವುದರಿಂದ. ಅಲ್ಲಿ ಗುಡಿಯಲ್ಲಾಗಲಿ, ಪರಿಸರ ಪ್ರಾಂತ್ಯದಲ್ಲಾಗಲಿ ವಿದ್ಯುತ್ ಇಲ್ಲದಿರುವುದರಿಂದ ಗುಡಿಯಲ್ಲಿ ಏನು ನಡೆಯುತ್ತಿರುವುದು ಪಕ್ಕದವರಿಗೆ ತಿಳಿಯುವ ಅವಕಾಶವೇ ಇಲ್ಲ. ಅಂಥಹ ಸ್ಥಿತಿಯಲ್ಲಿ ಗುಡಿಯೊಳಗೆ ಕಳ್ಳರು ಪ್ರವೇಶಿಸಿ ಅಲ್ಲಿರುವ ಶಂಕರನ ಶಿಷ್ಯನನ್ನು, ಶಂಕರನನ್ನು ಒಡೆಯುವುದು ನಡೆದಿದೆ. ಶಿಷ್ಯನು ಪ್ರಜ್ಞೆ ತಪ್ಪಿ ಬಿದ್ದುಹೋದನು, ಶಂಕರನು ಅವರು ಒಡೆದ ಹೊಡೆತಗಳಿಗೆ ಸಹಿಸಿಕೊಳ್ಳಲಾರದೆ ಮರಣಿಸಿದ್ದಾನೆ. ಅಲಯದಲ್ಲಿರುವ ಸ್ವಲ್ಪಮಟ್ಟಿನ ಒಡವೆ ಮತ್ತು ಹಣವನ್ನು ಕಳ್ಳರು ಅಪಹರಿಸಿಕೊಂಡು ಹೋಗುವುದು ನಡೆದಿದೆ.

ಶಂಕರಾಚಾರ್ಯರು ಕಳ್ಳರ ಕೈಯಲ್ಲಿ ಮರಣಿಸಿದ ವಿಷಯ ಮುಂಜಾನೆಯ ವರೆಗು ಅಲ್ಲಿರುವವರಿಗೆ ಯಾರಿಗೂ ತಿಳಿಯಲಿಲ್ಲ. ಸ್ವಲ್ಪದೂರದಲ್ಲಿರುವ ಗುಡಾರದೊಳಗಿನವರಿಗೆ ಶಂಕರನ ಮರಣ ವಿಷಯ ಬೆಳಗಾದ ನಂತರ ತಿಳಿದಿದೆ. ತಕ್ಷಣ ಆ ವಿಷಯ ಹೊರಗೆ ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ಶಂಕರನ ಹಿಂದೆಹೋಗಿ ಪರ್ವತಗಳ ಕೆಳಗೆ ನಿಂತುಹೋದ ಅರ್ಧಜನರಿಗೂ ಸಹ ಶಂಕರನ ಮರಣ ವಿಷಯ ತಿಳಿದಿಲ್ಲ. ಮೂರು ದಿನಗಳ ನಂತರ, ಆ ವಿಷಯ ಕೆಳಗಿರುವವರಿಗಾಗಲಿ ಹೊರಗಿನ ಪ್ರಪಂಚಕ್ಕಾಗಲಿ ತಿಳಿದಿದೆ. ಇಂದಿನ ಕಾಲದಲ್ಲಿರುವಂತೆ ಆಗ ಪ್ರಸಾರ ಸಲಕರಣೆಗಳಾದ ದೂರವಾಣಿಗಳ ಸೌಕರ್ಯ ಇಲ್ಲದಿರುವುದರಿಂದ, ರೈಲು, ಬಸ್ಸು ಸೌಕರ್ಯ ಇಲ್ಲದಿರುವುದರಿಂದ ಒಂದು ವಾರ್ತೆ ತಿಳಿಯಬೇಕೆಂದರೆ ಮನುಷ್ಯರು ಹೋಗಿ ತಿಳಿಸುವವರೆಗು ತಿಳಿಯುವುದಿಲ್ಲ. ಇಲ್ಲಿಗೆ ಸುಮಾರು

2500 (2492) ವರ್ಷಗಳ ಕೆಳಗೆ ಇಂದಿನ ಕಾಲದಂತೆ ಏನು ಇಲ್ಲ. ಆದುದರಿಂದ ಶಂಕರಾಚಾರ್ಯರ ಮರಣವಾರ್ತೆ ಶಂಕರನ ಸ್ವಗ್ರಾಮಕ್ಕೆ ಸುಮಾರು ವರ್ಷದ ಕಾಲದವರೆಗು ತಿಳಿದಿಲ್ಲವೆಂದೇ ಹೇಳಬಹುದು. ಶಂಕರನು ಮರಣಿಸಿದ ದಿನದಂದು ಅಲ್ಲಿ ಸುಮಾರು ಐವತ್ತುಜನರು ಮಾತ್ರ ಇರುವುದರಿಂದ ಅವರೇ ಶಂಕರರ ಅಂತ್ಯಕ್ರಿಯೆಗಳನ್ನು ಕೇದಾರ್‌ನಾಥ್‌ನಲ್ಲಿಯೇ ಮಾಡಿದ್ದಾರೆ.

**ಪ್ರಶ್ನೆ :– ಶಂಕರಾಚಾರ್ಯರು ಕಳ್ಳರ ದಾಳಿಯಲ್ಲಿ ಮರಣಿಸಿದ್ದಾರೆಂದು ಉಳಿದವರಿಗೆ ಬೆಳಗಾದ ನಂತರ ಹೇಗೆ ತಿಳಿದಿದೆ?**

**ಉತ್ತರ :–** ಶಂಕರನೊಂದಿಗೆ ಅಲ್ಲಿಯೇ ಇರುವ ಶಿಷ್ಯನು ಹೇಳಿದಾಗ ಆ ವಿಷಯ ಎಲ್ಲರಿಗೂ ತಿಳಿದಿದೆ.

**ಪ್ರಶ್ನೆ :– ಶಂಕರಾಚಾರ್ಯ ರ ಮರಣ ವಿಷಯವನ್ನು ಅಲ್ಲಿಯೇ ಇರುವ ಶಿಷ್ಯನು ಬಂದು ಉಳಿದವರಿಗೆ ತಿಳಿಸಬಹುದಲ್ಲವೆ! ಹಾಗಲ್ಲದೆ ಮುಂಜಾನೆಯವರೆಗೂ ಶಿಷ್ಯನು ಉಳಿದವರಿಗೆ ಏಕೆ ಹೇಳಲಿಲ್ಲ?**

**ಉತ್ತರ :–** ಕಳ್ಳರು ಆಲಯದಲ್ಲಿ ಪ್ರವೇಶಿಸಿದ ಸಮಯದಲ್ಲಿ ಶಂಕರನು ಮತ್ತು ಆತನ ಶಿಷ್ಯರು ಹೊರತು ಯಾರೂ ಇಲ್ಲ. ಕಳ್ಳರ ದಾಳಿಯಲ್ಲಿ ಶಿಷ್ಯನಿಗೆ ಕಾಲಿನ ಮೂಳೆ ಮುರಿದಿದೆ. ನಂತರ ಆತನು ಮೂರ್ಛೆಹೋಗಿದ್ದಾನೆ. ಮೂರ್ಛೆಯಿಂದ ಸ್ವಲ್ಪಸಮಯಕ್ಕೆ ಎಚ್ಚರಗೊಂಡರೂ, ಆತನ ಕಾಲು ಕದಲಿಸಲಾರದೆ ಇದ್ದರಿಂದ ಆತನು ಹೊರಗೆ ಬರಲಾರದೆ ಹೋಗಿದ್ದಾನೆ. ಬೆಳಗಾದ ನಂತರ ಉಳಿದವರು (ಪೂಜಾರಿಗಳು) ಅಲ್ಲಿಗೆ ಹೋದ ನಂತರ ಶಂಕರನವರ ಮರಣ ತಿಳಿದಿದೆ. ಅಲ್ಲಿಯೇ ಗುಡಿಯಲ್ಲಿಯೇ ಇರುವ ಶಿಷ್ಯನಿಗೂ ಸಹ ಶಂಕರನು ಮರಣಿಸಿದ್ದಾನೆಂಬ ವಿಷಯ ತಿಳಿದಿಲ್ಲ. ಕಳ್ಳರ ದಾಳಿ ನಡೆದ ವಿಷಯ ತಿಳಿದ ಶಿಷ್ಯನಿಗೆ ಶಂಕರನು ಏನಾಗಿದ್ದಾನೆಂಬ ವಿಷಯ ಗೊತ್ತಿಲ್ಲ. ಆತನಿಗೂ ಸಹ ಬೆಳಗಾದ ನಂತರ ಇತರರಿಗೆ ತಿಳಿದ ನಂತರ ತಿಳಿದಿದೆ.

**ಪ್ರಶ್ನೆ :– ಅದು ಅರಣ್ಯ ಪ್ರದೇಶ, ನಂತರ ಯಾರೂ ಸುಲಭವಾಗಿ ಅಲ್ಲಿಗೆ ಹೋಗಲಾರದ ಪರ್ವತಪ್ರದೇಶ. ಜನವಾಸವಿಲ್ಲದ ಪ್ರದೇಶ. ಅಂಥಹ ಸ್ಥಳಕ್ಕೆ ಕಳ್ಳರು ಏಕೆ ಹೋಗಿದ್ದಾರೆ?**

**ಉತ್ತರ:–** ಶಂಕರನು ಆತನ ಶಿಷ್ಯರು ಅಲ್ಲಿಗೆ ಹೋದ ವಿಷಯ ಪರ್ವತದ ಕೆಳಗಿನ ಪ್ರಾಂತದಲ್ಲಿ ತಿಳಿದುಹೋಗುವುದರಿಂದ, ಅಲ್ಲಿ ಆಲಯದಲ್ಲಿ ಬೆಲೆಯುಳ್ಳ ಚಿನ್ನ ಧನ ದೊರೆಯುತ್ತದೆಂಬ ಉದ್ದೇಶದಿಂದ ಕಳ್ಳರು ಬಂದಿರಬಹುದು. ಪೂರ್ವದಲ್ಲಿ ದೇವಾಲಯಗಳಲ್ಲಿ ಚಿನ್ನವನ್ನು ದೇವತೆಗಳಿಗೆ ಆರ್ಪಿಸುವುದು ಆಚರಣೆಯಲ್ಲಿತ್ತು. ಆದ್ದರಿಂದ ಮತ್ತು ಶಂಕರನು ಬಂದು ಅಲ್ಲಿ ಚಿನ್ನವನ್ನು ಸಮರ್ಪಿಸಿದ್ದಾನೆಂಬ ನಂಬಿಕೆಯಿಂದ ಕಳ್ಳರು ಬರುವುದು ನಡೆದಿದೆ. ಅಷ್ಟೇ ಅಲ್ಲದೆ ಶಂಕರನ ಹತ್ತಿರ ಸ್ವಲ್ಪ ಧನ ಇರಬಹುದೆಂಬ ಆಲೋಚನೆಯಿಂದ ಕಳ್ಳರು ಅಲ್ಲಿಗೆ ಬಂದು ಆಲಯದಲ್ಲಿ ಒಡವೆಗಳಿಗಾಗಿ ಧನಕ್ಕಾಗಿ ಹುಡುಕುವುದು ನಡೆದಿದೆ. ಚಿನ್ನ ದೊರೆತರು ಧನ ಸಿಗದಿರುವುದಕ್ಕೆ ಶಂಕರನನ್ನು ಹೊಡೆದರೆ ಕೊಡುತ್ತಾನೆಂದುಕೊಂಡು ಶಂಕರನನ್ನು ಹೊಡೆದಿದ್ದಾರೆ. ಶಂಕರನ ಹತ್ತಿರ ಅವರ ಪರ್ಯಟನೆಗೆ ಬೇಕಾದ ಧನವಿರುವುದು ನಿಜವೇ, ಆದರೂ ಕಳ್ಳರಿಗೆ ಶಂಕರನನ್ನು ಹೊಡೆದರೆ ಹಣ ಸಿಗುತ್ತದೆಂಬ ಉದ್ದೇಶದಿಂದ ಅವರು ಶಂಕರನನ್ನು ಹೊಡೆಯುವುದು ನಡೆದಿದೆ. ಶಂಕರನು ಕಳ್ಳರಿಗೆ ಧನಕೊಟ್ಟರೂ ಅವರು ಹೊಡೆದ ಹೊಡೆತಗಳಿಗೆ ಆತನ ಪ್ರಾಣ ಹೋಗಿದೆ.

**ಪ್ರಶ್ನೆ :– ನಾವು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತೇವೆ, ನೀವು ನೇರವಾಗಿ ಉತ್ತರವನ್ನು ಹೇಳಿರಿ. ಶಂಕರನು ಆರ್ಯರ ಕುತಂತ್ರದಿಂದ ಮರಣಿಸಿದ್ದಾನಾ? ಅಥವಾ ಕಳ್ಳರು ಹಣಕ್ಕಾಗಿ ಹೊಡೆದಾಗ ಮರಣಿಸಿದ್ದಾನಾ?**

**ಉತ್ತರ :–** ನಾವು ಯಾವುದೂ ಹೇಳಲಾರೆವು. ಆರ್ಯರಿಗೆ ಶಂಕರನ ಮೇಲೆ ಕೆಟ್ಟ ಭಾವನೆ ಇರುವುದು ನಿಜವೇ. ಆದರೂ ಅಲ್ಲಿ ಆರ್ಯರೇ ಆ ಕೆಲಸವನ್ನು ಮಾಡಿದ್ದಾರೆನ್ನುವುದಕ್ಕೆ ಯಾವುದೇ ಸಾಕ್ಷ್ಯಾಧಾರಗಳು ಇಲ್ಲ. ಆದ್ದರಿಂದ ಅದೇ ನಿಜವೆಂದು ಹೇಳುವುದಕ್ಕೆ ಅವಕಾಶವಿಲ್ಲ.

**ಪ್ರಶ್ನೆ :– ಸಾಕ್ಷ್ಯಾಧಾರಗಳಿದ್ದರೆ ಅದು ಹೊರಗೆ ತಿಳಿಯುತ್ತದೆ. ಹೊರಗೆ ವಿಷಯ ಹರಡಬಾರದೆಂದುಕೊಂಡರೆ ಸಾಕ್ಷ್ಯಾಧಾರಗಳು ಇಲ್ಲದಂತಿರಬೇಕು. ಅಲ್ಲಿಯವರೆಗು ನಡೆದ ಸಂಘಟನೆಗಳನ್ನು ಗಮನವಹಿಸಿ ನೋಡಿದರೆ, ಆರ್ಯರೇ ಆ ಕೆಲಸವನ್ನು ತಿಳುವಳಿಕೆಯಿಂದ ಮಾಡಿರಬಾರದಾ?**

**ಉತ್ತರ :–** ಶಂಕರನು ಮರಣಿಸುವುದಕ್ಕಿಂತ ಮೊದಲು ನಡೆದ ವಿಷಯಗಳಿಗಿಂತ. ಆತನು ಮರಣಿಸಿದ ನಂತರ ನಡೆದಿರುವುದನ್ನು ಶಂಕರಾಚಾರ್ಯನ ಮರಣ ಆರ್ಯರ ಕುತಂತ್ರದಲ್ಲಿನ ಭಾಗವೇಯೆಂದು ತಿಳಿಯುತ್ತಿದೆ. ನನಗೆ ಉಂಟಾದ ಅನುಮಾನವನ್ನು ಕುರಿತು ನಾನು ಹೇಳುತ್ತೇನೆ. ಆದರೂ ನನ್ನ ಊಹೆಯೇ ನೀವೆಲ್ಲರೂ ನಂಬಿರೆಂದು ನಾನು ಹೇಳುತ್ತಿಲ್ಲ. ನನ್ನ ಉದ್ದೇಶ ನಿಜವಾಗಬಹುದು, ಆಗದಿರಬಹುದು. ಆದ್ದರಿಂದ ತುದಿ ನಿರ್ಣಯವನ್ನು ನಿಮಗೇ ಬಿಡುತ್ತಿದ್ದೇನೆ. ಶಂಕರನ ಜೀವನವೆಲ್ಲ 15 ವರ್ಷಗಳಿಂದ 27 ವರ್ಷಗಳವರೆಗು ದೇಶಪರ್ಯಟನೆ ಪೀಠಗಳ ಸ್ಥಾಪನೆಯಲ್ಲಿ ಕಳೆದುಹೋಗಿದೆ. ಶಂಕರನು ಚಿಕ್ಕವಯಸ್ಸಿನಲ್ಲಿಯೇ ಸಂಸ್ಕೃತ ವಿದ್ಯೆಯನ್ನು ಕಲಿಯುವುದು, ವೇದಪಠನೆ ನಡೆಸುವುದು ಮೊದಲಾದವೆಲ್ಲ ಕಲಿತರು ಪರಕಾಯ ಪ್ರವೇಶ ವಿದ್ಯೆಯನ್ನು ಕಲಿಯಲಿಲ್ಲ. ಆತನು ಪರಕಾಯ ಪ್ರವೇಶ ಮಾಡಲಿಲ್ಲ. ಶಂಕರನು ಮರಣಿಸಿದ ನಂತರ ಆರ್ಯರು ಶಂಕರನನ್ನು ಇನ್ನೂ ಹೆಚ್ಚಾಗಿ ಪ್ರಚಾರ ಮಾಡುವುದಕ್ಕೆ ಶಂಕರನು ಪರಕಾಯ ಪ್ರವೇಶ ಮಾಡಿ, ಮರಣಿಸಿದ ಒಬ್ಬ ರಾಜನ ಶರೀರದೊಳಗೆ ತೂರಿ, ಅಲ್ಲಿ ಒಂದು ವರ್ಷದ ಕಾಲದವರೆಗು ರಾಜನ ಪತ್ನಿಯೊಂದಿಗೆ ಸಂಸಾರ ಮಾಡಿ, ಶೃಂಗಾರ ವಿಷಯಗಳನ್ನು ಅದರಲ್ಲಿನ ಕಲಾಕೌಶಲ್ಯಗಳನ್ನು ಎಷ್ಟನ್ನೊ ಕಲಿತುಕೊಂಡಂತೆ ಪ್ರಚಾರ ಮಾಡಿದ್ದಾರೆ. ನಿಜಕ್ಕೆ ಶಂಕರನ ಜೀವನದಲ್ಲಿ ನಡೆಯದಿರುವುದನ್ನು ನಡೆದಂತೆ ಹೇಳುವುದರಲ್ಲಿ ಆರ್ಯರು ಅದೇ ಕೆಲಸವಾಗಿ ಅಸತ್ಯವನ್ನು ಹೇಳಿದ್ದಾರೆಂದು ತಿಳಿಯುತ್ತಿದೆ. ಶಂಕರನು ದೊಡ್ಡವನೆಂದು ಹೇಳುವ ಪ್ರಯತ್ನದಲ್ಲಿ ಈ ಅಸತ್ಯವನ್ನು ಹೇಳಿದ್ದಾರೆಂದು ತಿಳಿಯುತ್ತಿದೆ. ಹಾಗೆ ಅಸತ್ಯವನ್ನು ಹೇಳಬೇಕಾದ ಅಗತ್ಯ ಏನು ಬಂದಿದೆಯೆಂದು ನೋಡಿದರೆ, ಶಂಕರನು ದೊಡ್ಡವನೆಂದು

ಆತನು ಮರಣಿಸಿದ ನಂತರ ಸಹ ಹೇಳುವುದನ್ನನುಸರಿಸಿ ಆತನ ಮೇಲೆ ಆರ್ಯರಿಗೆ ಎಷ್ಟೋ ಭಕ್ತಿ ವಿಶ್ವಾಸಗಳಿವೆಯೆಂದು ತಿಳಿಯುತ್ತಿದೆ.

ಆದರೆ ಶಂಕರನು ತನ್ನ ಜೀವನದಲ್ಲಿ ಪರಕಾಯ ಪ್ರವೇಶ ವಿದ್ಯೆಯನ್ನು ಎಂದಿಗೂ ಕಲಿಯಲಿಲ್ಲ. 2500 ವರ್ಷಗಳ ಪೂರ್ವದಲ್ಲಿ ಮಲೆಯಾಳ ರಾಷ್ಟ್ರದಲ್ಲಿ (ಕೇರಳ) ದಲ್ಲಿ ಪರಕಾಯ ಪ್ರವೇಶ ವಿದ್ಯೆಯನ್ನು ಕಲಿಸುವ ಗುರುಗಳು ಇದ್ದರು. ವಿಕ್ರಮಾರ್ಕ ಮಹಾರಾಜ ಸಹ ಕೇರಳ ರಾಷ್ಟ್ರದಲ್ಲಿ ಪರಕಾಯ ಪ್ರವೇಶವಿದ್ಯೆಯನ್ನು ಕಲಿತಂತೆ ಚರಿತ್ರೆಯಲ್ಲಿ ಇದೆ. ಆ ವಿದ್ಯೆಯನ್ನು ಕಲಿಸುವುದಕ್ಕೆ ಬೇಕಾದ ಕಾಲ 12 ವರ್ಷಗಳು. ಶಂಕರನ ಜೀವನ ಬಡಿಸಿದ ಊಟದ ಎಲೆಯಂತೆ ಎಲ್ಲರಿಗೂ ತಿಳಿದಿರುವುದೇ. ಅತಿ ಚಿಕ್ಕವಯಸ್ಸಿನಲ್ಲಿಯೇ 14 ವರ್ಷಗಳಿಂದಲೇ ಶಂಕರನ ಮೇಲೆ ಆರ್ಯರ ಕಣ್ಣು ಬಿದ್ದಿದೆ. ನಂತರ ಹದಿನಾರನೆಯ ವರ್ಷದಿಂದ ಆರ್ಯರು ಶಂಕರನನ್ನು ಉತ್ಸವ ಪ್ರತಿಮೆಯಂತೆ ಬಳಸಿಕೊಂಡಿದ್ದಾರೆ. ಶಂಕರನನ್ನು ತೋರಿಸಿ ವೇದಗಳನ್ನು, ಯಜ್ಞಗಳನ್ನು ಪ್ರಚಾರ ಮಾಡಿದ್ದಾರೆ. ಆರ್ಯರ ಕೈಯಲ್ಲಿ ಕೀಲುಗೊಂಬೆಯಂತೆ ಇರುವ ಶಂಕರನು 12 ವರ್ಷಗಳು ಪರಕಾಯ ಪ್ರವೇಶ ವಿದ್ಯೆಗಾಗಿ ವಿನಿಯೋಗಿಸಲಿಲ್ಲ. ಪರಕಾಯ ಪ್ರವೇಶವಿದ್ಯೆಯನ್ನು ತಿಳಿಯದ ಶಂಕರನು ಪರಕಾಯ ಮಾಡಿದ್ದಾನೆಂದು ಹೇಳುವುದರಿಂದ ಅವರ ಕುತಂತ್ರ ಸ್ವಲ್ಪ ಹೊರಬಿದ್ದಿದೆ. ಹಾಗೆ ಆತನು ಮರಣಿಸಿದ ನಂತರ ಸಹ ಆತನನ್ನು ದೊಡ್ಡದಾಗಿ ಹೇಳುವುದರಿಂದ ಶಂಕರನನ್ನು ಆರ್ಯರು ಹತ್ಯೆ ಮಾಡಿದ್ದಾರೆಂಬ ಅನುಮಾನ ಯಾರಿಗೂ ಭವಿಷ್ಯತ್ತಿನಲ್ಲಿ ಬಾರದಂತಿರುವುದಕ್ಕೇ ಅವರು ಹಾಗೆ ಹೇಳುತ್ತಿದ್ದಾರೆಂದು ಅರ್ಥವಾಗಿದೆ. ಈ ಒಂದು ಆಧಾರದಿಂದಲೇ ನಾವು ಆರ್ಯರನ್ನು ಅನುಮಾನಿಸುತ್ತಿದ್ದೇವೆ.

ದೇಶದಲ್ಲಿ ನಾಲ್ಕು ಮೂಲೆಗಳಲ್ಲಿ ನಾಲ್ಕು ಅದ್ವೈತ ಪೀಠಗಳನ್ನು ಶಂಕರನು ಸ್ಥಾಪಿಸಿದ ನಂತರ ಪ್ರತ್ಯೇಕವಾಗಿ ಐದನೆ ಪೀಠವನ್ನು ತನ್ನ ನಿವಾಸಕ್ಕಾಗಿ ಏರ್ಪಡಿಸಿಕೊಂಡಿದ್ದಾನೆ. ಮೊದಲು ಏರ್ಪಡಿಸಿದ ನಾಲ್ಕು ತನ್ನ ಸ್ವಂತ ಪೀಠಗಳೇ ಅದಾಗ ಶಂಕರನಿಗೆ ಐದನೆ ಪೀಠವನ್ನು ಏರ್ಪಾಟು ಮಾಡಿಕೊಳ್ಳಬೇಕಾದ

ಅವಶ್ಯಕತೆ ಏನು? ಎಂಬ ಪ್ರಶ್ನೆ ಬರುತ್ತದೆ. ಹಾಗೆ ಏರ್ಪಡಿಸಿಕೊಳ್ಳುವುದರಿಂದ ಆ ನಾಲ್ಕು ಪೀಠಗಳು ತನಗೆ ಇಷ್ಟವಿಲ್ಲದಂತೆಯೇ ಅಲ್ಲವೆ! ಹಾಗೆ ಇಷ್ಟ ಇಲ್ಲದಂತೆ ಹೋಗಿರುವುದಕ್ಕೆ ಕಾರಣವೇನು? ಎಂಬ ಪ್ರಶ್ನೆ ಸಹ ಬರುತ್ತದೆ. ಇವುಗಳಿಗೆಲ್ಲ ಉತ್ತರವನ್ನು ಹುಡುಕಿದರೆ ಚಿಕ್ಕವಯಸ್ಸಿನಲ್ಲಿ ತಾನು ಮಾಡಿದ ಕೆಲಸ ವಯಸ್ಸು ಬಂದ ನಂತರ ತನಗೇ ಸರಿಹೋಗಲಿಲ್ಲವೆಂದು ಅರ್ಥವಾಗುತ್ತಿದೆ. ಮೊದಲ ನಾಲ್ಕು ಪೀಠಗಳು 'ನಾಲ್ಕು ವೇದಗಳಿಗೆ' ಗುರುತಾಗಿ ತಯಾರು ಮಾಡಲಾಗಿದೆ. ಭಗವದ್ಗೀತೆಯಲ್ಲಿನ ಜ್ಞಾನದಲ್ಲಿ ವೇದಗಳೆಂದರೆ ಏನೊ? ಅವುಗಳಿಗೆ ದೇವರ ದೃಷ್ಠಿಯಲ್ಲಿರುವ ಸ್ಥಾನವೇನೋ ಭಗವದ್ಗೀತೆಯನ್ನು ಓದಿದ ನಂತರವೇ ಶಂಕರನಿಗೆ ಅರ್ಥವಾಗಿರುವುದನ್ನು ಅನುಸರಿಸಿ ಆತನಿಗೆ ನಾಲ್ಕು ಪೀಠಗಳ ಮೇಲೆ ಇಷ್ಟ ಇಲ್ಲದಂತೆ ಹೋಗಿದೆಯೆಂದು ಅರ್ಥವಾಗಿದೆ. ಅಲ್ಲಿಂದ ಶಂಕರನಲ್ಲಿ ಬಂದಿರುವ ಬದಲಾವಣೆ ಆರ್ಯರಿಗೆ ಇಷ್ಟವಾಗದಿರುವುದು ಸಹ ನಮಗೆ ತಿಳಿದ ವಿಷಯವೇ. ಎರಡು ಅಥವಾ ಮೂರು ವರ್ಷಗಳು ಶಂಕರನನ್ನು ಪುನಃ ತಮ್ಮ ದಾರಿಯೊಳಗೆ ತಂದುಕೊಳ್ಳಬೇಕೆಂದು ಆರ್ಯರು ಪ್ರಯತ್ನ ಮಾಡಿರುವುದು ನಿಜವೇ. ಆರ್ಯರು ಶಂಕರನು ಒಬ್ಬರಿಗೊಬ್ಬರು ಸರಿಹೋಗದ ಭಾವನೆಯಿಂದ ಸ್ವಲ್ಪಕಾಲ ಕಳೆದ ನಂತರ ಸಹ ಶಂಕರನು ಬದಲಾಗದಿದ್ದಾಗ, ಆರ್ಯರಿಗೆ ಒಳೊಳಗೆ ಶಂಕರನಿಗೆ ವಿರುದ್ಧವಾಗಿರುವಾಗ, ಆತನು ಮರಣಿಸಿದ ನಂತರ ಶಂಕರನ ಬಗ್ಗೆ ಅನೇಕಕಡೆ, ಅನೇಕ ವಿಧಗಳಾಗಿ ಹೊಗಳುವುದು ಏಕೆಂದು ಪ್ರಶ್ನೆ ಬರಬಹುದು. ಅಷ್ಟೇ ಅಲ್ಲದೆ ಶಂಕರನಿಗೆ ತಿಳಿಯದ ಪರಕಾಯ ಪ್ರವೇಶವನ್ನು ಆತನಿಗೆ ತಿಳಿದಿದೆಯೆಂದು ಹೇಳುವುದು ಏಕೆ? ಅಷ್ಟೇ ಅಲ್ಲದೆ ಆತನು ಮಾಡದ ಮಹಿಮೆಗಳನ್ನು ಮಾಡಿದ್ದಾನೆಂದು ಕಲ್ಪಿಸಿ ಹೇಳುವುದು ಏಕೆ? ಎಂಬ ಪ್ರಶ್ನೆಗಳು ಏಕಧಾಟಿಯಾಗಿ ಬರುತ್ತವೆ.

ಶಂಕರನು ಕೇದಾರ್‌ನಾಥ್ ಗುಡಿಯಲ್ಲಿ ಮರಣಿಸಿದಾಗ ಅದೇ ದಿನವೇ ಗುಡಿ ಪಕ್ಕದಲ್ಲಿಯೇ ಶಂಕರನನ್ನು ಹೂತಿಟ್ಟು ಸಮಾಧಿಯನ್ನು ಕಟ್ಟಿದ್ದಾರೆ. ಆದರೆ ಶಂಕರನಿಗೆ ಕೊಟ್ಟಿರುವ ಗೌರವವನ್ನು ಶಂಕರನ ಸಮಾಧಿಗೆ

ಕೊಡಲಿಲ್ಲವೆಂದು, ಶಂಕರನನ್ನು ಪ್ರಚಾರ ಮಾಡಿದಂತೆ ಶಂಕರನ ಸಮಾಧಿಯನ್ನು ಪ್ರಚಾರ ಮಾಡಲಿಲ್ಲ. ಶಂಕರನ ಸಮಾಧಿಗೆ ಯಾವುದೆ ಭದ್ರತೆ ಕಲ್ಪಿಸಲಿಲ್ಲ. ಆದುದರಿಂದ 2013ನೇ ವರ್ಷದಲ್ಲಿ ಸುರಿದ ಮಳೆಗೆ ಅಲ್ಲಿ ಮಂದಾಕಿನಿ ನದಿಗೆ ಬಂದಿರುವ ಪ್ರವಾಹದಲ್ಲಿ ಶಂಕರನ ಸಮಾಧಿ ಪೂರ್ತಿಯಾಗಿ ನಾಮರೂಪಗಳು ಇಲ್ಲದಂತೆ ನೀರಿನ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗಿದೆ. ತಾವೇ ಸೃಷ್ಟಿಸಿ ಶಂಕರನ ಮೂಲಕ ಪ್ರಚಾರ ಮಾಡಿಸಿದ ಅದ್ವೈತ ಪೀಠವನ್ನು ಪ್ರಚಾರ ಮಾಡಿದ ಶ್ರದ್ಧೆಯನ್ನು ಶಂಕರನ ಸಮಾಧಿ ನೀರಿನಲ್ಲಿ ಕೊಚ್ಚಿಕೊಂಡು ಹೋದನಂತರ ಆತನ ಸಮಾಧಿ ಮೇಲೆ ಶ್ರದ್ಧೆ ತೋರಿಸಲಿಲ್ಲ. ಸಹಾನುಭೂತಿಯಾಗಿ ಎಲ್ಲಿಯೂ ಮಾತನಾಡಲಿಲ್ಲ. ಇದನ್ನೆಲ್ಲ ಆಲೋಚಿಸಿದರೆ ಶಂಕರನ ಮೇಲೆ ಹೊರಗೆ ತೋರಿಸಿದ ಪ್ರೀತಿ ಒಳಗೆ ಇಲ್ಲವೆಂದು ಅರ್ಥವಾಗುತ್ತಿದೆ. ಶಂಕರನು ಮರಣಿಸಿದ ನಂತರ ಅದ್ವೈತವೊಂದರ ಪ್ರಚಾರ ಜವಾಬ್ದಾರಿಯನ್ನು ಆರ್ಯರು ಸ್ವೀಕರಿಸಿ, ಅದ್ವೈತಕ್ಕಿಂತ ಬೇರೆ ಸಿದ್ಧಾಂತವನ್ನಾಗಲಿ, ಬೇರೆ ಜ್ಞಾನವನ್ನಾಗಲಿ ಹೇಳಿದವರ ಮೇಲೆ ದಾಳಿಗಳು ಮಾಡಿ, ಭಯವಿಟ್ಟು ಅದ್ವೈತ ಸಿದ್ಧಾಂತವನ್ನು ಹಿಂದೂಮತದಲ್ಲಿ ಈ ದಿನಕ್ಕೂ ಮೊದಲ ಸ್ಥಾನದಲ್ಲಿರುವಂತೆ ಮಾಡಿದ್ದಾರೆ. ಶಂಕರಾಚಾರ್ಯರು ಮರಣಿಸಿದ ನಂತರ ಸುಮಾರು 1500 ವರ್ಷಗಳಿಗೆ ರಾಮಾನುಜಾಚಾರ್ಯರ ಮೂಲಕ ಹೊರಗೆ ಬಂದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರವಾಗದಂತೆ ಆರ್ಯರು ಅನೇಕಕಡೆ ತಡೆದಿದ್ದಾರೆ. ವಿಶಿಷ್ಟಾದ್ವೈತ ಸಿದ್ಧಾಂತಕರ್ತನಾದ ರಾಮಾನುಜಾಚಾರ್ಯರವರನ್ನು ದೊರೆತರೆ ಕೊಲ್ಲುವಂತೆ ನಿರ್ಣಯಿಸಿ ಕೊಂಡಿದ್ದಾರೆ. ಅದರಿಂದ ರಾಮಾನುಜಾಚಾರ್ಯರು ಜೀವನವೆಲ್ಲಾ ರಹಸ್ಯವಾಗಿ ಬದುಕಬೇಕಾಗಿ ಬಂದಿದೆ. ವಿಶಿಷ್ಟಾದ್ವೈತರನ್ನು ಹೇಗೆ ಹಿಂಸಿಸಿರುವುದು **'ದಶಾವತಾರಂ'** ತೆಲುಗು ಸಿನಿಮಾ ನೋಡಿದರೆ ತಿಳಿದುಹೋಗುತ್ತದೆ. ಆರ್ಯರ ಮುಂದೆ ವಿಶಿಷ್ಟಾದ್ವೈತವನ್ನು ಕುರಿತು ಹೇಳಿದವರನ್ನು ಅನೇಕ ವಿಧಗಳು ಹಿಂಸಿಸಿ ಕೊಂದಂತೆ ಆ ಚಲನಚಿತ್ರದಲ್ಲಿ ತಿಳಿಯುತ್ತಿದೆ.

ಅದ್ವೈತವೇ ತಮ್ಮ ಪ್ರಾಣವಾಗಿ, ವೇದಗಳೇ ತಮ್ಮ ಊಸಿರಾಗಿ ಬದುಕಿದ ಆರ್ಯರು ಶಂಕರನು ವೇದಗಳಿಗೆ ವಿರುದ್ಧವಾಗಿ ಬದಲಾಗಿದ್ದಾನೆಂದು ತಿಳಿದ

ನಂತರ, ತಮ್ಮ ವೇದಪೀಠಗಳನ್ನು ಅಲ್ಲವೆಂದು ಪ್ರತ್ಯೇಕ ಪೀಠವನ್ನು ತಯಾರು ಮಾಡಿಕೊಂಡ ನಂತರ, ಶಂಕರನಿಂದ ತಯಾರು ಮಾಡಿಸಿದ ಅದ್ವೈತ ಭವನಗಳನ್ನು ಶಂಕರನೇ ನೆಲಸಮಮಾಡುವುದಕ್ಕೆ ಪ್ರಯತ್ನ ಮಾಡುತ್ತಿದ್ದಾನೆಂದು ತಿಳಿದ ನಂತರ, ಆರ್ಯರು ಶಂಕರನನ್ನು ಪುನಃ ತಮ್ಮ ಮಾರ್ಗದೊಳಗೆ ಬದಲಾಯಿಸಬೇಕೆಂದು ಪ್ರಯತ್ನ ಎರಡು ಮೂರು ವರ್ಷಗಳು ಮಾಡಿದರೂ ಶಂಕರನು ಬದಲಾಗದಿರುವಾಗ, ಶಂಕರನು ಭವಿಷ್ಯತ್ತಿನಲ್ಲಿ ತಮಗೆ ಪೂರ್ತಿ ವಿರುದ್ಧವಾಗಿ ಬದಲಾಗುತ್ತಾನೆಂದು ತಿಳಿದಾಗ ಆರ್ಯರು ಶಂಕರನನ್ನು ಕೊನೆಗಾನಿಸಸಬೇಕೆಂದು ಏಕೆ ಅಂದುಕೊಳ್ಳಬಾರದು? ಹಾಗೇ ಅಂದುಕೊಂಡಿರ ಬಹುದು ಅಲ್ಲವೆ! ಆರ್ಯರೆಲ್ಲರೂ ಒಂದುಕಡೆ ಸೇರಿ ಶಂಕರನನ್ನು ನಿರ್ಮಾನುಷ್ಯವಾದ ಕೇದಾರ್‌ನಾಥ್‌ವರೆಗು ಕರೆದುಕೊಂಡುಹೋಗಿ ಅಲ್ಲಿ ಹೊರಗಿನ ಪ್ರಪಂಚಕ್ಕೆ ತಿಳಿಯದಂತೆ ಹತ್ಯೆಮಾಡಬೇಕೆಂಬ ಸಂಚನ್ನು ಏಕೆ ಹಾಕಿರಬಾರದು? ಈ ಪ್ರಶ್ನೆಗಳೆಲ್ಲದಕ್ಕು ಶಂಕರನು ಮರಣಿಸಿದ ಸ್ಥಳ, ಶಂಕರನು ಮರಣಿಸಿದ ಸಂಘಟನೆ ವಿಧಾನವನ್ನೆಲ್ಲವನ್ನು ಅನುಸರಿಸಿ ಶಂಕರನನ್ನು ಆರ್ಯರೇ ಕಳ್ಳರದಾಳಿಯನ್ನು ಸೃಷ್ಟಿಸಿ ಕೊಂದಿರುತ್ತಾರೆಂಬ ಉತ್ತರವನ್ನು ಕೊಡುತ್ತಿದೆ. ಹಾಗೆ ಮಾಡಿದ್ದಾರೆಂಬ ಆಧಾರ ಸಹ ಸಿಗದಂತೆ, ಆಧಾರ ರಹಿತವಾಗಿ ಆರ್ಯರು ತಮ್ಮ ತಿಳುವಳಿಕೆಯಿಂದ ಮಾಡಿದ್ದಾರೆಂದು ತಿಳಿಯುತ್ತಿದೆ. ಈ ಕೆಲಸವನ್ನು ಮಾಡಿದ್ದಾರೆಂದು ಹೇಳುವುದಕ್ಕೆ ಆಧಾರವಿಲ್ಲದಂತೆ, ಈ ಕೆಲಸವನ್ನು ಮಾಡಲಿಲ್ಲ ಎಂದು ಹೇಳುವುದಕ್ಕು ಸಹ ಆಧಾರವಿಲ್ಲ. ಶಂಕರನು ಮರಣಿಸುವುದಕ್ಕಿಂತ ಮೊದಲು ಐದು ವರ್ಷಗಳಿಂದ ನಡೆದ ಚರಿತ್ರೆಯನ್ನನುಸರಿಸಿ, ನಡೆದ ನಂತರ ಆರ್ಯರು ಶಂಕರನ ಮೇಲಿನ ಪ್ರೀತಿಯನ್ನು ಪ್ರಚಾರ ಮಾಡಿರುವುದನ್ನನುಸರಿಸಿ ಶಂಕರನನ್ನು ಆರ್ಯರೇ ಕೊಂದಿದ್ದಾರೆಂದು ಹೇಳಬಹುದು.

**ಪ್ರಶ್ನೆ :– ಅದ್ವೈತ ಶಂಕರನದಾ, ಅಥವಾ ಆರ್ಯರದಾ? ಇದಕ್ಕೆ ಇರುವುದಿದ್ದಂತೆ ಸಮಾಧಾನ ಹೇಳಿರಿ?**

**ಉತ್ತರ :–** ತ್ರೈತಾಯೋಗ (ತ್ರೇತಾಯುಗ)ದಿಂದ ಆರ್ಯರು ಅದ್ವೈತವನ್ನೇ

ಹೇಳುತ್ತಿದ್ದಾರೆ. ಆದರೆ ಅದು ಒಂದು ಸಿದ್ಧಾಂತವಾಗಿ ಹೇಳಲ್ಪಡಲಿಲ್ಲ. ಅದಕ್ಕೆ ಒಬ್ಬ ಸಿದ್ಧಾಂತಕರ್ತ ಇಲ್ಲ. ಅದ್ವೈತವನ್ನು ಒಂದು ಸಿದ್ಧಾಂತವಾಗಿ ರೂಪಿಸಿದ ಒಬ್ಬ ಸಿದ್ಧಾಂತಕರ್ತನ ಮೂಲಕ ಪ್ರಕಟಿಸಬೇಕೆಂದು ಕಲಿಯುಗದ ಪ್ರಾರಂಭ ದಲ್ಲಿಯೇ ಅಂದುಕೊಂಡಿದ್ದಾರೆ. ಸಿದ್ಧಾಂತಕರ್ತನಾಗಿ ದ್ರಾವಿಡರಿಂದ ಒಬ್ಬರನ್ನು ತಯಾರುಮಾಡಿದರೆ, ತಮಗೆ ವಿರುದ್ಧವಾದ ದ್ರಾವಿಡರಿಂದ ವಿರುದ್ಧತೆ ಇರುವುದಿಲ್ಲವೆಂದು, ದ್ರಾವಿಡರಲ್ಲಿ ಒಬ್ಬ ಮುಖ್ಯವಾದ ಮನುಷ್ಯ ಪ್ರತಿಪಾದಿಸಿದ ಸಿದ್ಧಾಂತವನ್ನು ದ್ರಾವಿಡರೇ ವಿರೋಧಿಸುವುದಿಲ್ಲವೆಂದು ತಿಳಿದು ದಕ್ಷಿಣ ದೇಶದಲ್ಲಿ ಸಿದ್ಧಾಂತಕರ್ತಗೆ ಸರಿಹೋಗುವ ತಿಳುವಳಿಕೆಯುಳ್ಳ ವ್ಯಕ್ತಿಗಾಗಿ ಅನ್ವೇಷಿಸುತ್ತಿದ್ದರು. ಆದರೆ ದಕ್ಷಿಣ ದೇಶದಲ್ಲಿ ಕೆಲವರು ಬಾಲ್ಯ ದಶದಲ್ಲಿಯೇ ಮೇಧಾವಿಗಳು ಕಾಣಿಸಿದರೂ ಅವರು ಬ್ರಾಹ್ಮಣರು ಅಲ್ಲದಿರುವುದರಿಂದ ಅವರನ್ನು ಪರಿಗಣನೆಗೆ ತೆಗೆದುಕೊಳ್ಳಲಿಲ್ಲ. ಕೊನೆಗೆ ಕೇರಳ ರಾಷ್ಟ್ರದಲ್ಲಿ ಒಂದು ಬ್ರಾಹ್ಮಣ ಕುಟುಂಬದಲ್ಲಿ ಶಿವಗುರು, ಆರ್ಯಾಂಬ ಎಂಬ ದಂಪತಿಗಳಿಗೆ ಜನ್ಮಿಸಿದ ಶಂಕರ ನಾಮಧೇಯ ನಾದ 14 ವರ್ಷಗಳ ಬಾಲಕನು ಮಹಾ ಮೇಧಾವಿಯಾಗಿ ಆರ್ಯರಿಗೆ ಕಾಣಿಸಿದಾಗ, ಶಿವಗುರು ಕುಟುಂಬದೊಂದಿಗೆ ಪರಿಚಯ ಏರ್ಪಡಿಸಿಕೊಂಡ ಆರ್ಯರು ನಿಧಾನವಾಗಿ ಶಂಕರನನ್ನು ತಮ್ಮಕಡೆ ಆಕರ್ಷಿತನನ್ನಾಗಿ ಮಾಡಿ ಕೊಂಡಿದ್ದಾರೆ. ಶಂಕರನ ತಾಯಿತಂದೆಯರು ಕಡು ಬಡವರಾದ್ದರಿಂದ ಅವರಿಗೆ ಆರ್ಥಿಕ ಸಹಾಯ ಮಾಡುತ್ತಾ ಅವರನ್ನು ತಮ್ಮ ಮಾತು ಕೇಳುವಂತೆ ಮಾಡಿಕೊಂಡರು. ಕೊನೆಗೆ ಶಂಕರನ ತಾಯಿಯಾದ ಆರ್ಯಾಂಬನನ್ನು ಒಪ್ಪಿಸಿ ಶಂಕರನನ್ನು 14ನೇ ವರ್ಷವೇ ಸನ್ಯಾಸತ್ವವನ್ನು ಸ್ವೀಕರಿಸುವಂತೆ ಮಾಡಿದ್ದಾರೆ. 15ನೇ ವರ್ಷದಿಂದ ಶಂಕರನನ್ನು ತಮ್ಮಹಿಂದೆ ಕರೆದುಕೊಂಡು ಹೋಗಿ, ಹೊರಗಿನ ಪ್ರಪಂಚಕ್ಕೆ ಶಂಕರಾಚಾರ್ಯನನ್ನು ಚಿಕ್ಕವಯಸ್ಸಿನಲ್ಲಿಯೇ ಪರಿಚಯ ಮಾಡಿ, ಆತನನ್ನು ಅದ್ವೈತ ಸಿದ್ಧಾಂತಕರ್ತನನ್ನಾಗಿ ಪ್ರಕಟಿಸಿದ್ದಾರೆ. ನಿಜವಾಗಲೂ ಆ ವಯಸ್ಸಿನಲ್ಲಿ ಶಂಕರನಿಗೆ ಅದ್ವೈತ ಎಂದರೆ ಏನೋ ಸಹ ಗೊತ್ತಿಲ್ಲ. ಆದುದರಿಂದ "ಮನೆಹೆಸರು ಭೋಗ, ತಿನ್ನುವುದು ಮಾತ್ರ ಮುದ್ದೆ, ಕಾರ" ಎನ್ನುವಂತೆ ಅದ್ವೈತಕ್ಕೆ ಕರ್ತ ಶಂಕರನೇ ಆದರೂ ಶಂಕರನಿಗೆ ಅದ್ವೈತವನ್ನು ಕುರಿತು

ಸ್ವಲ್ಪವೂ ಸಹ ತಿಳಿದಿಲ್ಲ. ಆದರೆ ಶಂಕರನ ಹಿಂದೆಯಿದ್ದು ಅದ್ವೈತವನ್ನು ಹೇಳಿ ಪ್ರಚಾರ ಮಾಡಿರುವುದು ಆರ್ಯರೇ. ಆದುದರಿಂದ ಅದ್ವೈತ ತ್ರೇತಾಯುಗದಿಂದ ಆರ್ಯರದೇ ಎಂದು ಹೇಳಬಹುದು.

**ಪ್ರಶ್ನೆ :– ಆರ್ಯರು ಅದ್ವೈತವನ್ನೇ ಏಕೆ ಆಯ್ಕೆ ಮಾಡಿಕೊಂಡಿದ್ದಾರೆ?**

**ಉತ್ತರ :–** ಪುಟ್ಬಾಲ್ ಗ್ರೌಂಡ್‌ನಲ್ಲಿ ಯಾವಕಡೆಯಾದರೂ ಓಡಬಹುದು. ಹಾಗೆ ಅದ್ವೈತದಲ್ಲಿ ಯಾವಕಡೆಯಾದರೂ ಮಾತನಾಡಬಹುದು. ಅದಕ್ಕೆ ಒಂದು ಹದ್ದುಪದ್ದು ಎಂಬ ವ್ಯತ್ಯಾಸಗಳೇನು ಇರುವುದಿಲ್ಲ. ಆದುದರಿಂದ ಆರ್ಯರು ಅದ್ವೈತವನ್ನೇ ಆಯ್ಕೆಮಾಡಿಕೊಂಡಿದ್ದಾರೆ. ಇನ್ನೊಬ್ಬ ವ್ಯಕ್ತಿ ಏನು ಪ್ರಶ್ನೆಹಾಕಿದರೂ ಅದಕ್ಕೆ ಉತ್ತರವನ್ನು ತಿಳಿಯದಿರುವಾಗಲು ಸಹ ಅದ್ವೈತದಲ್ಲಿ ತಪ್ಪಿಸಿಕೊಂಡು ತಿಳಿದವನಂತೆ ಪ್ರವರ್ತಿಸಬಹುದು. ಚಿಕ್ಕ ಉದಾಹರಣೆ ಹೇಳಿಕೊಂಡರೆ ಒಬ್ಬನು ಲಕ್ಷರೂಪಾಯಿಗಳ ಬಾಕಿ ಮಾಡಿ ಬಾಕೀ ಕೊಟ್ಟವನಿಗೆ ಪುನಃ ಕಟ್ಟಲಿಲ್ಲ. ಬಾಕೀ ಕೊಟ್ಟವನು ಒಂದು ದಿನ ಬಾಕೀ ತೆಗೆದುಕೊಂಡವನ ಹತ್ತಿರಕ್ಕೆ ಬಂದು "ಅಯ್ಯಾ! ನೀನು ನನ್ನ ಬಾಕೀ ತೀರಿಸೆಂದು" ಕೇಳಿದ್ದಾನೆ. ಆಗ ಬಾಕೀ ತೆಗೆದುಕೊಂಡವನು ಅದ್ವೈತವನ್ನು ಮಾತನಾಡಿದ್ದಾನಂತೆ. ಆತನು ಅದ್ವೈತವನ್ನು ಹೀಗೆ ಹೇಳಿದ್ದಾನೆ. "ಬಾಕೀ ಕೊಟ್ಟವನು ಪರಬ್ರಹ್ಮಸ್ವರೂಪವೇ, ಬಾಕೀ ತೆಗೆದುಕೊಂಡವನು ಪರಬ್ರಹ್ಮಸ್ವರೂಪವೇ. ಅಲ್ಲಿರುವುದು, ಇಲ್ಲಿರುವುದು ಒಂದೇ ಪರಬ್ರಹ್ಮಸ್ವರೂಪ. ಪರಬ್ರಹ್ಮ ಪರಬ್ರಹ್ಮಕ್ಕೆ ಕೊಟ್ಟಿದೆ. ಆತನ ಧನವನ್ನು ಆತನಿಗೆ ಕೊಟ್ಟಿದ್ದಾನೆ. ದ್ವೈತ (ಎರಡು) ಇಲ್ಲದಂತೆ ಪ್ರಪಂಚವೆಲ್ಲಾ ಅದ್ವೈತವೇ (ಎರಡಲ್ಲದೆ ಒಂದೇ) ಇದ್ದಾಗ ನಿನ್ನದು, ನನ್ನದು ಎಂಬುದು ಇಲ್ಲ, ಎಲ್ಲಾ ಒಂದೇ. ಪರಬ್ರಹ್ಮಸ್ವರೂಪವೇ, ನಾನು ಪರಬ್ರಹ್ಮ ಸ್ವರೂಪವೇ. ಹಾಗಿರುವಾಗ ನೀನು ನನಗೆ ಕೊಟ್ಟದ್ದೀಯಾ ಎಂಬುದು ಭ್ರಮಯೇ, ನಾನು ತೆಗೆದುಕೊಂಡಿದ್ದೇನೆನ್ನು ವುದು ಭ್ರಮಯೇ. ತಿಳಿಯದತನದಿಂದ ನೀನು ಬಾಕೀ ಎಂದು ಬಂದಿದ್ದೀಯಾ. ನಿಜಕ್ಕೆ ನಾನೂ ಇಲ್ಲ, ನೀನೂ ಇಲ್ಲ. ಇಬ್ಬರಾಗಿ ಕಾಣಿಸುವ ನಾವು ಒಬ್ಬರೇ. ಅದನ್ನೇ ಅದ್ವೈತ ಎನ್ನುತ್ತೇವೆ. ನೀನು ಮನೆಗೆಹೋಗಿ ನಿಧಾನವಾಗಿ ಆಲೋಚಿಸು, ನೀನು ಪರಬ್ರಹ್ಮ ಸ್ವರೂಪವೇಯೆಂದು ತಿಳಿಯುತ್ತದೆ". ಎಂದು ಹೇಳಿದ್ದಾನಂತೆ.

ಈ ವಿಧವಾಗಿ ಅದ್ವೈತವನ್ನು ಎಲ್ಲಿಯಾದರೂ, ಯಾವ ಸಂದರ್ಭದಲ್ಲಿಯಾದರೂ ಹೇಳಿಕೊಳ್ಳುವುದಕ್ಕೆ ಅವಕಾಶವಿರುತ್ತದೆ ಆದ್ದರಿಂದ ಆರ್ಯರು ಅದ್ವೈತವನ್ನೇ ಜ್ಞಾನಬೋಧನೆಯಾಗಿ ಹೇಳಿಕೊಂಡಿದ್ದಾರೆ. ನಿಜಕ್ಕೆ ಆಲೋಚಿಸಿದರೆ 'ಅದ್ವೈತ' ಒಂದು ಸಿದ್ಧಾಂತವೇ ಅಲ್ಲ. ಸಿದ್ಧಾಂತವಾದರೆ ಶಾಸ್ತ್ರ ಆಗುತ್ತದೆ. ಅದ್ವೈತವನ್ನು ಆಧಾರ ಮಾಡಿಕೊಂಡ, ಅದ್ವೈತ ಸಿದ್ಧಾಂತಗಳಿಂದ ಕೂಡಿದ ಶಾಸ್ತ್ರವೇ ಇಲ್ಲದಿರುವಾಗ, ಅದನ್ನು (ಅದ್ವೈತವನ್ನು) ಸಿದ್ಧಾಂತ ಎನ್ನುವುದೆ ತಪ್ಪಾಗುತ್ತದೆ. ಅದ್ವೈತವನ್ನು ಪ್ರಪಂಚದಲ್ಲಿ ಇಲ್ಲಿಯವರೆಗು ಯಾರೂ ಅನುಭವಿಸಲಿಲ್ಲ. ಅನುಭವಕ್ಕೆ ಬರದ ವಿಷಯ ಸಿದ್ಧಾಂತ ಅಲ್ಲ. ಸಿದ್ಧಾಂತ ಅಲ್ಲದಿರುವಾಗ ಶಾಸ್ತ್ರವು ಅಲ್ಲ. ಶಂಕರಾಚಾರ್ಯರು ಸಹ ತನ್ನ ಜೀವನದಲ್ಲಿ ಅದ್ವೈತವೆಂದರೆ ಏನೋ ತಿಳಿಯದಂತೆ ಕಳೆದಿದ್ದಾರೆ. ಹಾಗಿರುವಾಗ ಅದ್ವೈತ ಆಧ್ಯಾತ್ಮಿಕ ಸಿದ್ಧಾಂತವೇ ಅಲ್ಲ. ಸಿದ್ಧಾಂತ ಅಲ್ಲದಿರುವುದನ್ನು ಸಿದ್ಧಾಂತವಾಗಿ ಆರ್ಯರು ಸೃಷ್ಟಿಸಿದ್ದಾರೆ ಹೊರತು ಬೇರೆ ಏನು ಇಲ್ಲ. ಅನುಭವಕ್ಕೆ ಬಾರದಿರುವುದು, ಶಾಸ್ತ್ರ ಎನ್ನುವುದಕ್ಕೆ ಸಾಧ್ಯವಿಲ್ಲ. ಮನುಷ್ಯ ಮರಣಿಸಿದ ನಂತರ ಮೋಕ್ಷ ಹೊಂದಿದರೆ ಆಗ ಅದ್ವೈತವಾಗುತ್ತದೆ. ಈಗ ಅದ್ವೈತವೇ ಯಾರಿಗೂ ಇಲ್ಲ.

**ಪ್ರಶ್ನೆ :– ಶಂಕರನು ಭಗವದ್ಗೀತೆಯನ್ನು ಬರೆದಿದ್ದಾನೆ ಅಲ್ಲವೆ! ಭಗವದ್ಗೀತೆಯಲ್ಲಿ ಅದ್ವೈತವನ್ನು ಕುರಿತು ಹೇಳಿದ್ದಾನೆ. ಇಲ್ಲದ ಅದ್ವೈತವನ್ನು ಶಂಕರನು ಏಕೆ ಹೇಳಿದ್ದಾನೆ?**

**ಉತ್ತರ :–** ಕರ್ಮ ಸನ್ಯಾಸಯೋಗದಲ್ಲಿ 18ನೇ ಶ್ಲೋಕಕ್ಕೆ ವಿವರ ಬರೆದ ಬಹಳಜನ ಸ್ವಾಮೀಜಿಗಳು ಎಲ್ಲರೂ ಅಲ್ಲಿ ಅದ್ವೈತವನ್ನು ಕುರಿತು ಹೇಳಿದ್ದಾರೆ. ಹಾಗೆ ಹೇಳಿದವರಲ್ಲಿ ಶಂಕರನು ಸಹ ಒಬ್ಬನು. ಶಂಕರಾಚಾರ್ಯರು ಭಗವದ್ಗೀತೆಗೆ ಭಾಷ್ಯವನ್ನು ಬರೆದಾಗ ಭಗವದ್ಗೀತೆಯಲ್ಲಿ ಎಷ್ಟೋ ವಿಷಯಗಳು ಕಾಣಿಸಿವೆ. 25 ವರ್ಷಗಳ ವಯಸ್ಸಿನಲ್ಲಿ ಎಲ್ಲಾ ವಿಷಯಗಳು ಹೊಸವೇ ಆದರೂ ಸಂಸ್ಕೃತ ಪಾಂಡಿತ್ಯ ತಿಳಿಯುವುದರಿಂದ ಭಗವದ್ಗೀತೆಯನ್ನು ವಿವರಿಸಿ ಹೇಳಲಾಗಿದೆ. ಮಾನವನ ನಿಜ ಜೀವನದಲ್ಲಿ ತಿಳಿಯದ ಅದ್ವೈತವನ್ನು, ಕರ್ಮ ಸನ್ಯಾಸಯೋಗ

ಒಂದರ 18ನೇ ಶ್ಲೋಕದಲ್ಲಿ ಎಲ್ಲರೂ ತಪ್ಪಾಗಿ ಹೇಳಿದ್ದಾರೆ. ಆ ಶ್ಲೋಕದಲ್ಲಿ ದೇವರು ಭಗವಂತನ ರೂಪದಲ್ಲಿ ಬಂದು ಹೇಳಿದ ಭಾವನೆ ಬೇರೆ. ಬರೆದಿರುವ ಸ್ವಾಮೀಜಿಗಳ ಬರಹದಲ್ಲಿನ ಭಾವನೆ ಬೇರೆಯಾಗಿದೆ. ಭಗವಂತನು ಹೇಳಿದ ಭಾವನೆಯನ್ನು ಯಾರೂ ಹೇಳಲಾರದೆ ಅದ್ವೈತವನ್ನು ಹೇಳಲಾಗಿದೆ.

**ಶ್ಲೋ॥ 18 ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ।**
**ಶುನಿ ಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ॥**

**ಭಾವಾರ್ಥ:– "ವಿದ್ಯಾ ವಿನಯ ಹೊಂದಿದ ಬ್ರಾಹ್ಮಣರಲ್ಲಿಯು, ಗೋವುಗಳಲ್ಲಿಯು, ಆನೆಗಳಲ್ಲಿಯು, ನಾಯಿಗಳಲ್ಲಿಯು, ನಾಯಿಗಳನ್ನು ತಿನ್ನುವ ಚಂಡಾಲರಲ್ಲಿಯು ಪಂಡಿತರ ದೃಷ್ಟಿ ಸಮ ಭಾವನೆಯೇ ಇರುತ್ತದೆ."** ಈ ವಿಧವಾಗಿ ಶ್ಲೋಕದಲ್ಲಿನ ಭಾವನೆಯನ್ನು ಹೇಳಬಹುದು. ಆದರೆ **"ಸಮದರ್ಶಿನಃ"** ಎಂಬ ಪದದ ಹತ್ತಿರ ಎಲ್ಲರೂ ಅದ್ವೈತದೊಳಗೆ ಹೋಗುವುದು ನಡೆದಿದೆ. ಆದರೆ ಆ ಪದ ಅದ್ವೈತದಲ್ಲಿ ವಿನಿಯೋಗಿಸಿರುವುದು ಅಲ್ಲವೆಂದು ಬಹಳಜನ ತಿಳಿಯಲಾರದಂತಿದ್ದಾರೆ. ಎಲ್ಲರಲ್ಲಿರುವ ಆತ್ಮವನ್ನು ನೋಡೆಂದು ಅಲ್ಲಿ ಹೇಳಿದರೆ ಆತ್ಮ ವಿಷಯವೇ ತಿಳಿಯದವರೆಲ್ಲರೂ ಪರಮಾತ್ಮನನ್ನು ಸಮಾನವಾಗಿ ನೋಡಬೇಕೆಂದು ಕೊಂಡಿದ್ದಾರೆ. ಬದುಕಿರುವ ಮನುಷ್ಯ ಎಷ್ಟು ದೊಡ್ಡವನಾದರೂ ಪರಮಾತ್ಮನನ್ನು ನೋಡಲಾರನೆಂಬ ವಿಷಯ ಅವರಿಗೆ ತಿಳಿದಿಲ್ಲ.

**ಪ್ರಶ್ನೆ :– ಭಗವದ್ಗೀತೆಯಲ್ಲಿ ಅದ್ವೈತವನ್ನು ಕುರಿತು ಹೇಳಲಿಲ್ಲವಾ?**

**ಉತ್ತರ :–** ಭಗವದ್ಗೀತೆಯಲ್ಲಿ ಅದ್ವೈತ, ದ್ವೈತ, ತ್ರೈತ ಮೂರೂ ಇವೆ. ಮನುಷ್ಯ ಮೋಕ್ಷ ಹೊಂದಿದಾಗ ಅದ್ವೈತದಲ್ಲಿ ಸೇರಿಹೋಗುತ್ತಾನೆ. ಅಥವಾ ಅದ್ವೈತಿಯಾಗಿ ಬದಲಾಗುತ್ತಾನೆಂದು ಹೇಳಬಹುದು. ಮನುಷ್ಯನಿಗೆ ಪೂರ್ತಿ ಕರ್ಮ ರಾಹಿತ್ಯವಾದಾಗ, ಜನ್ಮಕ್ಕೆ ಹೋಗದೆ ಮೋಕ್ಷವನ್ನು ಹೊಂದಿದಾಗ ಅದ್ವೈತವನ್ನು ಮನುಷ್ಯ ಹೊಂದುತ್ತಾನೆ. ಆಗ ಅವನು ಜೀವಾತ್ಮನಾಗಿ ಇಲ್ಲದಂತೆ ಪರಮಾತ್ಮನಾಗಿ ಬದಲಾಗುತ್ತಾನೆ. ಹಾಗೆ ಜೀವಿಯು ದೇವರಲ್ಲಿ ಸೇರಿ ಜೀವ ಭಾವನೆ ಇಲ್ಲದಂತೆ

ಹೋದಾಗ ಅದ್ವೈತಿಯಾಗಿ ಬದಲಾಗುತ್ತಾನೆ. ಇದೆಲ್ಲವೂ ಮನುಷ್ಯ ಬದುಕಿದಾಗ ನಡೆಯುವುದಲ್ಲ. ಆದುದರಿಂದ ಪ್ರಪಂಚದಲ್ಲಿ ಯಾರಿಗೂ ಅದ್ವೈತ ತಿಳಿದಿಲ್ಲವೆಂದೇ ಹೇಳಬಹುದು.

**ಪ್ರಶ್ನೆ :– ಅದ್ವೈತ ಎಂದರೇ ಏನು?**

**ಉತ್ತರ :–** ಮೊದಲು ತ್ರೈತವನ್ನು ತಿಳಿದರೆ ನಂತರ ಅದ್ವೈತ ತಿಳಿಯುತ್ತದೆ. ದ್ವೈತವನ್ನು ತಿಳಿದರೆ ಕೊನೆಯಲ್ಲಿ ಅದ್ವೈತ ತಿಳಿಯುತ್ತದೆ. ಮನುಷ್ಯ ಜೀವನ ಕಾಲದಲ್ಲಿ ಅದ್ವೈತ ತಿಳಿಯುವುದು ಅಸಂಭವ. ಅದ್ವೈತ ಎಂದರೆ ಎರಡಲ್ಲದಿರುವುದು ಒಂದಾಗಿದೆಯೆಂದು ಅರ್ಥ. ದ್ವೈತ ಎಂದರೆ ಎರಡು ಎಂದು ಅರ್ಥ. ಅದ್ವೈತ ಎಂದರೆ ಎರಡು ಅಲ್ಲದಿರುವುದು ಎಂದು ಅರ್ಥ. ಎರಡಾಗದಿರುವುದು ಒಂದು ಎಂದು ಹೇಳಬಹುದು. ಅಷ್ಟೇಯಲ್ಲದೆ ಎರಡು ಅಲ್ಲದಿರುವುದು ಮೂರು ಎಂದು ಸಹ ಹೇಳಬಹುದು. ಇಲ್ಲಿ ಅದ್ವೈತ ಎಂಬ ಪದಕ್ಕೆ ಅರ್ಥ ತೆಗೆದುಕೊಂಡರೆ ಎರಡು ಅಲ್ಲದಿರುವುದು ಒಂದು ಎಂದಾದರೂ ಹೇಳಬಹುದು ಅಥವಾ ಎರಡು ಅಲ್ಲದಿರುವುದು ಮೂರು ಎಂದು ಸಹ ಹೇಳಬಹುದು. ಎರಡು ವಿಧಗಳ ಅರ್ಥಗಳಲ್ಲಿ ಯಾವುದಾದರೂ ಆಗಬಹುದು. ನಮ್ಮ ದೃಷ್ಟಿಯಲ್ಲಿ ಅದ್ವೈತ ಎಂದರೆ ಎರಡು ಅಲ್ಲದಿರುವುದು ಮೂರೆಂದೇ ಹೇಳುತ್ತೇವೆ. ಹಾಗೆ ಏಕೆ ಹೇಳುತ್ತಿದ್ದೇವೆಂದರೆ! ಮನುಷ್ಯ ಬದುಕಿದಾಗ ಎರಡು ಅಲ್ಲದಿರುವುದು ಒಂದು ಎಂದಾಗ ಅದ್ವೈತ ಎಂದಿಗೂ ತಿಳಿಯುವುದಿಲ್ಲ. ಮನುಷ್ಯ ಬುದುಕಿದಾಗ ತಿಳಿಯುವುದು ಎರಡು ಅಲ್ಲದಿರುವುದು ಮೂರು ಮಾತ್ರವೇ. ಅಂದರೇ ತ್ರೈತ ಮಾತ್ರವೇ. ಮನುಷ್ಯ ಜೀವನ ಇಲ್ಲದಿರುವಾಗ ಅದ್ವೈತ ತಿಳಿಯುತ್ತದಾಗಲಿ, ಮನುಷ್ಯ ಬದುಕಿರುವಾಗ ತಿಳಿಯಲ್ಪಡುವುದು ತ್ರೈತ ಮಾತ್ರವೇ. ಈ ವಿಷಯವನ್ನು ಭಗವದ್ಗೀತೆಯನ್ನು ಬರೆದವರು ಯಾರೂ ಬರೆಯಲಿಲ್ಲ.

ಅದ್ವೈತ ಎಂದರೆ ಎಲ್ಲರೂ ಒಂದು ಎಂದು ಹೇಳುವವರೇ ಇದ್ದಾರೆ ಆದರೇ, ಮೂರು ಎಂದು ಹೇಳುವವರು ಇಲ್ಲ. ನೀವೇ ಆಲೋಚಿಸಿರಿ! ಎರಡು

ಅಲ್ಲದಿರುವುದು ಮೂರು ಆಗಬಹುದು ಅಲ್ಲವೆ! ಎರಡು ಅಲ್ಲದಿರುವುದು ಒಂದು ಎಂದು ಹೇಗೆ ಹೇಳುತ್ತಿದ್ದೇವೊ ಹಾಗೆಯೇ ಎರಡು ಅಲ್ಲದಿರುವುದು ಮೂರು ಎಂದು ಹೇಳಬಹುದು. ಒಂದು ಉದಾಹರಣೆ ಹೇಳಿಕೊಂಡರೆ ಹೀಗೆ ಇದೆ. ಒಬ್ಬನ ಹತ್ತಿರ ಮೂರು ವಸ್ತುಗಳು ಇವೆ. ಹಾಗೆ ಮತ್ತೊಬ್ಬನ ಹತ್ತಿರ ಎರಡು ವಸ್ತುಗಳು ಇವೆ. ಎರಡು ವಸ್ತುಗಳು ಇರುವವನ ಹತ್ತಿರ ಒಂದು ಚಿಕ್ಕದು ಎರಡನೆಯದು ದೊಡ್ಡ ವಸ್ತುವಿದೆ. ವಸ್ತುಗಳು ಎಂದರೆ ಕಟ್ಟಿಗೆಗಳೆಂದು ಅರ್ಥ ಮಾಡಿಕೊಳ್ಳಬೇಕು. ಒಂದು ಚಿಕ್ಕ ಕಟ್ಟಿಗೆ, ಎರಡನೆಯದು ದೊಡ್ಡ ಕಟ್ಟಿಗೆ ಇತ್ತು. ಹಾಗೆ ಮೂರು ವಸ್ತುಗಳು ಎಂದು ಹೇಳಿದವನ ಹತ್ತಿರ ಚಿಕ್ಕದು ದೊಡ್ಡದು ಮಧ್ಯಮವಾಗಿರುವುದು ಮೂರು ಕಟ್ಟಿಗೆಗಳಿವೆ. ಅವರ ಮೇಲಿನ ಅಧಿಕಾರಿಬಂದು ಎರಡು ಕಟ್ಟಿಗಳಿರುವವನನ್ನು ದೊಡ್ಡ ಕಟ್ಟಿಗೆಯನ್ನು ತೋರಿಸೆಂದಾಗ ತನ್ನ ಹತ್ತಿರ ಇರುವ ಎರಡು ಕಟ್ಟಿಗೆಗಳಲ್ಲಿ ಎರಡನೆ ದೊಡ್ಡ ಕಟ್ಟಿಗೆಯನ್ನು ತೋರಿಸಿದನು. ಎರಡನೆಯವನ ಹತ್ತಿರಕ್ಕೆ ಹೋಗಿ ನಿನ್ನ ಹತ್ತಿರವಿರುವ ದೊಡ್ಡ ಕಟ್ಟಿಗೆಯನ್ನು ತೋರಿಸೆಂದಾಗ ಆತನು ಆತನ ಹತ್ತಿರವಿರುವ ಮೂರನೆ ಕಟ್ಟಿಗೆಯನ್ನು ತೋರಿಸಿದನು. ಮೇಲಿನ ಅಧಿಕಾರಿ ಇಬ್ಬರ ಹತ್ತಿರ ಒಂದೇ ಮಾತನ್ನು ಕೇಳಿದನು. ದೊಡ್ಡಕಟ್ಟಿಗೆಯನ್ನು ತೋರಿಸೆಂದನು ಆಗ ಇಬ್ಬರೂ ದೊಡ್ಡ ಕಟ್ಟಿಗೆಗಳೇ ತೋರಿಸಿದ್ದಾರೆ. ಆದರೆ ಮೊದಲನೆಯವನು ಎರಡನೆ ಕಟ್ಟಿಗೆಯನ್ನು ತೋರಿಸಿದಾಗ, ಎರಡನೆಯವನು ಮೂರನೆ ಕಟ್ಟಿಗೆಯನ್ನು ತೋರಿಸಿದ್ದಾನೆ. ಇಲ್ಲಿ ಕೇಳಿದ ಮಾತು ಒಂದೇ ಆದರೂ ಇಬ್ಬರೂ ತೋರಿಸಿದ ಕಟ್ಟಿಗೆಗಳ ಸಂಖ್ಯೆ ಬದಲಾಗಿದೆ. ಅದೇ ವಿಧವಾಗಿ ಇಬ್ಬರು ಮನುಷ್ಯರ ಹತ್ತಿರಕ್ಕೆ ಹೋಗಿ ಎರಡು ಅಲ್ಲದಿರುವುದನ್ನು ತೋರಿಸೆಂದಾಗ ಮೊದಲನೆಯವನು ಎರಡು ಅಲ್ಲದ ಮೊದಲ ಸಂಖ್ಯೆಯನ್ನು ತೋರಿಸಿದರೆ ಎರಡನೆಯವನು ಎರಡಲ್ಲದಿರುವುದು ಮೂರನೆಯನ್ನು ತೋರಿಸಿದ್ದಾನೆ. ಹಾಗೇ ಅದ್ವೈತಿ ಒಂದು ಭಾವನೆಯನ್ನು ಹೊಂದಿದ್ದಾನೆ. ತ್ರೈತಿ ಮತ್ತೊಂದು ಭಾವನೆಯನ್ನು ಹೊಂದಿದ್ದಾನೆ. ಅದ್ವೈತ, ದ್ವೈತ, ತ್ರೈತ ಎಂಬುದು ಆತ್ಮಗಳಿಗೆ ಸಂಬಂಧಿಸಿದ ವಿಷಯವಾಗಿರುವುದರಿಂದ ಬಹಳ ಜಾಗ್ರತೆಯಾಗಿ ಈ ವಿಷಯವನ್ನು ನೋಡಬೇಕಾಗಿರುತ್ತದೆ.

**ಪ್ರಶ್ನೆ :– ಆತ್ಮಕ್ಕೆ ಸಂಬಂಧಿಸಿದ ಆಧ್ಯಾತ್ಮಿಕ ವಿಷಯದಲ್ಲಿ ಒಟ್ಟು ಎಷ್ಟು ಸಿದ್ಧಾಂತಗಳು ಇವೆ?**

**ಉತ್ತರ :–** ಮೂರು ಸಿದ್ಧಾಂತಗಳು ಮುಖ್ಯವಾಗಿವೆ. ಆದರೆ ಭಾರತದೇಶದಲ್ಲಿ ಇಲ್ಲಿಯವರೆಗೂ ಎರಡು ಸಿದ್ಧಾಂತಗಳು ಮಾತ್ರವೇ ತಿಳಿಯಲ್ಪಟ್ಟಿವೆ. ಮೂರನೆ ಸಿದ್ಧಾಂತ ಇತ್ತಿಚೆಗೇ ಹುಟ್ಟಿದೆಯೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ಈಗಾಗಲೇ ಮೊದಲಿನಿಂದ ಮೂರು ಸಿದ್ಧಾಂತಗಳಿವೆ ಅಲ್ಲವೆ! ನೀವು ಎರಡೇಯೆಂದು ಹೇಳುತ್ತಿದ್ದೀರ.**

**ಉತ್ತರ :–** ಇದಕ್ಕು ಮೊದಲಿನಿಂದ ಇರುವವು ಮೂರಾದರೂ ನಿಜಕ್ಕೆ ಅವು ಎರಡೇಯೆಂದು ಹೇಳಬಹುದು. ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮೂರು ಇವೆ. ಇದರಲ್ಲಿ ಅದ್ವೈತ, ದ್ವೈತ ಎನ್ನುವವು ಎರಡು ಮಾತ್ರವೇ ಸಿದ್ಧಾಂತಗಳು. ಅದ್ವೈತಕ್ಕು, ದ್ವೈತಕ್ಕು ಮಧ್ಯದಲ್ಲಿರುವುದು ವಿಶಿಷ್ಟಾದ್ವೈತ. ಇದು ಬೇರೆ ಸಿದ್ಧಾಂತವೆಂದು ಹೇಳುವುದಕ್ಕೆ ಬದಲು ಅದ್ವೈತದಲ್ಲಿಯೇ ಒಂದು ಭಾಗವೆಂದು ಹೇಳಬಹುದು. ಅದ್ವೈತ ಎಂದರೇ ಎರಡು ಅಲ್ಲದಿರುವುದು ಒಂದು ಎಂದು ಅರ್ಥ. ಹಾಗೆಯೇ ದ್ವೈತ ಎಂದರೇ ಎರಡು ಎಂದು ಅರ್ಥ. ಇನ್ನು ಮಧ್ಯದಲ್ಲಿನ ವಿಶಿಷ್ಟಾದ್ವೈತ ಎಂದರೆ! ವಿಶಿಷ್ಟವಾದ ಅದ್ವೈತ ಎಂದು ಅರ್ಥ. ಆದುದರಿಂದ ಎರಡೂ ಅದ್ವೈತದಲ್ಲಿನವೇ. ದ್ವೈತ ಅದ್ವೈತಕ್ಕಿಂತಲೂ, ವಿಶಿಷ್ಟಾದ್ವೈತಕ್ಕಿಂತಲೂ ಬೇರೆಯಾದುದೆಂದು ಹೇಳಬಹುದು.

**ಪ್ರಶ್ನೆ :– ಆದರೆ ಭೂಮಿಮೇಲೆ ಹಿಂದೂಮತದಲ್ಲಿ ಇರುವ ಆಧ್ಯಾತ್ಮಿಕ ಸಿದ್ಧಾಂತಗಳು ಮೊತ್ತವು ಎಷ್ಟು?**

**ಉತ್ತರ :–** ಹಿಂದೂಮತದಲ್ಲಿ ಆಧ್ಯಾತ್ಮಿಕ ಸಿದ್ಧಾಂತಗಳು ಒಟ್ಟು ನಾಲ್ಕು ಇವೆ. 1) ಅದ್ವೈತ, 2) ವಿಶಿಷ್ಟಾದ್ವೈತ 3) ದ್ವೈತ 4) ತ್ರೈತ. ಈ ನಾಲ್ಕು ಸಿದ್ಧಾಂತಗಳನ್ನು ನಾಲ್ಕುಜನ ಸಿದ್ಧಾಂತಕರ್ತರು ಪ್ರತಿಪಾದಿಸಿದ್ದಾರೆ. ಪ್ರಸ್ತುತ 37 ವರ್ಷಗಳಿಂದ ಬಂದಿರುವ ತ್ರೈತ ಸಿದ್ಧಾಂತವೊಂದರ ಸಿದ್ಧಾಂತಕರ್ತ ಹೊರತು ಉಳಿದ

ಮೂವರು ಕಾಲಧರ್ಮ ಹೊಂದಿದ್ದಾರೆ, ಅಂದರೇ ಮರಣಿಸಿದ್ದಾರೆ. ತ್ರೈತ ಸಿದ್ಧಾಂತಕರ್ತ ಒಬ್ಬನು ಮಾತ್ರವೇ ಬದುಕಿ ಸಜೀವವಾಗಿದ್ದಾನೆ. ನಂತರ ಸಿದ್ಧಾಂತಗಳನ್ನು ಹೇಳಿದಾಗ ಸಿದ್ಧಾಂತಕರ್ತರನ್ನು ಕುರಿತು ಹೇಳಬಲ್ಲೆವು.

**ಪ್ರಶ್ನೆ :– ಅದ್ವೈತ ಸಿದ್ಧಾಂತಕರ್ತನಾದ ಶಂಕರನನ್ನು ಆದಿಶಂಕರಾಚಾರ್ಯನು ಎಂದು ಏಕೆ ಹೇಳುತ್ತಿದ್ದಾರೆ?**

**ಉತ್ತರ :–** ತಮಿಳನಾಡಿನಲ್ಲಿರುವ ಶಂಕರನನ್ನು 'ಕಾಮಕೋಟಿ' ಪೀಠಕ್ಕೆ ಎಷ್ಟೋ ಜನ ಗುರುಗಳು ಪೀಠಾಧಿಪತಿಗಳಾಗಿ ಇರುತ್ತಾ ಬಂದಿದ್ದಾರೆ. ಒಬ್ಬರ ನಂತರ ಮತ್ತೊಬ್ಬರು ಪೀಠಾಧಿಪತಿಗಳಾಗಿ ಬರುವುದು ನಡೆಯುತ್ತಿದೆ. ಅವರಲ್ಲಿ ಬಹಳಜನ ಶಂಕರಾಚಾರ್ಯರ ಹೆಸರು ಹೊಂದಿದ್ದಾರೆ. ಅಷ್ಟೇ ಅಲ್ಲದೆ ಪೀಠಾಧಿಪತಿಯಾಗಿ ಯಾರು ಪೀಠವನ್ನು ಅಧಿಷ್ಟಿಸಿದರೂ ಆತನು ಶಂಕರನ ಹೆಸರಿನಿಂದಲೇ ಚಲಾವಣೆ ಆಗಬೇಕಾಗಿರುತ್ತದೆ. ಪೀಠಾಧಿಪತಿಗಳಾಗಿ ಏರಿದವರ ಹೆಸರು ಯಾವುದಿದ್ದರೂ, ಶಂಕರನ ನಂತರ ಬಂದವರೆಲ್ಲರನ್ನು ಎರಡನೆ ಶಂಕರಚಾರ್ಯರು, ಮೂರನೆ ಶಂಕರಾಚಾರ್ಯರು ನಾಲ್ಕನೆ ಶಂಕರಾಚಾರ್ಯರು ಎಂದು ವರಸೆ ಕ್ರಮದಲ್ಲಿ ಶಂಕರಾಚಾರ್ಯರ ಹೆಸರೇ ಹೇಳುವುದರಿಂದ ಅವರೊಳಗೆ ಶಂಕರನು ಬೆರೆತುಹೋಗದಂತೆ, ಅದ್ವೈತ ಪೀಠಕ್ಕೆ ಮೊದಲನೆಯವನಾದ ಶಂಕರನನ್ನು ಎಲ್ಲರೂ ಗುರುತಿಸುವಂತೆ ಆದಿಶಂಕರಾಚಾರ್ಯರು ಎಂದು ಶಂಕರನನ್ನು ಕರೆದಿದ್ದಾರೆ. ಎಲ್ಲರಲ್ಲಿ ಬೆರೆತುಹೋಗದಂತೆ ಮೊದಲನೆಯವನೆಂಬ ಗುರುತು ಬರುವಂತೆ ಆದಿಶಂಕರಾಚಾರ್ಯರೆಂದು ಹೇಳಿದ್ದಾರೆ.

**ಪ್ರಶ್ನೆ :– ಆದಿಶಂಕರರು ತನ್ನ ಜೀವನದಲ್ಲಿ ಎಷ್ಟೋ ಮಹಿಮೆಗಳನ್ನು ಸಹ ಮಾಡಿದ್ದಾನೆಂದು ಕೇಳಿದ್ದೇವೆ. ಅದು ನಿಜವೇನಾ?**

**ಉತ್ತರ :–** ಆದಿಶಂಕರರು ತನ್ನ ಜೀವನದಲ್ಲಿ ಯಾವ ಮಹಿಮೆಗಳು ಮಾಡಲಿಲ್ಲ.

**ಪ್ರಶ್ನೆ:– ಆದರೂ ಕೆಲವು ಗ್ರಂಥಗಳಲ್ಲಿ ಶಂಕರರವರ ಮಹಿಮೆಗಳನ್ನು ಕುರಿತು ಬರೆದಿದ್ದಾರೆ. ಅದನ್ನೇನನ್ನುತ್ತೀರಾ?**

**ಉತ್ತರ:–** ಕೆಲವು ಗ್ರಂಥಗಳಲ್ಲಿ ಆದಿ ಶಂಕರಾಚಾರ್ಯರನ್ನು ಕುರಿತು ಎಷ್ಟೋ ದೊಡ್ಡವನೆಂದು, ಎಷ್ಟೋ ಮಹಿಮೆಗಳು ಮಾಡಿದ್ದಾನೆಂದು ಬರೆದಿದ್ದಾರೆ. ಆದರೆ ಅದರಲ್ಲಿ ಪೂರ್ತಿ ಸತ್ಯವಿಲ್ಲವೆಂದು ಹೇಳಬಹುದು. ಆದಿಶಂಕರರು ಬದುಕಿರುವಾಗ ಆತನು ಯಾವ ಮಹಿಮೆಗಳನ್ನು ಮಾಡಲಿಲ್ಲ. ಆರ್ಯರೇ ಶಂಕರನನ್ನು ಪ್ರಚಾರ ಮಾಡಿದ್ದಾರೆ. ಶಂಕರನು ಚಿಕ್ಕವಯಸ್ಸಿನಲ್ಲಿ ಯಾವ ಮಹಿಮೆಗಳು ಮಾಡಲಿಲ್ಲ.

**ಪ್ರಶ್ನೆ :– ಶಂಕರಾಚಾರ್ಯನು ಹುಟ್ಟಿದ ತಾರೀಖುಗಳನ್ನು ಕುರಿತು ಎರಡುಮೂರು ವಿಧಗಳಾಗಿ ಹೇಳುತ್ತಿದ್ದಾರೆ. ಒಂದು 788 A.D.ಯಲ್ಲಿ ಹುಟ್ಟಿ 820 A.D. ಯಲ್ಲಿ ಮರಣಿಸಿದಂತೆ ಅಲ್ಲಿಯೂ ಸಹ 32 ವರ್ಷಗಳು ಬದುಕಿದಂತ ಹೇಳಿದ್ದಾರೆ. ಇಲ್ಲಿ 509 B.C ಯಲ್ಲಿ ಹುಟ್ಟಿ 477 B.C ಯಲ್ಲಿ ಮರಣಿಸಿದಂತೆ ಹೇಳಿದ್ದಾರೆ. ಇಲ್ಲಿ ಸಹ 32 ವರ್ಷಗಳೇ ಬದುಕಿದಂತೆ ಇದೆ. ಯಾವುದು ನಿಜವೆನ್ನುತ್ತೀರಾ?**

**ಉತ್ತರ :–** ಈ ಎರಡು ಸಮಾಚಾರಗಳಲ್ಲಿ ಯಾವುದು ನಿಜ ಯಾವುದು ಅಸತ್ಯ ಎನ್ನುವುದು ಮುಖ್ಯವೇ ಅಲ್ಲ. ಆತನು ಬದುಕಿರುವುದು ಎರಡುಕಡೆಯಲ್ಲಿ 32 ವರ್ಷಗಳನ್ನೇ ಬರೆದಿದ್ದಾರೆ ಅಲ್ಲವೆ! ಅದೇ ಮುಖ್ಯ. ಒಂದು ವಿಧವಾಗಿ ನೋಡಿದರೆ ಬುದ್ಧನಿಗಿಂತ ಸ್ವಲ್ಪ ಹಿಂದೆ ಶಂಕರನು ಹುಟ್ಟಿದ್ದಾನೆಂದು ತಿಳಿಯುವುದರಿಂದ ಕ್ರೀಸ್ತನಿಗಿಂತ 509 ವರ್ಷಗಳ ಮುಂದೆ ಹುಟ್ಟಿದ್ದಾನೆನ್ನುವುದೇ ನಿಜವೆಂದು ಹೇಳಬಹುದು. ಅಗತ್ಯವಿಲ್ಲದ ವಿಷಯಗಳಿಗಿಂತ ಅಗತ್ಯವಾದ ವಿಷಯಗಳೇ ಮುಖ್ಯ. ಅಗತ್ಯವಾದ ವಿಷಯ ಶಂಕರನು ಎಷ್ಟು ವರ್ಷಗಳು ಬದುಕಿದ್ದಾನೆನ್ನುವುದೇ ಮುಖ್ಯ. ಶಂಕರಾಚಾರ್ಯರು 32 ವರ್ಷಗಳು ಬದುಕಿರುವುದು ನಿಜ. ಆತನು 32 ವರ್ಷಗಳು ಬದುಕಿ ತನ್ನ ಸ್ವಸ್ಥಳಕ್ಕೆ ಎಷ್ಟೋ ದೂರವಾಗಿ ಮರಣಿಸಿದ್ದಾನೆ. ಆತನು ಹುಟ್ಟಿರುವುದು ಮುಖ್ಯ, ಆತನು ಮರಣಿಸಿರುವುದು ಮುಖ್ಯ. ಮರಣಕ್ಕು ಜನ್ಮಕ್ಕು ಮಧ್ಯೆ ನಡೆದ ಜೀವಿತಕಾಲ ಮುಖ್ಯ. ಈ ಮೂರು ನಮಗೆ ತಿಳಿದಿರುವುದು ಸತ್ಯವೇ.

**ಪ್ರಶ್ನೆ :– ಶಂಕರನು ಸಾಧಾರಣವಾಗಿ ಮರಣಿಸಲಿಲ್ಲ. ಸಾಯಿಸಲ್ಪಟ್ಟಿದ್ದಾನೆ ಎಂದು ನೀವು ಹೇಳುವುದು ಸತ್ಯವೇ ಆದರೂ, ಅ ವಿಷಯುವನ್ನು ಕೆಲವರು**

**ಜೀರ್ಣಿಸಿಕೊಳ್ಳದೆ ನಿಮ್ಮನ್ನು ತಪ್ಪಾಗಿ ಆರೋಪಿಸಬಹುದು ಅಲ್ಲವೆ! ಹಾಗಲ್ಲದಿದ್ದರೂ ಇಂದಿಗೂ ಎಷ್ಟೋಜನ ಆರ್ಯರಿದ್ದಾರೆ ಅಲ್ಲವೆ! ಅವರು ತಮ್ಮ ರಹಸ್ಯವನ್ನು ಹೊರಗಿಡುತ್ತಿದ್ದಾರೆಂದೋ, ನಮ್ಮನ್ನು ಹಂತಕರನ್ನಾಗಿ ಚಿತ್ರಿಸುತ್ತಿದ್ದಾರೆಂದೋ ನಿಮ್ಮ ಮೇಲೆ ದ್ವೇಷ ಬೆಳೆಸಿಕೊಳ್ಳಬಹುದು ಅಲ್ಲವೆ! ಆರ್ಯರು ತಿಳುವಳಿಕೆಯುಳ್ಳವರೆಂದು, ವಿಶಿಷ್ಟಾದ್ವೈತದವರನೆಷ್ಟೋ ಜನರನ್ನು ಹಿಂಸಿಸಿದ್ದಾರೆಂದು ನೀವೇ ಹೇಳಿದ್ದೀರಾ. ಹಾಗಿರುವಾಗ ಶಂಕರನ ಮರಣವನ್ನು ಕುರಿತು ಹೇಳುವುದರಿಂದ ನಿಮಗೂ ಸಹ ಅವರ ಮೂಲಕ ತೊಂದರೆ ಇರಬಹುದು ಅಲ್ಲವೆ!**

**ಉತ್ತರ :–** ಶಂಕರನ ಜೀವನ ಚರಿತ್ರೆಯೆಲ್ಲವೂ ಬರೆದವರು ಶಂಕರನ ಮರಣವನ್ನು ಕುರಿತು ಬರೆಯಲಿಲ್ಲ. ಕೆಲವರು ಬರೆದರೂ ಆತನು ಕೈಲಾಸಕ್ಕೆ ಹೋಗಿದ್ದಾನೆಂದು ಬರೆದಿದ್ದಾರೆ. ಹಾಗೆ ಯಾರೂ ಹೋಗುವುದಕ್ಕೆ ಸಾಧ್ಯವಿಲ್ಲ. ಯಾರಾದರೂ ಮರಣಿಸಿದ ನಂತರ ಎಲ್ಲಿಗಾದರೂ ಹೋಗಬಹುದು. ಅಷ್ಟೇ ಹೊರತು ಬ್ರಹ್ಮದೇವರು ಬಂದು ಕೈಲಾಸ ಖಾಲಿಯಾಗಿದೆ ಇನ್ನು ಭೂಲೋಕ ನಿವಾಸ ಸಾಕೆಂದು ಶಂಕರನನ್ನು ಕರೆದಂತೆ, ಆಗ ಶಂಕರನು ತನ್ನ ವಾಹನವಾದ ವೃಷಭವನ್ನು ಏರಿ ಕೈಲಾಸಕ್ಕೆ ಹೋದಂತೆ ಬರೆಯುವುದು ಅಭೂತ ಕಲ್ಪನೆ ಎಂದು ಹೇಳಬಹುದು. ಇದೆಲ್ಲವೂ ಅಸತ್ಯವೇ ಎಂದು ತಿಳಿದರೂ ಹಾಗೆ ಕಲ್ಪಿಸಿ ಹೇಳಿದವರ ಮಾತುಗಳನ್ನು ನಂಬುವುದು, ನಾವು ಸತ್ಯ ಹೇಳಿದರೂ ನಂಬದಿರುವುದು ಬಹಳ ವಿಚಿತ್ರ. ಶಂಕರನು ಕೇದಾರ್‌ನಾಥ್‌ನಲ್ಲಿ ಕಳ್ಳರ ಕೈಯಲ್ಲಿ ಮರಣಿಸಿರುವುದು ಚರಿತ್ರೆಗೆ ತಿಳಿಯದ ಸತ್ಯ. ಆದರೆ ಆ ಕಳ್ಳರು ಯಾರು? ಎಂಬುದು ಆಧಾರವಿಲ್ಲದ ಪ್ರಶ್ನೆಯಾಗಿ ನಿಂತುಹೋಗಿದೆ. ಕಳ್ಳರ ಕೈಯಲ್ಲಿ ಮರಣಿಸಿರುವುದು ನೂರಕ್ಕೆನೂರರಷ್ಟು ಸತ್ಯವೇ. ಆದರೆ ಆ ಸಮಯದಲ್ಲಿ ಆರ್ಯರ ಕುತಂತ್ರ ಸಹ ಇಲ್ಲವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಈ ವಿಷಯದಲ್ಲಿ ನಮ್ಮ ನಿರ್ಣಯವೇ ಖಚ್ಚಿತವಾದುದೆಂದು ನೀವು ನಂಬಬೇಕಾದ ಅವಶ್ಯಕತೆಯಿಲ್ಲ. ನೀವು ಸ್ವತಃವಾಗಿ ಆಲೋಚಿಸಿ ಒಂದು ನಿರ್ಣಯಕ್ಕೆ ಬನ್ನಿರೆಂದು ನಾನು ಹೇಳುತ್ತಿದ್ದೇನೆ. ಆಗಿರುವ ಪರಿಸ್ಥಿತಿಗಳನ್ನು ಅನುಸರಿಸಿ ಇದೆಲ್ಲವೂ

ಒಂದು ಉಪಾಯದ ಪ್ರಕಾರವೇ ನಡೆದಿದೆಯೆಂದು ಹೇಳದೆ ತಪ್ಪಲಿಲ್ಲ. ನಡೆದಿರುವ ವಿಷಯವನ್ನು ಬಿಟ್ಟು ಈಗ ದ್ರಾವಿಡರು ಆರ್ಯರ ಬಲೆಯಲ್ಲಿ ತಗಲಿಕೊಳ್ಳಬೇಡಿರೆಂದು ಹೇಳುತ್ತಿದ್ದೇವೆ. ನಡೆದಿರುವುದಕ್ಕಿಂತ ನಡೆಯುವುದೇ ಮುಖ್ಯ ಅದನ್ನು ಕುರಿತು ಆಲೋಚಿಸಿರಿ.

**ಪ್ರಶ್ನೆ :– ಶಂಕರನು ಧರಿಸಿದ ಹಣೆಯ ಮೇಲೆ ಮೂರು ವಿಭೂತಿರೇಖೆಗಳು. ಶಂಕರಾಚಾರ್ಯರವರು ಕೈಲಾಸದಿಂದ ಇಳಿದುಬಂದ ಶಿವನೇಯೆಂದು ಆದುದರಿಂದ ಆತನು ವಿಭೂತಿಯನ್ನೆ ಧರಿಸಿದ್ದಾನೆಂದು ಕೆಲವರು ಹೇಳುತ್ತಿದ್ದಾರೆ. ಅಷ್ಟೇ ಅಲ್ಲದೆ ಆತನ ಮಂತ್ರ ಸಹ ಪಂಚಾಕ್ಷರಿ ಮಂತ್ರವಾದ "ಓಂ ನಮಃಶಿವಾಯ" ಎಂದು ಇದೆಯೆಂದು ಹೇಳುತ್ತಿದ್ದಾರೆ. ಇದನ್ನು ಕುರಿತು ನೀವೇನು ಹೇಳುತ್ತೀರಾ?**

**ಉತ್ತರ :–** ನಾನು ಒಬ್ಬ ಸಿದ್ಧಾಂತಕರ್ತನಾಗಿ ನನ್ನ ಕರ್ತವ್ಯದ ಪ್ರಕಾರ ಸತ್ಯವನ್ನೇ ಹೇಳಬೇಕಾಗಿದೆ. ಆದುದರಿಂದ ಈ ವಿಷಯದಲ್ಲಿ ನಾವು ಹೇಳುವುದೇನೆಂದರೆ! ಶಂಕರನನ್ನು ಶಿವನೆಂದು ಆರ್ಯರು ಹೇಳಿದ್ದಾರೆ ಹೊರತು ಉಳಿದವರು ಯಾರೂ ಹೇಳಲಿಲ್ಲ. ಮೂರು ವಿಭೂತಿ ರೇಖೆಗಳು ಅದ್ವೈತದಲ್ಲಿ ಬಂದಿರುವವು ಅಲ್ಲ. ಕೃತಯುಗದಲ್ಲಿನ ಜ್ಞಾನಿಗಳು ತಯಾರುಮಾಡಿರುವುದು ಮೂರು ವಿಭೂತಿ ರೇಖೆಗಳು. ಮೂರು ವಿಭೂತಿ ರೇಖೆಗಳಿಗೆ ವಿಶೇಷವಾದ ಜ್ಞಾನ ಇದೆ. ಮೂರು ವಿಭೂತಿರೇಖೆಗಳಲ್ಲಿ ಅದ್ವೈತವಾಗಲಿ, ವಿಶೀಷ್ಟಾದ್ವೈತವಾಗಲಿ, ದ್ವೈತವಾಗಲಿ ಯಾವುದೂ ಇಲ್ಲ. ತ್ರೈತ ಸಿದ್ಧಾಂತ ವಿಭೂತಿರೇಖೆಗಳೊಂದಿಗೆ ಸಂಬಂಧ ಹೊಂದಿದೆ. ವಿಭೂತಿರೇಖೆಗಳು ಮೂರು ಇವೆ. ಮೂರು ರೇಖೆಗಳು ಮೂರು ಆತ್ಮಗಳಿಗೆ ಗುರುತಾಗಿವೆ. ಆತ್ಮ ಎಂದರೆ! ಪವಿತ್ರತೆಯಿಂದ ಕೂಡಿ ಕೊಂಡಿದೆ. ಆದ್ದರಿಂದ ಆತ್ಮಗಳ ಗುರುತಾದ ಮೂರು ರೇಖೆಗಳನ್ನು ಬಿಳಿ ವಿಭೂತಿಯಿಂದ ತಿದ್ದಿರುವುದಾಗಿದೆ. ಬಿಳಿಬಣ್ಣ ಕಲ್ಮಷವಿಲ್ಲದ್ದು, ಪವಿತ್ರತೆಗೆ ಗುರುತಾಗಿದೆ. ಆದ್ದರಿಂದ ಮೂರು ರೇಖೆಗಳನ್ನು ಬಿಳಿಯ ವಿಭೂತಿಯಲ್ಲಿಯೇ ಇಡುವುದಾಗಿದೆ. ಮೊದಲು ಈಶ್ವರಲಿಂಗದ ಮೇಲೆ ಇಟ್ಟಿರುವ ವಿಭೂತಿ ರೇಖೆಗಳಿಗೆ ಎಷ್ಟೋ ಅರ್ಥವನ್ನು ಕೈಗೂಡಿಸಲಾಗಿದೆ.

**ಪ್ರಶ್ನೆ :– ಶಂಕರರು ಧರಿಸಿದ ಹಣೆ ಮೇಲೆ ಮೂರು ವಿಭೂತಿರೇಖೆಗಳು ಈತನು ಭೂಮಿಮೇಲೆ ಹುಟ್ಟುವಮೊದಲಿನಿಂದ ಧರಿಸುತ್ತಿದ್ದರೆಂದು, ಶಂಕರಾಚಾರ್ಯರು ಭೂಮಿಮೇಲೆ ಹುಟ್ಟುವದಕ್ಕಿಂತ ಮೊದಲು ತ್ರಿಮೂರ್ತಿಗಳಲ್ಲಿ ಒಬ್ಬರಾದ ಶಿವನೆಂದು, ಶಿವನಾಗಿ ಕೈಲಾಸ ಪರ್ವತದಲ್ಲಿ ನಿವಾಸಿಸುತ್ತಾ ವಿಭೂತಿ ರೇಖೆಗಳನ್ನು ಧರಿಸಿರುತ್ತಿದ್ದನೆಂದು, ಪಾರ್ವತಿ ಸಮೇತನಾಗಿರುವ ಶಿವನು ಶಂಕರನೆಂಬ ಹೆಸರಿನಿಂದ ಭೂಮಿಮೇಲೆ ಹುಟ್ಟಿ ಅದ್ವೈತವನ್ನು ಸ್ಥಾಪಿಸಿದ್ದಾನೆಂದು, 32 ವರ್ಷಗಳು ಭೂಮಿಮೇಲಿರುವ ಆತನು ಕೇದಾರ್‌ನಾಥ್‌ನಲ್ಲಿ ಇರುವಾಗ ಸಕಲದೇವತೆಗಳು ಬಂದು ಕರೆದಾಗ ತನ್ನ ವೃಷಭ ವಾಹನವನ್ನು ಏರಿ ಕೈಲಾಸಕ್ಕೆ ಹೋಗಿದ್ದಾನೆಂದು ಕೆಲವು ಗ್ರಂಥಗಳಲ್ಲಿ ಇದೆ. ಹಾಗಿರುವಾಗ ಶಿವನ ವಿಭೂತಿಗು ಶಂಕನಿಗು ಸಂಬಂಧ ಇಲ್ಲ ಎಂದು ನೀವು ಅನ್ನುವುದರಲ್ಲಿ ಸತ್ಯ ಇದೆಯಾ?**

**ಉತ್ತರ :–** ಶಂಕರನು ಶಿವನಾಗಿ ವೃಷಭ ವಾಹನದ ಮೇಲೆ ಕೈಲಾಸಕ್ಕೆ ಹೋಗಿದ್ದಾನೆಂದು ನೀವು ಹೇಳುವ ಮಾತುಗಳಲ್ಲಿ ಸತ್ಯವಿದೆಯಾ! ಎಂದು ನಾವು ಪ್ರಶ್ನಿಸುತ್ತಿದ್ದೇವೆ. ಪ್ರಜೆಗಳು ಅಸತ್ಯದ ಮಾತುಗಳನ್ನು ನಂಬುತ್ತಿದ್ದಾರೆ, ಸತ್ಯವನ್ನು ಹೇಳಿದರೆ ಪುನಃ ಪ್ರಶ್ನಿಸುತ್ತಾರೆ. ಅಸತ್ಯದ ಹತ್ತಿರ ಯಾರೂ ಏನು ಪ್ರಶ್ನಿಸದೆ ಹೇಳಿರುವುದೆಲ್ಲಾ ಕೇಳಿ ತಲೆಯಾಡಿಸುತ್ತಿದ್ದಾರೆ. ತ್ರಿಮೂರ್ತಿಗಳಲ್ಲಿ ಶಿವನಿಗು ಕೇರಳ ರಾಷ್ಟ್ರದಲ್ಲಿ ಹುಟ್ಟಿದ ಶಂಕರನಿಗು ಯಾವುದೇ ಸಂಬಂಧ ಇಲ್ಲ. ಅಷ್ಟೇ ಅಲ್ಲದೆ ವಿಭೂತಿರೇಖೆಗಳು ಕೈಲಾಸಗಿರಿಯಲ್ಲಿರುವ ಶಿವನಿಗೆ ಸಂಬಂಧಿಸಿರುವವು ಸಹ ಅಲ್ಲ. ಸೃಷ್ಟಿ ನಂತರ ದೇವರು ಕೊಟ್ಟಿರುವ ಜ್ಞಾನದಿಂದ **'ದೇವರಿಗೆ ರೂಪವಿಲ್ಲ'** ಎಂದು ತೋರಿಸುವುದಕ್ಕೆ ಮೂಗು ಮುಖವಿಲ್ಲದ ಒಂದು ದುಂಡನೆ ಕಲ್ಲನ್ನು ದೇವರ ಗುರುತಾಗಿ ತೋರಿಸಿದ್ದಾರೆ. ಅಷ್ಟೇ ಅಲ್ಲದೆ ದೇವರು ಮೂರು ಆತ್ಮಗಳ ರೂಪದಲ್ಲಿ ತ್ರೈತವಾಗಿ ಇದ್ದಾನೆಂದು ತಿಳಿಸುವುದಕ್ಕಾಗಿ ಮೂರು ಬಿಳಿಯ ರೇಖೆಗಳನ್ನು ದೇವರ ಗುರುತಾಗಿ ತೋರಿಸಲಾದ ಕಲ್ಲಿನ ಲಿಂಗದ ಮೇಲೆ ಇಡಲಾಗಿದೆ. ದೇವರ ನಿರಾಕಾರ ಸ್ವರೂಪಕ್ಕೆ ವಿಭೂತಿ ರೇಖೆಗಳನ್ನು, ಸಾಕಾರ ಸ್ವರೂಪವಾದ ಆಕಾರವಿರುವ ಪ್ರತಿಮೆಗೆ ಮೂರು

ಉದ್ದ ನಾಮಗಳನ್ನು ಮುಖದ ಮೇಲೆ ಹಣೆ ಭಾಗದಲ್ಲಿ ಇಡುವುದಾಗಿದೆ. ಈ ವಿಧವಾಗಿ ವಿಶ್ವದಲ್ಲಿನ ದೇವರೊಂದರ ಸ್ಥಿತಿಯನ್ನು ತಿಳಿಸುವುದಕ್ಕೆ ಮೂರು ಅಡ್ಡರೇಖೆಗಳನ್ನು, ಮೂರು ಉದ್ದ ರೇಖೆಗಳನ್ನು ಜ್ಞಾನಿಗಳು ತಯಾರು ಮಾಡಿಟ್ಟರೆ ಅವುಗಳನ್ನೇ ಎಲ್ಲರೂ ಧರಿಸಿದ್ದಾರೆ. ಅಷ್ಟೇ ಹೊರತು ಅವುಗಳನ್ನು ಧರಿಸಿದವರವು ಎಷ್ಟುಮಾತ್ರ ಅಲ್ಲ. ಶಿವನ ವಿಭೂತಿ ರೇಖೆಗಳಾಗಲಿ, ವಿಷ್ಣುವಿಗೆ ತ್ರಿನಾಮವಾಗಲಿ ಯಾವುದು ಸ್ವಂತವಲ್ಲ. ದೇವರೊಂದರ ಸಾಕಾರ ನಿರಾಕಾರಗಳಿಗೆ ಧರಿಸಿದ ಮೂರು ಆತ್ಮಗಳ ಗುರುತುಗಳಾಗಿ ಎರಡು ವಿಧಗಳ ಅಡ್ಡನಾಮಗಳು, ಉದ್ದ ನಾಮಗಳು ಇವೆಯೆಂದು ತಿಳಿಯಬೇಕು. ಕೃತಯುಗದಿಂದ ಎಲ್ಲರೂ ಧರಿಸಿದಂತೆ ಕೇರಳ ರಾಷ್ಟ್ರದಲ್ಲಿ ಹುಟ್ಟಿದ ಶಂಕರನು ಸಹ ವಿಭೂತಿ ರೇಖೆಗಳನ್ನು ಧರಿಸಿದ್ದಾರೆ.

**ಪ್ರಶ್ನೆ :– ಹಿಂದೂಮತದಲ್ಲಿನ ಶೈವರು ವಿಭೂತಿರೇಖೆಗಳನ್ನು ಧರಿಸಿದ್ದಾರೆ, ವೈಷ್ಣವರು ಉದ್ದನಾಮಗಳನ್ನು ಧರಿಸಿದ್ದಾರೆ. ಶೈವರು ವಿಭೂತಿ ರೇಖೆಗಳನ್ನು ತಮ್ಮ ಸ್ವಂತ ಪಾರ್ಟಿ ಗುರುತಾಗಿ ಹೇಳಿಕೊಂಡರೆ, ವೈಷ್ಣವರು ಮೂರು ಉದ್ದ ನಾಮಗಳನ್ನು ವೈಷ್ಣವ ಸಂಪ್ರದಾಯ ಗುರುತಾಗಿ ಹೇಳಿಕೊಂಡಿದ್ದಾರೆ. ಶೈವರ, ವೈಷ್ಣವರ ಬೇರೆಬೇರೆ ಸಂಪ್ರದಾಯಗಳಿಗೆ ಸಂಬಂಧಿಸಿರುವವೇ ಬೇರೆಬೇರೆಯಾಗಿರುವ ಉದ್ದ, ಅಡ್ಡನಾಮಗಳು ಎಂದು ಹೇಳುತ್ತಿದ್ದಾರೆ. ಶೈವರು, ವೈಷ್ಣವರು ಹೇಳುವುದರಲ್ಲಿ ಸತ್ಯವೆಷ್ಟು ಇದೆ?**

**ಉತ್ತರ :–** ಸತ್ಯ ಅಣುವಷ್ಟು ಇಲ್ಲವೆಂದು ಹೇಳಬಹುದು. ಮೊದಲ ಯುಗವಾದ ಕೃತಯುಗದಲ್ಲಿಯೇ ಆಧ್ಯಾತ್ಮಿಕ ಜ್ಞಾನದಲ್ಲಿ ಸಾಕಾರ, ನಿರಾಕಾರಗಳನ್ನು ತಿಳಿಸುವ ಗುರುತುಗಳಾಗಿ, ಮೂರು ಆತ್ಮಗಳನ್ನು ಉದ್ದೇಶಿಸಿ ಇಟ್ಟಿರುವವೇ ವಿಭೂತಿ ರೇಖೆಗಳು, ಉದ್ದ ನಾಮಗಳು. ಆದರೆ ಕಾಲ ಕಳೆದಂತೆಲ್ಲ ಮನುಷ್ಯರಲ್ಲಿ ಮಾಯಾಪ್ರಭಾವ ಕೆಲಸ ಮಾಡುವುದರಿಂದ ತ್ರೇತಾಯುಗಕ್ಕೆ ವಿಭೂತಿರೇಖೆಗಳು ಚಂದ್ರವಂಶದವರು ಧರಿಸುವವೆಂದು, ಉದ್ದ ನಾಮಗಳು ಸೂರ್ಯವಂಶದವರು ಧರಿಸುತ್ತಿದ್ದರೆಂದು ಹೇಳಿಕೊಳ್ಳುವುದು, ಹಾಗೆ ಧರಿಸುವುದು ನಡೆಯುತ್ತಿತ್ತು. ದ್ವಾಪರಯುಗದಲ್ಲಿ ಮತ್ತಷ್ಟು ಮಾಯೆ ಕೆಲಸಮಾಡಿದಾಗ ಅಜ್ಞಾನದಲ್ಲಿ ಮುಳುಗಿದ

ಮನುಷ್ಯರು ಪೂರ್ವದಲ್ಲಿ ಹಿರಿಯರು ಇಟ್ಟಿರುವ ಅರ್ಥಗಳನ್ನು ಮರೆತುಹೋದವರಾಗಿ ವಿಭೂತಿರೇಖೆಗಳು ಶೈವರದು, ಉದ್ದ ನಾಮಗಳು ವೈಷ್ಣವರದು ಎಂದು ಹೇಳಿಕೊಂಡಿದ್ದಾರೆ. ಪ್ರಸ್ತುತ ಕಲಿಯುಗದಲ್ಲಿ ಎರಡು ನಾಮಗಳಿಗು ಪೂರ್ವವಿರುವ ಅರ್ಥವನ್ನು ಪೂರ್ತಿಯಾಗಿ ಮರೆತುಹೋದವರಾಗಿ, ಮತ್ತಷ್ಟು ಅಜ್ಞಾನದೊಳಗೆ ಇಳಿಜಾರಿದವರಾಗಿ, ಮೂರು ವಿಭೂತಿರೇಖಗಳು ಅದ್ವೈತದವರದು ಎಂದೂ, ಮೂರು ಉದ್ದ ನಾಮಗಳು ವಿಶಿಷ್ಟಾದ್ವೈತದವರದು ಎಂದೂ ಹೇಳಿಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಯುಗಗಳು ಬದಲಾದಂತೆಲ್ಲ ಎರಡು ನಾಮಗಳ ಮೇಲೆ ಭಾವನೆಗಳು ಸಹ ಬದಲಾಗುತ್ತಾ ಬಂದಿವೆ. ಆದರೆ ಪೂರ್ವದಲ್ಲಿ ಕೃತಯುಗದಲ್ಲಿ ಆತ್ಮಜ್ಞಾನಿಗಳ ಭಾವನೆಯೇ ಸರಿಯಾದುದು ಆದರೇ, ನಂತರ ಬಂದ ಮೂರು ಯುಗಗಳಲ್ಲಿಯೂ ವಿಭೂತಿರೇಖೆಗಳ ಮೇಲೆ, ಮೂರು ನಾಮಗಳ ಮೇಲೆ ಪ್ರಜೆಗಳಲ್ಲಿರುವ ಭಾವನೆ ಸರಿಯಾದುದು ಅಲ್ಲವೆಂದು ಹೇಳಬಹುದು. ದ್ವೈತ ಎಂದರೆ ಎರಡೆಂದು ಅರ್ಥ ಇದೆ. ತ್ರೈತ ಎಂದರೇ ಮೂರೆಂದು ಅರ್ಥ ಇದೆ. ಅದ್ವೈತ ಎಂದರೇ ಎರಡು ಅಲ್ಲದಿರುವುದೆಂದು ಅರ್ಥವಿದೆ. ಹಾಗಿರುವಾಗ ಅದ್ವೈತಕ್ಕೆ ನಿಜವಾದ ಭಾವನೆಯನ್ನು ಖಚಿತವಾಗಿ ಹೇಳಲಾರೆವು. ಏಕೆಂದರೆ! ಅದ್ವೈತ ಎಂಬ ಪದದಲ್ಲಿಯೇ ಸಂಶಯವಿದೆ. ಅದ್ವೈತ ಎಂದಾಗ ಎರಡು ಅಲ್ಲದಿರುವುದೆಂದು ಅರ್ಥ ಬರುತ್ತದೆ. ಎರಡು ಅಲ್ಲದಿರುವುದು, ಎರಡರ ನಂತರ ಇರುವುದು, ಮೂರೆಂದು ಹೇಳಬಹುದು. ಹಾಗಲ್ಲದೆ ಅದ್ವೈತ ಎಂದರೆ ಎರಡಲ್ಲದಿರುವುದು ಒಂದು ಎಂದು ಹೇಳುವುದು ತಪ್ಪೆಂದು ಹೇಳಬಹುದು. ಶೂನ್ಯ ಎಂದರೆ ಸೊನ್ನೆ ಎಂದೂ, ಅಶೂನ್ಯ ಎಂದರೆ ಸೊನ್ನೆ ಅಲ್ಲದಿರುವುದು ಒಂದು ಎಂದು ಹೇಳಬಹುದು. ಹಾಗೆಯೇ 'ಅನೇಕ' ಎಂದಾಗ ಒಂದು ಅಲ್ಲದಿರುವುದು ಎರಡೆಂದು ಹೇಳಬಹುದು. ಅದ್ವೈತ ಎಂದಾಗ ಎರಡು ಅಲ್ಲದಿರುವುದು ಮೂರೆಂದು ಹೇಳಬಹುದು. ಹಾಗೆ ಮುಂದಕ್ಕೆ ಹೇಳಬೇಕಾಗಲಿ, ಹಿಂದಕ್ಕೆ ಹೇಳಬಾರದು. ಆದ್ದರಿಂದ ಅದ್ವೈತ ಎಂದರೇ ಒಂದೆನ್ನುವುದರಲ್ಲಿ ಅರ್ಥವೇ ಇಲ್ಲ.

**ಪ್ರಶ್ನೆ :- ಮೂರು ವಿಭೂತಿರೇಖೆಗಳು, ಮೂರು ಉದ್ದ ನಾಮಗಳು ಈಗಿನವಲ್ಲ, ಅದ್ವೈತರಿಗೂ, ವಿಶಿಷ್ಟಾದ್ವೈತರಿಗೂ ಸಂಬಂಧಿಸಿರುವವು ಅಲ್ಲ. ಕೃತಯುಗದಲ್ಲಿಯೇ ಜ್ಞಾನಿಗಳು ನಿರ್ಣಯಿಸಿ ಇಟ್ಟಿರುವವೆಂದು ನೀವು ಹೇಳಿದ್ದೀರಾ. ನೀವು ಹೇಳಿದ ಮಾತು ನಿಜವೇ ಆಗಿರಬಹುದು. ಕೃತಯುಗ ಚರಿತ್ರೆಯಲ್ಲೂ, ತ್ರೇತಾಯುಗ ಚರಿತ್ರೆಯಲ್ಲೂ, ದ್ವಾಪರಯುಗ ಚರಿತ್ರೆಯಲ್ಲೂ ವಿಭೂತಿರೇಖೆಗಳನ್ನು, ಉದ್ದ ನಾಮಗಳನ್ನು ಧರಿಸಿದವರಿರುವಂತೆ ತಿಳಿಯುತ್ತಿದೆ. ಶ್ರೀರಾಮನ ಕಾಲದಲ್ಲಿ ರಾಮನು ಸೂರ್ಯವಂಶದ ರಾಜನಾಗಿರುವುದರಿಂದ ಉದ್ದ ನಾಮಗಳು ಧರಿಸಿದಂತೆ, ರಾವಣಬ್ರಹ್ಮ ವಿಭೂತಿರೇಖೆಗಳನ್ನು ಧರಿಸಿದಂತೆ ಚರಿತ್ರೆಯಲ್ಲಿ ತಿಳಿಯುತ್ತಿದೆ. ನಾಲ್ಕು ಯುಗಗಳಲ್ಲಿ ಬಿಳಿಯ ವಿಭೂತಿರೇಖೆಗಳು, ಮೂರು ಉದ್ದ ನಾಮಗಳನ್ನು ಧರಿಸಿದವರಿದ್ದಾರೆ. ಆದರೆ ಯುಗಯುಗಕ್ಕು ಮನುಷ್ಯರಲ್ಲಿನ ಭಾವನೆ ಬದಲಾಗಿದೆ ಯೆಂದು ನೀವು ಹೇಳಿರುವುದು ಸತ್ಯವೇ ಎನಿಸುತ್ತಿದೆ. ಆದರೆ ಈದಿನ ಅದ್ವೈತದವರು, ವಿಶಿಷ್ಟಾದ್ವೈತದವರು ಹೇಳುತ್ತಿರುವ ಮಂತ್ರಗಳು ಈಗಿನ ಕಾಲದಲ್ಲಿ ಇವರವೇನಾ, ಅಥವಾ ಪೂರ್ವಕಾಲದಿಂದ ನಾಮಗಳಿರುವಂತೆ ಬೇರೆ ಅರ್ಥದಿಂದ ಏನಾದರೂ ಇರುತ್ತಿದ್ದವಾ ಎಂಬ ಅನುಮಾನ ಬಂದಿದೆ. ಈದಿನ ಅದ್ವೈತರು "ಓಂ ನಮಃಶಿವಾಯ" ಎಂಬ ಪಂಚಾಕ್ಷರಿ ಮಂತ್ರವನ್ನು, ವಿಶಿಷ್ಟಾದ್ವೈತರು "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರಿ ಮಂತ್ರವನ್ನು ಹೇಳುತ್ತಿದ್ದಾರೆ. ಈ ಪಂಚಾಕ್ಷರಿ, ಅಷ್ಟಾಕ್ಷರಿ ಮಂತ್ರಗಳು ಈಗಿನವೇನಾ ಅಥವಾ ಪೂರ್ವ ಕಾಲದಿಂದ ಇವೆಯಾ? ನಮಗೆ ಅರ್ಥವಾಗುವಂತೆ ವಿವರವಾಗಿ ಹೇಳಿರಿ.**

**ಉತ್ತರ :-** ಕೃತಯುಗದಲ್ಲಿಯೇ ಸೂರ್ಯನು ಭೂಮಿ ಮೇಲಕ್ಕೆ ದೈವಜ್ಞಾನವನ್ನು ಸೇರಿಸಿದ ನಂತರ ಜ್ಞಾನವನ್ನು ತಿಳಿದ ಜ್ಞಾನಿಗಳು ಪ್ರಕೃತಿಯನ್ನು ದೇವರನ್ನು ಬೇರೆ ಬೇರೆಯಾಗಿ ವಿಂಗಡಿಸಿ ಪ್ರಕೃತಿಗೆ ಸರ್ವ ನಾಶವಾದರೂ ದೇವರು ಮಾತ್ರ ನಾಶ ಆಗದವನೆಂದು ತಿಳಿಸುವುದಕ್ಕಾಗಿ ಜ್ಞಾನಾರ್ಥದಿಂದ ಪಂಚಾಕ್ಷರಿ ಮಂತ್ರವನ್ನು ತಯಾರು ಮಾಡಿದ್ದಾರೆ. ಪಂಚಾಕ್ಷರಿ ಮಂತ್ರ ಆರು ಅಕ್ಷರಗಳಿಂದ ಕೂಡಿಕೊಂಡಿದೆ. "ಓಂ ನಮಃಶಿವಾಯ" ಎನ್ನುವುದು ಪಂಚಾಕ್ಷರಿ ಮಂತ್ರವೆಂದು

ಹೇಳಲಾಗುತ್ತಿದೆ. ದೇವರು ಕಾಣಿಸದವನು, ಕಾಣಿಸದ ದೇವರ ಜ್ಞಾನ ಕಾಣಿಸದ ಸೂಕ್ಷ್ಮವಾದ ಅರ್ಥದಿಂದ ಕೂಡಿಕೊಂಡಿರುತ್ತದೆ. ಆದರೆ ಪಂಚಾಕ್ಷರಿ ಮಂತ್ರಕ್ಕೆ ಸ್ಥೂಲವಾಗಿ ಕಾಣಿಸುವ ಅರ್ಥವೊಂದು ಇದೆ. ಹಾಗೆಯೇ ಸೂಕ್ಷ್ಮವಾಗಿ ಕಾಣಿಸದ ಅರ್ಥ ಮತ್ತೊಂದು ಇದೆ. ಸ್ಥೂಲವಾದ ಅರ್ಥವನ್ನು ಕುರಿತು ಹೇಳಿಕೊಂಡರೆ ಈ ವಿಧವಾಗಿ ಇದೆ. ಪಂಚ+ಅಕ್ಷರಿ=ಪಂಚಾಕ್ಷರಿ. ಪಂಚ ಎಂದರೆ ಐದುಯೆಂದು ಅರ್ಥ. ಅಕ್ಷರಿ ಎಂದರೇ ಅಕ್ಷರಗಳೆಂದು ಹೇಳಬಹುದು. ಕಾಣಿಸುವ ಐದು ಅಕ್ಷರಗಳೆಂದು ಪ್ರಪಂಚ ಸಂಬಂಧವಾಗಿ ಕಾಣಿಸುವ ಅರ್ಥ ಇದೆ. ಇನ್ನು ಕಾಣಿಸದ ಸೂಕ್ಷ್ಮವಾದ ಅರ್ಥವೂ ಸಹ ಇದೆ. ಪಂಚ ಎಂದರೆ ಐದು ಎಂದೂ, ಅಕ್ಷರೀ ಎಂದರೇ ನಾಶವಾಗದಿರುವುದೆಂದೂ ಅರ್ಥ. ಈ ಕಾಣಿಸದ ಸೂಕ್ಷ್ಮ ಅರ್ಥದ ಪ್ರಕಾರ ಐದಕ್ಕೆ ನಾಶವಾಗದಿರುವುದೆಂದು ಅರ್ಥ. ಇನ್ನೂ ವಿವರವಾಗಿ ಹೇಳಿಕೊಂಡರೆ ಪ್ರಕೃತಿ ಐದು ಭಾಗಗಳಾಗಿ ಇದೆ. ಅದನ್ನೇ ಪಂಚಭೂತಗಳು ಅನ್ನುತ್ತಿದ್ದೇವೆ. ಐದು ಸಜೀವ ಶಕ್ತಿಗಳಿಂದ ಕೂಡಿರುವುದೆ ಪ್ರಕೃತಿ. ಪ್ರಕೃತಿಯಲ್ಲಿ ಐದು ಶಕ್ತಿಗಳು ಕ್ರಮವಾಗಿ ಹೆಸರುಗಳು ಈ ವಿಧವಾಗಿ ಇವೆ. 1) ಆಕಾಶ, 2) ಗಾಳಿ, 3) ಅಗ್ನಿ 4) ನೀರು, 5) ಭೂಮಿ. ಈ ಐದು ಶಕ್ತಿಗಳು ಪ್ರಪಂಚದಲ್ಲಿ ಜೀವರಾಶಿಗಳಿಗೆ ಹುಟ್ಟು, ಸಾವನ್ನು ಉಂಟುಮಾಡುತ್ತಿವೆ. ದೇವರು ಸಾಕ್ಷಿಯಾಗಿರುವಾಗ ಐದು ಶಕ್ತಿಗಳಿಂದಲೇ ಪ್ರಪಂಚದಲ್ಲಿನ ಕಾರ್ಯಗಳೆಲ್ಲವೂ ನಡೆಯುತ್ತಿವೆ. ಆತ್ಮ ಮಾಡಿಸಿದಾಗ ಪ್ರಕೃತಿ ಮಾಡುತ್ತಿವೆ.

ಪ್ರಕೃತಿಯೆಲ್ಲವೂ ಪರಮಾತ್ಮನ ಅಧೀನದಲ್ಲಿದ್ದು ಕೆಲಸ ಮಾಡುತ್ತಿದೆ. ಪ್ರಕೃತಿಯನ್ನು ಹುಟ್ಟಿಸಿರುವುದು ಪರಮಾತ್ಮನೇ. ಆದುದರಿಂದ ಎಲ್ಲವನ್ನು ನಾಶ ಮಾಡುವ ಪ್ರಕೃತಿ ಪರಮಾತ್ಮನನ್ನು ಏನೂ ಮಾಡದೆ ದೇವರಬಳಿ ವಿನಯವಾಗಿರುತ್ತದೆ. ಇದರಿಂದ ಪ್ರಕೃತಿಗೆ ನಾಶವಾಗದಿರುವುದು ಪರಮಾತ್ಮ ಎಂದು ಹೇಳಬಹುದು. ಪ್ರಕೃತಿ ಎಂದರೆ ಪಂಚಭೂತಗಳು ಆದ್ದರಿಂದ "ಪಂಚ" ಎಂದು ಹೇಳಿದ್ದಾರೆ. ನಾಶವಾಗದಿರುವುದು ಆದ್ದರಿಂದ "ಅಕ್ಷರ" ಎಂದಿದ್ದಾರೆ. ಅಕ್ಷರ ಎಂದರೇ ನಾಶ ಇಲ್ಲದಿರುವುದು ಎಂದು ಹೇಳುತ್ತಾ

ಪಂಚಭೂತಗಳಿಗೆ ನಾಶವಾಗದಿರುವುದು ಪರಮಾತ್ಮಯೆಂದು ಎಲ್ಲರಿಗೂ ತಿಳಿಸುವುದಕ್ಕಾಗಿ ದೇವರನ್ನು "ಪಂಚಾಕ್ಷರಿ" ಎಂದಿದ್ದಾರೆ. ಪಂಚಾಕ್ಷರಿಯಲ್ಲಿ ಪಂಚವಾಗಿರುವ ಪ್ರಕೃತಿಗೆ ಅಂದರೇ ಐದು ಭೂತಗಳಿಗೆ ಗುರುತಾಗಿ ಐದು ಬೀಜಾಕ್ಷರಗಳನ್ನು ಬರೆದು ತೋರಿಸಿದ್ದಾರೆ. ಹಾಗೆ ಪರಮಾತ್ಮನಿಗೆ ಗುರುತಾಗಿ ಒಂದು ಬೀಜಾಕ್ಷರವನ್ನು ಬರೆದು ತೋರಿಸಿದ್ದಾರೆ. ಪರಮಾತ್ಮನಿಗೆ ಗುರುತಾಗಿರುವ ಬೀಜಾಕ್ಷರ "ಓಂ" ಎಂದು ಬರೆದು, ಪಂಚಭೂತಗಳ ಬೀಜಾಕ್ಷರಗಳನ್ನು ಕ್ರಮವಾಗಿ ನ, ಮಃ, ಶಿ, ವಾ, ಯ ಎಂದು ಬರೆದಿದ್ದಾರೆ. "ಓಂ" ಪರಮಾತ್ಮ ಬೀಜಾಕ್ಷರವಾದಂತೆ "ನ" ಆಕಾಶಕ್ಕೆ ಬೀಜಾಕ್ಷರವಾಗಿ ನಿಂತಿದೆ. ಹಾಗೆ "ಮಃ' ಗಾಳಿಗೆ, "ಶಿ" ಅಗ್ನಿಗೆ, "ವಾ" ನೀರಿಗೆ, "ಯ" ಭೂಮಿಗೆ ಬೀಜಾಕ್ಷರಗಳಾಗಿವೆ. ಈ ವಿಧವಾಗಿ "ಓಂ ನಮಃಶಿವಾಯ" ಎನ್ನುವುದು ಪ್ರಕೃತಿಗೆ ನಾಶವಾಗದ ಪರಮಾತ್ಮನಾಗಿ ಗುರುತಿಸಲ್ಪಟ್ಟಿದೆ. ಇದು ಓಂ ನಮಃಶಿವಾಯದಲ್ಲಿನ ಸೂಕ್ಷ್ಮವಾದ ಅರ್ಥವಾಗಿರುವಾಗ, ಸ್ಥೂಲವಾದ ಅರ್ಥ ಬರೆಯಲಾದ ಐದು ಅಕ್ಷರಗಳೆಂದು ಹೇಳಬಹುದು.

ಹಾಗೆ ಹೇಳಿದರೆ 'ಓಂ ನಮಃಶಿವಾಯ' ಒಟ್ಟು ಆರು ಅಕ್ಷರಗಳು ಇವೆ. ಆಗ ಇದರ ಹೆಸರು ಷಷ್ಠಾಕ್ಷರಿ ಆಗುತ್ತದೆ ಅಲ್ಲವೇ! ಪಂಚಾಕ್ಷರಿ ಆಗುವುದಿಲ್ಲವಲ್ಲ! ಎಂದು ಪ್ರಶ್ನೆ ಬರುತ್ತದೆ. ಆ ಪ್ರಶ್ನೆಗೆ ಕೆಲವರು "ಓಂ" ಎನ್ನುವುದು ಪ್ರಣವಾಕ್ಷರ. ಅದು ಎಲ್ಲಾ ಮಂತ್ರಗಳಿಗು ಮುಂದಿರುವುದು, ಆದ್ದರಿಂದ 'ಓಂ' ಅನ್ನು ಬಿಟ್ಟು ನಮಃಶಿವಾಯ ಎಂಬ ಐದು ಅಕ್ಷರಗಳನ್ನೆ ಲೆಕ್ಕಿಸಬೇಕು" ಎಂದು ಹೇಳುತ್ತಿದ್ದಾರೆ. ಪ್ರತಿ ಮಂತ್ರದ ಮುಂದೆ 'ಓಂ' ಸರ್ವಸಾಧಾರಣವಾಗಿ ಉಚ್ಚರಿಸಲ್ಪಡುತ್ತಿದೆ. ಆದುದರಿಂದ ಓಂ ಅನ್ನು ಬಿಟ್ಟು ಮಂತ್ರದಲ್ಲಿನ ಅಕ್ಷರಗಳ ಸಂಖ್ಯೆಯನ್ನೇ ಹೇಳಬೇಕೆಂದು ಕೆಲವರ ವಾದನೆ. ಇದು ಹೀಗಿರುವಾಗ ಕೆಲವರ ವಾದನೆಯಲ್ಲಿ ಓಂಅನ್ನು ಸಹ ಸೇರಿಸಿ ಲೆಕ್ಕಿಸಬೇಕೆಂದು ಹೇಳುತ್ತಿದ್ದಾರೆ. "ಓಂ ನಮೋ ನಾರಾಯಣಾಯ" ಎಂಬ ಮಂತ್ರದಲ್ಲಿ ಒಟ್ಟು ಎಂಟು ಅಕ್ಷರಗಳಿರುವುದರಿಂದ ಅದನ್ನು ಅಷ್ಟಾಕ್ಷರಿ

ಮಂತ್ರವೆಂದಿದ್ದಾರೆ. ಇಲ್ಲಿ 'ಓಂ'ಅನ್ನು ಸೇರಿಸಿ ಲೆಕ್ಕಿಸಿದರೆ ಎಂಟು ಅಕ್ಷರಗಳಾಗುತ್ತಿವೆ. ಓಂಅನ್ನು ಬಿಟ್ಟು ಎಣಿಸಿದರೆ ಏಳು ಅಕ್ಷರಗಳೇ ಆಗುತ್ತವೆ. ಅಷ್ಟಾಕ್ಷರಿ ಮಂತ್ರದ ಹತ್ತಿರ 'ಓಂ'ಅನ್ನು ಲೆಕ್ಕಿಸೆಂದು ಹೇಳಿದಂತೆ ಪಂಚಾಕ್ಷರಿ ಮಂತ್ರದ ಬಳಿ ಹೇಳುತ್ತಿಲ್ಲ. ಅಲ್ಲಿ ಓಂಅನ್ನು ಬಿಟ್ಟು ಲೆಕ್ಕಿಸಿರಿ ಎಂದು ಹೇಳುತ್ತಿದ್ದಾರೆ. ಪಂಚಾಕ್ಷರಿ, ಅಷ್ಟಾಕ್ಷರಿ ಮಂತ್ರಗಳ ವಿಷಯಗಳಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳುವುದರಿಂದ ಎರಡು ಮಂತ್ರಗಳ ಬಳಿ ಏಕಾಭಿಪ್ರಾಯ ಇಲ್ಲದಂತಾಗಿದೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಎಷ್ಟೋ ಪ್ರಾಮುಖ್ಯತೆಯನ್ನು ಹೊಂದಿದ ಎರಡು ಮಂತ್ರಗಳು ಭಿನ್ನವಾಗಿರುವುದರಿಂದ ಮನುಷ್ಯರೆಲ್ಲರೂ ಆಧ್ಯಾತ್ಮಿಕವನ್ನು ನಂಬದೇ ಎಲ್ಲಾ ಬೂಟಕವೆನ್ನುತ್ತಿದ್ದಾರೆ. ಇವುಗಳಲ್ಲಿ ಶಾಸ್ತ್ರಬದ್ಧತೆ ಕಾಣಿಸದಿರುವುದರಿಂದ ಕೆಲವರು ದೇವರನ್ನೇ ನಂಬದ ನಾಸ್ತಿಕರು ತಯಾರಾಗಿದ್ದಾರೆ.

**ಪ್ರಶ್ನೆ:– ಪಂಚಾಕ್ಷರಿ ಮಂತ್ರ ಜ್ಞಾನವನ್ನು ತಿಳಿದ ಹಿರಿಯರು ತಯಾರು ಮಾಡಿದ್ದಾರೆಂದರೆ ಅದು ಕೃತಯುಗದಲ್ಲಿ ತಯಾರಾದಂತೆ. ಆದರೆ ಅದು ಸ್ಥೂಲ ಅರ್ಥಕ್ಕಿಂತ ಸೂಕ್ಷ್ಮ ಅರ್ಥವೇ ಜ್ಞಾನದಿಂದ ಕೂಡಿಕೊಂಡಿರುವುದಾಗಿದ್ದರೆ, ಸ್ಥೂಲ ಅರ್ಥ ಐದು, ಆರು ಅಕ್ಷರಗಳೆಂದು ಲೆಕ್ಕಿಸಲ್ಪಡುತ್ತಾ ಅನುಮಾನಗಳನ್ನೆ ಹೆಚ್ಚಿಸುತ್ತಿದೆ. ಇದಕ್ಕೆ ಜೊತೆಯಾಗಿ ಅಷ್ಟಾಕ್ಷರಿ ಮಂತ್ರ ದೇಶದಲ್ಲಿ ಪ್ರಸಿದ್ಧಿಯಾಗಿದೆ. ಪಂಚಾಕ್ಷರಿ, ಅಷ್ಟಾಕ್ಷರಿ ಮಂತ್ರಗಳನ್ನು ತಿಳಿಯದ ಜ್ಞಾನಿಗಳು ಇರುವುದಿಲ್ಲ. ಸ್ವಲ್ಪಮಟ್ಟಿನ ಜ್ಞಾನ ತಿಳಿದವರಿಗಾದರೂ ಈ ಎರಡು ಮಂತ್ರಗಳು ಸುಪರಿಚಯವೇ ಎಂದು ಹೇಳಬಹುದು. ಪಂಚಾಕ್ಷರಿ ಮಂತ್ರ ಒಂದೇ ಇದ್ದಿದ್ದರೇ ಅಕ್ಷರಗಳ ಸಮುದಾಯಗಳಲ್ಲಿ ಅಷ್ಟು ಸಂದೇಹ ಇರುತ್ತಿರಲಿಲ್ಲ. ಅಷ್ಟಾಕ್ಷರಿ ಮಂತ್ರ ಬಂದ ನಂತರವೇ ಅಕ್ಷರಗಳ ಗೊಂದಲ ಪ್ರಾರಂಭವಾಗಿದೆ. ಪಂಚಾಕ್ಷರಿ ಕೃತಯುಗದಿಂದ ಇದೆ. ಆದರೆ ಅಷ್ಟಾಕ್ಷರಿ ಯಾವಾಗ ಪ್ರಾರಂಭವಾಗಿದೆ. ಯಾರು ಅಷ್ಟಾಕ್ಷರಿಯನ್ನು ಕಂಡುಹಿಡಿದು ಹೇಳಿದ್ದಾರೆ?**

**ಉತ್ತರ :–** ಭೂಮಿಮೇಲೆ ಯಾವಾಗ ಜ್ಞಾನ ಪ್ರಾರಂಭವಾಗಿದೆಯೋ ಆಗಲೇ ಅಜ್ಞಾನ ಸಹ ಪ್ರಾರಂಭವಾಗಿದೆ. ಮೊದಲು ಜ್ಞಾನದ ಪ್ರಕಾರ ಪಂಚಾಕ್ಷರಿ

ಮಂತ್ರ ತಯಾರಾಗಿದೆ. ಮಂತ್ರ ಎಂದರೆ ಜಪಿಸುವುದು ಅಲ್ಲ. ಮಂತ್ರ ಎಂದರೆ ಮಹಿಮೆಯಿಂದ ಕೂಡಿಕೊಂಡಿರುವುದೆಂದು ಅರ್ಥ. ಮಹಿಮೆ ಎಂದರೆ ಶಕ್ತಿಯೆಂದು ಜ್ಞಾನಶಕ್ತಿ ಎಂದು ಅರ್ಥ. ಪಂಚಾಕ್ಷರಿಯಲ್ಲಿ ಜ್ಞಾನಶಕ್ತಿ ಒಳಗೊಂಡಿರುವುದರಿಂದ ಅದನ್ನು 'ಪಂಚಾಕ್ಷರಿ ಮಂತ್ರ' ಎಂದು ಹೇಳಿದ್ದಾರೆ. ಕೃತಯುಗದಲ್ಲಿ ಪಂಚಾಕ್ಷರಿ ಮಂತ್ರ ಇರುವಾಗ ಅದೇ ಯುಗದಲ್ಲಿಯೇ ಸ್ವಲ್ಪಕಾಲ ಕಳೆದಾಗ, ನಿರಾಕಾರ, ಸಾಕಾರ ಸ್ವರೂಪವಾಗಿ ತಯಾರಾದ ಲಿಂಗವನ್ನು, ಪ್ರತಿಮೆಯನ್ನು ದೇವತೆಗಳ ಕೆಳಗೆ ಜಮಕಟ್ಟಿದ್ದಾರೆ. ಅಲ್ಲಿಗೆ ಸ್ವಲ್ಪ ಅಜ್ಞಾನ ಮನುಷ್ಯರಲ್ಲಿ ತಯಾರಾಗಿ ಪರಮಾತ್ಮ ನಿರಾಕಾರವಾದ ಲಿಂಗವನ್ನು ಶಿವನಾಗಿ, ಸಾಕಾರ ಪ್ರತಿಮೆಯನ್ನು ವಿಷ್ಣುವಾಗಿ ಮನುಷ್ಯರು ಹೇಳಿಕೊಳ್ಳಲಾಗಿದೆ. ಆಗ ಒಬ್ಬ ದೇವರೇ ನಿರಾಕಾರವಾಗಿ, ಸಾಕಾರವಾಗಿ ಇದ್ದಾನೆಂಬ ಜ್ಞಾನ ಇಲ್ಲದಂತಾಗಿ ಲಿಂಗವನ್ನು ಶಿವನೆಂದು, ಪ್ರತಿಮೆಯನ್ನು ವಿಷ್ಣುವೆಂದು ಹೇಳಿಕೊಳ್ಳುವುದು ಮೊದಲಾಗಿದೆ. ಅದರಿಂದ ದೇಶದಲ್ಲಿ ಶಿವಭಕ್ತರು ಕೆಲವರು, ವಿಷ್ಣುಭಕ್ತರು ಕೆಲವರು ಏರ್ಪಟ್ಟಿದ್ದಾರೆ. ಯಾವಾಗ ವಿಷ್ಣುಭಕ್ತರು ಏರ್ಪಟ್ಟಿದ್ದಾರೊ ಆಗ ಅಷ್ಟಾಕ್ಷರಿ ಮಂತ್ರವನ್ನು ತಯಾರು ಮಾಡಿಕೊಂಡಿದ್ದಾರೆ. ಶಿವಭಕ್ತರು ಮೊದಲಿನಿಂದಿರುವ 'ಓಂ ನಮಃಶಿವಾಯ' ಮಂತ್ರವನ್ನು ತನ್ನ ಮಂತ್ರವೆಂದು ಹೇಳಿಕೊಂಡರೇ, ಅದಕ್ಕೆ ಪೋಟಿಯಾಗಿ ವಿಷ್ಣುಭಕ್ತರು 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರಿ ಮಂತ್ರವನ್ನು ತಯಾರು ಮಾಡಿದ್ದಾರೆ. ಅಂದಿನಿಂದ ಆ ಮಂತ್ರಗಳಲ್ಲಿ ಜ್ಞಾನಶಕ್ತಿ ಇಲ್ಲದಂತಾಗಿದೆ. ಅವು ಎರಡು ಮಂತ್ರಗಳೆಂದು ಕರೆಯಲ್ಪಟ್ಟರೂ ಅದರಲ್ಲಿ ಮಹಿಮೆ (ಶಕ್ತಿ) ಇಲ್ಲ. ಅವು ನೋಡುವುದಕ್ಕೆ ಮಾತ್ರ ಮಂತ್ರಗಳಾಗಿವೆ.

ಆ ವಿಧವಾಗಿ ಕೃತಯುಗದಲ್ಲಿಯೇ ಜ್ಞಾನ ಮೊದಲು ಅಜ್ಞಾನ ಅದರಹಿಂದೆ ತಯಾರಾಗಿದೆ. ಆಂದಿನಿಂದ ಕಾಲ ಬದಲಾದಂತೆಲ್ಲ ಯುಗಗಳು ಕಳೆದಂತೆಲ್ಲ ಅಜ್ಞಾನ ಸಹ ಬೆಳೆಯುತ್ತಾ ಬಂದಿದೆ. ಮಂತ್ರಗಳು ಹಾಗೆ ಇರುವಾಗ, ಕಲಿಯುಗದಲ್ಲಿ ಅದ್ವೈತರಿಗೆ ಪಂಚಾಕ್ಷರಿ ಮಂತ್ರ, ವಿಶಿಷ್ಟಾದ್ವೈತರಿಗೆ ಅಷ್ಟಾಕ್ಷರಿ

ಮಂತ್ರ ಸ್ವಂತವಾಗಿಹೋಗಿದೆ. ಅದ್ವೈತರು ಕಲಿಯುಗದಲ್ಲಿ ತಯಾರಾದರೂ ಕೃತಯುಗದಿಂದ ಇರುವ ನಮಃಶಿವಾಯ ಮಂತ್ರ ತಮ್ಮದೇಯೆಂದು ತಾವೇ ಕಂಡುಹಿಡಿದಂತೆ ಹೇಳಿಕೊಂಡಿದ್ದಾರೆ. ಹಾಗೆ ಮೊದಲಿನಿಂದಿರುವ ವಿಭೂತಿರೇಖೆ ಗಳನ್ನು ಕಬ್ಜಾಮಾಡಿ ಅವು ತಮ್ಮವೇ ಎಂದಿದ್ದಾರೆ. ಅದೇ ವಿಧವಾಗಿ ಅದ್ವೈತ ತಯಾರಾದ ನಂತರ ಸುಮಾರು 1500 ವರ್ಷಗಳಿಗೆ ತಯಾರಾದ ವಿಶಿಷ್ಟಾದ್ವೈತದವರು ಕೃತಯುಗದಲ್ಲಿಯೇ ತಯಾರಾದ ಅಷ್ಟಾಕ್ಷರಿ ಮಂತ್ರವನ್ನು ಆಕ್ರಮಿಸಿಕೊಂಡು ಅದು ತಮ್ಮದೇ ಎಂದಿದ್ದಾರೆ. ಹಾಗೆಯೇ ಮೊದಲಿನಿಂದಿರುವ ಮೂರು ಉದ್ದ ನಾಮಗಳನ್ನು ಸಹ ತಮ್ಮವೇ ಎಂದು ಹೇಳಿಕೊಂಡಿದ್ದಾರೆ. ಈ ವಿಧವಾಗಿ ಇಲ್ಲಿಗೆ ಅಂದರೇ ಕಲಿಯುಗದಲ್ಲಿ ಅದ್ವೈತರು, ವಿಶಿಷ್ಟಾದ್ವೈತರು ಪೈಪೋಟಿಯಾಗಿ ನಾಮಗಳನ್ನು, ಮಂತ್ರಗಳನ್ನು ಹೊಂದಿದ್ದಾರೆ.

**ಪ್ರಶ್ನೆ :– ಅದ್ವೈತವನ್ನು ಆರ್ಯರು ಆಚಾರ್ಯ ಶಂಕರನಿಂದ ಹೇಳಿಸಿ, ಆತನನ್ನು ಪ್ರಪಂಚಕ್ಕೆ ಅದ್ವೈತ ಸಿದ್ಧಾಂತಕರ್ತನನ್ನಾಗಿ ತೋರಿಸಿದ್ದಾರೆ. ಶಂಕರನನ್ನು ಮುಂದಿಟ್ಟು ಆತನ ಹಿಂದೆ ಆರ್ಯರು ಅದ್ವೈತವನ್ನು ಪ್ರಚಾರ ಮಾಡಿದಂತೆ ನೀವು ತಿಳಿಸಿರುವುದನ್ನನುಸರಿಸಿ ತಿಳಿದಿದೆ. ಆದರೆ ಈಗ ನೀವು ಹೇಳುತ್ತಿರುವ ವಿಶಿಷ್ಟಾದ್ವೈತವು ಅದ್ವೈತದ ನಂತರ 1500 ವರ್ಷಗಳಿಗೆ ಬಂದಿದೆ ಎಂದಿದ್ದೀರ. ಆದರೆ ಅದರ ಸಿದ್ಧಾಂತಕರ್ತ ಯಾರು? ಎಂಬ ವಿಷಯವನ್ನು ನೀವು ಹೇಳಲಿಲ್ಲ. ಅದ್ವೈತದ ನಂತರ ಬಂದಿರುವ ವಿಶೀಷ್ಟಾದ್ವೈತವನ್ನು ಸೃಷ್ಟಿಸಿರುವುದು ಒಬ್ಬರೇನಾ, ಅಥವಾ ಶಂಕರನಿಗೆ ಆರ್ಯರು ಹಿಂದಿದ್ದು ಕಥೆ ನಡೆಸಿದಂತೆ ವಿಶಿಷ್ಟಾದ್ವೈತಕ್ಕು ಸಹ ಯಾರಾದರೂ ಇದ್ದಾರಾ?**

**ಉತ್ತರ :–** ಅದ್ವೈತವು ಆರ್ಯರೊಂದರ ಮೋಸದಿಂದ, ಕುತಂತ್ರಗಳಿಂದ ತಯಾರಾಗಿದೆ. ಆ ದಿನಗಳಲ್ಲಿ ಬೌದ್ಧವನ್ನು ಹಿಂದೂಗಳಿಂದ ಬೇರೆಮಾಡಿ, ಹಿಂದೂಗಳಲ್ಲಿ ತಮ್ಮ ಅಧಿಪತ್ಯ ಸಾಮ್ರಾಜ್ಯವನ್ನು ಸ್ಥಾಪಿಸಿಕೊಳ್ಳುವುದಕ್ಕೆ ತಯಾರಾಗಿರುವುದು ಅದ್ವೈತ ಸಿದ್ಧಾಂತ. ಅದು ಹೆಸರಿಗೆ ಸಿದ್ಧಾಂತವೆಂದು ಹೇಳಿದರೂ, ನಿಜಕ್ಕೆ ಸಿದ್ಧಾಂತ ಅಲ್ಲವೆಂದು ಸಹ ಹೇಳಿಕೊಂಡಿದ್ದೇವೆ. ಅದು

ಹಾಗೆ 1500 ವರ್ಷಗಳು ಕಳೆದರೆ, ನಂತರ ಭಕ್ತಿ ಪ್ರವೃತ್ತಿಗಳಿಂದ ಹುಟ್ಟಿರುವುದು ವಿಶಿಷ್ಟಾದ್ವೈತ. ಅದ್ವೈತವು ನಿರಾಕಾರ ದೈವವನ್ನು ತಿಳಿಸುವುದಾಗಿ ಹೇಳಿದರೂ ಅದರಲ್ಲಿ ಶಾಸ್ತ್ರಪದ್ಧತಿ ಇಲ್ಲ. ಪ್ರತ್ಯಕ್ಷ ಅನುಭವ ಅಷ್ಟಕ್ಕು ಇಲ್ಲ. ಅದ್ವೈತ ಭಗವದ್ಗೀತೆಯಲ್ಲಿ ಹೇಳಲಾದರೂ ಅದು ಮನುಷ್ಯ ಮೋಕ್ಷ ಹೊಂದಿದ ನಂತರ ಹೊಂದುವ ಸ್ಥಿತಿಯಾಗಿದೆ. ಮರಣಾನಂತರ ಪಡೆಯುವ ಮೋಕ್ಷದಲ್ಲಿ ಅನುಭವಕ್ಕೆ ಬರುವ ಅದ್ವೈತವನ್ನು ಪ್ರತ್ಯಕ್ಷ ಜೀವನದಲ್ಲಿ ಹೇಳಿಕೊಳ್ಳುವುದು ಬಹಳ ತಪ್ಪು, ಅದರೂ ಅದು ಪ್ರಜೆಗಳಲ್ಲಿ ಈದಿನ ಹೆಚ್ಚಾಗಿ ವ್ಯಾಪಿಸಿರುವ ಸಿದ್ಧಾಂತ. ಬೌದ್ಧರಮೇಲೆ ಅಸೂಯೆಯಿಂದ ಹುಟ್ಟಿದ ಅದ್ವೈತ ಆ ದಿನಗಳಲ್ಲಿ ಪ್ರಜೆಗಳಲ್ಲಿ ಚೆನ್ನಾಗಿ ವ್ಯಾಪಿಸುವಂತೆ ಆರ್ಯರು ಮಾಡಿದ್ದಾರೆ. ಅದ್ವೈತಕ್ಕೆ ಎದುರಿಲ್ಲದಂತೆ ಸುಮಾರು 1500 ವರ್ಷಗಳು ಕಳೆದಾಗ, ಯುಕ್ತ ವಯಸ್ಸಿಗೆ ಬಂದಿರುವ ಬಲಿತಿರುವ ಸಿಂಹದಂತೆ ಅದ್ವೈತ ತಯಾರಾಗಿದೆ. ಪೂರ್ತಿ ಬಲಿಷ್ಟವಾಗಿ ಅದ್ವೈತ ಇರುವಾಗ ಆಗತಾನೇ ಜನ್ಮತಾಳಿದೆ ವಿಶಿಷ್ಟಾದ್ವೈತ. ವಿಶಿಷ್ಟಾದ್ವೈತ ಸಾಕಾರ ಭಕ್ತಿಯೇ ಧ್ಯೇಯವಾಗಿ ಹುಟ್ಟಿದೆ.

ಕ್ರಿಸ್ತು ನಂತರ 1017 ವರ್ಷಗಳಿಗೆ ತಮಿಳನಾಡು ರಾಷ್ಟ್ರದಲ್ಲಿ ಚೆನ್ನೈಗೆ ದಕ್ಷಿಣದಲ್ಲಿ ಸುಮಾರು 40 ಕಿಲೋಮಿಟರ್‌ಗಳ ದೂರದಲ್ಲಿರುವ ಪೆರಂಬು ದೂರಿನಲ್ಲಿ ರಾಮಾನುಜಾಚಾರ್ಯರು ಜನ್ಮಿಸಿದ್ದಾರೆ. ರಾಮಾನುಜಾ ಚಾರ್ಯರ ತಂದೆ ಕೇಶವಸೋಮಯಾಜಿ, ತಾಯಿ ಕಾಂತಿಮತಿ, ಕೇಶವ ಸೋಮಯಾಜಿ ಯವರು ವಿಷ್ಣು ಭಕ್ತರು. ಆದಿನ ಬಹಳ ಸ್ವಲ್ಪ ಜನರಿದ್ದರೂ ವಿಷ್ಣು ಭಕ್ತರಲ್ಲಿ ಸೋಮಯಾಜರು ಮುಖ್ಯವಾದವರು. ಆತನ ಹೆಸರು ಕೇಶವ ಆದರೆ ಅನೇಕ ಯಜ್ಞಗಳು ಮಾಡಿದ ಬ್ರಾಹ್ಮಣನಾಗಿ ಸೋಮಯಾಜಿಗಳೆಂಬ ಬಿರುದು ಬಂದಿದೆ. ರಾಮಾನುಜಾಚಾರ್ಯರು ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದಾರೆ. ಶಂಕರನು ಸಹ ಬ್ರಾಹ್ಮಣದಲ್ಲಿಯೇ ಹುಟ್ಟಿದ್ದಾನೆಂದು ಎಲ್ಲರಿಗೂ ತಿಳಿದಿದೆ. ಆದರೆ ಶಂಕರಾಚಾರ್ಯರರ ಹಿಂದೆ ಆರ್ಯರಿರುವಂತೆ ರಾಮಾನುಜಾ ಚಾರ್ಯರರ ಹಿಂದೆ ಯಾರೂ ಇಲ್ಲ. ರಾಮಾನುಚಾರ್ಯರು ಮಾತ್ರವೇ ಸ್ವತಃವಾಗಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಬೋಧಿಸಿದ್ದಾರೆ.

**ಪ್ರಶ್ನೆ :– ರಾಮಾನುಜಾಚಾರ್ಯರವರು ವೇದಗಳನ್ನು ಅನುಸರಿಸಲಿಲ್ಲವಾ? ವೇದಪಠನೆಯನ್ನು ಪ್ರೋತ್ಸಹಿಸಲಿಲ್ಲವಾ?**

**ಉತ್ತರ :–** ರಾಮಾನುಜಾಚಾರ್ಯರು ಶಂಕರಾಚಾರ್ಯರ ಅದ್ವೈತಕ್ಕೆ ವಿರುದ್ಧವಾಗಿ ನಡೆದಿದ್ದಾರೆ. ಆದುದರಿಂದ ಆತನು ವೇದಗಳನ್ನು ವಿಮರ್ಶಿಸಲೂ ಇಲ್ಲ, ಸಮರ್ಥಿಸಲೂ ಇಲ್ಲ. ರಾಮಾನುಜರವರ ವಿಶೀಷ್ಟಾದ್ವೈತ ಸಿದ್ಧಾಂತ ಅದ್ವೈತ ಸಿದ್ಧಾಂತಕ್ಕೆ ಸ್ವಲ್ಪ ವ್ಯತ್ಯಾಸದಿಂದಲೇ ಇದೆ. ಅದ್ವೈತ ನಿರ್ಗುಣವನ್ನು ಸೂಚಿಸಿದರೆ, ವಿಶಿಷ್ಟಾದ್ವೈತ ಸಗುಣವನ್ನು ಬೋಧಿಸುತ್ತಿದೆ. ಅಷ್ಟೇ ಹೊರತು ಬೇರೆ ಏನೂ ಇಲ್ಲ. ಆದರೂ ಮೊದಲಿನಿಂದ ಬಲವಾಗಿ ತಯಾರಾದ ಅದ್ವೈತಿಗಳು ತಮ್ಮ ಅಧಿಕಾರವೇ ಚಲಾವಣೆಯಾಗಬೇಕೆಂಬ ಉದ್ದೇಶದಿಂದ, ತಮ್ಮ ಮುಂದೆ ತಮಗೆ ಪೋಟಿಯಾಗಿ ಯಾರೂ ಬರಬಾರದೆಂದು ಇರುವುದರಿಂದ ರಾಮಾನುಜಾ ಚಾರ್ಯರ ಸಿದ್ಧಾಂತವನ್ನು ಪ್ರಚಾರವಾಗದಂತೆ ತಮಗೆ ಕೈಲಾದಷ್ಟು ಮಾಡಿದ್ದಾರೆ. ಶಂಕರಾಚಾರ್ಯರು ಹೆಚ್ಚಾಗಿ ವೇದಗಳೊಂದಿಗೆ ಸಂಬಂಧ ಹೊಂದಿದ್ದು, ವೇದಪಠನೆಯನ್ನು ಪ್ರೋತ್ಸಹಿಸಿದ್ದಾರೆ. ಆದರೆ ರಾಮಾನುಜರವರು ಹೆಚ್ಚಾಗಿ ಸಗುಣೋಪಾಸನದ ಮೇಲೆ ದೃಷ್ಟಿಯನ್ನು ಹರಿಸಿದ್ದಾರೆ.

**ಪ್ರಶ್ನೆ :– ಅದ್ವೈತಕ್ಕು, ವಿಶಿಷ್ಟಾದ್ವೈತಕ್ಕು ವ್ಯತ್ಯಾಸ ಏನು ಇದೆ?**

**ಉತ್ತರ :–** ಎರಡೂ ಅದ್ವೈತವನ್ನೇ ತಿಳಿಸುತ್ತಿದ್ದರೂ ರಾಮಾನುಜರವರ ಸಿದ್ಧಾಂತದಲ್ಲಿ ಸ್ವಲ್ಪ ವಿಶೇಷತೆ ಇರುವುದರಿಂದ ವಿಶಿಷ್ಟಾದ್ವೈತ ಎಂದು ಹೇಳಬಹುದು. ಒಂದು ಸಾಕಾರ, ನಿರಾಕಾರಗಳಲ್ಲಿ ಮಾತ್ರವೇ ವ್ಯತ್ಯಾಸ ಇರುವುದರಿಂದ ಅದ್ವೈತ ತಿಳಿದವರು, ಅದ್ವೈತವನ್ನು ಅನುಸರಿಸುವವರು ಸುಲಭವಾಗಿ ವಿಶಿಷ್ಟಾದ್ವೈತವನ್ನು ಅನುಸರಿಸಿದ್ದಾರೆ. ಆದ್ದರಿಂದ ತಮಗೆ ಪೋಟಿಯಾಗಿ ಬಂದು ತಮಗೆ ವಿರುದ್ಧವಾಗಿರುವ ವಿಶಿಷ್ಟಾದ್ವೈತರನ್ನು ಇಲ್ಲದಂತೆ ಮಾಡಬೇಕೆಂದು ಅದ್ವೈತರು ಪ್ರಯತ್ನಿಸಿದ್ದಾರೆ. ಅದ್ವೈತದಲ್ಲಿ ಎಲ್ಲಾ ಪರಬ್ರಹ್ಮ ಸ್ವರೂಪವೇ, ಎಲ್ಲರೂ ಪರಬ್ರಹ್ಮ ಸ್ವರೂಪದವರೇ ಎಂಬ ವಿಧಾನ ಇದೆ.

ಆದರೆ ವಿಶಿಷ್ಟಾದ್ವೈತದಲ್ಲಿ ಒಬ್ಬನೆಯಾದ ದೇವರು ಸಾಕಾರವಾಗಿ ವಿಷ್ಣುರೂಪದಲ್ಲಿ ಇದ್ದಾನೆಂದು, ಆತನನ್ನು ಭಕ್ತಿಯಿಂದ ಆರಾಧಿಸಬೇಕೆಂಬುದು ಮುಖ್ಯ ಉದ್ದೇಶವಾಗಿದೆ. ಅದ್ವೈತರು ದೇವರು ಕಾಣಿಸದ ಪರಬ್ರಹ್ಮವಾಗಿ ಎಲ್ಲರಲ್ಲಿ ಇದ್ದಾನೆ, ಎಲ್ಲರಾಗಿದ್ದಾನೆ, ಎಲ್ಲರೂ ಪರಬ್ರಹ್ಮ ಸ್ವರೂಪಿಗಳೇ ಎಂದು ಹೇಳುತ್ತಿರುತ್ತಾರೆ. ಒಂದು ಸಾಕಾರ ನಿರಾಕಾರಗಳಲ್ಲಿ ಮಾತ್ರವೇ ಅದ್ವೈತಕ್ಕು ವಿಶಿಷ್ಟಾದ್ವೈತಕ್ಕು ವ್ಯತ್ಯಾಸ ಇದೆ. ದೇವರು ನಿರ್ಗುಣನು ಎಂದು ಅದ್ವೈತರು, ಅಲ್ಲ ಸಗುಣನೆಂದು ವಿಶಿಷ್ಟಾದ್ವೈತರು ಹೇಳುತ್ತಿದ್ದಾರೆ.

**ಪ್ರಶ್ನೆ :– 1500 ವರ್ಷಗಳ ಮೊದಲುಹುಟ್ಟಿ ಬಲವಾದ ಸಿಂಹವಾಗಿರುವ ಅದ್ವೈತದ ಮುಂದೆ ಆಗಲೇ ಹುಟ್ಟಿದ ಕುರಿಮರಿಯಂತಹ ವಿಶಿಷ್ಟಾದ್ವೈತ ನಿಲ್ಲಲು ಸಾಧ್ಯವಾಯಿತಾ?**

**ಉತ್ತರ :–** ಆರ್ಯರು ಅದ್ವೈತವನ್ನು ಶಂಕರಾಚಾರ್ಯರು ಹೋದ ನಂತರ ಸಹ ಮುಂದುವರೆಸಿದ್ದಾರೆ. ಹೊಸದಾಗಿ ಬಂದಿರುವ ವಿಶಿಷ್ಟಾದ್ವೈತ ಸಿದ್ಧಾಂತಕರ್ತನನ್ನು ಬಹಳ ತೊಂದರೆಗೀಡು ಮಾಡಿದ್ದಾರೆ. ಕೆಲವು ಸಂದರ್ಭಗಳಲ್ಲಿ ಅದ್ವೈತರಿಗೆ ರಾಮಾನುಜಾಚಾರ್ಯರವರು ಭಯಪಡುತ್ತಾ ಬದುಕಬೇಕಾಗಿ ಬಂದಿದೆ. ಕೆಲವು ಸಮಯಗಳಲ್ಲಿ ಬಚ್ಚಿಟ್ಟುಕೊಂಡು ಬದುಕಬೇಕಾಗಿಬಂದಿದೆ. ಸಿಂಹ ಒಂದಿದ್ದು ಕುರಿಗಳನ್ನು ತಿಂದರೂ ಸಾವಿರ ಕುರಿಗಳಿರುವಾಗ ಸಿಂಹ ಪ್ರತಿದಿನ ಒಂದು ಕುರಿಯನ್ನು ತಿನ್ನುತ್ತಿದ್ದರೂ ಕುರಿಗಳ ಗುಂಪು ಬೆಳೆಯುತ್ತಿರುವುದರಿಂದ ಕುರಿಗಳು ಎಲ್ಲಾ ಇಲ್ಲದಂತೆಹೋಗುವುದಿಲ್ಲ. ಒಂದುಕಡೆ ಇಲ್ಲದಂತಾಗುತ್ತಿದ್ದರೂ ಮತ್ತೊಂದುಕಡೆ ಬೆಳೆಯುತ್ತಿರುವುದರಿಂದ ಸಿಂಹವು ಕುರಿಗಳನ್ನು ಇಲ್ಲದಂತೆ ಮಾಡಲಿಲ್ಲ. ಕುರಿಗಳು ಇರುತ್ತವೆ, ಸಿಂಹವು ಇರುತ್ತದೆ. ಶಂಕರಾಚಾರ್ಯರು ಸ್ಥಾಪಿಸಿರುವುದು ನಾಲ್ಕು ವೇದಗಳಿಗೆ ಗುರುತಾಗಿ ನಾಲ್ಕು ಅದ್ವೈತ ಪೀಠಗಳನ್ನು ಸ್ಥಾಪಿಸಿದರೆ, ರಾಮಾನುಜಾಚಾರ್ಯರು ಅದ್ವೈತದೊಂದಿಗೆ ಪೋಟಿಪಡುವುದಕ್ಕೆ 74 ಪೀಠಗಳನ್ನು ಸ್ಥಾಪಿಸಿದ್ದಾನೆ. 120 ವರ್ಷಗಳು ಬದುಕಿದ ರಾಮಾನುಜಾಚಾರ್ಯರು ತನ್ನ ಜೀವನದಲ್ಲಿ ಅತ್ಯಂತ

ಹೆಚ್ಚಾಗಿ ತನ್ನ ಪೀಠಗಳನ್ನು ಸ್ಥಾಪಿಸಿ ಅಲ್ಲಿ ವಿಶಿಷ್ಟಾದ್ವೈತವನ್ನು ಪ್ರಚಾರ ಮಾಡುವುದಕ್ಕೆ ಗುರುಗಳನ್ನು ನಿಯಮಿಸುವುದರಿಂದ ರಾಮಾನುಜರವರ ವಿಶಿಷ್ಟಾದ್ವೈತ ಅದ್ವೈತದ ಮುಂದೆ ಸ್ವಲ್ಪಮಟ್ಟಿಗೆ ನಿಲ್ಲಿತು. ಅದ್ವೈತಿಗಳು ವಿಶಿಷ್ಟಾದ್ವೈತರನ್ನು ಅಡಗಿಸುತ್ತಾ ಬಂದರೂ, ಪುನಃ ಕೂಡಲೇ ಬೆಳೆಯುತ್ತಾ ಬಂದಿದ್ದಾರೆ. ರಾಮಾನುಜರ ಕಾಲದಲ್ಲಿರುವ ಪ್ರತಿ ವೈಷ್ಣವ ಗುಡಿ ಒಂದು ವಿಶಿಷ್ಟಾದ್ವೈತ ಪೀಠವಾಗಿ ತಯಾರಾಗಿದೆ. ಪ್ರತಿ ಶೈವರ ಗುಡಿ ಅದ್ವೈತಪೀಠವಾಗಿ ತಯಾರಾಗಲಿಲ್ಲ. ಶಂಕರನು ಸ್ಥಾಪಿಸಿದ ನಾಲ್ಕು ಮತ್ತು ಒಂದು ಮೊತ್ತವು ಐದು ಪೀಠಗಳೇ ಇವೆ. ಆದುದರಿಂದ ಅದ್ವೈತದ ಮುಂದೆ ವಿಶಿಷ್ಟಾದ್ವೈತ ನಿಂತಿದೆ.

**ಪ್ರಶ್ನೆ :– ರಾಮಾನುಜರವರ ವಿಶಿಷ್ಟಾದ್ವೈತವನ್ನು ಅನುಸರಿಸಿದವರೆಲ್ಲರೂ ತ್ರಿನಾಮವನ್ನು ಧರಿಸಿದ್ದಾರೆ. ಮೂರು ವಿಭೂತಿ ರೇಖೆಗಳಿಗೆ ಅರ್ಥವಿರುವಂತೆ, ತ್ರಿ ನಾಮಕ್ಕೆ ಆಧ್ಯಾತ್ಮಿಕ ಅರ್ಥ ಇದೆಯಾ? ಇದ್ದರೆ ಹೇಳಿರಿ?**

**ಉತ್ತರ :–** ಮೂರು ಉದ್ದ ನಾಮಗಳು ವಿಶಿಷ್ಟಾದ್ವೈತ ಸಿದ್ಧಾಂತ ಬಂದಾಗ ಬರಲಿಲ್ಲ. ಅದಕ್ಕುಮೊದಲೇ ಕೃತಯುಗದಲ್ಲಿಯೇ ಮೂರು ನಾಮಗಳು ತಯಾರಾಗಿವೆ. ಕೃತಯುಗದಲ್ಲಿ ದೈವಜ್ಞಾನವನ್ನು ಅನುಸರಿಸಿ ಶರೀರದಲ್ಲಿ ಆತ್ಮಗಳ ವಿಶೇಷತೆಯನ್ನು, ನಾಡಿಗಳ ವಿಶೇಷತೆಯನ್ನು ತಿಳಿಸುವಂತೆ ಮೂರು ನಾಮಗಳನ್ನು ತಯಾರು ಮಾಡಿದರೆ, ತ್ರೇತಾಯುಗದಲ್ಲಿ ಸೂರ್ಯವಂಶದ ಗುರುತೆಂದು, ದ್ವಾಪರಯುಗದಲ್ಲಿ ವೈಷ್ಣವರ ಗುರುತಾಗಿ ಹೇಳಲ್ಪಡುತ್ತಿರುವ ಮೂರು ನಾಮಗಳು ಕಲಿಯುಗದಲ್ಲಿ ವಿಶಿಷ್ಟಾದ್ವೈತದ ಗುರುತಾಗಿ ಬದಲಾಗಿಹೋಗಿದೆ. ಕೃತಯುಗದಲ್ಲಿ ಎಷ್ಟೋ ದೊಡ್ಡ ದೈವಜ್ಞಾನ ಚಿಹ್ನೆಯಾಗಿರುವ ಮೂರು ನಾಮಗಳಿಗು ಜ್ಞಾನ ಭಾವನೆಯಲ್ಲಿ ಅರ್ಥ ಈ ವಿಧವಾಗಿ ಇದೆ. ನಾಮ ಎರಡು ವಿಧಗಳ ಆಧ್ಯಾತ್ಮಿಕ ಭಾವನೆಯನ್ನು ತಿಳಿಸುತ್ತಿದೆ. ಪ್ರತಿ ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳು ನಿವಾಸಿಸುತ್ತಿವೆ. ಆದರೂ ಇಂದಿನವರೆಗೂ ಆ ವಿಷಯ ಯಾರಿಗೂ ತಿಳಿದಿಲ್ಲ. ಎಲ್ಲರ ಶರೀರದಲ್ಲಿ ಜೀವಾತ್ಮ ಒಂದಿರುವಾಗ, ಆತ್ಮ ಎರಡನೆಯದು ಇದೆ.

ಜೀವಾತ್ಮ ಶರೀರದಲ್ಲಿನ ತಲೆಯಲ್ಲಿರುವ ಗುಣಚಕ್ರದಲ್ಲಿರುವಾಗ, ಆತ್ಮ ಬ್ರಹ್ಮನಾಡಿಯಲ್ಲಿದ್ದೂ ಶರೀರವೆಲ್ಲಾ ತನ್ನಶಕ್ತಿಯನ್ನು ವ್ಯಾಪಿಸುವಂತೆ ಮಾಡಿದೆ. ಶರೀರವೆಲ್ಲಾ ವ್ಯಾಪಿಸಿರುವ ಆತ್ಮವನ್ನು ಕುರಿತು ಸೃಷ್ಠಿ ಆದಿಯಲ್ಲಿ ದೇವರು ತಿಳಿಸಿದರೂ, ನಂತರ ದ್ವಾಪರಯುಗದಲ್ಲಿ ಭಗವಂತನು ಭಗವದ್ಗೀತೆ ರೂಪದಲ್ಲಿ ಹೇಳಿದ ಜ್ಞಾನದಲ್ಲಿ ಆತ್ಮವನ್ನು ಕುರಿತು ತಿಳಿಸಿದರೂ ಇಂದಿನವರೆಗೂ ಎರಡನೆ ಆತ್ಮವನ್ನು ಕುರಿತು ಯಾರಿಗೂ ತಿಳಿಯದಹಾಗೆ ಹೋಗಿದೆ. ಕೆಲವರು ಎರಡನೆ ಆತ್ಮವನ್ನೇ ಪರಮಾತ್ಮಯೆಂದು ಅಂದುಕೊಳ್ಳುವುದು ನಡೆದಿದೆ. ಜೀವಿಯು, ಜೀವಿಯೊಂದಿಗೆ ದೇವರು ಶರೀರದಲ್ಲಿ ಇದ್ದಾರೆಂದು ಆಧ್ಯಾತ್ಮಿಕದಲ್ಲಿರುವವರೆಲ್ಲರೂ ಅಂದುಕೊಳ್ಳುವುದು ನಡೆದರೂ, ಇಬ್ಬರಿಗು ಮಧ್ಯದಲ್ಲಿ ಆತ್ಮಯೆನ್ನುವುದು ಮತ್ತೊಂದಿದೆಯೆಂಬ ವಿಷಯ ಪೂರ್ತಿಯಾಗಿ ಯಾರಿಗೂ ತಿಳಿಯದೆಂದೇ ಹೇಳಬೇಕು? ಆ ಲೆಕ್ಕಪ್ರಕಾರ ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ಸೃಷ್ಠಿ ಆದಿಯಲ್ಲಿ ಹೇಳಲಾದ ಜ್ಞಾನದಲ್ಲಿ ಹೇಳಿದ್ದಾರೆ. ನಂತರ ಎರಡನೆ ಬಾರಿ ಭಗವದ್ಗೀತೆಯಾಗಿ ಹೇಳಲ್ಪಟ್ಟಾಗ ಸಹ ಆತ್ಮವನ್ನು ಕುರಿತು ಹೇಳಿದ್ದಾರೆ. ಆದರೂ ಆತ್ಮ ವಿಷಯ ಯಾರ ಊಹೆಗು ಬರಲಿಲ್ಲ.

ಶರೀರದಲ್ಲಿ ಜೀವಾತ್ಮ ಆತ್ಮ ಎರಡು ಜೋಡಿ ಆತ್ಮಗಳಾಗಿ ಇವೆ. ಮೂರನೆಯದಾದ ಪರಮಾತ್ಮ ಶರೀರವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವುದೇ ಅಲ್ಲದೆ ಶರೀರದ ಹೊರಗೂ ಸಹ ಎಲ್ಲಕಡೆ ವ್ಯಾಪಿಸಿದೆ. ಶರೀರದಲ್ಲಿಯೂ, ವಸ್ತುವಿನಲ್ಲಿಯೂ, ಪದಾರ್ಥದಲ್ಲಿಯೂ, ಶೂನ್ಯದಲ್ಲಿಯೂ ಅದು ಇದು ಎನ್ನದಂತೆ ವಿಶ್ವವೆಲ್ಲವೂ ವ್ಯಾಪಿಸಿದೆ. ಪ್ರಪಂಚದಲ್ಲಿ ಮೂರು ಆತ್ಮಗಳು ಹೊರತು ಇತರ ಆತ್ಮಯೆನ್ನುವುದು ಇನ್ನೊಂದು ಇಲ್ಲ. ದೈವಜ್ಞಾನವನ್ನು ನೋಡುವುದಾದರೆ ವಿಶ್ವಕ್ಕೆಲ್ಲ ಆಧಾರ ಪರಮಾತ್ಮ ಒಬ್ಬನೆ. ಆತನು ಕೆಲಸ ಮಾಡದವನಾದ್ದರಿಂದ ಕಾರ್ಯಗಳು ನಡೆಯುವುದಕ್ಕೆ ಪ್ರಕೃತಿಯನ್ನು ತಯಾರು ಮಾಡಿದ್ದಾನೆ. ಈಗ ಕಾರ್ಯರೂಪವಾದ ವಿಶ್ವಕ್ಕೆಲ್ಲಾ ಪ್ರಕೃತಿ ಪರಮಾತ್ಮರೇ ಆಧಾರವೆಂದು ಹೇಳಬಹುದು. ಪರಮಾತ್ಮ ಕಾರಣ ಪ್ರಕೃತಿ ಕಾರ್ಯವಾಗಿ ಇದೆ. ಪ್ರಕೃತಿ

ಎಲ್ಲಾ ವಿಧಗಳಲ್ಲಿ ಕೆಲಸ ಮಾಡುವುದಕ್ಕೆ ಪ್ರಕೃತಿಯನ್ನು ಐದು ಭಾಗಗಳಾಗಿ ದೇವರು ವಿಭಜಿಸಿದ್ದಾನೆ. ತಾನು ಏನು ಮಾಡದವನಾಗಿರುವುದಕ್ಕೆ, ಪ್ರಕೃತಿಯಿಂದ ಮಾಡಿಸುವುದಕ್ಕೆ ತನ್ನನ್ನು ತಾನು ಮೂರು ಭಾಗಗಳಾಗಿ ವಿಭಜಿಸಿಕೊಂಡಿದ್ದಾನೆ. ಒಬ್ಬನು ಪರಮಾತ್ಮನಾಗಿ ಹಾಗೆಯೇ ಇರುವಾಗ, ತನ್ನಿಂದ ವಿಭಜಿಸಲ್ಪಟ್ಟಿರುವ ಸ್ವಲ್ಪ ಶಕ್ತಿಯನ್ನು ಆತ್ಮಯೆಂದೂ, ಇನ್ನುಸ್ವಲ್ಪ ಶಕ್ತಿಯನ್ನು (ಅಂಶವನ್ನು) ಜೀವಾತ್ಮನಾಗಿ ಹೇಳಿದ್ದಾನೆ. ಈ ವಿಧವಾಗಿ ದೇವರ ಅಂಶ ಮೂರು ಭಾಗಗಳಾಗಿದ್ದು, ಒಂದು ಪರಮಾತ್ಮ ಎರಡು ಆತ್ಮ, ಮೂರು ಜೀವಾತ್ಮ ಎಂದು ಹೇಳಲ್ಪಡುತ್ತಿವೆ.

ಈ ಮೂರು ಆತ್ಮಗಳು ಅನೇಕ ರೂಪಗಳ ಜೀವಕೋಟಿಯಲ್ಲಿರುವಾಗ, ಉಳಿದ ಪ್ರಕೃತಿಯಲ್ಲಿನ ಐದು ಭಾಗಗಳು ಸ್ಥೂಲ ಪ್ರಪಂಚವಾಗಿದೆ. ಸ್ಥೂಲ ರೂಪವಾದ ಪ್ರಪಂಚದಲ್ಲಿ ನಮ್ಮ ಶರೀರಗಳು ಸಹ ಇವೆ. ಕಾಣಿಸುವ ಶರೀರಗಳಲ್ಲಿ ಕಾಣಿಸದ ಮೂರು ಆತ್ಮಗಳು ಇವೆ. ಈ ಮೂರು ಆತ್ಮಗಳನ್ನು ಕುರಿತು ಕೃತಯುಗದಲ್ಲಿಯೇ ಆತ್ಮಜ್ಞಾನಿಗಳು ಆತ್ಮಗಳ ವಿಷಯ ತಿಳಿಯುವಂತೆ ಮೂರು ವಿಭೂತಿ ರೇಖೆಗಳನ್ನು, ಮೂರು ನಾಮಗಳನ್ನು ತಯಾರು ಮಾಡಿ ತೋರಿಸಿದ್ದಾರೆ. ಅವುಗಳ ಆತ್ಮ ಭಾವನೆಗಳು ಇಂದು ತಿಳಿಯದಂತೆ ಹೋಗಿ ಆತ್ಮಗಳ ಚಿಹ್ನೆಗಳಾದ ವಿಭೂತಿರೇಖೆಗಳು, ಮೂರು ನಾಮಗಳು ಅದ್ವೈತ, ದ್ವೈತ ಪಾರ್ಟಿಗಳ ಜೆಂಡಾ ಗುರುತುಗಳಾಗಿ ಬದಲಾಗಿಹೋಗಿವೆ. ವಿಭೂತಿರೇಖೆಗಳೆಂದರೇ ಅದ್ವೈತ, ನಾಮಗಳು ಎಂದರೇ ದ್ವೈತ ಎನ್ನುವ ಈ ಕಾಲದಲ್ಲಿ ದೇವರು ಪೂರ್ವವಿರುವ ಜ್ಞಾನವನ್ನು ಈಗ ಪುನಃ ನಮಗೆ ತಿಳಿಸುತ್ತಾ, ತನ್ನ ದಾರಿಯನ್ನು ನಮಗೆ ತೋರಿಸುವುದರಿಂದ ನಾವು ಈದಿನ ಉಳಿದವರಿಗಿಂತ ಧನ್ಯರೇ ಅಂದು ಕೊಳ್ಳಬೇಕು. ಮೂರು ಆತ್ಮಗಳ ವಿಷಯ ದ್ವಾಪರಯುಗದಲ್ಲಿ ಭಗವದ್ಗೀತೆಯಲ್ಲಿ ತಿಳಿಸಿ, ಅದೇ ಜ್ಞಾನವನ್ನೇ ಉಳಿದ ದೇಶಗಳಲ್ಲಿ ಉಳಿದ ಗ್ರಂಥರೂಪದಲ್ಲಿ ತಿಳಿಸಲಾಗಿದೆ. ಆದರೂ ಮನುಷ್ಯರಾದವರು ಮತಗಳ ಮತ್ತಿನಲ್ಲಿ ಮುಳುಗಿ ತಮ್ಮ ಶರೀರದಲ್ಲಿನ ಆತ್ಮಗಳನ್ನು ತಿಳಿಯದಂತಿದ್ದಾರೆ. ಮೂರು ಆತ್ಮಗಳ ವಿಷಯ

ಕೃತಯುಗದಿಂದ ಇಂದಿನವರೆಗು ನಮ್ಮ ಮಧ್ಯದಲ್ಲಿಯೇ ಇದ್ದರೂ ನಾವು ಅವುಗಳನ್ನು ಗ್ರಹಿಸದಿರುವುದು ದುರದೃಷ್ಟ. ಉಳಿದ ಮತ ಗ್ರಂಥಗಳಾದ ಬೈಬಲ್, ಖುರಾನ್‌ಗಳಲ್ಲಿ ಮೂರು ಆತ್ಮಗಳ ವಿಷಯ ಹೇಳಿದ್ದರೂ ಅವು ಗುರುತಿಸಲ್ಪಡ ದಂತೆ ಅಡಗಿವೆ. ಅಲ್ಲಿ ಹೇಳಿರುವುದು ಮೂರು ಆತ್ಮಗಳ ವಿಷಯವೇನಾ ಎನ್ನುವಂತಿದೆ.

ಆದರೆ ಭಗವದ್ಗೀತೆಯಲ್ಲಿ ಉಳಿದ ಗ್ರಂಥಗಳಿಗಿಂತ ಸ್ಪಷ್ಟವಾಗಿ ಕಾಣಿಸುವಂತೆ ಮೂರು ಆತ್ಮಗಳ ವಿಷಯ ಇದೆ. ದ್ವಾಪರಯುಗದಲ್ಲಿ ಹೇಳಿದ ಭಗವದ್ಗೀತಾ ಜ್ಞಾನವೇ ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಮೂಲಕ ಸೂರ್ಯನಿಗೆ ಹೇಳಲಾಗಿದೆ. ಸೂರ್ಯನು ಭೂಮಿಮೇಲೆ ಮನುಷ್ಯರಿಗೆ ತಿಳಿಸಿದಾಗ ಅವರಿಗೆ ಅರ್ಥವಾದ ವಿಧಾನವನ್ನು ಅನುಸರಿಸಿ ಮೂರು ನಾಮಗಳನ್ನು ತಯಾರು ಮಾಡುವುದು ನಡೆದಿದೆ. ಮೂರು ನಾಮಗಳು ಕೆಳಗಿನಿಂದ ಮೇಲಕ್ಕೆ ತಿದ್ದಲ್ಪಟ್ಟಿವೆ. ಮೂರು ನಾಮಗಳ ಆಕಾರವನ್ನು ನಂತರ ನೋಡಬಹುದು.

ಮೂರು ಆತ್ಮಗಳ ಗುರುತು ಮೂರು ನಾಮಗಳು. ಮಧ್ಯದಲ್ಲಿನ ನಾಮ ಕೆಂಪು ಬಣ್ಣ ಹೊಂದಿರುವಾಗ, ಪಕ್ಕದ ಎರಡು ನಾಮಗಳು ಬಿಳಿಯ ಬಣ್ಣ ಹೊಂದಿವೆ. ಒಂದನೆಯ ನಂಬರ್ ಜೀವಾತ್ಮಕ್ಕು ಮೂರನೆಯ ನಂಬರ್ ಪರಮಾತ್ಮಕ್ಕು ಮಧ್ಯದಲ್ಲಿ ಆತ್ಮಯಿದೆ. ಜೀವಿಯನ್ನು ನಡೆಸುವುದು, ಲಾಲನೆ ಪಾಲನೆ ಮಾಡುವುದು ಎರಡನೆ ಆತ್ಮವೇ. ಜೀವಿಯು ತಿಳಿಯಬೇಕಾಗಿರುವುದು ಎರಡನೆ ಆತ್ಮವನ್ನೇ ಮೂರನೆ ಆತ್ಮ ಪರಮಾತ್ಮ ಆದರೂ ಆತನು ಏನು ಮಾಡುವವನಲ್ಲ. ಆದುದರಿಂದ ಜೀವಿಯು ಎರಡನೆ ಆತ್ಮವನ್ನೇ ಮೊದಲು ತಿಳಿಯಬೇಕಾಗಿರುತ್ತದೆ. ದೇವರಾದ ಮೂರನೆ ಆತ್ಮದ ಹತ್ತಿರಕ್ಕೆ ಹೋಗಬೇಕೆಂದರೆ ಎರಡನೆ ಆತ್ಮ ಮೂಲಕವೇ ಜೀವಿಯು ದೇವರನ್ನು ಸೇರಬೇಕಾಗಿರುತ್ತದೆ. ಆದುದರಿಂದ ಪ್ರತಿ ಮನುಷ್ಯ ಅಂದರೇ ಪ್ರತಿಜೀವಿ ತನ್ನ ಶರೀರದಲ್ಲಿರುವ ಎರಡನೇ ಆತ್ಮವನ್ನು ತಪ್ಪದೆ ತಿಳಿಯಬೇಕು. ಆದುದರಿಂದ ಮೂರು ನಾಮಗಳ ಮಧ್ಯದಲ್ಲಿರುವ ಆತ್ಮ ಗುರುತನ್ನು ಕೆಂಪು ಬಣ್ಣವಾಗಿ ತೋರಿಸುವುದು ನಡೆದಿದೆ.

ಇದು ಒಂದು ಭಾವನೆಯಾಗಿದ್ದು ಎರಡನೆ ಭಾವನೆ ಪ್ರಕಾರ ಮಧ್ಯದಲ್ಲಿರುವ ಕೆಂಪು ಬಣ್ಣ ನಾಮವನ್ನು ಪರಮಾತ್ಮನಾಗಿ ಸಹ ವರ್ಣಿಸಿ ಹೇಳಬಹುದು. ಏನು ತಿಳಿಯದ ಮುನ್ನ ಎರಡನೆ ಆತ್ಮವನ್ನು ಮಧ್ಯದಲ್ಲಿರುವ ಕೆಂಪು ಬಣ್ಣ ನಾಮವಾಗಿ ಹೇಳಿಕೊಳ್ಳಬೇಕಾಗಿರುತ್ತದೆ. ಸ್ವಲ್ಪ ಆತ್ಮ ವಿಷಯ ಅರ್ಥವಾದ ನಂತರ ಆತನು ಮೂರನೆ ಆತ್ಮವಾದ ಪರಮಾತ್ಮನನ್ನು ಸೇರಬೇಕಾಗಿರುತ್ತದೆ. ಆದಕಾರಣ ಆತ್ಮವನ್ನು ಗುರುತಿಸಲ್ಪಟ್ಟವನು ಮೂರನೆ ಆತ್ಮವಾದ ಪರಮಾತ್ಮ ಗುರುತಾಗಿ ಕೆಂಪುಬಣ್ಣ ಮಧ್ಯ ನಾಮವನ್ನು ಕುರಿತು ತಿಳಿಯಬೇಕಾಗಿರುತ್ತದೆಂಬ ಭಾವನೆ ಬರಬೇಕು.

ಈ ವಿಧವಾಗಿ ಆತ್ಮಜ್ಞಾನ ತಿಳಿಯದಿರುವಾಗ ಒಂದು ವಿಧವಾಗಿ, ಆತ್ಮಜ್ಞಾನ ತಿಳಿದ ನಂತರ ಮತ್ತೊಂದು ವಿಧವಾಗಿ ಒಂದೇ ನಾಮವನ್ನು ಕುರಿತು ತಿಳಿಯಬೇಕಾಗಿದೆ. ಇದೆಲ್ಲವೂ ಭಗವದ್ಗೀತೆಯಲ್ಲಿ ಸೂಚನೆಯಾಗಿ ಹೇಳಲಾಗಿದೆ. ಮೂರು ಆತ್ಮಗಳ ವಿಷಯ ಭಗವದ್ಗೀತೆಯಲ್ಲಿ ಎಲ್ಲಿಯೂ ಇಲ್ಲವೇ, ನಿನಗೊಬ್ಬನಿಗೆ ಮೂರೆಂದು ಹೇಗೆ ಅರ್ಥವಾಗಿದೆಯೆಂದು ಕೆಲವರು ನನ್ನನ್ನು ಪ್ರಶ್ನಿಸಬಹುದು? ಪ್ರಶ್ನಿಸಿದರೆ ಫರವಾಗಿಲ್ಲ. ಹೇಗಾದರೂ ಅದಕ್ಕೆ ವಿವರವನ್ನು ಹೇಳಬಹುದು. ಹಾಗೆ ನನ್ನನ್ನು ಇಲ್ಲಿಯವರೆಗೂ ಪ್ರಶ್ನಿಸಿದವರು ಯಾರೂ ಇಲ್ಲ ಆದರೆ, ದೂಷಿಸಿದವರು ಹೆಚ್ಚಾಗಿದ್ದಾರೆ. ಮೂರು ಆತ್ಮಗಳ ವಿಷಯ ಭಗವದ್ಗೀತೆಯಲ್ಲಿನದೇ ಆದರೂ ಅದೇ ಭಗವದ್ಗೀತೆ ಜ್ಞಾನ ಉಳಿದ ಎರಡು ಗ್ರಂಥಗಳಾಗಿ ತಯಾರಾದ ವಿಷಯ ಪ್ರಪಂಚದಲ್ಲಿ ಯಾರೂ ನಂಬಲಾರದ ವಿಷಯ. ಆದರೂ ಯಾರು ನಂಬದಿದ್ದರೂ ನಡೆದ ಸತ್ಯ ಅಷ್ಟೇ! ದೇವರು ಏನು ಮಾಡುತ್ತಿರುವುದು ಯಾರಿಗೂ ಅರ್ಥವಾಗುವುದಿಲ್ಲ. ಆತನ ಸಂಕಲ್ಪದಿಂದಲೇ ಉಳಿದ ಎರಡು ಮತಗಳ ಗ್ರಂಥಗಳಲ್ಲಿ ಸೃಷ್ಟಿ ಆದಿಯಲ್ಲಿ ದೇವರು ಹೇಳಿದ ಜ್ಞಾನ ಸೇರಿಹೋಗಿದೆ. ಮೂರು ಮತ ಗ್ರಂಥಗಳಲ್ಲಿಯೂ ಮೂರು ಆತ್ಮಗಳನ್ನು ಕುರಿತು ಇದೆಯೆಂದು ನಾನು ಹೇಳಿದಾಗ ಕೆಲವರು ಇತರ ಮತಸ್ಥರು ತಿಳಿಯದ ಜ್ಞಾನ ತಿಳಿದಿದೆಯೆಂದು ಹೇಳಿ ಸಂತೋಷಪಟ್ಟಿದ್ದಾರೆ. ಆದರೇ ಹಿಂದೂಗಳೇ ಅರ್ಥ ಮಾಡಿಕೊಳ್ಳದೆಹೋಗಿ ಮೊದಲಿನಿಂದ ಇರುವ

ಅಜ್ಞಾನವನ್ನು ಬಿಡದೆ ನನ್ನನ್ನು ದೂಷಿಸುವುದು ನಡೆದಿದೆ. ಇಂದಿಗೂ ನಡೆಯುತ್ತಲೇ ಇದೆ. ಮೂರು ಆತ್ಮಗಳೆಂದರೂ, ಅಥವಾ ನಾನು ಪ್ರತಿಪಾದಿಸಿದ ತ್ರೈತ ಸಿದ್ಧಾಂತದ ಹೆಸರು ಕೇಳಿದರೂ ಇದು ಇಂದೂಗಳಲ್ಲಿನ ಒಂದು ಸಿದ್ಧಾಂತವೆಂದು ಅಂದುಕೊಳ್ಳದೆ ಪೂರ್ತಿಯಾಗಿ ಪರಮತ ಪ್ರಚಾರವೆಂದು ನನ್ನನ್ನು ಪರಮತಸ್ಥನೆಂದು ಹೇಳುತ್ತಿದ್ದಾರೆ. ಯಾವಾಗಾಲೋ ಹೋಗಿರುವ ಆರ್ಯರು ಇನ್ನೂ ಇಂದಿಗೂ ಸಹ ಇದ್ದಾರೆಂದು ಗುರುತು ಮಾಡುತ್ತಿದ್ದಾರೆ.

ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ **"ಕ್ಷರನು, ಅಕ್ಷರನು, ಪುರುಷೋತ್ತಮನು"** ಎಂದು ಮೂರು ಆತ್ಮಗಳನ್ನು ಕುರಿತು ಹೇಳಿದರೆ, ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆಯಲ್ಲಿ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿ **"ಕುಮಾರನು, ತಂದೆ, ಪರಿಶುದ್ಧಾತ್ಮ"** ಎಂದು ಹೇಳಿದ್ದಾರೆ. ಅದೇ ವಿಷಯವನ್ನೇ ಇಸ್ಲಾಮ್ ಗ್ರಂಥವಾದ ಖುರಾನ್‌ನಲ್ಲಿ ಸುರಾ 50, ಆಯತ್ 21ರಲ್ಲಿ **"ನಡೆಸಲ್ಪಡುವವನು, ನಡೆಸುವವನು, ನೋಡುವವನು,"** ಎಂದು ಮೂವರನ್ನು ತೋರಿಸುತ್ತಾ ಮೂರು ಆತ್ಮಗಳನ್ನು ಕುರಿತು ತಿಳಿಸಲಾಗಿದೆ. ಮೂರು ಗ್ರಂಥಗಳಲ್ಲಿ ಮೂವರನ್ನು ಕುರಿತು ಹೇಳಿದರೂ ಯಾವುದೂ ಒಂದರೊಂದಿಗೆ ಇನ್ನೊಂದು ಸಂಬಂಧ ಇಲ್ಲದಂತೆ ಬೇರೆಬೇರೆ ವಿಧದಲ್ಲಿ ಬರೆಯುವುದರಿಂದ ಇದು ಮೂರು ಆತ್ಮಗಳ ವಿಷಯವೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಈಗ ನಾನು ಹೇಳಿದರೂ ಸ್ವಲ್ಪ ಅರ್ಥವಾಗಿ, ಸ್ವಲ್ಪ ಅರ್ಥವಾಗದ ಸ್ಥಿತಿಯಲ್ಲಿ ಇದ್ದಾರೆ. ಅಂದರೇ ಪೂರ್ತಿ ಅರ್ಥ ವಾಗಲಿಲ್ಲವೆಂದೇ ತಿಳಿಯುತ್ತಿದೆ. ಇದನ್ನು ಅನುಸರಿಸಿ ಸ್ವಲ್ಪ ಅರ್ಥ ವಾಗಿದೆಯೆಂದು ತಿಳಿಯುತ್ತಿದೆ. ಯಾರು ಏನೆಂದುಕೊಂಡರೂ ಪೂರ್ವದಲ್ಲಿ ಕೃತಯುಗದಲ್ಲಿಯೇ ಮೂರು ಆತ್ಮಗಳ ವಿಷಯವನ್ನು ಕುರಿತು ತಿಳಿಸುವುದಕ್ಕಾಗಿ ಮೂರು ನಾಮಗಳನ್ನು ತಯಾರು ಮಾಡಿ, ಮಧ್ಯ ಗೆರೆಯನ್ನು (ಮಧ್ಯ ನಾಮವನ್ನು) ಕೆಂಪಾಗಿ ತಿದ್ದಿದ್ದಾರೆ. ನಾಮ ಸಾಕಾರಕ್ಕೆ ಇಟ್ಟರೂ, ವಿಭೂತಿ ರೇಖೆಗಳನ್ನು ನಿರಾಕಾರಕ್ಕೆ ಇಟ್ಟರೂ ಮಧ್ಯೆ ರೇಖೆಗೆ ಕೆಂಪನೆಯ ಸಿಂಧೂರದ ಗುರುತನ್ನು ಇಟ್ಟಿದ್ದಾರೆ. ಉದ್ದ

ನಾಮಗಳಲ್ಲಿಯೂ, ಅಡ್ಡನಾಮಗಳಲ್ಲಿಯೂ ಕೆಂಪನೆ ಗುರುತನ್ನು ಎಲ್ಲರೂ ಗ್ರಹಿಸಿದರೂ ಇದ್ಯಾಕೆ ಇದೆಯೆಂದು ಯಾರೂ ಆಲೋಚಿಸಲಿಲ್ಲ. ಈದಿನ ತಿರುಪತಿ ವೆಂಕಟೇಶ್ವರ ಪ್ರತಿಮೆ ಮೇಲೆ ದೊಡ್ಡ ನಾಮಗಳನ್ನು ಇಡುವುದು ನಡೆದಿದೆ. ಈಗ ಇಟ್ಟರೂ ಅದು ಪೂರ್ವದ ಭಾವನೆಯನ್ನೇ ತಿಳಿಸುತ್ತಿದೆ.

ವಿಶಿಷ್ಟಾದ್ವೈತ ಅದ್ವೈತಕ್ಕೆ ಹತ್ತಿರದಲ್ಲಿಯೇ ಇರುವುದಾದರೂ, ಅದ್ವೈತ ನಿರ್ಗುಣವನ್ನು ತಿಳಿಸಿದರೆ, ವಿಶಿಷ್ಟಾದ್ವೈತ ಸಗುಣವನ್ನು ತಿಳಿಸುತ್ತಿದೆ. ಸಿದ್ಧಾಂತವೆಲ್ಲವೂ ಸುಮಾರು ಒಂದಾಗಿಯೇ ಇರುತ್ತಾ ಕೊನೆಯಲ್ಲಿ ಅದ್ವೈತವೆಂಬ ಹೆಸರುಹೊಂದಿದೆ. ಅದ್ವೈತದ ಮುಂದೆ 'ವಿಶಿಷ್ಟ' ಎಂಬ ಪ್ರತ್ಯೇಕತೆ ಇದೆ. ವಿಶಿಷ್ಟ ಎಂದರೂ ವಿಶೇಷತೆ ಎಂದರೂ ಪ್ರತ್ಯೇಕವೆಂದು ಅರ್ಥ. ಅದ್ವೈತದಲ್ಲಿ ಸಾಕಾರ ಪೂಜೆಯನ್ನು, ಸಾಕಾರ ಭಕ್ತಿಯನ್ನು ನಿರಾಕರಿಸುತ್ತಿರುವಾಗ ವಿಶಿಷ್ಟಾದ್ವೈತದಲ್ಲಿ ಸಾಕಾರ ಭಕ್ತಿಯನ್ನು, ಸಾಕಾರ ಪೂಜೆಯನ್ನು ಹೆಚ್ಚಾಗಿ ಬೋಧಿಸುತ್ತಿದ್ದಾರೆ. ಅದ್ವೈತ, ವಿಶಿಷ್ಟಾದ್ವೈತಗಳನ್ನು ಎರಡನ್ನು ತಿಳಿದವರು ಎರಡರಲ್ಲಿ ದೊಡ್ಡ ವ್ಯತ್ಯಾಸ ಇಲ್ಲವೆಂದು ತಿಳಿದು ಮೊದಲಿನಿಂದ ಅದ್ವೈತದಲ್ಲಿ ಇರುವವರು ವಿಶಿಷ್ಟಾದ್ವೈತದೊಳಗೆ ಬರುವುದು ನಡೆದಿದೆ. ರಾಮಾನುಜಾಚಾರ್ಯರವರ ಒಂದು ಗ್ರಂಥದಲ್ಲಿ ಬರೆದಿರುವುದನ್ನನುಸರಿಸಿ ಅದ್ವೈತರು ಎಷ್ಟೋ ಜನ ಅದ್ವೈತವನ್ನು ಬಿಟ್ಟು ವಿಶಿಷ್ಟಾದ್ವೈತದಲ್ಲಿ ಪ್ರವೇಶಿಸುವುದು ನಡೆದಿದೆಯೆಂದು ತಿಳಿಯುತ್ತಿದೆ. ಅಲ್ಲಿ ಬರೆದಿರುವುದು ಹೀಗೆ ಇದೆ ನೋಡಿರಿ.

"ಯಾದವ ಪ್ರಕಾಶಕನು ರಾಮಾನುಜನನ್ನು ಸೇರುವುದು, ತನ್ನ ಸಂದೇಹಗಳನ್ನು ಬಗೆಹರಿಸಿಕೊಳ್ಳುವುದು, ರಾಮಾನುಜನಿಗೆ ಶರಣಾಗತ ನಾಗುವುದು ಮೊದಲಾದ ವಿಷಯಗಳೆಲ್ಲವೂ ದೇಶದ ನಾಲ್ಕು ಮೂಲೆಗಳಲ್ಲಿ ವ್ಯಾಪಿಸುವುದರಿಂದ ರಾಮಾನುಜನ ಪ್ರತಿಭೆ ಎಲ್ಲರಿಗೂ ತಿಳಿದುಹೋಗಿದೆ. ಆ ಕಾಲದ ಪಂಡಿತರಿಗು, ಭಕ್ತರಿಗು ಈ ವಾರ್ತೆ ನಿತ್ಯ ಸಂಭಾಷಣೆ ವಿಷಯವಾಯಿತು. ಅದ್ವಿತೀಯ ಪಂಡಿತನು, ಸಾಟಿಯಿಲ್ಲದ ಅದ್ವೈತ ಸಿದ್ಧಾಂತ ವೇದಾಂತಿ, ರಾಮಾನುಜನಿಗೇ ಗುರುವಾದ ಯಾದವ ಪ್ರಕಾಶನು ರಾಮಾನುಜನಿಗೇ

ಶರಣಾಗುವುದು ಸಾಮಾನ್ಯ ವಿಷಯವಲ್ಲ ಅಲ್ಲವೇ! ಬ್ರಹ್ಮ ನಿರ್ಗುಣ, ಸರ್ವವು ಮಿಥ್ಯವೆಂದು ಪ್ರಕಟಿಸುವ ಅದ್ವೈತ ಸಿದ್ಧಾಂತದ ಮಹಾವೃಕ್ಷವೊಂದರ ದೊಡ್ಡಬೇರು ಕಿತ್ತುಹೋದಂತಾಗಿದೆ. ಅದ್ವೈತ ಸಿದ್ಧಾಂತದ ಮಾಯಾಭವನ ಕಂಪಿಸಿದೆ. ಪ್ರಸ್ಥಾನತ್ರಯ ಪ್ರಮಾಣವಾದರೂ ಸಕ್ರಮವಾಗಿ ಭಾವನೆ ಮಾಡದಿರುವುದರಿಂದ ನಿರ್ಗುಣ ಸಿದ್ಧಾಂತ ನಿರ್ಮಿಸಿದರು. ಈಗದು ನಿಲ್ಲಲಾರದೆ ಇದೆ. ಅದೇ ರಾಮಾನುಜನ ಪ್ರತಿಭೆ. ಈ ರಾಮಾನುಜನ ಪ್ರತಿಭೆಯನ್ನೆ ಯಾದವ ಪ್ರಕಾಶನು ಪ್ರಾರಂಭದಲ್ಲಿ ಊಹಿಸಿದ್ದನು. ರಾಮಾನುಜನು ಅದ್ವೈತ ಸಿದ್ಧಾಂತ ವೃಕ್ಷಕ್ಕೆ ಕೊಡಲಿ ಪೆಟ್ಟು ಆಗುತ್ತಾನೆಂಬ ಯಾದವ ಪ್ರಕಾಶನ ಊಹೆ ಈಗ ನಿಜವಾಗಿದೆ. ಒಂದುಕಾಲದಲ್ಲಿನ ಆತನ ದ್ವೇಷಪೂರಿತ ಊಹೆ ಸತ್ಯವಾಗಿ ಬದಲಾಗಿದೆ. ಆತನು ಸಹ (ಯಾದವ ಪ್ರಕಾಶನು ಸಹ) ತನ್ನ ಅದ್ವೈತ ಮಾಯಾ ಸಿದ್ಧಾಂತವನ್ನು ಬಿಟ್ಟು ರಾಮಾನುಜನ ಸಗುಣ ಸಿದ್ಧಾಂತಕ್ಕೆ ಅಂಕಿತನಾದನು. ಗುರುವು ಶಿಷ್ಯನಾದನು, ಶಿಷ್ಯನು ಗುರುವಾದನು. ರಾಮಾನುಜನ ಪ್ರತಿಭೆ ಅಂಥದ್ದು. ವಿದ್ಯಾಸಂಪನ್ನನು, ಏಕ ಸಂಥಾಗ್ರಾಹಿ, ಗುರುವರ್ಯನಾದ ಯಾದವಪ್ರಕಾಶರಂತ ಹವರು ರಾಮಾನುಜಾಚಾರ್ಯರಿಗೆ ಶರಣಾಗತರಾಗಿದ್ದಾ ರೆಂದರೇ ಇನ್ನು ಅವರ ಶಿಷ್ಯಗಣ ಎಷ್ಟು ಘನವಾಗಿ ಅಭಿವೃದ್ಧಿಯಾಗಿದೆಯೋ ಉಹಿಸಬಹುದು." ಈ ವಿಧವಾಗಿ **"ರಾಮಾನುಜ ದಿವ್ಯವೈಭವ"** ಎಂಬ ಗ್ರಂಥದಲ್ಲಿ ಒಂದು ಪುಟದಲ್ಲಿ ಬರೆದ ಸಮಾಚಾರವನ್ನು ಅನುಸರಿಸಿ ಆದಿನ ಬಹಳಜನ ಅದ್ವೈತರು ರಾಮಾನುಜಾಚಾರ್ಯರ ಸಗುಣಬೋಧನೆಗಳಿಗೆ ಆಕರ್ಷಿತರಾಗಿ ನಿರ್ಗುಣ ಅದ್ವೈತವನ್ನು ಬಿಟ್ಟು ವಿಶಿಷ್ಟಾದ್ವೈತದಲ್ಲಿ ಸೇರಿಹೋಗಿದ್ದಾರೆ. ಇದೆಲ್ಲವೂ ಒಂದುಕಡೆ ಗಮನಿಸುತ್ತಿರುವ ಅದ್ವೈತರಾದ ಆರ್ಯರು ರಾಮಾನುಜರವರ ಮೇಲೆ ದ್ವೇಷ ಬೆಳೆಸಿಕೊಂಡಿದ್ದಾರೆ.

**ಪ್ರಶ್ನೆ :– ಯಾದವ ಪ್ರಕಾಶನು ರಾಮಾನುಜರ ಗುರುವು ಎಂದು ನೀವು ಹೇಳುತ್ತಿದ್ದೀರಿ. ಅದ್ವೈತ ಗುರು ರಾಮಾನುಜರಿಗೆ ಗುರು ಹೇಗಾಗಿದ್ದಾನೆ? ಯಾದವ ಪ್ರಕಾಶನು ದ್ವೇಷಪೂರಿತನೆಂದು ಹೇಳಿದ್ದಾರೆ. ಏಕೆ ದ್ವೇಷ ಬಂದಿದೆ. ಅಷ್ಟಕ್ಕೂ ಯಾದವ ಪ್ರಕಾಶನು ಯಾರು?**

**ಉತ್ತರ:–** ಶಂಕರಾಚಾರ್ಯರು ಅದ್ವೈತ ಸಿದ್ಧಾಂತಕರ್ತ, ಆ ನಂತರ 1500 ವರ್ಷಗಳಿಗೆ ರಾಮಾನುಚಾರ್ಯರು ಬಂದಿದ್ದಾರೆ. ರಾಮಾನುಜರೇ ವಿಶಿಷ್ಟಾದ್ವೈತ ಸಿದ್ಧಾಂತಕರ್ತನಾಗಿದ್ದಾನೆ. ಜನ್ಮತಹ ಯಾರೂ ಸಿದ್ಧಾಂತಕರ್ತರು ಆಗುವುದಿಲ್ಲ. ಬೆಳೆದು ದೊಡ್ಡವನಾದ ನಂತರ ವ್ಯಕ್ತಿತ್ವ ವಿಕಾಸ ಬಂದ ನಂತರ ತಮ್ಮ ಜೀವನದಲ್ಲಿ ಹೊಸ ಸಿದ್ಧಾಂತವನ್ನು ಕಂಡುಹಿಡಿಯಬಹುದು. ಹುಟ್ಟಿದ ಮನುಷ್ಯರೆಲ್ಲರೂ ಸಿದ್ಧಾಂತವನ್ನು ಕಂಡುಹಿಡಿಯಲಾರರು. ಕೆಲವು ನೂರಾರೂ ವರ್ಷಗಳಿಗೋ, ಕೆಲವು ಸಾವಿರಾರೂ ವರ್ಷಗಳಿಗೋ ಯಾರೋ ಒಬ್ಬರು ಅಪರೂಪವಾಗಿ ಸಿದ್ಧಾಂತಗಳನ್ನು ಕಂಡುಹಿಡಿಯಬಹುದು. ಅದೇ ವಿಧವಾಗಿ ಕಲಿಯುಗ ಬಂದ ನಂತರ ಸುಮಾರು 2500 ವರ್ಷಗಳಿಗೆ ಶಂಕರಾಚಾರ್ಯರು ಹುಟ್ಟಿ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಶಂಕರಾಚಾರ್ಯರು ಮರಣಿಸಿದ ನಂತರ ಸುಮಾರು 1500 ವರ್ಷಗಳ ನಂತರ ರಾಮಾನುಜಾಚಾರ್ಯರು ಹುಟ್ಟಿ ತನ್ನ ಜೀವನದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಕಂಡುಹಿಡಿಯುವುದಾಗಿದೆ. ರಾಮಾನುಜಾಚಾರ್ಯರು 120 ವರ್ಷಗಳು ವಿಶಿಷ್ಟಾದ್ವೈವನ್ನು ಪ್ರಚಾರ ಮಾಡುತ್ತಾ ಜೀವನಸಾಗಿಸಿ ಮರಣಿಸುವುದಾಗಿದೆ. ರಾಮಾನುಜರ ನಂತರ ಮಧ್ವಾಚಾರ್ಯರವರು ಸುಮಾರು 100 ವರ್ಷಗಳಿಗೆ ಬಂದು ಆತನು ದ್ವೈತ ಸಿದ್ಧಾಂತವನ್ನು ಕಂಡುಹಿಡಿದು ಪ್ರತಿಪಾದಿಸಿದ್ದಾರೆ. ಮಧ್ವಾಚಾರ್ಯರ ದ್ವೈತ ಸಿದ್ಧಾಂತವು ನಂತರ ಸುಮಾರು 630 ವರ್ಷಗಳ ನಂತರ ತ್ರೈತ ಸಿದ್ಧಾಂತ ಬಂದಿದೆ. ಅದ್ವೈತ ಸಿದ್ಧಾಂತಕರ್ತ ಕೇರಳದಲ್ಲಿ ಹುಟ್ಟಿದರೆ, ವಿಶಿಷ್ಟಾದ್ವೈತ ಸಿದ್ಧಾಂತಕರ್ತ ತಮಿಳನಾಡಿನಲ್ಲಿ ಹುಟ್ಟಿದರೆ, ದ್ವೈತ ಸಿದ್ಧಾಂತಕರ್ತನಾದ ಮಧ್ವಾಚಾರ್ಯರು ಕರ್ನಾಟಕ ರಾಷ್ಟ್ರದಲ್ಲಿ ಹುಟ್ಟಿದ್ದಾರೆ. ನಂತರ ಬಂದಿರುವ ಪ್ರಸ್ತುತ ಜೀವಿಸಿರುವ ತ್ರೈತ ಸಿದ್ಧಾಂತಕರ್ತ ಆಂಧ್ರರಾಷ್ಟ್ರದಲ್ಲಿ ಹುಟ್ಟಿದ್ದಾರೆ.

ಹಿಂದೂ (ಇಂದೂ) ಮತದಲ್ಲಿನ ನಾಲ್ಕುಜನ ಸಿದ್ಧಾಂತಕರ್ತರು ದಕ್ಷಿಣ ಭಾರತದೇಶದಲ್ಲಿ ಹುಟ್ಟುವುದು ವಿಶೇಷ. ಅಷ್ಟೇ ಅಲ್ಲದೆ ಕೆಳಗೆ ಕೇರಳದಿಂದ ಹುಟ್ಟುತ್ತಾ ಬರುವುದು ಮತ್ತಷ್ಟು ವಿಶೇಷ. ಮೊದಲು ಮೂರು ಸಿದ್ಧಾಂತಗಳು

ಒಂದಕ್ಕೊಂದು ಸ್ವಲ್ಪ ಸಂಬಂಧ ಹೊಂದಿವೆ. ಆದರೆ ನಾಲ್ಕುನೆಯದಾದ ತ್ರೈತ ಸಿದ್ಧಾಂತ ಯಾವುದರೊಂದಿಗೂ ಸಂಬಂಧಪಡದೆ, ಪ್ರತ್ಯೇಕವಾಗಿದೆ. ವಿಶಿಷ್ಟಾದ್ವೈತ ಸಿದ್ಧಾಂತ ಮಂತ್ರದಲ್ಲಿಯೂ, ಮುಖದಮೇಲಿನ ನಾಮದಲ್ಲಿಯೂ ಅದ್ವೈತಕ್ಕಿಂತಲೂ ಪ್ರತ್ಯೇಕವಾಗಿದ್ದರೂ, ನಿಜವಾದ ಸಿದ್ಧಾಂತಗಳ ಹತ್ತಿರ ಸ್ವಲ್ಪ ಸಂಬಂಧಹೊಂದಿರುವುದು ಗಮನಿಸಬಹುದು. ಅದ್ವೈತ ಸಿದ್ಧಾಂತದಲ್ಲಿ ನಿರ್ಗುಣ, ನಿರಾಕಾರವನ್ನು ಬೋಧಿಸಿದಾಗ, ವಿಶಿಷ್ಟಾದ್ವೈತದಲ್ಲಿ ಸಗುಣ, ಸಾಕಾರಗಳನ್ನು ಕುರಿತು ಹೇಳುವುದಾಗಿದೆ. ಒಂದೇ ದೇವರನ್ನೇ ಅದ್ವೈತದಲ್ಲಿ ನಿರಾಕಾರವಾಗಿ ಹೇಳಿದರೆ, ವಿಶಿಷ್ಟಾದ್ವೈತದಲ್ಲಿ ಸಾಕಾರವಾಗಿ ಹೇಳುತ್ತಿದ್ದಾರೆ. ಆದಕಾರಣ ಅದ್ವೈತ, ವಿಶಿಷ್ಟಾದ್ವೈತ ಸ್ವಲ್ಪ ವ್ಯತ್ಯಾಸದಿಂದ ಒಂದಕ್ಕೊಂದು ಕೂಡಿವೆಯೆಂದು ಹೇಳಬಹುದು. ಹಣೆಯ ಮೇಲೆ ಧರಿಸುವ ನಾಮದಲ್ಲಿಯು, ಬಾಯಿಯಿಂದ ಜಪಿಸುವ ಮಂತ್ರದಲ್ಲಿಯು ಯಾವ ಸಂಬಂಧವಿಲ್ಲದಂತೆ ಇವೆಯೆಂದೇ ಹೇಳಬಹುದು.

ರಾಮಾನುಜನು ಚಿಕ್ಕವಯಸ್ಸಿನಲ್ಲಿ ಅದ್ವೈತ ಗುರುವನ್ನು ಆಶ್ರಯಿಸಿ ಆತನು ಹೇಳುವ ಅದ್ವೈತ ಬೋಧನೆಗಳನ್ನು ಇಷ್ಟಪಡದೆ ಆಗಾಗ ಗುರುವನ್ನೇ ವಿಮರ್ಶಿಸುತ್ತಿದ್ದನು. ಅದ್ವೈತವನ್ನು ವಿಮರ್ಶಿಸುವುದರಿಂದ ತಾನು ಆಶ್ರಯಿಸಿದ ಗುರುವನ್ನೇ ಎದುರಿಸಬೇಕಾಗಿಬಂದಿದೆ. ಹಾಗೆ ಎದುರಿಸಿ ಮಾತನಾಡುವುದರಿಂದ ರಾಮಾನುಜರ ಗುರುಗಳಾದ ಯಾದವ ಪ್ರಕಾಶನು ರಾಮಾನುಜನನ್ನು ಹತ್ಯೆ ಮಾಡಬೇಕೆಂದು ನಿರ್ಣಯಿಸಿಕೊಂಡಿದ್ದಾನೆ. ಅದಕ್ಕೆ ಜೊತೆಯಾಗಿ ಅದ್ವೈತರಾದ ಯಾದವ ಪ್ರಕಾಶನ ಅನುಚರರು ಸಹ ತಯಾರಾಗುವುದರಿಂದ ರಾಮಾನುಜನು ಪ್ರಾಣಾಪಾಯಸ್ಥಿತಿಯಲ್ಲಿ ಸಿಲುಕಿಕೊಂಡಿದ್ದಾನೆ. ಈ ವಿಷಯವೆಲ್ಲಾ, ಸ್ಪಷ್ಟವಾಗಿ ಅರ್ಥವಾಗುವುದಕ್ಕೆ ರಾಮಾನುಜರ ಚರಿತ್ರೆ ಇರುವ **"ರಾಮಾನುಜ ದಿವ್ಯ ವೈಭವ"** ಎಂಬ ಗ್ರಂಥದಲ್ಲಿ ಏನಿದೆಯೋ ಈಗ ನೋಡೋಣ.

"ರಾಮಾನುಜನಿಗೆ ಹದಿನಾರನೆ ವರ್ಷವೇ ವಿವಾಹವಾಗಿದೆ. ರಾಮಾನುಜನಿಗೆ ವಿವಾಹವಾದ ಮರು ಮಾಸದಲ್ಲಿಯೇ ತಂದೆ ಕೇಶವ

ಚಾರ್ಯನು ಮರಣಿಸಿದ್ದಾನೆ. ರಾಮಾನುಜನ ತಾಯಿ ಕಾಂತಿಮತಿ ವಿಧವೆಯಾಗಿ ಸ್ವಗ್ರಾಮದಲ್ಲಿ ಇರುವುದಕ್ಕೆ ಇಷ್ಟಪಡಲಿಲ್ಲ. ಕುಮಾರನ ವಿದ್ಯಾಭ್ಯಾಸಕ್ಕೆ ಸಂಸಾರವನ್ನು ಕಾಂಚಿಪುರಕ್ಕೆ ತೆರಳುವುದು ಒಳ್ಳೆಯದೆಂದು ಕಾಂತಿಮತಿ ಯೋಚಿಸಿದಳು. ರಾಮಾನುಜನು ಆಲೋಚಿಸಿ ತಾಯಿ ನಿರ್ಣಯ ಒಳ್ಳೆಯದೆಂದು ತಿಳಿದು ಸಂಸಾರವನ್ನು ಕಂಚಿಗೆ ತೆರಳಿಸಿದನು. ಕಾಂಚಿಪುರದಲ್ಲಿ ದೇಶಪ್ರಖ್ಯಾತನಾದ ಆಧ್ಯಾತ್ಮಿಕಚಾರ್ಯನು ಯಾದವಪ್ರಕಾಶನು ಶಿಷ್ಯರಿಗೆ ಆಧ್ಯಾತ್ಮಿಕ ವಿದ್ಯೆಯನ್ನು ಕಲಿಸುತ್ತಿದ್ದನು. ರಾಮಾನುಜನು ಯಾದವಪ್ರಕಾಶನಿಗೆ ಶಿಷ್ಯನಾದನು. ಯಾದವ ಪ್ರಕಾಶನು ಆಧ್ಯಾತ್ಮಿಕ ವೇದಾಂತ ನಿಧಿಯೇ ಅಲ್ಲದೆ, ದೊಡ್ಡ ಪಂಡಿತನು, ತತ್ತ್ವಜ್ಞಾನಿಯೂ ಸಹ ಆಗಿದ್ದನು. ರಾಮಾನುಜನ ಮಲತಾಯಿಯ ಕುಮಾರನು ಗೋವಿಂದಾಚಾರ್ಯನು ಕೂಡಾ ವಿದ್ಯಾಭ್ಯಾಸಕ್ಕಾಗಿ ಕಾಂಚಿಪುರಕ್ಕೆ ಬಂದು ರಾಮಾನುಜನೊಂದಿಗೆ ಸಹ ಯಾದವ ಪ್ರಕಾಶನ ಹತ್ತಿರ ಶಿಷ್ಯರಾಗಿ ಸೇರಿದರು. ಪ್ರಥಮವಾಗಿ ರಾಮಾನುಜನ ಭಕ್ತಿ ಪ್ರಪತ್ತುಗಳಿಗೆ, ತಿಳುವಳಿಕೆಗಳಿಗೆ ಯಾದವ ಪ್ರಕಾಶನು ಸಂತೃಪ್ತಿ ಹೊಂದಿ ರಾಮಾನುಜನನ್ನು ಪ್ರೇಮದಿಂದ ನೋಡುತ್ತಿದ್ದನು. ರಾಮಾನುಜ ಸೋದರನು ಗೋವಿಂದನು ರಾಮಾನುಜನಿಗೆ ನೆರಳಿನಂತೆ ವ್ಯವಹರಿಸುತ್ತಿದ್ದನು.

ಶಂಕರಾಚಾರ್ಯರವರು ಪ್ರತಿಪಾದಿಸಿದ ಅದ್ವೈತವನ್ನು ಯಾದವ ಪ್ರಕಾಶನು ಸಂಪೂರ್ಣವಾಗಿ ವಿಶ್ವಾಸಿದವನಾಗಿದ್ದನು. ಅದ್ವೈತ "ಬ್ರಹ್ಮ ಸತ್ಯಮ್ ಜಗನ್ಮಿಥ್ಯಾ – ಜೀವೋ ಬ್ರಹ್ಮೈವನಾಪರಃ" ಎಂದು ತಿಳಿಸುತ್ತಿರುವ "ತತ್ತ್ವಮಸಿ" ಎಂಬ ಬ್ರಹ್ಮ ಸೂತ್ರವನ್ನು ಆಧಾರವಾಗಿ ಮಾಡಿಕೊಂಡಿದೆ. "ಅಹಂ ಬ್ರಹ್ಮಾಸ್ಮಿ" (ನಾನು ಬ್ರಹ್ಮನು) ಎಂದು ಬೋಧಿಸುತ್ತಿದೆ. ಈ ಸೂತ್ರ ಆ ಕಾಲದಲ್ಲಿ ಪಂಡಿತ ಜನರಲ್ಲಿ ಹೆಚ್ಚಾಗಿ ಪ್ರಚಾರದಲ್ಲಿ ಇರುತ್ತಿತ್ತು. ರಾಮಾನುಜನಿಗೆ ಈ ಅದ್ವೈತ ಸಿದ್ಧಾಂತಗಳು ಪರಿಚಯಗಳೇ ಆದರೇ, ಆತನು ಅದ್ವೈತವನ್ನು ಪೂರ್ತಿ ವಿಶ್ವಾಸಿಸುವವನು ಅಲ್ಲ. ಆತನನ್ನು ತನ್ನ ಭಾವನೆಯನ್ನು ಗುಪ್ತವಾಗಿ ಇಟ್ಟುಕೊಂಡು, ಮೊದಲು ಸರ್ವ ಶಾಸ್ತ್ರಜ್ಞಾನ ಅಗತ್ಯ, ನಂತರವೇ ವ್ಯಕ್ತಿಗತ ಪರಿಶೀಲನೆ, ಪರಿಶೋಧನೆಯೆಂದು ತಿಳಿಯುತ್ತಿದ್ದನು. ಹೀಗೆ ರಾಮಾನುಜನ

ವಿದ್ಯಾಭ್ಯಾಸ ಪರಿಶೋಧನೆ ಸಹಿತವಾಗಿದೆ. ಆತನು ಯಾವುದನ್ನೂ ಮೂಢವಾಗಿ ವಿಶ್ವಾಸಿಸುವವನಲ್ಲ.

ಒಂದು ದಿನ ಯಾದವ ಪ್ರಕಾಶನು ಶಿಷ್ಯರಿಗೆ ಆಧ್ಯಾತ್ಮಿಕ ಬೋಧನೆಯನ್ನು ತಿಳಿಸುವ ಸಂದರ್ಭದಲ್ಲಿ ತೈತ್ತಿರೀಯೊಪನಿಷತ್ತಿನಲ್ಲಿರುವ ಒಂದು ವಿಷಯದ ಸತ್ಯ, ಜ್ಞಾನ, ಅನಂತವೂ, ಬ್ರಹ್ಮ ಎನ್ನುವುದಕ್ಕೆ ವಿವರವನ್ನು ಹೇಳುತ್ತಾ "ಇವೆಲ್ಲವೂ ಒಂದೇ, ಸತ್ಯವೇ ಬ್ರಹ್ಮ, ಜ್ಞಾನವೇ ಬ್ರಹ್ಮ, ಬ್ರಹ್ಮ ಅನಂತವು. ಇವೆಲ್ಲ ಪದಗಳಿಗು ಬ್ರಹ್ಮ ಎಂಬ ಅರ್ಥವೇ ಬರುತ್ತದೆ" ಎಂದು ಹೇಳಿದ್ದಾನೆ. ಆಗ ತೀಕ್ಷಣ ವಿಮರ್ಶನಾ ಜ್ಞಾನಯುತನಾದ ರಾಮನುಜನು "ಇವೆಲ್ಲವೂ ಒಂದಲ್ಲ. ಸತ್ಯ, ಜ್ಞಾನ, ಅನಂತ ಎನ್ನುವವು ಬ್ರಹ್ಮವೊಂದರ ಲಕ್ಷಣಗಳು. ಪುಷ್ಪಗಳಲ್ಲಿ ವಿವಿಧ ಬಣ್ಣಗಳು, ವಿವಿಧ ಸುವಾಸನೆಗಳು ಇರುವಂತೆ, ಅನಂತ ಕಲ್ಯಾಣ ಗುಣಗಳಲ್ಲಿ ಪರಬ್ರಹ್ಮ ಇದ್ದಾನೆ." ಎಂದು ರಾಮಾನುಜನು ವಿವರಿಸಿದನು. ಈ ಮಾತುಗಳು ಕೇಳಿದ ಯಾದವ ಪ್ರಕಾಶನು ಉಗ್ರನಾದನು. ತಾನು ಹೇಳಿರುವುದನ್ನು ನಿರಾಕರಿಸಬಲ್ಲ ಪಂಡಿತನು ಆಂದಿಗೂ ಇಲ್ಲ. ಅಂಥಹ ಪರಿಸ್ಥಿತಿಯಲ್ಲಿ ಶಿಷ್ಯನಾಗಿರುವ ರಾಮಾನುಜನು ತಾನು ಹೇಳಿದ ವಿವರಣೆಯನ್ನು ಅಲ್ಲವೆಂದು, ಆತನು ಇನ್ನೊಂದು ವ್ಯಾಖ್ಯಾನ ತಿಳಿಸುವುದನ್ನು ಯಾದವ ಪ್ರಕಾಶನು ಸಹಿಸಿಕೊಳ್ಳಲಾರದೆ ಹೋದನು. ತನ್ನಮಾತನ್ನು ಶಿರಸಾವಹಿಸಿ ಪ್ರವರ್ತಿಸಿದರೆ ತನ್ನ ಶಿಷ್ಯವರ್ಗವನ್ನು ಬಿಟ್ಟುಹೋಗಬೇಕೆಂದು ಯಾದವ ಪ್ರಕಾಶನು ರಾಮಾನುಜನನ್ನು ಎಚ್ಚರಿಸಿದನು. ಗುರುಗಳ ಕೋಪವನ್ನು ನೋಡಿದ ರಾಮಾನುಜನು ಸುಮ್ಮನೆ ಮೌನವನ್ನು ವಹಿಸಿದನು. "ಶಾಂತೇ ಕಲಹೊ ನಾಸ್ತಿ" ಎನ್ನುವಂತೆ ಆ ಸಮಸ್ಯೆ ಅಲ್ಲಿಗೆ ಅಡಗಿದೆ. ವಿದ್ಯಾಭ್ಯಾಸವೇ ತನ್ನ ಧ್ಯೇಯವೆಂದು ರಾಮಾನುಜನು ಮೌನವಹಿಸಿದನು.

ಒಂದುದಿನ ಛಾಂದೋಗ್ಯೊಪನಿಷತ್ತಿನಲ್ಲಿ ಕೆಲವು ವಿಷಯಗಳನ್ನು ಶಿಷ್ಯರಿಗೆ ಬೋಧಿಸುತ್ತಿದ್ದನು. "ತಸ್ಯಯಥಾಕಪ್ಯಾಸಂ ವುಂಡರಿಕಮೇವ ರುಕ್ಷಣಿ" ಎಂಬ ವಿಷಯ "ಕಪಿ" ಎಂದರೇ ಕೋತಿ, "ಕಪ್ಯಾಸಂ" ಎಂದರೇ ಕೋತಿಕುಂಡಿ,

ಪುರುಷೋತ್ತಮನ ನಯನಗಳು ಕೋತಿಕುಂಡಿಯಂತೆ, ಕೆಂಪಗಿರುವ ತಾವರೆ ದಳಗಳಂತೆ ಇವೆ" ಎಂದು ಯಾದವ ಪ್ರಕಾಶನು ವಿವರಿಸಿದನು. ಗುರುಗಳು ಕೊಟ್ಟಿರುವ ವ್ಯಖ್ಯಾನ ಕೇಳಿ ರಾಮಾನುಜನು ದಿಗ್ಭ್ರಮೆಗೊಂಡನು. ತನ್ನ ಮನಸ್ಸಿಗೆ ಮುಳ್ಳು ಚುಚ್ಚಿಕೊಂಡಂತಾಗಿದೆ. ಮನಃಕ್ಲೇಶವು ಸಹಿಸಲಾರದ್ದಾಗಿದೆ. ಕಣ್ಣೀರು ಧಾರೆಯಾಗಿ ಬೀಳುತ್ತಿತ್ತು. ಯಾದವ ಪ್ರಕಾಶನು ಇದು ನೋಡಿ "ರಾಮಾನುಜಾ! ಏಕೆ ಕಣ್ಣೀರಿಡುತ್ತಿದ್ದೀಯಾ" ಎಂದು ವಿಚಾರಿಸಿದನು.

ಸ್ವಾಮೀ ಕ್ಷಮಿಸಿರಿ. ಮಹಾ! ಪಂಡಿತರಾದ ತಮ್ಮ ಬಾಯಿಂದಲಾ, ಇಂಥಹ ವಿಪರೀತದ ಮಾತುಗಳು ಬರುತ್ತಿರುವುದು? ಭಗವಂತನ ನಯನಾ ರವಿಂದಗಳ ಸೌಂದರ್ಯವನ್ನು ವರ್ಣಿಸುವುದಕ್ಕೆ ಇಂಥಹ ನೀಚದ ಉಪಮಾನವಾ? ನೀವುಕೊಟ್ಟಿರುವ ವಿವರ ಸತ್ಯದೂರವೇ ಅಲ್ಲದೆ, ವಿಪರೀತ ವಾಗಿಯು, ನೀಚವಾಗಿಯು, ಹೀನವಾಗಿಯು ಇದೆ." ಎಂದು ರಾಮಾನುಜನು ಕಣ್ಣೀರು ಹಾಕುತ್ತಾ ಹೇಳಿದನು.

ರಾಮಾನುಜನ ವಚನಗಳಿಗೆ ಆಶ್ಚರ್ಯ ಆಗ್ರಹಗಳು ಹೊಂದಿದ ಯಾದವ ಪ್ರಕಾಶನು, "ಇದಕ್ಕಾ, ಏನೋ ಕಳೆದುಕೊಂಡವನಂತೆ ಅಳುತ್ತಿದ್ದೀಯಾ. ಹುಚ್ಚ! ನಿನ್ನ ಅಮಾಯಕ ಭಕ್ತಿಯನ್ನು ಪಕ್ಕಕ್ಕಿಡು! ಕೇಳು ಅಸಲು ಪರಬ್ರಹ್ಮ ನಿರಾಕಾರನಾಗಿರುವ ಬ್ರಹ್ಮನಿಗೆ ಕಣ್ಣು ಎಲ್ಲಿವೆ? ಇಲ್ಲದಂಥ ಕಣ್ಣುಗಳನ್ನು ವರ್ಣಿಸುವುದಕ್ಕೆ ಯಾವ ಉಪಮಾನವಾದರೇನು? ಎಂದು ಹೇಳನವಾಗಿ, ತರ್ಕಶಾಸ್ತ್ರ ಕೌಶಲ್ಯದಿಂದ ಚಮತ್ಕರಿಸಿದನು.

ರಾಮಾನುಜನು ನಿಶ್ಚಿಂತೆಹೊಂದಲಾರದೆ ಹೋಗಿದ್ದಾನೆ. ಕಂಪಿತ ಹೃದಯದಲ್ಲಿ ಕಣ್ಣೀರುಹಾಕುತ್ತಲೇ ಇದ್ದನು. "ಆರ್ಯಾ! ಕಪ್ಯಾಸಂ ಎಂಬ ಪದಕ್ಕೆ ಮತ್ತೊಂದು ಅರ್ಥವಿರಲೇಬೇಕು, ಆಲೋಚಿಸಿರಿ" ಎಂದನು. ಯಾದವ ಪ್ರಕಾಶನು ಉದ್ರೇಕದಲ್ಲಿ ಹೀಗೆ ಗರ್ಜಿಸಿದನು. "ಹಾಗೇನು ನನಗೆ ತಿಳಿದಿಲ್ಲ ಅದರ ಅರ್ಥವೇನೊ ನೀನು ತಿಳಿಸು. ಆಲೋಚಿಸಿರೆಂದು ನನ್ನನ್ನು ಎಚ್ಚರಿಸುವವ ನಂತಾಗಿದ್ದೀಯಾ? ಬಹಳ ದೂರ ಬಂದಿದೆಯೇ ನಿನ್ನ ನಡುವಳಿಕೆ!

ತದನಂತರ ರಾಮಾನುಜನು "ಕಪ್ಯಾಸಂ ಅಂದರೆ ಕಂ=ಜಲವನ್ನು, ಪೀಬತೀತಿ=ಕುಡಿಯುವವನು, ಕಪಿ= ಸೂರ್ಯನು. ಕಪ್ಯಾಸಂ= ಸೂರ್ಯ ಕಿರಣಗಳ ಪ್ರಭಾವದಿಂದ ವಿಕಸಿಸಿದ ಎಂದು ಭಾವನೆ. ಆದ್ದರಿಂದ ಪುರುಷೋತ್ತಮನ ನಯನಗಳು ಸೂರ್ಯಕಿರಣ ಸ್ಪರ್ಶದಿಂದ ವಿಕಸಿಸಿದ ಕಮಲದಂತೆ ಮನೋಹರವಾಗಿವೆ ಎಂದು ಭಾವನೆ" ಎಂದು ಹೇಳಿದನು. ರಾಮಾನುಜನ ಪ್ರತಿಭಾ ವಿಶೇಷಗಳನ್ನು ಶಿಷ್ಯರೆಲ್ಲರೂ ಪ್ರಶಂಸಿಸಿದರು. ಒಳಗೆ ಅಸೂಯಾಗ್ನಿಯಿಂದ ದಹಿಸಲ್ಪಡುತ್ತಿರುವ ಯಾದವ ಪ್ರಕಾಶನು ಬಾಹ್ಯವಾಗಿ ರಾಮಾನುಜನ ವಿವರಣೆಯನ್ನು ಅಂಗೀಕರಿಸಿದಂತೆ ನಟಿಸಿದನು. "ಅದ್ವೈತ ಸಿದ್ಧಾಂತದ ಪ್ರಕಾರ ನಿರಾಕಾರನಾದ ಪರಬ್ರಹ್ಮನು, ಸಾಕಾರನಾಗಿ ಹೇಳುತ್ತಾ, ಅಂಥಹ ಭಾವನೆಗೆ ಅನುಕೂಲವಾದ ವ್ಯಾಖ್ಯಾನ ಮಾಡುವ ರಾಮಾನುಜನು ಭಕ್ತಿಯೋಗ ವಿಶಿಷ್ಟತೆಯನ್ನು ಹೊರಗೆ ತಂದು, ಅದ್ವೈತ ಸಿದ್ಧಾಂತವನ್ನು ವಿರೋಧಿಸುತ್ತಿದ್ದಾನೆ" ಎಂದು ಯಾದವ ಪ್ರಕಾಶನು ಕೋಪಗೊಂಡನು.

"ನಾನು ಬೋಧಿಸಿರುವುದು ನಿನಗೆ ಸರಿಹೋಗದ ಪರಿಸ್ಥಿತಿಯಲ್ಲಿ ನಿನ್ನ ಶಿಷ್ಯತ್ವಕ್ಕೆ ಇಲ್ಲಿ ಅವಕಾಶವಿಲ್ಲ. ನೀನೇ ಆಚಾರ್ಯನೆಂದು ಭಾವಿಸುವಂತಿದ್ದೀಯಾ! ನೀನು ಇಲ್ಲಿಂದ ಹೋಗಿ, ಮತ್ತೊಂದು ವಿದ್ಯಾಪೀಠವನ್ನು ಸ್ಥಾಪಿಸಿ, ನಿನ್ನ ಇಷ್ಟಬಂದರೀತಿಯಲ್ಲಿ ವಕ್ರಮಾರ್ಗಗಳನ್ನು, ವಕ್ರಭಾಷ್ಯಗಳನ್ನು ಸೂಚಿಸು" ಎಂದು ಅಗ್ರಹ ಆವೇಶದಲ್ಲಿ ಯಾದವಪ್ರಕಾಶನು ರಾಮಾನುಜನನ್ನು ಎಚ್ಚರಿಸಿದನು. ಹಿರಿಯರನ್ನು ತಿರಸ್ಕರಿಸುವುದನ್ನು ತಿಳಿಯದ ರಾಮಾನುಜನು ಸಾನುಭೂತಿಯನ್ನು ತಿಳಿಯದ ಗುರುವಿನ ಮೇಲೆ ಎಂಥಹ ಅಸೂಯೆಪಡಲಿಲ್ಲ. ಮೌನವಾಗಿದ್ದು, ವಿನಯ ವಿಧೇಯತೆಗಳಿಂದ ಸಾಷ್ಟಾಂಗಬಿದ್ದು "ಕ್ಷಮಿಸೆಂದು" ಪ್ರಾರ್ಥಿಸಿದನು. ಅಸೂಯಾಪೂರಿತನಾದ, ಅಹಂಭಾವಯುತನಾದ ಯಾದವ ಪ್ರಕಾಶನು ಮಾಡುವುದೇನು ಇಲ್ಲದೆ, ಅಲ್ಲಿಗೆ ಸುಮ್ಮನಾದನು.

ಯಾದವಪ್ರಕಾಶನಿಗೆ ರಾಮಾನುಜನಮೇಲೆ ಒಳಗೊಳಗೆ ಅಸೂಯೆ ಪ್ರಜ್ವಲಿಸುತ್ತಿತ್ತು. ರಾಮಾನುಜನನ್ನು ತನ್ನ ಶಿಷ್ಯನನ್ನಾಗಿ ಭಾವಿಸಲಾರದೆ ಇದ್ದಾನೆ.

ಆಧ್ಯಾತ್ಮಿಕ ತತ್ತ್ವವಾದದಲ್ಲಿ ರಾಮಾನುಜನು ತನಗೆ ಪ್ರತ್ಯರ್ಥಿಯಾದ ತರ್ಕಶಾಸ್ತ್ರಿಯಾಗಿ ತಯಾರಾಗುತ್ತಾನೆಂದು ಯಾದವಪ್ರಕಾಶನು ಭಾವಿಸಿದನು. "ಅದ್ವೈತ ಸಿದ್ಧಾಂತವನ್ನು ಅನುಸರಿಸಿ, ಶಂಕರ ಭಗವತ್ಪಾದರ ಬೋಧನಾಮೃತ ವನ್ನು ಅನುಸರಿಸಿ, ಸರ್ವರು ವಿಶ್ವಾಸಿಸಿ, ತಿಳಿಸಿದ ರೀತಿ, ನಾನು ಪರಬ್ರಹ್ಮನು ನಿರಾಕಾರನಾಗಿ, ನಿರ್ಗುಣನಾಗಿ ಭಾವಿಸುತ್ತಿರುವೆ, ಈತನು ಪರಬ್ರಹ್ಮನನ್ನು ಸಾಕಾರನನ್ನಾಗಿ ಸಗುಣನನ್ನಾಗಿ ಭಾವಿಸಿ, ನೂತನ ಸಿದ್ಧಾಂತವನ್ನು ಪ್ರಾರಂಭಿಸುವ ನಂತೆ ಕಾಣಿಸುತ್ತಿದ್ದಾನೆ. ನಾನಿನ್ನು ಸುಮ್ಮನಿದ್ದರೆ, ಇವನಿಂದ ಅದ್ವೈತ ಸಿದ್ಧಾಂತಕ್ಕೆ ಆತಂಕ ಸಂಭವಿಸುತ್ತದೆ. ಆದಿಶಂಕರರಿಗು, ಅದ್ವೈತ ಸಿದ್ಧಾಂತಕ್ಕು ಅಪಚಾರ ನಡೆಯಲು ಬಿಡುವುದಿಲ್ಲ" ಎಂದು ತನ್ನಲ್ಲಿತಾನು ದುಃಖಿಸುತ್ತಿದ್ದನು ಯಾದವ ಪ್ರಕಾಶನು.

ಈ ಅಸೂಯೆ ಭಾವನೆಯಿಂದ ಯಾದವಪ್ರಕಾಶನಿಗೆ ಮನಶ್ಶಾಂತಿ ಇಲ್ಲ ಅರಿಷಡ್ವರ್ಗದಲ್ಲಿ ಮಾತ್ಸರ್ಯ ಬಹಳ ಕೆಟ್ಟದು. ಪ್ರಪಂಚದಲ್ಲಿ ಆಶಾಂತಿಗು, ಅನೈಕ್ಯಕ್ಕು, ದುಃಖಕ್ಕು, ವಿರೋಧಕ್ಕು ಈ ಮತ್ಸರವೇ ಮೂಲ ಕಾರಣ. ಮತ್ಸರಕ್ಕೆ ಸ್ವಾರ್ಥದಿಂದ ಕೂಡಿದ ಅಹಂ ಭಾವನೆಯೇ ಮೂಲಕಾರಣ. "ಸ್ವಾರ್ಥಭಾವನೆ" ಸರ್ವದುರ್ಗುಣಗಳಿಗು ಮೂಲವಾದಂತೆ "ನಿಸ್ವಾರ್ಥ" ಸಕಲ ಕ್ಷೇಮಕರ ಸ್ಥಿತಿಗೆ ಕಾರಣಭೂತ.

ಯಾದವಪ್ರಕಾಶನ ಮನಸ್ಸು ಒಂದು ಅಗ್ನಿಕುಂಡವಾಗಿ ಬದಲಾಗಿದೆ. ರಾಮಾನುಜನ ತುದಿಮುಟ್ಟಿಸುವುದು ಹೇಗೆ ಎನ್ನುವುದು ಆತನ ತಕ್ಷಣ ಸಮಸ್ಯೆಯಾಗಿದೆ! ರಾಮಾನುಜನ ಮರಣವೆಂಬ ಮಳೆಯಿಂದಲೇ ತನ್ನ ಅಸೂಯಾಗ್ನಿ ತಣ್ಣಗಾಗಬಲ್ಲದು! ಬೇರೆಮಾರ್ಗವಿನ್ನಿಲ್ಲ! ಅಸೂಯೆ ದಿನದಿನ ವೃದ್ಧಿಯಾಗುತ್ತಿತ್ತು. ವೇಗವು ಅಗಣಿತ (ಮಿತಿಯಿಲ್ಲ)! ಅದು ನಶಿಸುವುದಿಲ್ಲ. ಅದು ಇರುವವನು ನಶಿಸಿದರೆ ವೈರ ವಿಸ್ತರಣೆಗಿಂತ ಬಹಳ ವೇಗ ಇದೆ ಅಲ್ಲವೆ! ಅಸೂಯೆರೋಗ ಬೀಜ.

ಯಾದವಪ್ರಕಾಶನು ತನ್ನ ಶಿಷ್ಯರರಾದ ಕೆಲವರನ್ನು ರಹಸ್ಯವಾಗಿ ಕರೆದು "ಶಿಷ್ಯರೇ! ಒಂದುಮಾತು, ಕಡೆಯ ಮಾತು, ತಿರುಗಿಲ್ಲದ ಮಾತು ನೀವು ಕೇಳುವುದು, ಅದಕ್ಕೆ ಅನುಗುಣವಾಗಿ ಕರ್ತವ್ಯ ನಿರ್ವಹಣೆಗೆ ಸಂಸಿದ್ಧರಾಗುವುದು ಅಷ್ಟೇ. ಕೇಳಿರಿ ರಾಮಾನುಜನು ನಮ್ಮ ಶಿಷ್ಯಕೂಟದಲ್ಲಿರುವುದಕ್ಕೆ ಅನರ್ಹನು. ಈ ಪ್ರಪಂಚದಲ್ಲಿ ಆತನಿರುವುದಕ್ಕೆ ಆಧ್ಯಾತ್ಮಿಕ ವಿದ್ಯೆಗೆ ಅಪಚಾರ ನಡೆಯುವುದಕ್ಕೇ. ಆತನನ್ನು ತುದಿಮುಟ್ಟಿಸಬೇಕಾಗಿದೆ. ನಾವು ನಮ್ಮ ಮತ ಭಕ್ತಿಯನ್ನು ನಿರೂಪಿಸುವುದಕ್ಕೆ ಇದು ಅವಶ್ಯವಾಗಿ ನಡೆಯಬೇಕಾಗಿದ್ದೇ. ಆದರೆ ಅವನಿಗೆ ರಹಸ್ಯ ತಿಳಿಯಬಾರದು ಅಲ್ಲವೆ! ಜಾಗರೂಕತೆಯನ್ನು ವಹಿಸಿರಿ. ಅವನು ತಿಳುವಳಿಕೆಯುಳ್ಳವನೆಂದು ಹಲವುಬಾರಿ ನಾನು ಹೇಳುತ್ತಾ, ಆತನನ್ನು ಮಗನಾಗಿ ಆದರಿಸುತ್ತಾ ಬರುವುದರಿಂದ, ಆತನಿಗೆ ಅಹಂಕಾರ ಭಾವ ಬಲಿತಿದೆ. ನಾನು ಯಾವ ವ್ಯಾಖ್ಯವನ್ನು ಹೊರಗಿಟ್ಟರು, ಆತನು ಪ್ರತಿ ಪರ್ಯಾಯವು ಪ್ರತಿವ್ಯಾಖ್ಯ ಮಾಡುವುದಕ್ಕೆ ಪ್ರಯತ್ನ ಮಾಡುತ್ತಿದ್ದಾನೆ. ನೀವು ಸಹ ಕೇಳುತ್ತಲೇ ಇದ್ದೀರಾ ಅಲ್ಲವೆ! ಇವನನ್ನು ಹೀಗೆ ಬಿಟ್ಟರೆ ಆದಿಶಂಕರನ ಅದ್ವೈತ ಸಿದ್ಧಾಂತವನ್ನೇ ನಾಶಮಾಡುವುದಕ್ಕೆ ಪ್ರಯತ್ನಿಸಬಲ್ಲನು. ಅಂತಹ ಅಪಚಾರ ನಡೆಯದಂತೆ ನೋಡಬೇಕಾದ ಜವಾಬ್ಧಾರಿ ನನ್ನಮೇಲಿದೆ. ಸರಿ ಅಲ್ಲವೆ! ಇವನನ್ನು ತುದಿಮುಟ್ಟಿಸುವ ಮಾರ್ಗವನ್ನು ಅನ್ವೇಷಿಸಿರಿ, ಆಲೋಚಿಸಿರಿ" ಎಂದು ಯಾದವ ಪ್ರಕಾಶನು ತನ್ನ ಮನಸ್ಸಿನಲ್ಲಿನ ಮರ್ಮವನ್ನು ವ್ಯಕ್ತಪಡಿಸಿದನು.

ಮೂರ್ಖರಾದಂತಹ, ಮೂಢವಿಶ್ವಾಸರಾದಂತಹ, ಶಿಷ್ಯರೆಲ್ಲರೂ ಗುರುಗಳ ನಿರ್ಣಯವನ್ನು ಬಲಪಡಿಸಿದರು. ರಾಮಾನುಜನನ್ನು ಅಂತ್ಯಮಾಡುವುದಕ್ಕೆ ಒಬ್ಬೊಬ್ಬ ಶಿಷ್ಯನು ಮಾರ್ಗವನ್ನು ಸೂಚಿಸಿದ್ದಾನೆ. ಕೊನೆಯದಾಗಿ ಈ ಪದ್ಧತಿ ಏಕೀಭವಿಸಿ ಅಂಗೀಕರಿಸಲ್ಪಟ್ಟಿದೆ.

"ಉತ್ತರದೇಶದಲ್ಲಿ ವಾರಣಾಸಿ, ಪ್ರಯೋಗ ಮೊದಲಾದ ಪುಣ್ಯಕ್ಷೇತ್ರಗಳನ್ನು ದರ್ಶಿಸುವುದಕ್ಕೆ ಯಾತ್ರೆ ಸಾಗಿಸಬೇಕು. ಮಾರ್ಗಮಧ್ಯದಲ್ಲಿ ಕಾಡಿನ ಮಧ್ಯದಲ್ಲಿ ವಿಶ್ರಮಿಸುವ ರಾತ್ರಿಸಮಯದಲ್ಲಿ ರಹಸ್ಯವಾಗಿ ರಾಮಾನುಜನನ್ನು,

ತುದಿಮುಟ್ಟಿಸಿ, ಅವನ ಕಳೇಬರವನ್ನು ಅದೃಶ್ಯ ಮಾಡಬೇಕೆಂದು" ಇದು ಅವರ ಉಪಾಯ, ವಂಚನೆಯನ್ನು ಅತಿಗುಪ್ತವಾಗಿ ಇಡಲಾಗಿದೆ.

ಯಾದವಪ್ರಕಾಶನು ಶಿಷ್ಯವರ್ಗರೊಂದಿಗೆ ಉತ್ತರದೇಶಯಾತ್ರೆಗೆ ಹೋಗುವುದಕ್ಕೆ ನಿರ್ಣಯಿಸಿದಂತೆ ಪ್ರಕಟಿಸಲಾಯಿತು. ಸುಮುಹೂರ್ತವನ್ನು ನಿರ್ಣಯಿಸಿದ್ದಾರೆ. ಶಿಷ್ಯರೆಲ್ಲರು ಪರಮೋತ್ಸಾಹದಿಂದ ಪ್ರಯಾಣಕ್ಕೆ ಸಿದ್ಧ ವಾಗುತ್ತಿದ್ದರು. ಗಂಟುಮೂಟೆ ಸರಿಮಾಡಿಕೊಳ್ಳುತ್ತಿದ್ದರು. ಅವರ ದುರುದ್ದೇಶ ವನ್ನು ತಿಳಿಯದ ಅಮಾಯಕರು, ನಿರಪರಾಧಿಗಳಾದ ರಾಮಾನುಜನು, ಅವನ ಸೋದರನು ಗೋವಿಂದನು (ಚಿಕ್ಕಮ್ಮನ ಮಗ) ಪುಣ್ಯಕ್ಷೇತ್ರಗಳನ್ನು ದರ್ಶಿಸಿ, ಪುಣ್ಯತೀರ್ಥಗಳ ಸ್ನಾನಗಳು ಮಾಡಿ ಪವಿತ್ರರು ಆಗಬೇಕೆಂಬ ಉತ್ಸಾಹದಿಂದ ಪ್ರಯಾಣವಾದರು. ಗುರುಗಳವರ ಕ್ರೂರ ಆಲೋಚನೆ ಇವರಿಬ್ಬರಿಗೆ ತಿಳಿದಿಲ್ಲ. ಉಳಿದವರೆಲ್ಲರೂ ಆ ಕೂಟದ ಸದಸ್ಯರೇ.

ಗುರುಶಿಷ್ಯರ ಯಾತ್ರಾಮಂಡಳಿ ಕ್ರಮವಾಗಿ ನಡೆಯುತ್ತಾ, ಒಂದುದಿನ ಸಾಯಂಕಾಲಸಮಯಕ್ಕೆ ಪರ್ವತ ಪ್ರಾಂತದಲ್ಲಿನ ಒಂದು ದಟ್ಟವಾದ ಅರಣ್ಯವನ್ನು ಸೇರಿದರು. ಸಮೀಪದಲ್ಲೊಂದು ಕೊಳ (ಕೆರೆ) ಇರುವುದರಿಂದ, ಆ ರಾತ್ರಿಗೆ ಅಲ್ಲಿ ವಿಶ್ರಾಂತಿಸಬೇಕೆಂದು ನಿರ್ಣಯಿಸಿಕೊಂಡರು. ಕೊಳದಲ್ಲಿ ಎಲ್ಲರೂ ಸ್ನಾನಗಳನ್ನಾಚರಿಸಿ, ಸ್ವಲ್ಪಸಮಯ ವಿಶ್ರಾಂತಿಸಿದರು. ಇನ್ನು ಅಡಿಗೆಗಳು ಮಾಡಲು ಆರಂಭಿಸಿದರು. ಕತ್ತಲಾಗಿದೆ. ಶುಕ್ಲಪಕ್ಷವಾಗುವುದರಿಂದ ಚಂದ್ರನಕಿರುತೆರೆ ಬೆಳದಿಂಗಳಲ್ಲಿ ಪ್ರಕೃತಿ ತನ್ನ ಸೌಂದರ್ಯವನ್ನು ಪ್ರದರ್ಶಿಸುತ್ತಿತ್ತು. ರಾಮಾನುಜನು ಗೋವಿಂದನು ಕೈಯಲ್ಲಿ ಬಿಂದಿಗೆಗಳನ್ನು ಹಿಡಿದುಕೊಂಡು, ಕುಡಿಯುವ ನೀರಿಗಾಗಿ ಕೊಳಕ್ಕೆ ಹೋದರು. ಅಲ್ಲಿ ಗೋವಿಂದನು ರಾಮಾನುಜನೊಂದಿಗೆ, "ಅಣ್ಣಾ! ಒಂದು ಕ್ರೂರ ಕಾರ್ಯವನ್ನು ನಮ್ಮ ಗುರುಗಳೇ ಹಂಚಿಕೆ ಹಾಕಿರುವುದು ಗ್ರಹಿಸಿದ್ದೇನೆ. ನಿನ್ನನ್ನು ಕೊನೆಗಾಣಿಸಬೇಕೆಂದು ಅವರೆಲ್ಲರೂ ನಿರ್ಣಯಿಸಿ ಕೊಂಡಿದ್ದಾರೆ. ಅದು ನಾನು ಗ್ರಹಿಸಿದ್ದೇನೆ. ದಾರಿಯಲ್ಲಿ ಹಲವುಬಾರಿ ಪಿಸು ಮಾತುಗಳನ್ನು ಕೇಳಿದ್ದೇನೆ. ಆದರೆ ದೃಢವಾಗಿ ವಿಷಯವನ್ನು ತಿಳಿಯದೆಯೇ

ಹೇಳಿದ ಅಸತ್ಯ ಅಪರಾಧದ ಆರೋಪಣೆ ಪಾಪದಲ್ಲಿ ಬೀಳುತ್ತೇನೆಂದು ತಿಳಿದು, ನಿನ್ನೊಂದಿಗೆ ಏನನ್ನದೆ, ಇಲ್ಲಿಯವರೆಗೂ ಸುಮ್ಮನಿದ್ದೇನೆ. ಆದರೆ ನಾನು ರಹಸ್ಯ ಚರ್ಚಿಸುವವನಂತೆಯೇ ಪ್ರವರ್ತಿಸಿದೆನು. ಈದಿನ ರಾತ್ರಿ ನಿದ್ರಿಸುವ ಸಮಯದಲ್ಲಿ ನಿನ್ನನ್ನು ಮೃತ್ಯುಪಾಲು ಮಾಡಬೇಕೆಂದು ಅವರು ನಿರ್ಣಯಿಸಿಕೊಂಡಿದ್ದಾರೆ. ನೀನು ಹೇಗಾದರೂ ಈ ರಾತ್ರಿಗೆ ಅಂದರೇ ಅರ್ಧರಾತ್ರಿಗಿಂತ ಪೂರ್ವವೇ ಇಲ್ಲಿಂದ ರಹಸ್ಯವಾಗಿ ಓಡಿಹೋಗಬೇಕು" ಎಂದು ಗೋವಿಂದನು ರಹಸ್ಯವಾಗಿ ಹೇಳಿದನು.

ರಾಮಾನುಜನ ಮನಸ್ಸು ಬಗೆಬಗೆಯ ವಿಧಗಳಲ್ಲಿ ಹೋಗಿದೆ. ತಾನು ಮಾಡಿದ ಅಪಚಾರವೇನೊ ನನಗೆ ತೋಚಲಿಲ್ಲ. ಚಿತ್ತಶುದ್ಧಿಯಿಂದ ವಿನಯ ವಿಧೇಯತೆಗಳಿಂದ ನಡೆದುಕೊಳ್ಳುತ್ತಿರುವ ತನ್ನನ್ನು ಗುರುಗಳು ಏಕೆ ತುದಿಮುಟ್ಟಿಸಬೇಕೆಂದು ತಿಳಿದಿದ್ದಾರೊ ಅವನಿಗೆ ತಿಳಿಯುತ್ತಿಲ್ಲ. ಗುರುಗಳ ಆಗ್ರಹಕ್ಕೆ ತಾನು ಎಂತಹ ನೆಪವನ್ನು ಉಂಟುಮಾಡಲಿಲ್ಲವೆಂದು ತನ್ನ ಮನಸ್ಸಿನಲ್ಲಿ ನೆನೆದು. ಕಡೆಗೆ ಏನು ನಿರ್ಣಯಿಸಿಕೊಳ್ಳಲಾರದೆ ಹೋಗುತ್ತಿದ್ದಾನೆ. ಸರಿ, ದೀರ್ಘಾ ಲೋಚನೆಗೆ ಸಮಯವಿದಲ್ಲ. ಇತರರೊಂದಿಗೆ ಚರ್ಚಿಸುವುದಕ್ಕೆ ತನಗೆ ಆಪ್ತನು ಗೋವಿಂದನೊಬ್ಬನೇ. ಆ ರಾತ್ರಿ ಊಟದ ನಂತರ ಎಲ್ಲರೂ ನಿದ್ರಿಸುವವೇಳೆ ರಹಸ್ಯವಾಗಿ ಓಡಿಹೋಗುತ್ತೇನೆಂದು ಗೋವಿಂದನೊಂದಿಗೆ ರಾಮಾನುಜನೆಂದನು. "ಸೋದರಾ! ಭಗವಂತನ ಕಟಾಕ್ಷದಿಂದ ನೀನು ಸುರಕ್ಷಿತವಾಗಿ ಸ್ವಗೃಹವನ್ನು ಸೇರುವುದಕ್ಕೆ ನಾನೇಷ್ಟೋ ದೇವರನ್ನು ಪ್ರಾರ್ಥಿಸುತ್ತಿದ್ದೇನೆ. ನನ್ನನ್ನು ಅನುಮಾನಸ ದಂತಿರುವುದಕ್ಕೆ ನಾನು ಮೆಲ್ಲಗೆ ಏನೂ ತಿಳಿಯದವನಂತೆ ನಟಿಸುತ್ತೇನೆ. ಉತ್ತರದೇಶ ಯಾತ್ರೆಯಿಂದ ಪುನಃ ಕಾಂಚಿಪುರಿ ಸೇರಿದಾಗ ನಾವು ನಮ್ಮ ಸ್ವಗೃಹದಲ್ಲಿ ಬೇಟಿಯಾಗೋಣ!" ಎಂದು ಗೋವಿಂದನು ಬಾಧೆಪಟ್ಟನು. ರಾಮಾನುಜನ ಆಲಿಂಗನ ಮಾಡಿಕೊಂಡು, ಕಣ್ಣೀರಿಟ್ಟನು. ಗೋವಿಂದನಿಗೆ ಧೈರ್ಯ ಹೇಳಿ ರಾಮಾನುಜನು ಅಲ್ಲಿಗೆ ಜಾಗ್ರತೆಯಾಗಿ ನಡೆದುಕೊ ಎಂದು ಗೋವಿಂದನನ್ನು ಕೋರಿದನು.

ಅಷ್ಟೊತ್ತಿಗೆ ರಾತ್ರಿ ಏಳುಗಂಟೆಗಳಾಗಿದೆ, ರಾಮಾನುಜನು ಗೋವಿಂದನು ಬಿಂದಿಗೆಗಳಲ್ಲಿ ಕುಡಿಯುವುದಕ್ಕೆ ನೀರುತೆಗೆದುಕೊಂಡು ಹೋದರು. ಪ್ರಯಾಣದ ಆಯಾಸದಿಂದ ಬೇಗನೆ ವಿಶ್ರಾಂತಿ ತೆಗೆದುಕೊಳ್ಳಬೇಕೆಂಬ ಆಲೋಚನೆಯಿಂದ ಎಲ್ಲರೂ ಊಟಮಾಡಿ, ರಾತ್ರಿ ಒಂಭತ್ತು ಗಂಟೆಯೊಳಗೆ ನಿದ್ರಿಸಿದರು. ಅದು ಶುಕ್ಲಪಕ್ಷ ಸಪ್ತಮಿ ದಿನವಾದ್ದರಿಂದ ರಾತ್ರಿ ಹನ್ನೆರಡುಗಂಟೆ ನಂತರ ಬೆಳದಿಂಗಳು ಹೋಗಿ ಕತ್ತಲುಬಂದಿತು. ಗಾಢನಿದ್ರೆಯಲ್ಲಿರುವಾಗ ಅರ್ಧರಾತ್ರಿವೇಳೆ ರಾಮಾನುಜನನ್ನು ತುದಿಮುಟ್ಟಿಸಲು ಸಮಕಟ್ಟಿದ ದುಷ್ಟಶಿಷ್ಯಚತುಷ್ಟಯವು ಎದ್ದು ಸಂಸಿದ್ಧರಾಗುತ್ತಿದ್ದರು. ಚಂದ್ರನು ಮರೆಯಾದನು. ಕಗ್ಗತ್ತಲು ಎಲ್ಲಾದಿಕ್ಕುಗಳಲ್ಲಿ ತುಂಬಿಕೊಂಡಿದೆ. ಆಕಾಶ ಮೇಘಾವೃತವಾಗಿರುವುದರಿಂದ ಕಣ್ಣಿಗೆ ಕತ್ತಲಾಗಿದೆ. ರಾಮಾನುಜನು ನಿಧಾನಕ್ಕೆ ನಿದ್ರೆಯಿಂದೆದ್ದು, ಪಕ್ಕದಲ್ಲಿ ಮಲಗಿರುವ ಗೋವಿಂದನನ್ನು ಕರೆದು ಸನ್ನೆಮಾಡಿ, ಕತ್ತಲಲ್ಲಿಯೇ ದಕ್ಷಿಣದಿಕ್ಕಿಗೆ ಹೊರಟು ಹೋದನು. ಅಂಧಕಾರ ಸಮುದ್ರದಲ್ಲಿ ದಾರಿಕಾಣದೆ ಈಜುತ್ತಾ ಹೋಗುತ್ತಿದ್ದಾನೆ.

ಕೆಲವು ನಿಮುಷಗಳು ಕಳೆದ ನಂತರ ದುಷ್ಟಶಿಷ್ಯಚತುಷ್ಟಯವು ಮೆಲ್ಲಗೆ ರಾಮಾನುಜನು ಗೋವಿಂದನು ಮಲಗಿರುವ ಸ್ಥಳಕ್ಕೆ ಬಂದರು. ರಾಮಾನುಜನು ಅಲ್ಲಿಲ್ಲ. ಕತ್ತಲಲ್ಲಿ ಮತ್ತೊಂದುಕಡೆ ಮಲಗಿದ್ದಾನೇನೊಯೆಂದು ಹುಡುಕ ತೊಡಗಿದರು. ನಂತರ ನಿದ್ರಿಸುತ್ತಿರುವ ಎಲ್ಲರನ್ನು ಲೆಕ್ಕಿಸಿದರು. ಒಬ್ಬ ವ್ಯಕ್ತಿ ಕಡಿಮೆ, ಒಂದು ಘಂಟೆಕಾಲ ಹುಡುಕಿದರು. ರಾಮಾನುಜನು ಇಲ್ಲವೆಂದು ನಿರ್ಣಯವಾಗಿದೆ. ಗೋವಿಂದನನ್ನು ಹೊಡದೆಬ್ಬಿಸಿ "ರಾಮಾನುಜನೆಲ್ಲಿ" ಎಂದು ಪ್ರಶ್ನಿಸಿದರು. ನಿದ್ರೆಯಲ್ಲಿರುವವನಂತೆ ನಟಿಸಿದ ಗೋವಿಂದನು "ಅರ್ಧಗಂಟೆಗೆ ಪೂರ್ವದಲ್ಲಿ ಅಲ್ಪಾಚಮನಕ್ಕೆ ರಾಮಾನುಜನು ಎದ್ದು ಅತ್ತಾ ಹತ್ತುಅಡಿಗಳು ಹೋದಂತೆ ನೋಡಿದೆನು. ಮತ್ತೆ ಮರುಕ್ಷಣದಲ್ಲಿ ನಾನು ಕಣ್ಣುಮುಚ್ಚಿದೆನು. ಅಯ್ಯೊ! ರಾಮಾನುಜನಿಗೇನಾಗಿದೆಯೋ! ಎಂದು ಕೇಕೆಗಳು ಹಾಕುತ್ತಾ, ಗೋವಿಂದನು ಗಾಬರಿಯಿಂದ ಅಭಿನಯಿಸುತ್ತಾ, ತಿರುಗುತ್ತಿದ್ದನು. ಎಲ್ಲರೂ ನಿದ್ರೆಯಿಂದ ಎದ್ದರು, ಯಾದವ ಪ್ರಕಾಶನು ಸಹ. ಎಲ್ಲರೂ ಸೇರಿ ಸಮೀಪದಲ್ಲಿ

ಎಲ್ಲಾದಿಕ್ಕುಗಳಲ್ಲಿ ಸ್ವಲ್ಪ ದೂರ ಹುಡುಕಿದರು. ಗಾಢವಾದ ಅಂಧಕಾರವಿದ್ದಕಾರಣ ಹೆಚ್ಚು ದೂರ ನೋಡಲಾರದೆ ಹೋದರು. ಅಷ್ಟರೊಳಗೆ ಅಂದುಕೊಳ್ಳದೆ ಮಳೆ ಬಂದಿತು. ಎಲ್ಲರೂ ಗುಂಪುಗೂಡಿ, ಅವರು ವಿಶ್ರಾಂತಿಸಿದ ಸ್ಥಳವನ್ನು ಸೇರಿ, ಮಹಾವೃಕ್ಷಚ್ಛಾಯೆಯಲ್ಲಿ ಸೇರಿದರು. ಬೆಳಗಿನ ಜಾವ ಸಮೀಪಿಸುತ್ತಿದೆ. ಕೋಗಿಲೆ, ಭರದ್ವಾಜ, ಗಿಳಿ (ಶುಕ ಪಿಕ) ಪಕ್ಷ್ಯಾದಿಗಳ ಝೇಂಕಾರ ಹಾಡುತ್ತಿವೆ. ಮಳೆ ನಿಂತಿದೆ. "ರಾಮಾನುಜನು ಅಲ್ಪಾಚಮನಕ್ಕೆ ಅಕಡೆಹೋಗಿರಬಹುದು. ಯಾವುದೊ ಕ್ರೂರಮೃಗಕ್ಕೆ ಬಲಿಯಾಗಿರುತ್ತಾನೆ.! ಪಾಪ! ನಾವಿನ್ನೇನು ಮಾಡಬಲ್ಲೆವು! ವಿಧಿಬರಹ ಹಾಗಿದೆ! ಗೋವಿಂದಾ! ಸಮಧಾನವಾಗು! ಗಿಡದಲ್ಲಿ ಕಾದಿರುವ ಕಾಯಿಗಳೆಲ್ಲವೂ ಒಂದೇ ಸಮಯದಲ್ಲಿ ಹಣ್ಣಾಗಿಬೀಳುವುದಿಲ್ಲ ಅಲ್ಲವೆ! ಯಾವುದುಮುಂದೋ, ಯಾವುದುಹಿಂದೆಯೋ, ಯಾರಿಗೆ ಗೊತ್ತು? ಪಾಪ! ನಾವು ಪುನಃ ಕಾಂಚಿಪುರ ಸೇರಿದಾಗ ಏಕೈಕಪುತ್ರನ ವಿಯೋಗಕ್ಕೆ ರಾಮಾನುಜನ ತಾಯಿ ಹೇಗೆ ಚಿಂತಿಸುತ್ತಾಳೋ ಅಲ್ಲವೆ! ಆದರೆ ಇಂತಹ ಅಕಾಲಮರಣಕ್ಕೆ ಅದ್ವೈತಿಗಳಾದ ನಾವು ಚಿಂತಿಸಬಾರದು. ಜಗ ಮಿಥ್ಯ! ನಾವು ನಿರುತ್ಸಾಹಪಟ್ಟು ಹಿಂತಿರುಗಬಾರದು. ನಮ್ಮ ಯಾತ್ರೆ ಸಾಗಿಸೋಣ." ಎಂದು ಏನು ತಿಳಿಯದವನಂತೆ ಯಾದವಪ್ರಕಾಶನು ಶಿಷ್ಯರಿಗೆ ತತ್ತ್ವಭೋಧನೆ ಮಾಡಿ, ರಾಮಾನುಜನು ಪಂಚತ್ವಹೊಂದಿದನೆಂದು ಒಳೊಳಗೆ ಆನಂದಿಸುತ್ತಾ, ಆತ್ಮಕ್ಕೆ ಉಪಶಮನ ತಂದುಕೊಂಡನು. ನಂತರ, ಮುಂಜಾನೆ ಎಲ್ಲರೂ ಯಾತ್ರೆಗಾಗಿ ಉತ್ತರಾಭಿಮುಖಿಗಳಾಗಿ ಪ್ರಯಾಣಿಸಿದರು. ಎಲ್ಲರೂ ಆನಂದವಾಗಿ ಪ್ರಯಾಣಿಸುತ್ತಿದ್ದರು, ಗೋವಿಂದನೊಬ್ಬನೆ ಯಾವಾಗಲೂ ಅವನತವದನನಾಗಿ ಆಲೋಚಿಸುತ್ತಾ ಮೌನವಾಗಿ ನಡೆಯುತ್ತಿದ್ದನು. "ರಾಮಾನುಜನಿಗೇನು ತೊಂದರೆ ಸಂಭವಿಸುತ್ತದೋ ಮಾರ್ಗಮಧ್ಯದಲ್ಲಿ", ಎಂದು ಗೋವಿಂದನ ಭಯ. "ಹತ್ತಿರ ಬಂಧುವನ್ನು ಕಳೆದುಕೊಂಡ ಗೋವಿಂದನು ಕೆಲವು ದಿನಗಳು ದಿಗುಲಾಗಿರುವುದು ಸಹಜವೇ ಅಲ್ಲವೆ!", ಎಂದು ಎಲ್ಲರೂ ಭಾವಿಸಿದರು.

ಮರುದಿನ ಉದಯಕಾಲದಲ್ಲಿ ಗುರುಶಿಷ್ಯರು ದಾರಿಯಲ್ಲಿ ನಡೆಯುತ್ತಿರುವಾಗ, "ನಮ್ಮಲ್ಲಿ ಯಾರು ಮರಣಿಸಿದರು ಉಳಿದವರು ಜೀವಯಾತ್ರೆ ನಿಲ್ಲಿಸುವುದಿಲ್ಲ ಅಲ್ಲವೆ! ಜನ್ಮ ಹೇಗೆ ಸಹಜವೋ ಗಿಟ್ಟುವುದು ಇದ್ದಂತೆಯೇ. ಯಾರ ಕರ್ತವ್ಯವನ್ನು ಅವರು ಜೀವವಿರುವವರೆಗು ನೆರವೇರಿಸಬೇಕಾಗಿರುವುದೇ ನಾವು ಕಾಶಿಯಾತ್ರೆ ಕರ್ತವ್ಯದಲ್ಲಿದ್ದೇವೆ, ನಡೆಯಿರಿ". ಎಂದು ಕುಟಿಲ ಮನಸ್ಕನಾದ ಯಾದವ ಪ್ರಕಾಶನು ಶಿಷ್ಯರನ್ನು ಉತ್ಸಾಹಪಡಿಸುತ್ತಾ ಪ್ರಯಾಣಸಾಗಿಸಿದನು. ಒಳೊಳಗೆ ಪೀಡೆ ತೊಲಗಿತೆಂದು ಸಂತೋಷಪಡುತ್ತಿದ್ದನು. ಎಷ್ಟು ವಿದ್ಯೆಯನ್ನು ಕಲಿತರು ಅವಿವೇಕ ಸ್ವಭಾವವಿರುತ್ತದೆ. ಸ್ವಾರ್ಥರಾಹಿತ್ಯ ಭಾವವಿಲ್ಲದ ವಿದ್ಯೆ ಮತ್ಸರವನ್ನು, ಗರ್ವವನ್ನು ಬೆಳೆಸುತ್ತದೆ.

ಇನ್ನು ರಾಮಾನುಜನ ಪರಿಸ್ಥಿತಿಗಳನ್ನು ಗಮನಿಸೋಣ. ಪ್ರಾಣವನ್ನು ಹಿಡಿತದಲ್ಲಿ ಇಟ್ಟುಕೊಂಡು ಓಡಿಹೋದ ರಾಮಾನುಜನು ಅರ್ಧರಾತ್ರಿ ಕತ್ತಲಲ್ಲಿ ದಾರಿಗಳು ತಿಳಿಯದೆ, ಅರಣ್ಯದಲ್ಲಿ ಓಡುತ್ತಿದ್ದನು. ಭಯಪಟ್ಟವರಿಗೆ ಇನ್ನೇನು ತೋಚುವುದಿಲ್ಲ? ಓಡಿ, ಓಡಿ ಆಯಾಸಗೊಂಡನು. ಕಾಲುಗಳು ಗುಂಜುತ್ತಿದ್ದವು. ಶರೀರವು ಬೆವರಿನಿಂದ ನೆಂದಿದೆ. ಇನ್ನು ಒಂದು ಹೆಜ್ಜೆ ಇಡುವುದಕ್ಕು ಶಕ್ತಿಯಿಲ್ಲ. ನೆಲದ ಮೇಲೆ ಕುಸಿದುಬಿದ್ದನು. ಮರುಕ್ಷಣ ನೆಲದಮೇಲೆ ವಾಲಿದನು. ಗಾಢನಿದ್ರೆಹೋದನು. ಅದು ಸುದೀರ್ಘನಿದ್ರೆ. ಮರುದಿನ ಮಧ್ಯಾನದ ಹೊತ್ತಿಗೆ ನಿದ್ರೆಯಿಂದ ಎದ್ದನು. ಬಿಸಿಲು ತೀವ್ರವಾಗಿ ಕಾಯುತ್ತಿದೆ. ಭಯಭ್ರಾಂತನಾದ ರಾಮಾನುಜನು ಸ್ವಲ್ಪ ಆಶ್ಚರ್ಯವನ್ನು ಹೊಂದಿದನು. ತಾನು ಒಬ್ಬಂಟಿಗನಾದರೂ, ತಾನು ಕಷ್ಟಪಟ್ಟರೂ ಆತನು ಚಿಂತಿಸಲಿಲ್ಲ. ನಿರಪರಾಧಿಯಾದ ತನ್ನನ್ನು ಗುರುಗಳು ಏಕೆ ದ್ವೇಷಿಸಿದ್ದಾನೋ ಎಂದು ದುಃಖಿಸುತ್ತಿದ್ದನು. ವಿಷಯ ಪರಿಶೀಲನೆ ನಮಗೆ ಶಾಂತಿಯುತ ಆಲೋಚನೆಗಳಿಗೆ ಸಮಯವಿದು ಅಲ್ಲ. ರಾಮಾನುಜನು ಎದ್ದು, ಅಲ್ಲಿಯೇ ಸರೋವರದಲ್ಲಿ ಸ್ನಾನವಾಚರಿಸಿ ಸ್ವಲ್ಪ ಸ್ವಸ್ಥತೆ ಹೊಂದಿದನು. ರಾಮಾನುಜನು ಸಹಜವಾಗಿ ಆರೋಗ್ಯವಂತನು, ಬಲಶಾಲಿ, ಸುಂದರ ವಿಗ್ರಹನು ಆಜಾನುಬಾಹನು, ತೇಜೋರಾಶಿ. ಒಂದು ವೃಕ್ಷದಮೂಲೆಯಲ್ಲಿ ಸ್ವಲ್ಪಸಮಯ

ಕುಳಿತುಕೊಂಡು, ನಂತರ ಪ್ರಯಾಣಿಸಿದನು. ಕ್ಷುದ್ಬಾಧೆ (ಹಸಿವಿನಬಾಧೆ) ಉಂಟಾಯಿತು. ಆದರೆ ಅಲ್ಲಿ ಆಹಾರ ಎಲ್ಲಿಯದು? ಫಲವೃಕ್ಷಗಳಿವೆಯೇನೋ ನಿಧಾನವಾಗಿ ನೋಡೋಣ ಎಂದು ಆಲೋಚಿಸುತ್ತಾ ವೃಕ್ಷದಮೂಲದಲ್ಲಿ ಆಸೀನನಾಗಿ ಶ್ರೀಮನ್ನಾರಾಯಣನ ಅನಂತಶಕ್ತಿಯನ್ನು ನೆನೆಯುತ್ತಿದ್ದನು. ಈ ಒಳಗೆ ದಂಪತಿಗಳಾದ ಭಿಲ್ಲರು ಇಬ್ಬರು ಪ್ರಕ್ಕದಲ್ಲಿ ನಡೆಯುತ್ತಾ, ರಾಮಾನುಜನನ್ನು ವಿಕ್ಷಿಸಿ, ಸಮೀಪಿಸಿ, "ಅಯ್ಯಾ! ನೀನು ಏಕೆ ಒಬ್ಬಂಟಿಯಾಗಿ ಪ್ರಯಾಣ ಮಾಡುತ್ತಿದ್ದೀಯಾ? ಎಲ್ಲಿಗೆ ಹೋಗಬೇಕು?" ಎಂದು ಕೇಳಿದರು.

"ನನ್ನ ನಿವಾಸಸ್ಥಳ ಕಾಂಚೀಪುರ, ಬಹುದೂರದಲ್ಲಿ ಇದೆಯೆಂದು ಭಾವಿಸುತ್ತಿದ್ದೇನೆ", ಎಂದು ರಾಮಾನುಜನಂದನು.

"ನೀನು ಕಾಂಚಿಪುರಕ್ಕೆ ಪ್ರಯಾಣಿಸುತ್ತಿದ್ದೀಯಾ, ಬಾಲಕಾ!, ಉತ್ತರದೇಶ ಯಾತ್ರೆಯನ್ನು ಮುಗಿಸಿಕೊಂಡು ನಿಜಸ್ಥಾನಕ್ಕೆ ಮರಳಿದ್ದೀಯಾ. ಒಳ್ಳೆಯದು ನಮಗೆ ಸ್ವಲ್ಪ ಜೊತೆಯಾಗಿದ್ದೀಯಾ ಬಾಲಕ, ನಾವಿಬ್ಬರು ನೂತನ ದಂಪತಿಗಳು, ರಾಮೇಶ್ವರಯಾತ್ರೆಗಾಗಿ ಹೋಗುತ್ತಿದ್ದೇವೆ. ಕಂಚಿಪಟ್ಟಣದವರೆಗು ನಿನ್ನೊಂದಿಗೆ ಸೇರಿ ಬರುತ್ತೇವೆ!" ಎಂದು ಆ ಭಿಲ್ಲು ದಂಪತಿಗಳು ಹೇಳಿದರು. ದಾರಿಯಲ್ಲಿಜೊತೆ ದೊರೆತಿರುವುದಕ್ಕೆ ರಾಮಾನುಜನು ಪರಮಾನಂದಭರಿತನಾದನು. ಸರ್ವವನ್ನು ಅದೃಷ್ಟವಾದ ದೈವಶಕ್ತಿಯಿಂದ ಸಂಭವಿಸುತ್ತದೆಂದು ಭಾವಿಸುವ ರಾಮಾನುಜನು ಭಕ್ತಿ ಭಾವನೆಯಿಂದ ನಾರಾಯಣನನ್ನು ಮನದಲ್ಲಿ ಧ್ಯಾನಿಸಿಕೊಂಡನು. "ಬಾಲಕಾ! ಆಯಾಸಗೊಂಡಂತೆ ಕಾಣಿಸುತ್ತಿದ್ದೀಯಾ. ನೀನು ಮೈಮೇಲಿನ ಬಟ್ಟೆಗಳಲ್ಲಿಯೇ ಇದ್ದೀಯಾ. ನಿನ್ನಸಾಮಾಗ್ರಿ ದಾರಿಯಲ್ಲಿ ಹೋಗಿದೆಯೇನೊ! ಸರೀ, ಇಗೊ ನಮ್ಮಹತ್ತಿರ ಕೆಲವು ಫಲಗಳಿವೆ. ಅವುಗಳನ್ನು ಸೇವಿಸಿ ನೀರನ್ನು ಕುಡಿದು ದಾಹವನ್ನು ತೀರಿಸಿಕೊ, ಬಾಲಕಾ! ನಂತರ ಪ್ರಯಾಣಸಾಗಿಸೋಣ," ಎಂದು ಭಿಲ್ಲುದಂಪತಿಗಳು ಹೇಳಿದರು. ಅವರ ಚೀಲದಿಂದ ಕೆಲವು ಫಲಗಳನ್ನು ಕೊಟ್ಟಾಗ, ರಾಮಾನುಜನು ಅವುಗಳನ್ನು ಸೇವಿಸಿ ಕ್ಷುದ್ಬಾಧ (ಹಸಿವು) ತೀರಿಸಿಕೊಂಡನು.

ರಾಮಾನುಜನು ಭಿಲ್ಲುದಂಪತಿಗಳೊಂದಿಗೆ ಸೇರಿ ಪ್ರಯಾಣಿಸತೊಡಗಿದನು. ಅವರ ಸ್ನೇಹದಿಂದ, ಅವರ ದಿವ್ಯದೇಶ ಪರ್ಯಟನಾ ವಿಶೇಷಗಳು ಕೇಳುತ್ತಿರುವುದರಿಂದ, ರಾಮಾನುಜನಿಗೆ ಪ್ರಯಾಣವೆಷ್ಟೋ ಸುಖವಾಗಿ, ಆನಂದವಾಗಿ ಮುಂದುವರೆಯಿತು. ಒಂದುದಿನ ಸೂರ್ಯಾಸ್ತಮಯವಾದಾಗ, ಒಂದು ಸ್ಥಳದಲ್ಲಿ ಅವರು ಮೂವರು ವಿಶ್ರಮಿಸಿದರು. ಮರಾನೆದಿನ ಮುಂಜಾನೆಯೇ ಅವರು ನಿದ್ರೆಯಿಂದ ಎದ್ದು, ಸಮೀಪ ಪ್ರವಾಹದಲ್ಲಿ ಸ್ನಾನವನ್ನಾಚರಿಸಿ, ಹತ್ತಿರದಲ್ಲಿರುವ ಫಲಗಳನ್ನು ತಿಂದರು. ಸೂರ್ಯೋದಯವಾಗುತ್ತಿತ್ತು. ಭಿಲ್ಲು ದಂಪತಿಗಳು ರಾಮಾನುಜನ ಕಡೆನೋಡಿ, "ಬಾಲಕಾ ಅಲ್ಲಿ ನೋಡು, ನಾವು ಉನ್ನತ ಪ್ರದೇಶದಲ್ಲಿ ನಿಂತಿದ್ದೇವೆ ಅಲ್ಲವೆ! ನೋಡು, ಅಲ್ಲಿ ಕಾಣಿಸುವ ಕನಕ ಶಿಖರಗಳು ಶ್ರೀವರದರಾಜಸ್ವಾಮಿ ದೇವಾಲಯ ಗೋಪುರ ಶಿಖರಗಳೇ ಅಲ್ಲವೆ! ಇನ್ನು ನಿನ್ನ ಮಾರ್ಗವನ್ನು ಅನುಸರಿಸಿ ನಡೆಯಿರಿ, ಬೇಗನೆ ನಿನ್ನ ಸ್ವಸ್ಥಳವನ್ನು ಸೇರುತ್ತೀಯಾ. ನಾವು ಇಲ್ಲಿಂದ ನೇರವಾಗಿ ಪ್ರಯಾಣಿಸುತ್ತೇವೆ" ಅಂದರು. ರಾಮಾನುಜನು ದೂರದಿಂದ ದೇವಾಲಯ ಸುವರ್ಣ ಶಿಖರಗಳನ್ನು ದರ್ಶಿಸಿ, ಪರಮಾನಂದದಿಂದ ಸಾಷ್ಟಾಂಗಬಿದ್ದು ನಮಸ್ಕರಿಸಿದನು. "ಅಯ್ಯಾ ಅಮ್ಮಾ ನಾನಿಷ್ಟು ಬೇಗನೆ, ಇಷ್ಟು ಸುರಕ್ಷಿತವಾಗಿ ಸ್ವಸ್ಥಳವನ್ನು ಸೇರಿಕೊಳ್ಳುತ್ತೇನೆಂದು ಊಹಿಸಲಿಲ್ಲ. ಪ್ರೇಮಾತಿಶಯವನ್ನು ತೋರಿಸಿದ ನಿಮ್ಮ ಸಹವಾಸದಿಂದ ನೀವು ದಾರಿಯನ್ನು ನನಗೆ ತಿಳಿಸುತ್ತಾ ಅನೇಕ ದಿವ್ಯಕ್ಷೇತ್ರ ವಿಷಯಗಳು ನಾನು ಕೇಳುತ್ತಿರುವುದರಿಂದ ನಾನು ಪ್ರಯಾಣಕಾಲವನ್ನೇ ಮರೆತೆನು. ಪ್ರಯಾಣಶ್ರಮವನ್ನು ಹೊಂದಲಿಲ್ಲ. ನನ್ನ ಈ ಪರಮಾನಂದಭರಿತ ಪ್ರಯಾಣದಲ್ಲಿ ನಿಮ್ಮನ್ನು ನಾನು ಭೇಟಿಯಾಗಿರುವುದು ನಿನ್ನೆಯೇ ಎಂದು ನಾನು ಭ್ರಮೆಪಡುತ್ತಿದ್ದೇನೆ. ನಾನು ನಿಮಗೆ ಕೃತಜ್ಞನು. ನಿಮ್ಮಿಂದ ನನಗೆ ಪಿತೃಭಕ್ತಿ ಮಾತೃಭಕ್ತಿ ಉಂಟಾಗುತ್ತಿವೆ. ನೀವು ನನಗೆ ತೋರಿಸಿದ ಸಹಾಯ, ಸಹಾನುಭೂತಿ ಅನನ್ಯ. ನೀವು ನನ್ನೊಂದಿಗೆ ಬಂದು, ಕಂಚಿ ವರದರಾಜಸ್ವಾಮಿಯನ್ನು ದರ್ಶಿಸಿ, ನನ್ನ ಅತಿಥ್ಯವನ್ನು ಸ್ವೀಕರಿಸಿ, ನಂತರ ಯಾತ್ರೆ ಸಾಗಿಸಿರಿ", ಎಂದು ರಾಮಾನುಜನು ಕೋರಿದನು. ಅದಕ್ಕೆ ಭಿಲ್ಲನು,

"ಬಾಲಕಾ! ನಿನ್ನ ಆತಿಥ್ಯಕ್ಕೆ ಸಂತೋಷ. ಆದರೆ ಒಂದು ವಿಷಯವನ್ನು ಕೇಳು. ನಮ್ಮ ಧ್ಯೇಯವು ರಾಮೇಶ್ವರ ದರ್ಶನ. ಇದು ದೇಶದ ದಕ್ಷಿಣಾಗ್ರದಲ್ಲಿದೆ. ಮೊದಲು ರಾಮೇಶ್ವರವನ್ನು ದಶಿಸಿ, ಅಲ್ಲಿಂದ ಪುನಃ ಪ್ರಯಾಣ ಮಾಡಿದಾಗ ದಾರಿಯಲ್ಲಿನ ಪುಣ್ಯಕ್ಷೇತ್ರಗಳೆಲ್ಲವನ್ನು ದರ್ಶಿಸುತ್ತೇವೆ. ಅಲ್ಲಿಂದ ಕಾಂಚಿಪುರವನ್ನು ಸಹ ದರ್ಶಿಸುತ್ತೇವೆ" ಎಂದು ಹೇಳಿದನು. ವಿಷಯವನ್ನು ಗ್ರಹಿಸಿದ ರಾಮಾನುಜನು ಸರಿಯೆಂದು ಹೇಳಿ, ಕಾಂಚೀನಗರದಲ್ಲಿ ತನ್ನ ಗೃಹವಿರುವ ಸ್ಥಳವನ್ನು ಭಿಲ್ಲುರಿಗೆ ಗುರುತುಹೇಳಿ, ಅವರನ್ನು ಪುನಃ ಪ್ರಯಾಣದಲ್ಲಿ ತಪ್ಪದೆ ಬನ್ನಿರೆಂದು ಆಹ್ವಾನಿಸಿ, ಅವರಿಗೆ ಕೃತಜ್ಞತೆಯನ್ನು ಹೇಳಿ, ಕಾಂಚೀನಗರದ ಕಡೆ ಅತ್ಯಾನಂದದಿಂದ ನಡೆಯಸಾಗಿದನು. ವರದರಾಜಾಲಯ ಸ್ವರ್ಣ ಶಿಖರಗಳು ದಿಕ್ಸೂಚಿಯಂತೆ ಕಾಣಿಸಿ ದಾರಿಯನ್ನು ತೋರಿಸುತ್ತಿದ್ದವು.

ಮಧ್ಯದಲ್ಲಿ ಒಂದು ಕೊನೇರಿನಲ್ಲಿ ದಾಹತೀರಿಸಿಕೊಂಡು, ದಡದಲ್ಲಿರುವ ಕಟ್ಟೆಯ ಮೇಲೆ ಕುಳಿತುಕೊಂಡು ವಿಶ್ರಾಂತಿಯಾಗಿ ಆಲೋಚಿಸತೊಡಗಿದನು ರಾಮನುಜನು "ಇನ್ನು ಕೆಲವೇ ಗಂಟೆಗಳಲ್ಲಿ ನಿಜಗೃಹವನ್ನು ಸೇರುತ್ತೇನೆ. ನಡೆದ ವಿಷಯಗಳನ್ನು ರಹಸ್ಯವಾಗಿಡುತ್ತೇನೆ! ಹಾಗದಲ್ಲದಿದ್ದರೆ ಗುರುಗಳನ್ನು ದೋಷಿಯಾಗಿ ಎಲ್ಲರೂ ಭಾವಿಸುತ್ತಾರೆ ಅಲ್ಲವೆ! ಹಾಗಾದರೆ ನಾನು ಗುರುಗಳಿಗೆ ಅಪಚಾರವನ್ನು ಮಾಡಿದವನಾಗುತ್ತೇನೆ. ಅದು ಸರಿಯಲ್ಲ. ಅದು ಗುರುದ್ರೋಹವೇ ಆಗುತ್ತದೆ. ಅವರು ನನ್ನಮೇಲೆ ಅಸೂಯೆಹೊಂದುವುದು ನನ್ನ ದೌರ್ಭಾಗ್ಯವೆಂದೇ ಭಾವಿಸುವೆನು, ಅಲ್ಲಿಯವರಗೆ. ಆದ್ದರಿಂದ ಯಾತ್ರಾಕಾಲದ ಮಧ್ಯದಲ್ಲಿ ನಡೆದ ಘಟನೆಯನ್ನು ನಾನ್ಯಾರಿಗೂ ಹೇಳಬಾರದು", ಎಂದು ರಾಮಾನುಜನು ನಿರ್ಣಯಿಸಿಕೊಂಡನು.

ಮತ್ತು ಆಲೋಚನಾಪರನಾದ ರಾಮಾನುಜನು ಈ ವಿಧವಾಗಿ ವಿಚಾರಿಸತೊಡಗಿದನು. ಸೃಷ್ಠಿ ಸ್ಥಿತಿ ಲಯಗಳನ್ನು ತಿಳಿದುಕೊಂಡು, ಆ ಜ್ಞಾನಕ್ಕನುಗುಣವಾದ ನಡೆನುಡಿಯನ್ನು ನಿರ್ಣಯಿಸಿಕೊಳ್ಳುವುದೇ ಮತವೆನ್ನಲಾ ಗುತ್ತದೆ, ಇದು ಲೋಕ ಕಲ್ಯಾಣಕ್ಕಾಗಿ. ಆದಕಾರಣ ಯಾವ ಜಾತಿ ಪ್ರಜೆಗಳಾದರು

ಸೃಷ್ಟಿಸ್ಥಿತಿಲಯ ವಿಷಯಗಳನ್ನು ಭಿನ್ನವಾಗಿ ಭಾವಿಸಿದರೂ, ನಡವಳಿಕೆ ವಿಷಯವನ್ನು ಮಾತ್ರ ಸಮಹೋಲಿಕೆಯನ್ನು ತೋರಿಸಬೇಕಾಗಿದೆ, ಇಂತಹ ಪರಿಸ್ಥಿತಿಯಲ್ಲಿ ಮಹಾಪಂಡಿತನೆಂದು, ಶಾಸ್ತ್ರಕೋವಿದನೆಂದು, ಅದ್ವೈತ ಸಿದ್ಧಾಂತ ಪ್ರಚಾರಕನೆಂದು ಕೀರ್ತಿಪಡೆದ ಯಾದವ ಪ್ರಕಾಶನು, ಶಿಷ್ಯನಾದ ನನ್ನಮೇಲೆ ದ್ವೇಷವನ್ನು ಹೊಂದುವುದು ವಿಚಿತ್ರವಾಗಿ ಕಾಣಿಸುತ್ತಿದೆ. ಅದೂ ಅಲ್ಲದೆ ನನ್ನನ್ನು ತನ್ನ ಶಿಷ್ಯರಿಂದಲೇ ತುದಿಮುಟ್ಟಿಸಲು ಪ್ರಯತ್ನಿಸುವುದರಲ್ಲಿ ಅವರ ಪಾಂಡಿತ್ಯಕ್ಕು, ಪಾಂಡಿತ್ಯಸಾರವಾಗುವ ಜ್ಞಾನಕ್ಕು ಎಂತಹ ಸಂಬಂಧ ಕಾಣಿಸುತ್ತಿಲ್ಲ. "ವಿದ್ಯಾಶಾಸ್ತ್ರ ಪುರಾಣವೇದ ಪಠನಂ ಕಿಂ ತೇನ ಜ್ಞಾನಂ ವಿನಾ" ಎಂದು ದೊಡ್ಡವರು ಇದಕ್ಕೆ ಹೇಳಿದ್ದಾರೇನೊ! ಜ್ಞಾನಕ್ಕೆ ಸೂಚಕ ಕರುಣೆ, ದಯ, ಸಹಾನುಭೂತಿ ಮತವೆನ್ನುವುದು ಮಾನವರಲ್ಲಿ ಕರುಣೆ, ದಯ ಸಹಾನುಭೂತಿಗಳನ್ನು ಹುಟ್ಟಿಸಲಾರದೆ ಇರುವುದು ಮತ ಹೇಗಾಗುತ್ತದೆ? ನನ್ನ ಗುರು ಯಾದವ ಪ್ರಕಾಶನು ಇಂತಹ ಮತಾಂಧಕಾರದಲ್ಲಿರುವುದಕ್ಕೆ ನಾನೆಷ್ಟೋ ಚಿಂತಿಸುತ್ತಿದ್ದೇನೆ. "ಧೀಮಹಿ ಧಿಯೊ ಯೊನಃ ಪ್ರಚೋದಯಾತ್" ಎಂಬ ಗಾಯಿತ್ರಿ ಮಂತ್ರ ತಾತ್ಪರ್ಯಕ್ಕೆ ಆತನು ಎಷ್ಟು ದೂರದಲ್ಲಿದ್ದಾನೋ ಅಲ್ಲವೆ! (ಭಗವಚ್ಛಕ್ತಿ ನನ್ನ ಹೃದಯದಲ್ಲಿ ವಶಿಸಿ, ನನ್ನಿಂದ ಸತ್ಕಾರ್ಯಗಳು ಮಾಡಿಸಿರೆಂದು ಗಾಯಿತ್ರಿ ಮಂತ್ರಭಾವನೆ). ಅನುದಿನ ತಾನು ಮಾಡುವ ಗಾಯಿತ್ರಿ ಜಪವೇನಾದಂತೆ? ಎಷ್ಟು ದುರದೃಷ್ಟ! ಶಿಷ್ಯನಾದ ನನ್ನಕರ್ತವ್ಯ ಒಂದೇ. ಗುರುವರ್ಯನು ಎಂತಹವನಾದರು ಅವರ ತಪ್ಪುಗಳನ್ನೆಣಿಸುವುದು ನನ್ನ ಕರ್ತವ್ಯ ಅಲ್ಲ. ಅವರನ್ನು ಗೌರವಿಸುವುದೇ ನನ್ನ ವಿಧಿ. ಅವರನ್ನು ವಿಮರ್ಶಿಸುವ ಅಧಿಕಾರ ನನಗೆ ಇಲ್ಲ. ಅವರು ದಯಾ ಹೃದಯರಾಗಿ ಬದಲಾಗುವುದಕ್ಕೆ ದೈವಶಕ್ತಿಯನ್ನು ಪ್ರಾರ್ಥಿಸುತ್ತೇನೆ. ಇದೇ ನನ್ನ ನಿಜವಾದ ಗುರುದಕ್ಷಿಣೆ ಆಗಬಲ್ಲದು!", ಎಂದು ರಾಮಾನುಜನು ನಿರ್ಣಯಿಸಿಕೊಂಡನು. ಸರ್ವವೇದ ಸರ್ವಶಾಸ್ತ್ರ ಪಾರಂಗತನಾದ ಯಾದವ ಪ್ರಕಾಶನು ಸುಗುಣ ಸಂಪತ್ತಿ ಅಥವಾ ಸಂಪೂರ್ಣ ವ್ಯಕ್ತಿ ಆಗದಿರುವುದಕ್ಕೆ ರಾಮಾನುಜನು ಬಗೆಬಗೆಯ ವಿಧಗಳಲ್ಲಿ ಚಿಂತಿಸಿದನು.

ರಾಮಾನುಜನ ಮನಸ್ಸಿನಲ್ಲಿ ಉಂಟಾದ ಈ ಪರ್ಯಾಲೋಚನೆಭಾವನೆ ಆತನ ಕರುಣೆ ದಯಾಗುಣಗಳಿಗೆ ನಿದರ್ಶನ. ಬಾಲ್ಯದಿಂದಲೇ ವಿನಯ, ವಿಧೇಯತೆ ದಯೆ, ಸ್ವಾರ್ಥರಾಹಿತ್ಯ ಭಾವನೆ, ನಿಶಿತ (ಶಾಂತ) ಆಲೋಚನೆಯ ಕ್ರಮ ರಾಮಾನುಜನಲ್ಲಿ ಹೆಚ್ಚಾಗಿ ತುಂಬಿವೆ.

ರಾಮಾನುಜನು ನಡೆಯಸಾಗಿದನು. ಕಾಂಚಿಪುರ ಸಮೀಪದಲ್ಲಿ ಕಾಣಿಸುತ್ತಿತ್ತು. ಎಲ್ಲದಕ್ಕಿಂತ ಅತ್ಯುನ್ನತವಾದ ವರದರಾಜಸ್ವಾಮಿ ಆಲಯ ಶಿಖರಗಳು ಆತನನ್ನು ಆಕರ್ಷಿಸುತ್ತಿವೆ. ಬಿಲ್ಲಾಳು ತನ್ನ ಲಕ್ಷ್ಯವನ್ನೇ ನೋಡುತ್ತಾನೆ, ಇತರ ವಿಷಯಗಳನ್ನು ನೋಡುವುದಿಲ್ಲ ಅಲ್ಲವೆ!

ಮತ್ತೊಂದುಬಾರಿ ಭಿಲ್ಲು ದಂಪತಿಗಳನ್ನು ನೆನಪಿಸಿಕೊಂಡು, "ನಾನು ಅವರಿಗೆ ಕೃತಜ್ಞನು, ಅವರ ಸಹಾಯವಿಲ್ಲದೆ ನಾನು ಸುರಕ್ಷಿತವಾಗಿ ಅರಣ್ಯದಿಂದ ಹೊರಗೆ ಪ್ರಯಾಣಿಸುವವನೇ ಅಲ್ಲ. ನನ್ನನ್ನು ಮಾರ್ಗದಿಂದ ರಕ್ಷಿಸಿ, ಇಲ್ಲಿಯವರೆಗು ನಡೆಸಿದ ಈ ಭಿಲ್ಲುದಂಪತಿಗಳು ನನ್ನಪಾಲಿಗೆ ಪುರಾಣ ದಂಪತಿಗಳೇ! ಅವರನ್ನು ಲಕ್ಷ್ಮೀನಾರಾಯಣರಾಗಿಯೇ ಭಾವಿಸುತ್ತೇನೆ. ಸಹಾಯ ಮಾಡುವವರು, ದಯಾ, ಆದರಣೆ ಹೃದಯವಾದಂತವರು, ದೈವಾಂಶ ಸಂಭೂತರೇ. ಕೃಪೆ ದೈವಗುಣ. ಕೃಪೆಯಿರುವ ಮಾನವನು ದೈವಾಂಶ ಸಂಭೂತನೆ. ಮಾನವರಲ್ಲಿ ಎರಡು ವರ್ಗಗಳು, ಸಜ್ಜನರು, ದುರ್ಜನರೆಂದು, ಇರುವುದಕ್ಕೆ ಕಾರಣಗಳು ಕೃಪಾಸಹಿತತ್ವ, ಕೃಪಾರಹಿತತ್ವಗಳೇ", ಎಂದು ರಾಮಾನುಜನು ಮನಸ್ಸಿನಲ್ಲಿ ವಿತರ್ಕಿಸಿಕೊಂಡನು.

ಬೇಗನೆ ಸ್ವಗೃಹವನ್ನು ಸೇರಿ ತಾಯಿಪಾದಗಳನ್ನು ನಮಸ್ಕರಿಸಿದನು. ಗುರುವರ್ಯರ ಇತರ ಶಿಷ್ಯರೆಲ್ಲರನ್ನು ಬಿಟ್ಟು ರಾಮಾನುಜನು ಇಷ್ಟು ಶೀಘ್ರವಾಗಿ ಮನೆ ಸೇರುವುದಕ್ಕೆ ತಾಯಿ ಕಾಂತಿಮತಿ ಅಚ್ಚರಿಗೊಂಡಳು. ಆದರೆ, ರಾಮಾನುಜನೇನೋ ನಿಜದೇಹಾರೋಗ್ಯಕಾರಣ ತಿಳಿಸಿ, ಆ ವಿಷಯವನ್ನಲ್ಲಿಗೇ ಮರೆಸಿದನು.

ಆ ಕಾಲದಲ್ಲಿ ಕಾಂಚಿನಗರ ಚೋಳರ ರಾಜಧಾನಿ. ರಾಜಕುಮಾರಿಗೆ ಮಾನಸಿಕ ವ್ಯಾಧಿ ಸಂಭವಿಸಿದೆ. ಆಕೆಗೆ ಪಿಶಾಚಿ ಆವರಿಸಿದೆಯೆಂದು ಎಲ್ಲರೂ ಭಾವಿಸಿದರು. ಯಾದವ ಪ್ರಕಾಶನು ಆಧ್ಯಾತ್ಮಿಕ ವಿದ್ಯೆಯಲ್ಲಿಯೇ ಅಲ್ಲದೆ, ಮಂತ್ರ ಶಾಸ್ತ್ರದಲ್ಲಿಯೂ ನಿಪುಣನೆಂದು ಪ್ರಸಿದ್ಧಿ. ಪ್ರಭುವಿನ ಆಹ್ವಾನದ ಮೇರೆಗೆ ಯಾದವಪ್ರಕಾಶನು ಶಿಷ್ಯರೊಂದಿಗೆಗೂಡಿ ರಾಜಭವನವನ್ನು ಸೇರಿ, ರಾಜಕುಮಾರಿಯನ್ನು ಪರೀಕ್ಷಿಸಿ, ಪಿಶಾಚಿಯೆನ್ನುವುದನ್ನು ಬಿಡಿಸುವುದಕ್ಕೆ ಭೀಕರವಾಗಿ ಮಂತ್ರಗಳನ್ನು ಹೇಳತೊಡಗಿದನು. ಆತನ ಮಂತ್ರೋಚ್ಛಾರಣೆ ಮೇಘಗರ್ಜನೆಯಂತೆ ಪ್ರತಿಧ್ವನಿಸುತ್ತಿತ್ತು. ಪಿಶಾಚಿ ಪೀಡಿತಳಾದ ರಾಜಕುಮಾರಿ (ತನ್ನ ಮಾನಸಿಕ ವ್ಯಾಧಿ ಚಾಪಲ್ಯದಿಂದ) ತನ್ನ ಇಷ್ಟಬಂದಂತೆ ಬಗೆಬಗೆ ವಿಧಗಳಲ್ಲಿ ಮಾತನಾಡುತ್ತಿದ್ದಳು. ಮಾನಸಿಕ ವ್ಯಾಧಿಗೆ ಒಂದು ನಿರ್ಣಿತ ಗತಿಯೆನ್ನುವುದೇನಿದೆ? ಮಂತ್ರೋಚ್ಛಾರಣೆ ನಿರಂತರವಾಗಿ ಹೇಳುತ್ತಿರುವ ಯಾದವ ಪ್ರಕಾಶನೊಂದಿಗೆ ರಾಜಕುಮಾರಿ ಹೀಗೆ ಹೇಳಿದಳು "ಓಯ್! ನಿನ್ನ ಬಿಳಿಗಡ್ಡವನ್ನು ನಿನ್ನ ಮುಖತಿಲಕಗಳನ್ನು, ನಿನ್ನ ಮಂತ್ರಗರ್ಜನೆಗಳೆನ್ನುವವು ನನ್ನೇನು ಮಾಡಬಲ್ಲೆವು? ಪಂಡಿತನಾದರೂ ಮೂರ್ಖನು, ಕ್ರೂರನು ನೀನು. ಕಲುಷಿತಹೃಯನಾಗಿರುವ ನಿನ್ನ ಮಂತ್ರಗಳು ನನ್ನಮೇಲೆ ಕೆಲಸ ಮಾಡುತ್ತವಾ? ಏಕೆ ವೃಥಾಪ್ರಲಾಪ?".

ರಾಜಕುಮಾರಿ ಮಾತುಗಳು ಕೇಳಿದ ಸರ್ವರು ಆಶ್ಚರ್ಯಪಟ್ಟರು. ಯಾದವ ಪ್ರಕಾಶನು ಕೋಪಗೊಳ್ಳುವ ಅವಶ್ಯವಿಲ್ಲ! ಹೇಗಾದರೂ ಆಕೆಯ ಮಾತುಗಳನ್ನು ಹುಚ್ಚಿಯ ಮಾತುಗಳಾಗಿ ನಿರಾಕರಿಸಿದರು.

ಮತ್ತೆ ರಾಜಕುಮಾರಿ ಹೀಗೆಂದಳು, "ನನ್ನನ್ನು ಓಡಿಸುವುದು ನಿನ್ನಶಕ್ಯವಲ್ಲ! ಓ ಮಾಯಾವಾದಿ! ಮಾಯಾವಿ! ದ್ರೋಹಿ! ಅಗೋ, ನಿನ್ನ ಹಿಂದುಗಡೆ ಕೈಕಟ್ಟಿ ನಿಂತಿರುವ ಯುವಕ ಮಹಾತ್ಮನು, ಆತನನ್ನು ಈಕಡೆ ಬರಹೇಳು. ರಾಮಾನುಜನು ಅಲ್ಲವೇ ಆತನು. ನಿನಗೆ ಅದೃಷ್ಟ ಪೂರ್ವಕವಾಗಿ ಆತನು ಶಿಷ್ಯನಾಗಿ ಲಭಿಸಿದ್ದಾನೆ. ಆ ರಾಮಾನುಜನ, ಆ ಪರಿಶುದ್ಧಾತ್ಮನ, ಆ ದಯಾ ಸಮುದ್ರನ, ಆ ನಿಷ್ಕಳಂಕ ಹೃದಯನನ್ನು, ಅಪರಾಧಿಯನ್ನು ಸಹಿತ

ಕ್ಷಮಿಸಿ ಪ್ರೀತಿಸುವ ಆ ಉದಾರ ಸ್ವಭಾವದವನನ್ನು, ಆ ಗುರುಭಕ್ತಿ ಪರಾಯಣನನ್ನು ಬರಹೇಳು".

ರಾಮಾನುಜನು ಸಮೀಪಿಸುತ್ತಲೇ ರಾಜಕುಮಾರಿಯ ಬಾಯಿಂದ ಈ ಮಾತುಗಳು ಹೊರಬಂದವು. "ಮಾಯಾವಾದನೆಯನ್ನು ಅಂಗೀಕರಿಸದ ಓ ಮಹಾತ್ಮಾ! ನನ್ನನ್ನೇ ಅಲ್ಲ, ಅಸಂಖ್ಯಾತ ಮಾನವಾಭಿವೃದ್ಧಿಗೆ ಕಷ್ಟಬೀಳುವಂತಹ ಮಹಾತ್ಮನು ನೀನು! ನನ್ನನ್ನಾಶೀರ್ವದಿಸು!

ರಾಮಾನುಜನು ವಿಶಿಷ್ಟವಾದ ಭಕ್ತಿ ಇರುವವನು, ಸರ್ವಂ ವಿಷ್ಣುಮಯಮ್ ಎಂದು ಭಾವಿಸುವವನು. ಶ್ರೀವರದರಾಜಸ್ವಾಮಿಯನ್ನು ಮನದಲ್ಲಿ ಸ್ಮರಿಸಿ, ತ್ರಿಕರಣ ಶುದ್ಧಿಯಾಗಿ ರಾಜಕುಮಾರಿಯ ತಲೆಯನ್ನು ತನ್ನ ಹಸ್ತಕಮಲದ್ವಯದಿಂದ ಸ್ಪರ್ಶಿಸಿ ಆಶೀರ್ವದಿಸಿದನು. ತಕ್ಷಣ ರಾಜಕುಮಾರಿ ಸ್ವಸ್ಥತೆಯನ್ನು ಹೊಂದಿ, ಮೇಘ ತೊಲಗಿದ ಚಂದ್ರಬಿಂಬಮುಖಿಯಾಗಿ ಎದ್ದು, ಮಂದಹಾಸದಿಂದ ನಾಚಿಕೆಯಿಂದ ತಾಯಿತಂದೆಯರಾದ ರಾಜದಂಪತಿಗಳ ಹತ್ತಿರಸೇರಿದಳು. ಆ ಕ್ಷಣದಲ್ಲಿ ಯಾರೂ ರಾಜಕುಮಾರಿಯ ಮುಖದಲ್ಲಿ ಎಂತಹ ವ್ಯಾಧಿ ಲಕ್ಷಣವನ್ನಾಗಲಿ ಕಾಣದಾದರು. ಆಕೆ ಯೌವನದಿಂದ ಸಂಪೂರ್ಣಾರೋಗ್ಯ ಮುಖವರ್ಚಸ್ಸಿನಿಂದ ಪ್ರಕಾಶಿಸಿದಳು. ರಾಮಾನುಜನ ಆಶೀರ್ವಾದ ಬಲವದು!

ಒಂದು ದಿನ ಯಾದವಪ್ರಕಾಶರು ಛಾಂದೋಗ್ಯೋಪನಿಷತ್ತಿನಲ್ಲಿನ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಮಂತ್ರಕ್ಕೆ ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ "ವಿಶ್ವವೆಲ್ಲವೂ ಬ್ರಹ್ಮ" ಎಂದು ಬೋಧಿಸಿದನು. ಕಠೋಪನಿಷತ್ತನಲ್ಲಿನ "ನೇಹ ನಾ ನಾಸ್ತಿಕಿಂಚನ" ಎಂಬ ಮಂತ್ರವನ್ನು ವ್ಯಾಖ್ಯಾನಿಸಿದರು, "ಆತ್ಮವನ್ನು ಬ್ರಹ್ಮನನ್ನು ಒಂದೇ" ಎಂದು ತಿಳಿಸಿದನು.

ಈ ವಿವರಣೆಗಳನ್ನು ಕೇಳಿದ ರಾಮಾನುಜನು ಗುರುವಿನೊಂದಿಗೆ, "ಸ್ವಾಮಿ! ತಾವು ಹೇಳಿರುವ ವಿವರಣೆಗಳು ಸರಿಯಾದವು ಅಲ್ಲವೆಂದು ನನ್ನ

ಉದ್ದೇಶ. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಮಂತ್ರಕ್ಕೆ ಅರ್ಥ ಇದೆಂದು ತೋಚುತ್ತಿದೆ. "ವಿಶ್ವಕ್ಕು, ಬ್ರಹ್ಮಕ್ಕು ಸಂಬಂಧವಿದೆ. ಆದರೆ ಅವು ಎರಡು ಒಂದಲ್ಲ. ಯಾವುದರ ವಿಶಿಷ್ಟತೆ ಅದಕ್ಕಿದೆ. ನೀರಿನಲ್ಲಿ ಹುಟ್ಟಿದ ಮೀನು, ನೀರಿನಲ್ಲಿಯೇ ಬೆಳೆದು, ನೀರಿನಲ್ಲಿಯೇ ಜೀವಿಸಿ, ಕಡೆಗೆ ನೀರಿನಲ್ಲಿಯೇ ಮರಣಿಸಿ, ಕಡೆಗೆ ನೀರಿನಲ್ಲಿಯೇ ಕರಗಿಹೋಗುತ್ತದೆ. ಆದರೆ, ಮೀನು ನೀರು ಅಲ್ಲ. ಹಾಗೆಯೇ ವಿಶ್ವದಲ್ಲಿ ಪ್ರತಿ ಅಣುವು ಬ್ರಹ್ಮಪದಾರ್ಥದೊಂದಿಗೆ ಸಂಬಂಧ ಹೊಂದಿದ್ದರೂ, ವಿಶ್ವ ಬ್ರಹ್ಮ ಆಗುವುದಿಲ್ಲ" ಎಂದು ರಾಮಾನುಜನು ವಿವರಿಸಿದನು.

"ನೇಹನಾ ನಾಸ್ತಿಕಿಂಚನ" ಅಂದಾಗ ಸತ್ಯವಿಷಯ ಹೀಗೆ ಗೋಚರ ವಾಗುತ್ತಿದೆ. "ಆತ್ಮವು, ಬ್ರಹ್ಮವು ಒಂದೇ ಅಲ್ಲ. ಬ್ರಹ್ಮವು ಆತ್ಮಗಳೆಲ್ಲವನ್ನು ಆವರಿಸಿದೆ. ಮಣಿಗಳೊಂದಿಗೆ ಹೋಗುವ ದಾರದಂತೆ, ದಾರದಲ್ಲಿ ಪೋಣಿಸಲ್ಪಟ್ಟ ಮುತ್ತುಗಳು ಒಂದು ಹಾರವಾಗಿ ಕಾಣಿಸುತ್ತವೆ. ಆದರೆ ದಾರ ಮುತ್ಯವಲ್ಲ. ಮುತ್ಯಗಳೆಲ್ಲವೂ ಒಂದಲ್ಲ, ಸ್ವರೂಪವಾಗಿವೆ ಅಲ್ಲಿಯವರೆಗೆ. ಸಕಲ ಚರಾಚರಗಳ ಸೂತ್ರವಾಗಿ ವ್ಯಾಪಿಸಿರುವ ಬ್ರಹ್ಮ ವಿಶ್ವವಾಗುತ್ತಿದೆ. ಈ ಏಕತ್ವದಲ್ಲಿ ಅವನವನ ವೈವಿಧ್ಯವಿದೆ. ಅಷ್ಟೇ ಹೊರತು, ಬ್ರಹ್ಮ ವಿಶ್ವವಲ್ಲ" ಎಂದು ತೋಚುತ್ತಿದೆಯೆಂದು ರಾಮಾನುಜನು ಹೇಳಿದನು.

ರಾಮಾನುಜನೊಂದರ ಈ ವ್ಯಾಖ್ಯಗಳು ಕೇಳಿದ ಯಾದವಪ್ರಕಾಶನ ಶರೀರವು, ಭೂಮಿ ಕಂಪಿಸಿದಂತೆ, ನಡುಗಿದೆ. ತನ್ನ ಮನಸ್ಸು ಅಗ್ನಿಪರ್ವತದಂತೆ ದಹಿಸತೊಡಗಿತು. ಅಗ್ನಿಪರ್ವತದಲ್ಲಿನ ಉಷ್ಣದ್ರಾವಕದಂತೆ ತನ್ನ ಮುಖದ್ವಾರದಿಂದ ಅಸೂಯಾದ್ವೇಷಗಳು ಉರುಳಿ ಪ್ರವಹಿಸಿವೆ. ಅವನಿಗೆ ಇನ್ನು ಅವಧಿಗಳಿಲ್ಲ, "ರಾಮಾನುಜಾ! ನೀನು ಅದ್ವೈತ ಮತಶತ್ರುವು. ಪ್ರತಿ ಮಂತ್ರಕ್ಕು ಅದ್ವೈತ ಸಿದ್ಧಾಂತಕ್ಕೆ ವಿರುದ್ಧವಾದ ಭಾವನೆಗಳು ನಿನಗೆ ಬರುತ್ತಿವೆ. ನನ್ನೊಂದಿಗೆ ಎದುರುವಾದನೆಗಳಾಡುವ ನೀನು ನನಗೆ ಹೇಗೆ ಶಿಷ್ಯನಾಗಿ ಇರಬಲ್ಲೆ? ನೀನು ಇನ್ನು ಬಿಟ್ಟುಹೋಗಿ ಮತ್ತೊಂದು ವಿದ್ಯಾಪೀಠವನ್ನು ಸ್ಥಾಪಿಸಿಕೋ. ಒಂದು ಒರೆಯಲ್ಲಿ ಎರಡು ಖಡ್ಗಗಳು ಹೇಗೆ ನಿಲ್ಲುತ್ತವೆ? ಅದ್ವೈತ ಸಿದ್ಧಾಂತಕ್ಕೆ ಶತ್ರುವಾದ

ನೀನು ನನಗೂ, ನನ್ನ ಮಠಕ್ಕೂ, ನನ್ನ ಶಿಷ್ಯರಿಗೂ ಶತ್ರುವೇ. ಇನ್ನು ಹೊರಟುಹೋಗು. ನಿನಗಿಲ್ಲಿ ಸ್ಥಾನವಿಲ್ಲ. ಇನ್ನು ನನ್ನ ಹೊಸಿಲು ತುಳಿಯಬೇಡ", ಎಂದು ಯಾದವ ಪ್ರಕಾಶನು ವೃದ್ಧಸಿಂಹದಂತೆ ಗರ್ಜಿಸಿದನು.

ರಾಮಾನುಜನು ಸುಮ್ಮನೆ ಶಾಂತಿಯುತವಾಗಿ ಗುರುದೇವನ ಮಾತುಗಳು ಕೇಳಿ, ಎದುರು ಮಾತನಾಡುವುದಕ್ಕೆ ಬಾಯಿಲ್ಲದೆ, ಇನ್ನು ಮಾಡುವುದು ಮತ್ತೇನು ಇಲ್ಲದೆ, ತಾನು ದೂರವಾಗುವುದು ಇನ್ನು ಅನಿವಾರ್ಯವೆಂದು ಗ್ರಹಿಸಿ, ಗುರುವಿಗೆ ನಿಶ್ಶಬ್ಧವಾಗಿ ನಮಸ್ಕರಿಸಿ, ಅಣಗಿದವನಾಗಿ, ಬಹಿಷ್ಕರಣಾ ದುಃಖಭಾರವನ್ನು ಹೊರೆಯುತ್ತಾ, ಮಠವನ್ನು ಬಿಟ್ಟು ನಡೆದನು.

**ಪ್ರಶ್ನೆ :– ರಾಮಾನುಜನು ಪ್ರಾಣವನ್ನು ಕಾಪಾಡುಕೊಳ್ಳುವ ನಿಮಿತ್ತ ಅರಣ್ಯದಿಂದ ಓಡಿಹೋಗಿ ಮನೆ ಸೇರಿದ ನಂತರ, ತಮ್ಮ ಗುರು ಯಾದವ ಪ್ರಕಾಶನ ಉದ್ದೇಶ ತಿಳಿದ ನಂತರ ಯಾದವ ಪ್ರಕಾಶನು ಹೇಳುವ ಬೋಧನೆಯೆಲ್ಲವೂ ಅದ್ವೈತವೆಂದು ತಿಳಿದ ನಂತರ, ಯಾದವಪ್ರಕಾಶನನ್ನು ಪುನಃ ಗುರುವಾಗಿ ಒಪ್ಪಿಕೊಳ್ಳುತ್ತಾ ಆತನ ಹತ್ತಿರಕ್ಕೆ ರಾಮಾನುಜನು ಸೇರಬೇಕಾದ ಅವಶ್ಯಕತೆ ಏನು ಬಂದಿದೆ?**

**ಉತ್ತರ :–** ರಾಮಾನುಜನು ಚಿಕ್ಕ ವಯಸ್ಸಿನಲ್ಲಿಯೇ ಯಾದವಪ್ರಕಾಶನ ಹತ್ತಿರ ವಿದ್ಯಾಭ್ಯಾಸಕ್ಕೆ ಸೇರಿದ್ದನು. ಆಗ ಗುರುವಾಗಿರುವ ಯಾದವ ಪ್ರಕಾಶನು ರಾಮಾನುಜನನ್ನು ಸಾಯಿಸಬೇಕೆಂದುಕೊಂಡಾಗ, ಆತನು ಆ ಅಪಾಯದಿಂದ ತಪ್ಪಿಸಿಕೊಂಡು ಓಡಿಹೋದಾಗ ಆತನ ವಯಸ್ಸು ಸುಮಾರು 17 ಅಥವಾ 18 ವರ್ಷಗಳಿದ್ದವು. ಅಷ್ಟುಚಿಕ್ಕ ವಯಸ್ಸಿನಲ್ಲಿ ಯಾದವ ಪ್ರಕಾಶನ ಹತ್ತಿರ ಪುನಃ ಸೇರಬೇಕಾ ಬೇಡವಾ! ಎಂಬ ವಿಷಯವಾಗಿ ಯಾವ ನಿರ್ಣಯ ತೆಗೆದುಕೊಳ್ಳ ಲಾರದೆ ಹೋದನು. ರಾಮಾನುಜನಿಗೆ 16 ವರ್ಷದಲ್ಲಿಯೇ ತಂದೆ ಮರಣಿಸಿರುವುದರಿಂದ ಆತನಿಗೆ ಯಾರೂ ಸಲಹೆ ಹೇಳುವವರು ಇಲ್ಲದಿರುವುದರಿಂದ, ತನ್ನ ವಿದ್ಯಾಭ್ಯಾಸ ಸ್ವಲ್ಪಮಟ್ಟಿಗಾದರೂ ಅಗತ್ಯ ಎಂಬ ಉದ್ದೇಶ ಇರುವುದರಿಂದ, ಮೇಲಾಗಿ ತನ್ನ ಗುರು ಬ್ರಾಹ್ಮಣನೇ ಆಗಿರಬೇಕೆಂಬ

ಆಲೋಚನೆ ಇರುವುದರಿಂದ ತಪ್ಪದೇ ಯಾದವ ಪ್ರಕಾಶನ ಹತ್ತಿರವೇ ಸೇರಬೇಕೆಂದು ರಾಮಾನುಜನು ನಿರ್ಣಯಿಸಿಕೊಳ್ಳುವುದು ನಡೆದಿದೆ.

**ಪ್ರಶ್ನೆ :– ರಾಮಾನುಜನು ಪುನಃ ತನ್ನ ಹತ್ತಿರಕ್ಕೆ ಬಂದಾಗ ಗುರುವಾಗಿರುವ ಯಾದವ ಪ್ರಕಾಶನು ತನಗೇನು ತಿಳಿಯದಂತೆ ತನ್ನ ಶಿಷ್ಯರೊಳಗೆ ರಾಮಾನುಜನನ್ನು ಸೇರಿಸಿಕೊಳ್ಳುವುದು ನಡೆದಿದೆ. ಆದರೂ ಸ್ವಲ್ಪಕಾಲದಲ್ಲಿಯೇ ಗುರುಗಳು ಅಸೂಯೆಯಿಂದ ರಾಮಾನುಜನನ್ನು ತನ್ನ ಹತ್ತಿರದಿಂದ ದೂರವಾಗಿ ಕಳಿಸಿ ತನ್ನ ಶಿಷ್ಯನು ಅಲ್ಲವೆಂದು ಹೇಳುವುದು ನಡೆದಿದೆ. ಆಗ ಯಾದವ ಪ್ರಕಾಶನ ಹತ್ತಿರದಿಂದ ಬಹಿಷ್ಕರಿಸಲ್ಪಟ್ಟ ರಾಮಾನುಜನು ಕೆಲವು ವರ್ಷಗಳಿಗೆ ಇತರ ಗುರುಗಳ ಹತ್ತಿರ ವಿದ್ಯೆಯನ್ನು ಅಭ್ಯಾಸಿಸಿ, ಪರಿಪೂರ್ಣ ವಿದ್ಯಾವಂತನಾಗಿ ಅದ್ವೈತಕ್ಕೆ ವಿರುದ್ಧ ಭಾವನೆಯಿಂದಲೇ ಇದ್ದನು. ಅಂತಹ ಸಮಯದಲ್ಲಿ ಯಾದವ ಪ್ರಕಾಶನು ಒಂದುಸಮಯದಲ್ಲಿ ತನ್ನ ಶಿಷ್ಯನಾಗಿದ್ದ ರಾಮಾನುಜನ ಹತ್ತಿರಕ್ಕೆಹೋಗಿ ರಾಮಾನುಜನನ್ನು ಗುರುವಾಗಿ ಮಾಡಿಕೊಂಡು ತಾನು ಶಿಷ್ಯನಾಗಬೇಕಾದ ಅವಶ್ಯಕತೆ ಏನು ಬಂದಿದೆ?**

**ಉತ್ತರ :–** ವೃದ್ಧ ವಯಸ್ಸಿನಲ್ಲಿ ಯಾದವ ಪ್ರಕಾಶನು ರಾಮಾನುಜನ ಕೀರ್ತಿಯನ್ನು, ಸಂಪದವನ್ನು ಕುರಿತು ಕೇಳಿ ಆಶ್ಚರ್ಯಪಟ್ಟನು. ರಾಮಾನುಜನ ವಿಶಿಷ್ಟ ಬೋಧನಾಮೃತವನ್ನು ಕುರಿತು ಸಹ ಕೇಳುತ್ತಿದ್ದನು. ಯಾದವ ಪ್ರಕಾಶನಿಗೆ ತನ್ನ ಅದ್ವೈತ ತತ್ತ್ವ ಭಾವನೆ ಶಾಂತಿಯನ್ನು, ಆನಂದವನ್ನು ಕೊಡಲಾರದೆ ಹೋಗಿದೆ. ಜ್ಞಾನ, ಧ್ಯಾನಗಳಿಗಿಂತ ಕರ್ಮಫಲತ್ಯಾಗವೇ ಶ್ರೇಷ್ಟವಾದುದೆಂದು ಪ್ರವಚಿಸುತ್ತಿರುವ ರಾಮಾನುಜನ ಮಾತುಗಳು ಈಗ ಯಾದವಪ್ರಕಾಶನಿಗೆ ಇಷ್ಟವಾಗಿವೆ. ತನ್ನ ಅದ್ವೈತ ಭಾವದಿಂದ ತಾನು ಒಂಟಿಯಾದಂತೆ ಭಾವಿಸಿದನು. ವೈಷ್ಣವ ಶಕ್ತಿ ತನ್ನಲ್ಲಿ ಇದ್ದರೂ, ಅದು ವಿಶಿಷ್ಟವಾಗಿದೆಯೆಂದು ಭಾವಿಸಿದ ಭಕ್ತನೇ ವಿಷ್ಣು ಸಮನ್ವಯ ಭಾವನೆಯಿಂದ ವಿಶ್ವಮಾನವ ಸೌಭಾತ್ರ (ಸೋದರಭಾವ) ದಿಂದ ಆನಂದವನ್ನು ಹೊಂದಬಲ್ಲನು. ಈ ವಿಷಯದ ಸತ್ಯವನ್ನು ಗ್ರಹಿಸಿದ ಯಾದವ ಪ್ರಕಾಶನು ರಾಮಾನುಜನಿಗೆ ಶರಣಾಗತನಾಗುವುದಕ್ಕೆ

ನಿಶ್ಚಯಿಸಿಕೊಂಡನು. ಆದರೆ ಒಂದು ವಿಧವಾದ ಸಂದೇಹ, ನಾಚಿಕೆಯಿಂದ ಹಿಂಜರಿಯುತ್ತಿದ್ದನು.

ಹೀಗೆ ಮನೋವ್ಯಾಕುಲದಿಂದ ಒಂದುದಿನ ಸಾಯಂಕಾಲ ಬೀದಿಯಲ್ಲಿ ನಡೆಯುತ್ತಾ ತಿರುಕಚ್ಚಿನಂಬಿ ಎಂಬ ಗುಡಿಪೂಜಾರಿಯನ್ನು ಕಂಡನು. ತನ್ನ ಆಧ್ಯಾತ್ಮಿಕ ದೀನಾವಸ್ಥೆಯನ್ನು ತಿರುಕಚ್ಚಿನಂಬಿಗೆ ಹೀಗೆ ತಿಳಿಸಿದನು. "ನನ್ನ ಮನಸ್ಸಿನಲ್ಲಿ ಒಂದು ಅಭಿಪ್ರಾಯವಿದೆ. ನೀವು ಈದಿನ ರಾತ್ರಿ ವರದರಾಜ ಸ್ವಾಮಿಯನ್ನು ಸೇವಿಸುವಾಗ ನನ್ನ ಅಭಿಪ್ರಾಯವನ್ನು ಕುರಿತು ಸ್ವಾಮಿಯವರು ಏನು ತಿಳಿಯುತ್ತಿದ್ದಾನೋ ಸ್ವಾಮಿಯನ್ನು ಕೇಳಿ ತಿಳಿದುಕೊಂಡು ನನಗೆ ತಿಳಿಸು? ಆ ಮಾತುಗಳನ್ನು ಕೇಳಿದ ತಿರುಕಚ್ಚಿನಂಬಿ ಆದಿನ ರಾತ್ರಿ ವರದರಾಜಸ್ವಾಮಿ ಯೊಂದಿಗೆ "ಸ್ವಾಮಿ! ಯಾದವ ಪ್ರಕಾಶನ ಮನಸ್ಸಿನಲ್ಲಿ ಒಂದು ಅಭಿಪ್ರಾಯ ಇದೆಯಂತೆ. ಅದನ್ನು ಕುರಿತು ನೀವು ಏನು ಅಂದುಕೊಳ್ಳುತ್ತಿದ್ದೀರೋ ನಿಮ್ಮ ನಿರ್ಣಯವೇನೋ? ಕೇಳಿ ತಿಳಿದುಕೊಂಡು ಆತನಿಗೆ ತಿಳಿಸಿರೆಂದನು, ನಿನ್ನ ಆಜ್ಞೆ ಏನೊ ತಿಳಿಸಿರಿ" ಎಂದು ಅಂದನು. ಆಗ ಸ್ವಾಮಿ ಹೀಗೆ ಹೇಳಿದನು. "ಯಾದವಪ್ರಕಾಶನು ರಾಮಾನುಜನನ್ನು ಆಶ್ರಯಿಸಲು ಆಲೋಚಿಸಿದರೂ ಮನಸ್ಸಿನಲ್ಲಿ ಇನ್ನೂ ಸಂಶಯಪಡುತ್ತಿದ್ದಾನೆ. ಇನ್ನು ಯಾವ ಸಂಶಯವಿಲ್ಲದೆ ರಾಮಾನುಜನನ್ನು ಆಶ್ರಯಿಸೆಂದು ನನ್ನ ಮಾತಾಗಿ ಹೇಳು" ಎಂದು ಉತ್ತರ ಕೊಟ್ಟನು. ತಿರುಕಚ್ಚಿನಂಬಿ ಆ ಮಾತನ್ನು ಮರುದಿನ ಯಾದವಪ್ರಕಾಶನಿಗೆ ತಿಳಿಸಿದನು. ಆಗ ಯಾದವ ಪ್ರಕಾಶನು ಒಂದು ಸಮಯದಲ್ಲಿ ರಾಮಾನುಜನಿಗೆ ನಾನು ಗುರುವಾಗಿದ್ದೇನೆಂಬ ಭಾವನೆಯನ್ನು ಬಿಟ್ಟು ಶಿಷ್ಯನಾದ ರಾಮಾನುಜನನ್ನು ಗುರುವಾಗಿ ಸ್ವೀಕರಿಸಿದನು. ಆಂದಿನಿಂದ ಯಾದವ ಪ್ರಕಾಶನು "ಗೋವಿಂದ ದಾಸು" ಎಂಬ ಹೆಸರಿನಿಂದ ಕರೆಯಲ್ಪಟ್ಟನು.

ಈ ವಿಧವಾಗಿ ರಾಮಾನುಜರವರು ತನ್ನ ವಿಶಿಷ್ಟಾದ್ವೈತ ಸಿದ್ಧಾಂತದಿಂದ ಅದ್ವೈತ ಸಿದ್ಧಾಂತವನ್ನು ದಾಟಿಹೋಗುತ್ತಾ ಅದ್ವೈತಕ್ಕೆ ಬೆಲೆ ಇಲ್ಲದಂತೆ ಮಾಡುತ್ತಿದ್ದನು. ಆ ಕಾಲದಲ್ಲಿ ಬಹಳಜನ ಅದ್ವೈತರು ತಮ್ಮ ಸಿದ್ಧಾಂತವನ್ನು

ಬಿಟ್ಟು ವಿಶಿಷ್ಟಾದ್ವೈತದಲ್ಲಿ ಸೇರಿಹೋಗುವುದು ಅದ್ವೈತರಿಗೆ ದೊಡ್ಡಕಂಟಕವಾಗಿ ಬದಲಾಗಿದೆ. ಅದರಿಂದ ರಾಮಾನುಜನನ್ನು ಹತ್ಯೆ ಮಾಡಬೇಕೆಂದು ಬಹಳಜನ ಅದ್ವೈತರು ಬಹಳಸಲ ಪ್ರಯತ್ನ ಮಾಡಿದ್ದಾರೆ. 18 ವರ್ಷಗಳ ವಯಸ್ಸಿನಲ್ಲಿಯೇ ತನ್ನ ಗುರುವೇ ಮಾಡಿದ ಹತ್ಯಾಪ್ರಯತ್ನದಿಂದ ತಪ್ಪಿಸಿಕೊಂಡ ರಾಮಾನುಜಾ ಚಾರ್ಯರವರು ಜೀವನವೆಲ್ಲಾ ಅಂತಹ ಪ್ರಯತ್ನಗಳಿಂದ ಹೊರಬೀಳುತ್ತಾ ಬಂದಿದ್ದಾನೆ. ಆತನು 120 ವರ್ಷಗಳು ಬದುಕಿದರೂ ಆಗಾಗ ಅದ್ವೈತರ ದೃಷ್ಟಿಯಲ್ಲಿ ಅಜ್ಞಾತವಾಗಿ ಬದುಕಬೇಕಾಗಿ ಬಂದಿದೆ. ಹತ್ಯಾ ಪ್ರಯತ್ನಗಳಿಂದ ತಪ್ಪಿಸಿಕೊಳ್ಳುವ ಅನುಭವ ರಾಮಾನುಜನಿಗೆ ಎಲ್ಲರಿಗಿಂತ ಹೆಚ್ಚಾಗಿ ಇದೆಯೆಂದು ಹೇಳಬಹುದು. ಆದರೂ ಒಂದುಬಾರಿ ಶರೀರವನ್ನು ಧರಿಸಿ ಹುಟ್ಟಿದ ನಂತರ ತಪ್ಪದೆ ಯಾವಾಗಲೋ ಒಂದುಸಲ ಶರೀರವನ್ನು ಬಿಡುವುದು ತಪ್ಪುವುದಿಲ್ಲ, ಅಂದರೇ ಮರಣಿಸುವುದು ತಪ್ಪುವುದಿಲ್ಲ. ಅದೇ ವಿಧಾನವನ್ನು ಅನುಸರಿಸುತ್ತಾ ಕ್ರಿ॥ಶ॥ 1137ನೇ ವರ್ಷ ಮಾಘಮಾಸ ಶುದ್ಧ ದಶಮಿದಿನ ಶರೀರವನ್ನು ಬಿಟ್ಟನು. ಸೂರ್ಯನು ಅಸ್ತಮಿಸಿದ ನಂತರ ರಾಮಾನುಜನು ಮರಣಿಸಿದ್ದಾನೆ. ಶಂಕರಾಚಾರ್ಯರವರು ಸಹ ಅರ್ಧರಾತ್ರಿ ದಾಟಿದ ನಂತರ ಮರಣಿಸುವುದು ನಡೆದಿದೆ.

ಹಿಂದೂಮತದಲ್ಲಿ ಶಂಕರಾಚಾರ್ಯರವರು ಅದ್ವೈತವನ್ನು, ರಾಮಾನುಜಾ ಚಾರ್ಯರವರು ವಿಶಿಷ್ಟಾದ್ವೈತವನ್ನು ಸ್ಥಾಪಿಸಿ ಹೋಗಿದ್ದಾರೆ. ಶಂಕರಾಚಾರ್ಯರು ಬಂದುಹೋದ ನಂತರ ಸುಮಾರು 1500 ವರ್ಷಗಳು ಅದ್ವೈತಕ್ಕೆ ಎದುರಿಲ್ಲದಂತೆ ನಡೆದುಹೋಗಿದೆ. ಅಷ್ಟೇ ಅಲ್ಲದೆ ಆರ್ಯರು ಮೊದಲಿನಿಂದ ತಿಳುವಳಿಕೆಯುಳ್ಳವರು ಆಗಿರುವುದರಿಂದ, ಅದ್ವೈತ ರಾಮಾನುಜರು ಹುಟ್ಟುವುದಕ್ಕಿಂತ ಪೂರ್ವವೇ ಭಾರತದೇಶದಲ್ಲಿ ಬಲವಾಗಿ ಹರಡಿಹೋಗಿದೆ. ಆದುದರಿಂದ ಹೊಸದಾಗಿ ಬಂದಿರುವ ರಾಮಾನುಜಾ ಚಾರ್ಯರವರ ಅದ್ವೈತದಿಂದ 18 ವರ್ಷಗಳ ವಯಸ್ಸಿನಲ್ಲಿಯೇ ಹತ್ಯಾ ಪ್ರಯತ್ನವನ್ನು ಎದುರಿಸಬೇಕಾಗಿ ಬಂದಿದೆ. ತಮ್ಮ ಅದ್ವೈತಕ್ಕೆ ಎದುರು ತಿರುಗಿದ

ಪ್ರತಿಯೊಬ್ಬರನ್ನು ಸಾಯಿಸಬೇಕೆಂಬ ನಿರ್ಣಯ, ಅಥವಾ ದಾಳಿಮಾಡಬೇಕೆಂಬ ನಿರ್ಣಯವನ್ನು ಅದ್ವೈತರು ಮೊದಲಿನಿಂದ ಹೊಂದಿದ್ದಾರೆ. ಆದುದರಿಂದ ರಾಮಾನುಜಾಚಾರ್ಯರು ತನ್ನ ಜೀವನವೆಲ್ಲಾ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿದೆ. ಎಷ್ಟೋ ಬಲವಾಗಿ ಮೊದಲಿನಿಂದಿರುವ ಅದ್ವೈತ ಈ ದಿನ ಸಹ ಹಿಂದೂಮತದಲ್ಲಿ ಹೆಚ್ಚಾಗಿ ಅದ್ವೈತವೇ ಇದೆಯೆಂದು ಹೇಳಬಹುದು. ಈ ದಿನ ವಿಶಿಷ್ಟಾದ್ವೈತ ಭಾರತದೇಶದಲ್ಲಿದ್ದರೂ ಅದ್ವೈತ ಬಲದೊಂದಿಗೆ ಹೋಲಿಸಿಕೊಂಡರೆ ಬಹಳ ಕಡಿಮೆಯಾಗಿ ಇದೆಯೆಂದು ಹೇಳಬಹುದು. ಇಂದಿನವರೆಗು ಎಲ್ಲರಿಗೂ ತಿಳಿದ ಸಿದ್ಧಾಂತಕರ್ತರು ಮೂವರು.

ರಾಮಾನುಜರು ಮರಣಿಸಿದ ನಂತರ ಸುಮಾರು ನೂರುವರ್ಷಗಳಿಗೆ ದಕ್ಷಿಣ ದೇಶವಾದ ಕರ್ನಾಟಕ ರಾಷ್ಟ್ರದಲ್ಲಿ ಮಧ್ವಾಚಾರ್ಯರು ಬರುವುದು ನಡೆದಿದೆ. ಕರ್ನಾಟಕದಲ್ಲಿನ ಉಡುಪಿ ಹತ್ತಿರ 'ಪಜಕ' ಎಂಬ ಗ್ರಾಮದಲ್ಲಿ ಬ್ರಾಹ್ಮಣ ಕುಟುಂಬದಲ್ಲಿ ಮಧ್ವಾಚಾರ್ಯರು ನಾರಾಯಣ ಭಟ್ಟು, ವೇದವತಿ ಎಂಬ ದಂಪತಿಗಳಿಗೆ ಹುಟ್ಟಿದ್ದಾರೆ. ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ ಬೋಧಿಸಿದ್ದಾರೆ. ದ್ವೈತ ಸಿದ್ಧಾಂತ ದೇಶದಲ್ಲಿ ಎಲ್ಲಿಯೂ ಪ್ರಚಾರ ಆಗಲಿಲ್ಲ. ಆದುದರಿಂದ ಉಡುಪಿ ಪ್ರಾಂತದಲ್ಲಿ ಹುಟ್ಟಿದ ಸ್ಥಳದಲ್ಲಿ ಮಾತ್ರ ಸ್ವಲ್ಪ ಪ್ರಚಾರವಾಗಿದೆ. ದ್ವೈತ ಹೊರಗಿನ ಪ್ರಪಂಚಕ್ಕೆ ಪ್ರಚಾರ ಆಗದಿರುವುದರಿಂದ ಆ ಸಿದ್ಧಾಂತ ಕರ್ತನಾದ ಮಧ್ವಾಚಾರ್ಯರು ಸಹ ಹೆಚ್ಚಾಗಿ ಪ್ರಚಾರ ಆಗಲಿಲ್ಲ, ಆದ್ದರಿಂದ ಬಹಳಜನ ಹಿಂದೂಗಳಿಗೆ ಮಧ್ವಾಚಾರ್ಯರ ವಿಷಯ ತಿಳಿಯದಂತೆ ಹೋಗಿದೆ.

ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಹಿಂದೂಮತದಲ್ಲಿದ್ದರೂ ಅದ್ವೈತ ಶೇ.70 ರಷ್ಟು, ವಿಶಿಷ್ಟಾದ್ವೈತ ಶೇ.20 ರಷ್ಟು, ದ್ವೈತ ಶೇ.10 ರಷ್ಟು ಮಾತ್ರವೇ ಇದೆಯೆಂದು ಹೇಳಬಹುದು. ಈಗ ಹಿಂದೂಮತದಲ್ಲಿನ ಎಲ್ಲರಿಗೂ ತಿಳಿಯದ ವಿಷಯವೇನೆಂದರೆ! ಇಲ್ಲಿಗೆ ಸುಮಾರು 40 ವರ್ಷಗಳ ಕೆಳಗೆ **ತ್ರೈತ ಸಿದ್ಧಾಂತ** ಹುಟ್ಟಿದೆ. ತ್ರೈತ ಸಿದ್ಧಾಂತ ಕರ್ತ ಹುಟ್ಟಿರುವುದು 1950ನೇ ವರ್ಷ. ಇಲ್ಲಿಗೆ 40

ವರ್ಷಗಳ ಕೆಳಗೆ ಹುಟ್ಟಿದ ತ್ರೈತ ಹೊರಗೆ ತಿಳಿದು 37 ವರ್ಷಗಳಾಗಿದೆ. ಶಾಲಿವಾಹನ ಶಕ ನಂತರ ಕ್ರೀಸ್ತುಶಕ ಹೇಳಲ್ಪಡುತ್ತಿದೆ. ಈಗ ತ್ರೈತಶಕ ಸಹ ಪ್ರಾರಂಭವಾಗಿ 37 ವರ್ಷಗಳಾಗಿದೆ. ಮಧ್ವಾಚಾರ್ಯರು ಮರಣಿಸಿ ಇಲ್ಲಿಗೆ ಸುಮಾರು 700 ವರ್ಷಗಳಾಗುತ್ತಿದೆ. ರಾಮಾನುಜರ ನಂತರ ನೂರು ವರ್ಷಗಳಿಗೆ ಮಧ್ವಾಚಾರ್ಯರು ಬಂದರೆ, ಆದಿ ಶಂಕರಾಚಾರ್ಯರ ನಂತರ ರಾಮಾನುಜಾ ಚಾರ್ಯರವರು ಸುಮಾರು 1500 ವರ್ಷಗಳಿಗೆ ಬಂದಿದ್ದಾನೆ. ಮಧ್ವಾಚಾರ್ಯರು ಬಂದ ನಂತರ ಸುಮಾರು 700 ವರ್ಷಗಳಿಗೆ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಬಂದಿದ್ದಾರೆ.

**ಪ್ರಶ್ನೆ :– ಮಧ್ವಾಚಾರ್ಯರು ಪ್ರತಿಪಾದಿಸಿರುವುದು ದ್ವೈತ ಸಿದ್ಧಾಂತ. ದ್ವೈತ ಹೆಚ್ಚಾಗಿ ಪ್ರಚಾರ ಆಗಲಿಲ್ಲ ಅಲ್ಲವೆ! ಅದನ್ನು ಸಿದ್ಧಾಂತವಾಗಿ ಸ್ವೀಕರಿಸಬಹುದಾ?**

**ಉತ್ತರ :–** ಸಿದ್ಧಾಂತ ಪ್ರಚಾರ ಆಗಬಹುದು, ಆಗದೆ ಇರಬಹುದು. ಆದರೆ ಸಿದ್ಧಾಂತವನ್ನು ಸಿದ್ಧಾಂತವಾಗಿಯೇ ನೋಡಬೇಕು.

**ಪ್ರಶ್ನೆ :– ಮಧ್ವಾಚಾರ್ಯರು ಸನ್ಯಾಸತ್ವವನ್ನು ಯಾವಾಗ ಸ್ವೀಕರಿಸಿದ್ದಾರೆ?**

**ಉತ್ತರ :–** ಮಧ್ವಾಚಾರ್ಯರಿಗೆ 12 ವರ್ಷಗಳ ವಯಸ್ಸಿನಲ್ಲಿಯೇ ಸನ್ಯಾಸತ್ವವನ್ನು ತಾಯಿಯ ಅನುಮತಿಯಿಂದ ಸ್ವೀಕರಿಸುವುದು ನಡೆದಿದೆ.

**ಪ್ರಶ್ನೆ :– ಮಧ್ವಾಚಾರ್ಯರವರು ದೃಢಕಾಯನೆಂದು ಕೆಲವರಂದಿದ್ದಾರೆ ನಿಜವೇನಾ?**

**ಉತ್ತರ :–** ನಿಜವೇ. ವಾಯುದೇವರ ಪ್ರಥಮ ಅವತಾರ ಹನುಮಂತನು ಎಂದು ಹೇಳುತ್ತಾರೆ. ವಾಯುದೇವರ ಎರಡನೆ ಅವತಾರ ಭೀಮಸೇನನು ಅನ್ನುತ್ತಾರೆ. ಮೂರನೆ ಅವತಾರ. ಪೂರ್ಣಪ್ರಜ್ಞರಾದ ಮಧ್ವರೆಂದು ಹೇಳುತ್ತಿರುತ್ತಾರೆ. ಆಂಜನೇಯನು, ಬೀಮನಂತಹ ದೃಢಕಾಯವುಹೊಂದಿ ವೃಕೋದರನು ಎಂದು ಹೆಸರು ಪಡೆದಿದ್ದಾನೆ.

**ಪ್ರಶ್ನೆ :– ವೃಕೋದರನು ಎಂದರೇ ಅರ್ಥವೇನು?**

**ಉತ್ತರ :–**ವೃಕೋದರನು ಎಂದರೆ 'ತೋಳ ದಂತಹ ಹೊಟ್ಟೆ ಹೊಂದಿರುವವನು' ಎಂದು ಅರ್ಥ. ತೋಳ ಒಳ್ಳೆಯ ಜೀರ್ಣಶಕ್ತಿ ಹೊಂದಿದ್ದು ಪ್ರಾಣಿಕಳೇಬರದಿಂದ ತಿಂದ ಮಾಂಸ ಮೂಳೆಗಳನ್ನು ಸುಲಭವಾಗಿ ಜೀರ್ಣಮಾಡಿಕೊಳ್ಳುತ್ತದೆಂದು ಹೇಳುತ್ತಾರೆ. ಅಂತಹ ಜೀರ್ಣಶಕ್ತಿ ಮಧ್ವಾಚಾರ್ಯರಿಗೆ ಇದೆ. ಆದ್ದರಿಂದ ಮಧ್ವಾಚಾರ್ಯರನ್ನು ವೃಕೋದರನು ಎಂದು ಕರೆದಿದ್ದಾರೆ. ದ್ವಾಪರ ಯುಗದಲ್ಲಿ ಭೀಮನು ಸಹ ಚೆನ್ನಾಗಿ ಜೀರ್ಣಶಕ್ತಿ ಇರುವವನು ಆಗಿರುವುದರಿಂದ ವೃಕೋದರನು ಎಂದು ಭೀಮನನ್ನು ಸಹ ಕರೆದಿದ್ದಾರೆ. ಕಲಿಯುಗದಲ್ಲಿ ಮಧ್ವಾಚಾರ್ಯರಿಗೆ ಆ ಹೆಸರು ಬಂದಿದೆ. ಮಧ್ವಾಚಾರ್ಯರ ಮೊದಲ ಹೆಸರು 'ವಾಸುದೇವ' ಎಂದು ಇದೆ. ಸನ್ಯಾಸತ್ವದ ನಂತರ ವಾಸುದೇವ ಹೋಗಿ ಮಧ್ವಾಚಾರ್ಯರ ಹೆಸರು ಬಂದಿದೆ. ಆದರೂ ಆತನು ದೃಢಕಾಯನೇ ಅಲ್ಲದೆ, ಜೀರ್ಣಶಕ್ತಿ ಇರುವವನಾದ್ದರಿಂದ ಭೀಮನ ಅವತಾರವೇಯೆಂದು ತಿಳಿದು 'ವೃಕೋದರ' ಎಂದು ಹೇಳುವುದು ನಡೆದಿದೆ.

ದಕ್ಷಿಣ ದೇಶಯಾತ್ರೆಯಲ್ಲಿ ಶ್ರೀಮಧ್ವರು 'ವಿಷ್ಣುಮಂಗಳಂ' ಎಂಬ ಊರು ಸೇರಿಕೊಂಡಿದ್ದಾನೆ. ಅಲ್ಲಿ ಆತನ ಜೀರ್ಣಶಕ್ತಿಯನ್ನು ಪರೀಕ್ಷಿಸೋಣವೆಂದು ಒಬ್ಬ ಗೃಹಸ್ಥನು ಅವರನ್ನು ಭಿಕ್ಷೆಗೆ ಆಹ್ವಾನಿಸಿ ಷಡ್ರಸೋಪೇತವಾಗಿ (ಅತ್ಯಂತ ಒಳ್ಳೆಯ) ಊಟ ಇಟ್ಟ ನಂತರ ಇನ್ನೂರು (200) ಬಾಳೆಹಣ್ಣುಗಳನ್ನು ಮುಂದಿಟ್ಟು ಸ್ವೀಕರಿಸೆಂದನಂತೆ. ಆಗ ಶ್ರೀಮಧ್ವರು ಅವಲೀಲವಾಗಿ ಇನ್ನೂರು ಬಾಳೆಹಣ್ಣುಗ ಳನ್ನು ತಿಂದು ಎಲ್ಲರನ್ನು ಆಶ್ಚರ್ಯಪಡಿಸಿದನಂತೆ.

**ಪ್ರಶ್ನೆ :– ಶಂಕರಾಚಾರ್ಯರು ಅದ್ವೈತ ಸಿದ್ಧಾಂತಕ್ಕೆ ಪೂರ್ತಿ ವಿರುದ್ಧವಾಗಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜಾಚಾರ್ಯರು ಪ್ರತಿಪಾದಿಸಿದ್ದಾರೆ ಅಲ್ಲವೆ! ಮೂರನೆ ಆಚಾರ್ಯನಾಗಿ ಬಂದಿರುವ ಮಧ್ವಾಚಾರ್ಯರ ದ್ವೈತ ಸಿದ್ಧಾಂತವು ಅದ್ವೈತಕ್ಕೆ ವಿರುದ್ಧವಾ, ಅಥವಾ ವಿಶಿಷ್ಟಾದ್ವೈತಕ್ಕೆ ವಿರುದ್ದವಾ?**

**ಉತ್ತರ :–** ದ್ವೈತ ಸಿದ್ಧಾಂತ ಪ್ರಧಾನವಾಗಿ ಅದ್ವೈತವನ್ನು ಪೂರ್ತಿಯಾಗಿ

ವಿರೋಧಿಸುತ್ತದೆ. ವಿಶಿಷ್ಟಾದ್ವೈತ ಸಿದ್ಧಾಂತದೊಂದಿಗೆ ಸ್ವಲ್ಪ ಹೋಲಿಕೆ ಇರುವುದರಿಂದ ಶ್ರೀಮಧ್ವರು ಆ ಸಿದ್ಧಾಂತವನ್ನು ಎಲ್ಲಿಯೂ ವಿಮರ್ಶಿಸಲಿಲ್ಲ. ಅದ್ವೈತಕ್ಕೆ ವಿರುದ್ಧವಾಗಿ ದ್ವೈತದಲ್ಲಿನ ಐದು ಪ್ರಧಾನಾಂಶಗಳು ಇವೆ. 1) ಜಗತ್ತು ಸತ್ಯಂ. 2) ಜೀವಿಯು ಬ್ರಹ್ಮ ಒಂದಲ್ಲ, ಬೇರೆಬೇರೆ ತತ್ತ್ವಗಳು 3) ಪರಮಾತ್ಮ ಸಗುಣ ಸಾಕಾರನು, 4) ಶ್ರೀಮಹಾ ವಿಷ್ಣುವು ಪರಮ ದೈವ, 5) ಮೋಕ್ಷಕ್ಕೆ ಹಂತಹಂತವಾಗಿ ವಿಷ್ಣು ಭಕ್ತಿಮಾತ್ರವೇ ಏಕೈಕ ಮಾರ್ಗ. ಇವೆಲ್ಲಾ ಅದ್ವೈತಕ್ಕೆ ಪೂರ್ತಿ ವಿರುದ್ಧ. ವಿಶಿಷ್ಟಾದ್ವೈತಕ್ಕೆ ಪೂರ್ತಿ ವಿರುದ್ಧವಲ್ಲ.

**ಪ್ರಶ್ನೆ :– ವಿಶಿಷ್ಟಾದ್ವೈತಕ್ಕೆ ದ್ವೈತ ಪೂರ್ತಿ ವಿರುದ್ಧವಲ್ಲ ಎಂದಿದ್ದೀರ. ಹಾಗಾದರೆ ವಿಶಿಷ್ಟಾದ್ವೈತಕ್ಕೆ ಸ್ವಲ್ಪ ವಿರುದ್ಧವೇ ಅಲ್ಲವೆ! ದ್ವೈತವು ವಿಶಿಷ್ಟಾದ್ವೈತಕ್ಕೆ ಎಲ್ಲಿ ವಿರುದ್ಧವಾಗಿ ಇದೆಯೋ ಸ್ವಲ್ಪ ಹೇಳುತ್ತೀರಾ?**

**ಉತ್ತರ :–** ಶಂಕರನ ಅದ್ವೈತಕ್ಕೆ ರಾಮಾನುಜನ ವಿಶಿಷ್ಟಾದ್ವೈತ ಪೂರ್ತಿ ವಿರುದ್ಧ. ಹಾಗೆಯೇ ರಾಮಾನುಜನ ವಿಶಿಷ್ಟಾದ್ವೈತಕ್ಕೆ ಸ್ವಲ್ಪ ಮಟ್ಟಿಗೆ ವಿರುದ್ಧತೆ ಹೊಂದಿರುವುದು ಮಧ್ವಾಚಾರ್ಯರ ದ್ವೈತ. ಶಂಕರನ ಸಿದ್ಧಾಂತದಲ್ಲಿ ದೇವರು ನಿರಾಕಾರನು ಎಂದು ಇದೆ. ರಾಮಾನುಜಾಚಾರ್ಯರ ಸಿದ್ಧಾಂತದಲ್ಲಿ ದೇವರು ಸಾಕಾರನು ಎಂದು ಇದೆ. ಆದ್ದರಿಂದ ಎರಡು ಸಿದ್ಧಾಂತಗಳು ಒಂದಕ್ಕೊಂದು ವಿರುದ್ಧವಾದವು. ಆದರೆ ಮಧ್ವಾಚಾರ್ಯರ ಸಿದ್ಧಾಂತದಲ್ಲಿ ದೇವರೊಂದಿಗೆ ಜೀವಿಯ ವಿಷಯ ಸಹ ಇದೆ. ರಾಮಾನುಜಾಚಾರ್ಯರ ಸಿದ್ಧಾಂತದಲ್ಲಿ ದೇವರು ಸಾಕಾರನೆನ್ನುವುದು ಮಾತ್ರ ಇದೆ. ಜೀವಿಯ ವಿಷಯವಂತೂ ಏನುಯಿಲ್ಲ. ಆದುದರಿಂದ ದ್ವೈತ ಸಿದ್ಧಾಂತದಲ್ಲಿನ ಬೋಧನೆಗಳ ಸ್ವಲ್ಪ ವಿಶಿಷ್ಟಾದ್ವೈತಕ್ಕೆ ವಿರುದ್ಧವಾಗಿರುತ್ತವೆ. ಮಧ್ವ ಸಿದ್ಧಾಂತ ಸಾರವನ್ನು ಪೂರ್ತಿಯಾಗಿ ವ್ಯಾಸರಾಯರು ಎಂಬ ಮಧ್ವಾಚಾರ್ಯರ ಭಕ್ತನು ಮತ್ತು ದ್ವೈತ ಸಿದ್ಧಾಂತ ಪ್ರಚಾರಕನು ಬರೆದ ಶ್ಲೋಕವನ್ನು ನೋಡಿದರೆ ವಿಶಿಷ್ಟಾದ್ವೈತಕ್ಕೆ ದ್ವೈತವು ಸ್ವಲ್ಪ ವಿರುದ್ಧವೆಂದು ತಿಳಿಯಬಲ್ಲದು.

**ಶ್ಲೋ॥ ಶ್ರೀ ಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್, ತತ್ತ್ವತೋ**
**ಭಿನ್ನಾ ಜೀವಗಣಾಃ ಹರೇರನುಚರಾಃ ನೀ ಚೋಚ್ಚಭಾವಂ ಗತಾಃ ।**
**ಮುಕ್ತಿರ್ನೈಜ ಸುಖಾನುಭೂತಿಃ ಆಮಲಾ ಭಕ್ತಿಶ್ಚ ತತ್ಸಾಧನಂ**
**ಹ್ಯಕ್ಷಾದಿತ್ರಿತ್ರಯಂ ಪ್ರಮಾಣಂ, ಅಖಿಲಾಮ್ನಾಯೈಕ ವೇದ್ಯೋಹರಿ॥**

**ಭಾವಾರ್ಥ :–** 1) ಶ್ರೀಮಹಾವಿಷ್ಣುವೇ ಸರ್ವ ಸ್ವತಂತ್ರನಾದ ಪರಮ ದೈವ. 2) ವಿಶ್ವವು ಸತ್ಯ. 3) ಜೀವಾತ್ಮ ಪರಮಾತ್ಮ ಬೇರೆ, ಹಾಗೆಯೇ ಜೀವಾತ್ಮಗಳು ಸಹ ಪರಸ್ಪರ ಬೇರೆಬೇರೆಯಾಗಿ ಇವೆ. 4) ಜೀವಿಗಳು ಪರಮಾತ್ಮನಾದ ವಿಷ್ಣುವಿಗೆ ದಾಸರು. 5) ಅವರಲ್ಲಿ ಮುಕ್ತಿ ಯೋಗ್ಯರು, ನಿತ್ಯಸಂಸಾರಿಗಳು, ತಮೊಯೋಗ್ಯರು ಎನ್ನುವ ವ್ಯತ್ಯಾಸಗಳು ಇವೆ. 6) ಮೋಕ್ಷವೆಂದರೆ ಪರಮಾತ್ಮ ಸ್ವರೂಪಾನಂದಮ್, 7) ಅದಕ್ಕೆ ನಿರ್ಮಲ ಭಕ್ತಿ ಏಕೈಕ ಮಾರ್ಗ. 8) ಪ್ರತ್ಯಕ್ಷ, ಅನುಮಾನ, ಆಗಮ ಎನ್ನುವ ಮೂರು ಪ್ರಮಾಣಗಳು 9) ವೇದಗಳ ಅರ್ಥ ಶ್ರೀಹರಿ ಮಾತ್ರವೇ. ಈ ಶ್ಲೋಕ ಭಾವನೆಯಲ್ಲಿನ ಒಂಭತ್ತು ಅಂಶಗಳು, ದ್ವೈತದಲ್ಲಿನ ಒಂದೊಂದು ಪ್ರಧಾನವಾದ ವಿಷಯವನ್ನು ತಿಳಿಸುತ್ತದೆ. ಇವುಗಳನ್ನೇ ದ್ವೈತದಲ್ಲಿನ ನವರತ್ನಗಳೆಂದಿದ್ದಾರೆ. ಇದರಲ್ಲಿ ಅದ್ವೈತಕ್ಕು ಎಲ್ಲಾ ಪೂರ್ತಿ ವಿರುದ್ಧವಾಗಿರುವಾಗ, ವಿಶಿಷ್ಟಾದ್ವೈತಕ್ಕೆ ಸ್ವಲ್ಪ ವಿರುದ್ಧತೆ ಇದೆ.

**ಪ್ರಶ್ನೆ :– ಅದ್ವೈತದಲ್ಲಿ ದೇವರನ್ನು ಪರಬ್ರಹ್ಮ ಸ್ವರೂಪ ಎಂದು ನಿರಾಕಾರವನ್ನು ಹೇಳಿದರೇ ವಿಶಿಷ್ಟಾದ್ವೈತದಲ್ಲಿ ಪರಬ್ರಹ್ಮವನ್ನು ಸಾಕಾರವೆಂದು ಹೇಳಿದ್ದಾರೆ. ದ್ವೈತರು ಸಹ ಸಾಕಾರವನ್ನೇ ಹೇಳಿದ್ದಾರೆ. ಈ ವಿಷಯದಲ್ಲಿ ದ್ವೈತರು ಸಾಕಾರರೂಪವನ್ನು ವಿಷ್ಣುವೆಂದೇ ಹೇಳಿದ್ದಾರೆ. ವಿಷ್ಟುವು ತ್ರಿಮೂರ್ತಿಗಳಲ್ಲಿ ಒಬ್ಬನೆಂದು ಆತನು ಸಹ ಸೃಷ್ಟಿಸಲ್ಪಟ್ಟವೇನೆಯೆಂದು ನೀವೆನ್ನುತ್ತಿದ್ದೀರಾ. ದ್ವೈತರ ಭಾವನೆಯಲ್ಲಿ ವಿಷ್ಣುವೇ ಸರ್ವವನ್ನು ಸೃಷ್ಟಿಸಿದ್ದಾನೆಂದು ಹೇಳುತ್ತಿದ್ದಾರೆ. ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ವಿಷ್ಣುವು ತ್ರಿಮೂರ್ತಿಗಳಲ್ಲಿ ಒಬ್ಬನೆಂದು ಎಲ್ಲರಿಗೂ ತಿಳಿದಿದೆ. ವಿಷ್ಣುವಿಗೆ ಒಂದು ನಿರ್ದಿಷ್ಟರೂಪ, ನಿರ್ದಿಷ್ಟವಾದ ಹೆಸರು ಇದೆ. ದೇವರು

ತ್ರೈತ ಸಿದ್ಧಾಂತದ ಪ್ರಕಾರ ಯಾವಾಗಲೂ ನಿರಾಕಾರನೇ ಆದರೂ ಆಗಾಗ ಅವಶ್ಯವನ್ನನುಸರಿಸಿ ಸಾಕಾರನಾಗಿ ಭೂಮಿಮೇಲೆ ಶರೀರದಿಂದ ಕಾಣಿಸುತ್ತಿರುತ್ತಾನೆ. ತ್ರೈತ ಸಿದ್ಧಾಂತ, ಅದ್ವೈತದ ಪ್ರಕಾರ ದೇವರು ನಿರಾಕಾರನೇ ಎಂದು ಹೇಳುತ್ತಾ, ವಿಶಿಷ್ಟಾದ್ವೈತದ ಪ್ರಕಾರ ದೇವರು ಆಗಾಗ ಸಾಕಾರವಾಗಿ ಸಹ ಇರುತ್ತಾನೆಂದು ಹೇಳಬಹುದು. ಸ್ವಲ್ಪ ಅದ್ವೈತ, ಸ್ವಲ್ಪ ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಸಮರ್ಥಿಸಿದರೂ ದೇವರು ಪೂರ್ತಿ ನಿರಾಕಾರನೆನ್ನುವುದರಲ್ಲಿ ಅದ್ವೈತವನ್ನು, ಪೂರ್ತಿ ಸಾಕಾರನೆನ್ನುವುದರಲ್ಲಿ ವಿಶಿಷ್ಟಾದ್ವೈತವನ್ನು ಅದಕ್ಕೆ ಅನುಗುಣವಾಗಿರುವ ದ್ವೈತವನ್ನು ತ್ರೈತವು ವಿರೋಧಿಸುತ್ತಿದೆ. ದ್ವೈತ ಸಿದ್ಧಾಂತಕರ್ತನಾದ ಮಧ್ವಾಚಾರ್ಯರು ಮಹಾವಿಷ್ಣುವನ್ನು ದೇವರಿಗೆ ಹೋಲಿಸಿ ಈ ವಿಧವಾಗಿ ಹೇಳುತ್ತಿದ್ದಾರೆ.

ದ್ವೈತದಲ್ಲಿ ಶ್ರೀಮಹಾವಿಷ್ಣುವೇ ಸರ್ವೋತ್ತಮನು. ಸರ್ವೋತ್ತಮತ್ವವನ್ನು ಶ್ರೀ ಮಧ್ವರು ಹೀಗೆ ನಿರ್ವಚಿಸಿದ್ದಾರೆ. "ಏಕಃ ಸರ್ವೋತ್ತಮಾ ಜ್ಞೇಯಃ ಏಕ ಏವ ಕರೋತಿಯತ್ಃ" ಇದರ ಅರ್ಥದ ಪ್ರಕಾರ ಸರ್ವೋತ್ತಮನೇ ಸ್ವತಂತ್ರವಾಗಿ ಕಾರ್ಯಗಳನ್ನು ಮಾಡುವವನು, ಮಾಡಿಸುವವನು. ಆತನು ಯಾರಮೇಲೆ ಈ ವಿಷಯದಲ್ಲಿ ಆಧಾರಪಡಬೇಕಾದ ಅವಶ್ಯಕತೆ ಇಲ್ಲ. ಆತನು ಯಾವ ಕೆಲಸವಾದರೂ ಮಾಡಬಲ್ಲನು, ಮಾಡಿರುವುದನ್ನು ಹಿಂದಕ್ಕೆ ಮರಳಿಸಬಲ್ಲನು. ಅದೇ ಕೆಲಸ ಇನ್ನೊಂದು ವಿಧವಾಗಿ ಮಾಡುತ್ತಾನೆ. ಸರ್ವೋತ್ತಮನು ಎಂದರೆ ಆ ಬ್ರಹ್ಮನೇ. ಆತನಲ್ಲಿಯೇ ಎಲ್ಲಾ ತತ್ತ್ವಗಳು ಒಳಗೊಂಡಿವೆ. ಆತನೇ ಎಲ್ಲದಕ್ಕು ಅತೀತನು. ಈ ವಿಶ್ವ ಆತನ ಸೃಷ್ಟಿ. ಆತನು ಅಭಿವ್ಯಕ್ತಿ(ಪವಿತ್ರ ಜ್ಞಾನ ತಿಳಿಸುವವನು). ಆತನು ಅನಂತ ಕಳ್ಯಾಣ ಗುಣ ಸಮನ್ವಿತನು. ಅಜ್ಞಾನಾದಿ ದೋಷರಹಿತನು, ಆತನು ಎಂಟು ಕಾರ್ಯಗಳಿಗೆ ಅಧಿಷ್ಠಾತ. ಅವು 1) ಸೃಷ್ಠಿ 2) ಸ್ಥಿತಿ 3) ಲಯ 4) ನಿಯಮನ 5) ಜ್ಞಾನ ಕೊಡುವುದು 6) ಅಜ್ಞಾನವನ್ನು ಉಂಟುಮಾಡುವುದು 7) ಬಂಧನ 8) ಮೋಕ್ಷ. ಆತನು ಅಂದರೇ ವಿಷ್ಣು ಒಬ್ಬನೇ ಈ ಕಾರ್ಯಗಳೆಲ್ಲವನ್ನು ಸ್ವತಂತ್ರವಾಗಿ ನಿರ್ವಹಿಸುತ್ತಿದ್ದಾನೆ.

**ಶ್ಲೋ॥ ಸ್ವತಂತ್ರ ಮಸ್ವತಂತ್ರಚ, ದ್ವಿವಿಧಂ ತತ್ತ್ವಮುಚ್ಯತೇ.**
**ಸ್ವತಂತ್ರೋ ಭಗವಾನ್ವಿಷ್ಣುಃ ನಿರ್ದಿಷೋ ಶೇಷ ಸದ್ಗುಣಃ**

**ಭಾವಾರ್ಥ:–** "ಸ್ವತಂತ್ರನು ಶ್ರೀಮಹಾವಿಷ್ಣುವು ಒಬ್ಬನೇ. ಆತನಿಗೆ ಭಿನ್ನವಾದವೆಲ್ಲ ಅಸ್ವತಂತ್ರಗಳೇ. ಆತನು ದೋಷ ರಹಿತನು, ಕಲ್ಯಾಣ ಗುಣಾಕಾರನು ಎಂದು ಸರ್ವದರ್ಶನ ಸಂಗ್ರಹದಲ್ಲಿ ಸಾಯನ ಮಾಧವಾಚಾರ್ಯರು ಹೇಳಿದ್ದಾರೆ." ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 19ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**ಶ್ಲೋ॥ 14–19 ಯೋಮಾಮೇವ ಮಸಮ್ಮೂಢೋ ಜಾನಾತಿ ಪುರುಷೋತ್ತಮಮ್**
**ಸ ಸರ್ವ ವಿದ್ಭಜತಿಮಾಂ ಸರ್ವಭಾವೇನ ಭಾರತ ॥**

**ಭಾವಾರ್ಥ:–** ಓ ಅರ್ಜುನಾ ಜ್ಞಾನಿಯಾದವನು ಈ ವಿಧವಾಗಿ ತತ್ತ್ವತಃ ಪುರುಷೋತ್ತಮನಾಗಿ ತಿಳಿದುಕೊಳ್ಳುತ್ತಾನೆ. ಶತ್ರುಗಳು ಸಹ ಆತನು ಪುರುಷೋತ್ತಮನೆಂದು ಕೊಂಡಾಡಿದ್ದಾರೆ. ಆತನ ಶರೀರ ಪ್ರಾಕೃತ ಶರೀರವಲ್ಲ, ಆತನಲ್ಲಿ ಪಾಕೃತ ಗುಣಗಳು ಇಲ್ಲ. ಆತನಲ್ಲಿ ಪ್ರಾಕೃತ(ಪ್ರಕೃತಿ) ಸಂಬಂಧ ಏನೂ ಇಲ್ಲ. ಆಪಾದ ಮಸ್ತಕಂ ಜ್ಞಾನಾಂದಕರವಾದ ದಿವ್ಯಶರೀರ ಆತನಿಗಿದೆ. ರೂಪ, ರಸ, ಗಂಧಗಳನ್ನು ಗ್ರಹಿಸುವ ಶಕ್ತಿ ಇರುವ ಇಂದ್ರಿಯಗಳಿವೆ. ಆತನಲ್ಲಿನ ಕಲ್ಯಾಣ ಗುಣಗಳು ಆತನ ದಿವ್ಯಾತ್ಮ ಸ್ವರೂಪಕ್ಕಿಂತ ಬೇರೆಯಲ್ಲ. ಆತನು ಪರಿಪೂರ್ಣರು, ಆತನು ಅನೇಕ ಅವತಾರಗಳನ್ನು ಸಹ ತಾಳಿದ್ದಾನೆ. ಈ ವಿಧವಾಗಿ ಮಹಾ ವಿಷ್ಣುವು ಪುರುಷೋತ್ತಮನೆಂದು, ಆತನು ಸಾಕಾರ ಸಗುಣನೆಂದು ನಿರೂಪಿಸಿ ಶ್ರೀಮಧ್ವರು ವಿಷ್ಣುವೇ ಆರಾಧ್ಯನೆಂದು ಬೋಧಿಸಿದ್ದಾನೆ.

**ಪ್ರಶ್ನೆ :– ವಿಷ್ಣುವನ್ನು ಕುರಿತು ಅವರು ಹೇಳುವುದು ನಿಜವೇನಾ?**

**ಉತ್ತರ–** ಯಾರ ಭಕ್ತಿ ಅವರದು, ಅವರು ಹಾಗೆ ಹೇಳುವುದರಲ್ಲಿ ತಪ್ಪಿಲ್ಲ ಆದರೇ, ಅದನ್ನು ನಾವು (ಕೇಳುವವರು) ವಿಚಕ್ಷಣೆಹೊಂದಿ ನೋಡಿಕೊಳ್ಳಬೇ

ಕಾಗಿದೆ. ದೇವರು ತನ್ನ ಸೃಷ್ಠಿಯಲ್ಲಿ ಮನುಷ್ಯರನ್ನು, ದೇವತೆಗಳನ್ನು ಎರಡು ವಿಧದವರನ್ನು ಸೃಷ್ಠಿಸಿದ್ದಾನೆ. ಸೃಷ್ಠಿಸಿದವನು ದೇವರು, ಸೃಷ್ಠಿಸಲ್ಪಟ್ಟವರು ಮನುಷ್ಯರು ಮತ್ತು ದೇವತೆಗಳು. ಮನುಷ್ಯರು ಕಾಣಿಸುವ ಜಾತಿಯಾಗಿದ್ದು, ದೇವತೆಗಳು ಕಾಣಿಸದ ಜಾತಿಯಾಗಿದ್ದಾರೆ. ಮನುಷ್ಯರಲ್ಲಿ ಅನೇಕ ವಿಧದವರು, ಅನೇಕ ಗುಣದವರು, ಅನೇಕ ಜ್ಞಾನ ಇರುವವರು ಇರುವಂತೆ ದೇವತೆಗಳಲ್ಲಿ ಸಹ ಅನೇಕ ತಾರತಮ್ಯಗಳು ಇವೆ. ದೇವರಿಗೆ ರೂಪ, ನಾಮ, ಕ್ರಿಯೆಗಳು ಇರುವುದಿಲ್ಲ. ಆದ್ದರಿಂದ ಆತನ ಹೆಸರು ವಿಷ್ಣು ಅಲ್ಲ, ಶಿವನು ಅಲ್ಲ, "ದೇವರು ಪ್ರತ್ಯೇಕವಾದ ಶಕ್ತಿ". ಆತನನ್ನೇ ಭಗವದ್ಗೀತೆಯಲ್ಲಿ "ಪುರುಷೋತ್ತಮನೆಂದು" ಹೇಳಿದ್ದಾರೆ. ವಾಸ್ತವ ಜ್ಞಾನದ ಪ್ರಕಾರ ವಿಷ್ಣುವು ದೇವತೆಗಳಲ್ಲಿ ಮೊದಲನೆಯವನಾಗಿರಬಹುದು ಆದರೇ, ದೇವರು ಅಲ್ಲ. ಸೃಷ್ಠಿಕರ್ತ ಅಸಲಿಗೇ ಅಲ್ಲ. ಮಧ್ವಾಚಾರ್ಯರು, ಆತನನ್ನು ಅನುಸರಿಸಿದವರು ವಿಷ್ಣುವನ್ನೇ ದೊಡ್ಡದಾಗಿ ಹೇಳಿದರೂ ಅದು ಅವರ ಭಾವನೆಯೇ ಹೊರತು, ಆ ಭಾವನೆ ಸತ್ಯವಲ್ಲ. ಯಜಮಾನನಿಗು ಕೆಲಸದವನಿಗು ಎಷ್ಟು ವ್ಯತ್ಯಾಸ ಇರುತ್ತದೋ ಅಷ್ಟೇ ವ್ಯತ್ಯಾಸ ದೇವರಿಗು, ದೇವತೆಗಳಿಗು ಇದೆ. ವಿಷ್ಣುವು ಸಹ ತನ್ನ ಮೋಕ್ಷಕ್ಕಾಗಿ ದೇವರನ್ನು ಧ್ಯಾನಿಸುತ್ತಿರುತ್ತಾನೆ.

ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಿದ 19ನೇ ಶ್ಲೋಕದಲ್ಲಿನ ಭಾವಾರ್ಥ ಪುರುಷರಲ್ಲಿ ಉತ್ತಮನಾದ ಪರಮಾತ್ಮನನ್ನು ಕುರಿತು ಹೇಳಿರುವುದೇ ಹೊರತು ವಿಷ್ಣುವನ್ನು ಕುರಿತು ಹೇಳಲಿಲ್ಲ. ವಿಶ್ವದಲ್ಲಿ ವಿಶ್ವಕ್ಕೆಲ್ಲಾ ಮೂವರು ಪುರುಷರೇ ಇದ್ದಾರೆ. ಆ ಮೂವರು ಪುರುಷರನ್ನು **"ಕ್ಷರನು, ಅಕ್ಷರನು, ಪುರುಷೋತ್ತಮನೆಂದು"** 16, 17 ಶ್ಲೋಕಗಳಲ್ಲಿ ಹೇಳಿದ್ದಾರೆ. ಸೃಷ್ಠಿಯಲ್ಲಿ ಪ್ರಕೃತಿ, ಪರಮಾತ್ಮರು ಎರಡೇ ಇವೆ. ಪ್ರಕೃತಿ ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಹಾಗೆ ಪರಮಾತ್ಮ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಪ್ರಕೃತಿಯಲ್ಲಿನ ಭಾಗ 1) ಆಕಾಶ, 2) ಗಾಳಿ. 3) ಅಗ್ನಿ. 4) ನೀರು, ಭೂಮಿ ಯಾದರೆ, ಪರಮಾತ್ಮವೊಂದರ ಮೂರು ಭಾಗಗಳು ಒಂದು ಜೀವಾತ್ಮ, ಎರಡು

ಆತ್ಮ, ಮೂರು ಪರಮಾತ್ಮಯೆಂದು ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಹೇಳಲಾಗಿದೆ. 19ನೇ ಶ್ಲೋಕಕ್ಕೆ ಮೇಲೆ ದ್ವೈತರು ಹೇಳಿದ ಭಾವಾರ್ಥ ಪೂರ್ತಿ ತಪ್ಪು, ಆ ಶ್ಲೋಕದಲ್ಲಿ ಹೇಳಿರುವುದಕ್ಕು ಅವರು ಬರೆದ ವಿವರಕ್ಕು ಯಾವುದೆ ಸಂಬಂಧವಿಲ್ಲ. ಅದರ ನಿಜವಾದ ಭಾವಾರ್ಥ ಈ ವಿಧವಾಗಿ ಇದೆ ನೋಡಿರಿ.

**"ಯಾರಾದರೆ ನನ್ನನ್ನೇ ಪುರುಷೋತ್ತಮನಾಗಿ ತಿಳಿದು ಅಜ್ಞಾನವೆಲ್ಲವನ್ನು ಬಿಟ್ಟು ನನ್ನನ್ನೇ ಆರಾಧಿಸುತ್ತಾನೋ ಅಂತಹವನು ಎಲ್ಲಾ ಭಾವನೆಗಳಲ್ಲಿ ನನ್ನನ್ನೇ ಆರಾಧಿಸಿದ ಸರ್ವಜ್ಞನೆಂದು ಹೇಳಬಹುದು."** ಎಂದು ಹೇಳಿದನು. ಅಷ್ಟೇ ಹೊರತು ಆ ಶ್ಲೋಕದಲ್ಲಿ ಬೇರೆ ಅರ್ಥವೇ ಇಲ್ಲ. ಪುರಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17, 18, 19 ಶ್ಲೋಕಗಳು ಅದ್ವೈತ ಸಿದ್ಧಾಂತಕ್ಕಾಗಲಿ, ವಿಶಿಷ್ಟಾದ್ವೈತ ಸಿದ್ಧಾಂತಕ್ಕಾಗಲಿ, ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿರುವವಾಗಲಿ ಅಲ್ಲವೆಂದು ತಿಳಿಯಬೇಕು. ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯರು ಮೂವರ ಸಿದ್ಧಾಂತಗಳಿಗು ಸರಿಹೋಗದ ಭಾವನೆಗಳು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17, 18, 19, ಶ್ಲೋಕಗಳಲ್ಲಿ ಇವೆ. 1) ಸೃಷ್ಟಿ 2) ಸ್ಥಿತಿ 3) ಲಯ, 4) ನಿಯಮನ 5) ಜ್ಞಾನ ಕೊಡುವುದು, 6) ಅಜ್ಞಾನವನ್ನು ಉಂಟುಮಾಡುವುದು 7) ಬಂಧನ, 8) ಮೋಕ್ಷ ಎನ್ನುವ ಎಂಟು ದೇವರೆನ್ನುವ ಪರಮಾತ್ಮ ಅಧೀನದಲ್ಲಿ ಇವೆ ಆದರೆ, ದೇವತೆಗಳಾದ ತ್ರಿಮೂರ್ತಿಗಳ ಕೈಯಲ್ಲಿ ಏನೂ ಇಲ್ಲ.

**ಪ್ರಶ್ನೆ:– ಆದರೆ ದೇವತೆಗಳಲ್ಲಿ ಶ್ರೇಷ್ಠನು, ಮೊದಲನೆಯವನು ಎಂದು ಹೆಸರುವಾಸಿಯಾದವನು ವಿಷ್ಣುವು ಅಲ್ಲವೆನ್ನುತ್ತೀರಾ?**

**ಉತ್ತರ:–** ದೇವತೆಗಳಲ್ಲಿ ಶ್ರೇಷ್ಠನು, ಮೊದಲನೆಯವನು ವಿಷ್ಣುವು ಎನ್ನುವುದರಲ್ಲಿ ತಪ್ಪಿಲ್ಲ. ನಿಜಕ್ಕೆ ದೇವತೆಗಳಲ್ಲಿ ಅತ್ಯಂತ ದೊಡ್ಡವನು ವಿಷ್ಣುವೇಯೆಂದು ಅನೇಕ ಪುರಾಣಗಳು, ನಾಲ್ಕು ವೇದಗಳು ಹೇಳುತ್ತಿವೆ. ಅದನ್ನು ನಾವು ಸಹ

ಒಪ್ಪಿಕೊಳ್ಳುತ್ತಿದ್ದೇವೆ. ಆತನು ಸೃಷ್ಟಿಸಲ್ಪಟ್ಟ ದೇವತಾ ಗುಂಪಿನಲ್ಲಿ ದೊಡ್ಡವನೇ, ಆದರೆ ಸೃಷ್ಟಿಕರ್ತನಾದ ದೇವರು ಅಲ್ಲವೆಂದು ಹೇಳುತ್ತಿದ್ದೇವೆ. ದೇವರು ಬೇರೆ ದೇವತೆಗಳು ಬೇರೆಯೆಂದು ಮರೆಯಬಾರದು.

**ಪ್ರಶ್ನೆ :– ಆಚಾರ್ಯತ್ರಯವೆಂದು ಹೆಸರುವಾಸಿಯಾದ ಶಂಕರಾಚಾರ್ಯರಿಗೂ, ರಾಮಾನುಜಾಚಾರ್ಯರಿಗೂ, ಮಧ್ವಾಚಾರ್ಯರಿಗೂ ದೇವರು ಬೇರೆ ದೇವತೆಗಳು ಬೇರೆಯೆಂದು ತಿಳಿದಿಲ್ಲವಾ?**

**ಉತ್ತರ :–** ತಿಳಿಯದೆಯೇ ದೇವರನ್ನು ಬಿಟ್ಟು ದೇವತೆಗಳಾದವರಲ್ಲಿ ವಿಷ್ಣುವನ್ನು ದೊಡ್ಡದಾಗಿ ಹೇಳಿಕೊಳ್ಳುವುದು ನಡೆದಿದೆ. ಶಂಕರಾಚಾರ್ಯರು ನಿರಾಕಾರವನ್ನು ಬೋಧಿಸಿದರೆ, ರಾಮಾನುಜರು, ಮಧ್ವಾಚಾರ್ಯರು ಇಬ್ಬರು ಸಗುಣ, ಸಾಕಾರವಾದ ವಿಷ್ಣುವನ್ನು ದೊಡ್ಡದಾಗಿ ಹೇಳುವುದಾಗಿದೆ. ಮೂವರು ಆಚಾರ್ಯರ ಸಿದ್ಧಾಂತಗಳು ಬೇರೆಯಾದರೂ ಅವರು ಮೂವರು ವೈದಿಕ ಆಚಾರ್ಯರಾಗಿರುವುದರಿಂದ ಅವರು ದೇವರನ್ನು ತಿಳಿಯದೆ ದೇವತೆಗಳನ್ನೆ ತಿಳಿದವರಾಗಿದ್ದಾರೆ. ವೇದಗಳನ್ನು ವ್ಯಾಸನು ರಚಿಸಿದಾಗ ಆತನಿಗೆ ವೇದವ್ಯಾಸ ನೆಂದು ಹೆಸರುಬಂದಿದೆ. ಆದರೆ ವ್ಯಾಸನು ವೇದಗಳನ್ನು ರಚಿಸಿದಾಗ ಇದ್ದ ಭಾವನೆ, ಆತನ ಜೀವನದ ಚರಮಾಂಕದಲ್ಲಿ (ಕೊನೆಯಲ್ಲಿ) ಇಲ್ಲವೆಂದು ಹೇಳಬಹುದು. ಆ ವಿಷಯ ಪ್ರಪಂಚಕ್ಕೆ ಸ್ವಲ್ಪವೂ ತಿಳಿದಿಲ್ಲ. ವ್ಯಾಸನು ಅರ್ಜುನನ ಮೂಲಕ ಯುದ್ಧರಂಗದಲ್ಲಿ ಸಂಭಾಷಣೆ ರೂಪದಲ್ಲಿ ಹೇಳಲಾದ ಐದು ನಿಮಿಷಗಳ ಸಮಾಚಾರವನ್ನು ಕೇಳಿ ತಾನು ಅಲ್ಲಿಯವರೆಗೂ ಜೀವಿಸಿರುವ 360 ವರ್ಷಗಳ ಜೀವಿತಕಾಲ ವ್ಯರ್ಥ ಅಂದುಕೊಂಡಿದ್ದಾನೆ. ಐದು ನಿಮಿಷಗಳ ಗೀತಾಸಾರವನ್ನು ಬೋಧಿಸಿದವನು ಯಾರಾಗಿರುವುದು ವ್ಯಾಸನು ಗ್ರಹಿಸಿದ್ದಾನೆ. ಆಗ ತನ್ನ ರಚನೆಗಳಲ್ಲಿನ ತಪ್ಪು ತನಗೆ ತಿಳಿದುಹೋಗಿದೆ. ತಾನು ರಚಿಸಿದ 18 ಪುರಾಣಗಳಲ್ಲಿ ವಿಷ್ಣುವನ್ನು ಹೇಳಿದರೆ ಅದನ್ನೇ ಎಲ್ಲರೂ ಅನುಸರಿಸುತ್ತಿದ್ದಾರೆಂದು ಅಂದುಕೊಂಡಿದ್ದಾನೆ. ಅದೇ ವಿಧವಾಗಿ ವ್ಯಾಸನು ದ್ವಾಪರಯುಗದ ಕೊನೆಯಲ್ಲಿ ಮರಣಿಸಿದಾಗ, ಆತನ ರಚನೆಗಳನ್ನು ಕಲಿಯುಗದಲ್ಲಿ ಬಂದಿರುವ ಆಚಾರ್ಯ

ತ್ರಯವಾದ ಶಂಕರ, ರಾಮಾನುಜ, ಮಧ್ವಾಚಾರ್ಯರವರು ಆಧಾರ ಮಾಡಿಕೊಂಡಿದ್ದಾರೆ. ಆದ್ದರಿಂದ ರಾಮಾನುಜರವರು, ಮಧ್ವರವರು ವಿಷ್ಣುವನ್ನೇ ದೇವರೆಂದು ಹೇಳಿದ್ದಾರೆ.

**ಪ್ರಶ್ನೆ :– ಶಂಕರಾಚಾರ್ಯರವರು ಅದ್ವೈತ ಸಿದ್ಧಾಂತದ ಪ್ರಕಾರ ನಿರಾಕಾರವನ್ನೇ ಹೇಳಿದ್ದಾನೆ ಅಲ್ಲವೆ! ಆತನು ಸಾಕಾರವಾದ ವಿಷ್ಣುವನ್ನು ಕುರಿತು ಹೇಳಲಿಲ್ಲ ಅಲ್ಲವೆ! ಆತನ ದೃಷ್ಠಿಯಲ್ಲಿ ದೇವರು ಯಾರು?**

**ಉತ್ತರ :–** ಶಂಕರನು ಪರಿಪಕ್ವತೆ ಹೊಂದದ ವಯಸ್ಸಿನಲ್ಲಿ ಆರ್ಯರು ಹೇಳೆಂದಿರುವುದು ಹೇಳಿದ್ದಾನೆ ಹೊರತು ತಾನು ಸ್ವತಃವಾಗಿ ತಿಳಿದು ಯಾವುದನ್ನೂ ಹೇಳಲಿಲ್ಲ. ಶಂಕರನಿಗೆ ಸುಮಾರು 27 ವರ್ಷಗಳ ವಯಸ್ಸು ಬಂದ ನಂತರ ವ್ಯಾಸನು ಬರೆದ ಭಗವದ್ಗೀತೆಯನ್ನು ಸಂಸ್ಕೃತದಲ್ಲಿ ಓದಿದ್ದಾನೆ. ಆಗ ನಿಜವಾದ ದೇವರು ಯಾರಾಗಿರುವುದು ಆತನಿಗೆ ಅರ್ಥವಾಗಿದೆ. ಅಲ್ಲಿಯವರೆಗು ತಾನು ತಿಳಿದೋ ತಿಳಿಯದೆಯೋ ಹೇಳಿದ ಅದ್ವೈತವೊಂದರ ನಿಜಸ್ವರೂಪ ತಿಳಿದಿದೆ. ಅದ್ವೈತದಲ್ಲಿನ ಸತ್ಯ ಭಗವದ್ಗೀತೆ ಓದಿದ ನಂತರ ತಿಳಿದ ಶಂಕರನು ದೇವರು ನಿಜವಾಗಲು ನಿರಾಕಾರನೇ ಆದರೂ ಅವಶ್ಯಕತೆಯನ್ನು ಅನುಸರಿಸಿ ಆಗಾಗ ಸಾಕಾರನಾಗುತ್ತಾನೆಂದು ತಿಳಿಯಲ್ಪಟ್ಟಿದ್ದಾನೆ. ಆದರೆ ಆತನ (ಶಂಕರನ) ಭಾವನೆ ಯಾರಿಗೂ ತಿಳಿದಿಲ್ಲ. ತನಗೆ ತಿಳಿದಿರುವ ಭಾವನೆಯನ್ನು ಹೊರಗೆ ಹೇಳಿದರೆ, ಅದು ಅಲ್ಲಿಯವರೆಗೂ, ತನ್ನನ್ನು ಬೆಳೆಸಿ, ಪೋಷಿಸಿ, ಸಿದ್ಧಾಂತಕರ್ತನನ್ನಾಗಿ ಪ್ರಚಾರ ಮಾಡಿದ ಆರ್ಯರಿಗೆ ಸರಿಹೋಗುವುದಿಲ್ಲವೆಂದು ತಿಳಿದು ಶಂಕರನು ತನ್ನ ಭಾವನೆಯನ್ನು ಹೊರಗಿಡಲಿಲ್ಲ. ಶಂಕರನು ತನ್ನ ಭಾವನೆಯನ್ನು ಮುಂಬರುವ ಕಾಲದಲ್ಲಿ ಹೊರಗೆ ಇಡಬಲ್ಲನೆಂದು ಭಾವಿಸಿದ ಆರ್ಯರು ಶಂಕರನ ಮೂಲಕ ಯಾವ ವಿಷಯವನ್ನು ಹೊರಗೆ ಹರಡದಂತೆ ಆತನನ್ನು ಇಲ್ಲದಂತೆ ಮಾಡಿದ್ದಾರೆಂದು ಕೆಲವರಂದುಕೊಂಡಿದ್ದಾರೆ. ಶಂಕರನು ಮೊದಲು ದೇವರ್‍ಯಾರೆಂಬುದು ತಿಳಿಯದ ಪರಿಸ್ಥಿತಿಯಲ್ಲಿದ್ದರೂ, ಕೊನೆಗೆ ಅಸಲಾದ ಪರಮಾತ್ಮನೇ ದೇವರೆಂದು ತಿಳಿಯಲ್ಪಟ್ಟಿದ್ದಾನೆ. ಆದರೆ ಆ

ವಿಷಯವನ್ನು ಹೊರಗೆ ಹೇಳಲಾರದೆಹೋಗಿದ್ದಾನೆ. ಮೂವರು ಆಚಾರ್ಯರು ವೇದಗಳನ್ನೇ ಆಶ್ರಯಿಸಿ ಮುಂದಕ್ಕೆ ಹೋದರೂ ಶಂಕರನು ಜೀವನದ ಕೊನೆಯಭಾಗದಲ್ಲಿ ನಿಜವಾದ ಜ್ಞಾನವನ್ನು, ನಿಜವಾದ ದೇವರನ್ನು ಗುರುತಿಸಿದ್ದಾನೆ. ಉಳಿದ ಇಬ್ಬರು ಆಚಾರ್ಯರಿಗಿಂತಲೂ ಒಂದು ವಿಧವಾಗಿ ಶಂಕರನೇ ಸತ್ಯವನ್ನು ತಿಳಿಯಲ್ಪಟ್ಟಿದ್ದಾನೆಂದು ಹೇಳಬಹುದು.

**ಪ್ರಶ್ನೆ :– ಆರ್ಯರಿಂದ ಶಂಕರಾಚಾರ್ಯರು ಅಪಾಯದಲ್ಲಿ ಸಿಲಿಕಿಕೊಂಡು ಮರಣಿಸುವುದು ನಡೆದಿದೆ. ರಾಮಾನುಜರು ಸಹ ಚಿಕ್ಕವಯಸ್ಸಿನಲ್ಲಿಯೇ ಆರ್ಯರು ಮಾಡಿದ ಹತ್ಯಾ ಪ್ರಯತ್ನದಿಂದ ಹೊರಬಿದ್ದಿದ್ದಾನೆ. ಅಪಾಯವನ್ನು ಕುರಿತಾದ ಸಮಾಚಾರ ತಿಳಿಯದಿದ್ದರೆ ಆತನು ಸಹ ಹತ್ಯೆಗೊಳಗಾಗುತ್ತಿದ್ದನು. ಆರ್ಯರು ತಮಗೆ ಅಡ್ಡ ಬಂದವರನ್ನು, ತಮ್ಮ ಅದ್ವೈತ ಸಿದ್ಧಾಂತಕ್ಕೆ ವಿರುದ್ಧವಾಗಿ ಬೋಧಿಸಿದವರನ್ನು ಸಾಯಿಸಬೇಕೆಂದು ನೋಡಿದ್ದಾರೆ. ಅಂತಹ ಆರ್ಯರ ಮಧ್ಯೆ ಮಧ್ವಾಚಾರ್ಯರವರು ಅದ್ವೈತಕ್ಕೆ ವಿರುದ್ಧವಾಗಿರುವ ದ್ವೈತ ಸಿದ್ಧಾಂತವನ್ನು ಹೇಗೆ ಹೊರಗೆ ಹೇಳಿದ್ದಾನೆ? ದ್ವೈತವನ್ನು ಹೇಳಿದ ಮಧ್ವಾಚಾರ್ಯರನ್ನು ಆರ್ಯರು ಏನು ಮಾಡಲಾರದೆ ಹೋಗಿದ್ದಾರಾ?**

**ಉತ್ತರ:–** ಮಧ್ವಾಚಾರ್ಯರವರು ಕರ್ನಾಟಕ ರಾಷ್ಟ್ರದಲ್ಲಿ 'ಉಡುಪಿ' ಹತ್ತಿರ ನಿವಾಸಿಸುತ್ತಿದ್ದನು. ಮಧ್ವರು ಆಗಾಗ ಅದ್ವೈತಕ್ಕೆ ವಿರುದ್ಧವಾಗಿ ಮಾತನಾಡುತ್ತಿದ್ದನು. ಆದರೂ ಆತನ ವಿರೋಧತೆ ಆರ್ಯರವರೆಗು ತಿಳಿಯಲಿಲ್ಲ. ಮಧ್ವರು ಉಡುಪಿ ಪ್ರಾಂತವಲ್ಲದೆ ಉಳಿದ ಪ್ರಾಂತಗಳಲ್ಲಿ ಎಲ್ಲಿಯೂ ಪ್ರಚಾರವಾಗಲಿಲ್ಲ. ಶಂಕರಾಚಾರ್ಯರವರನ್ನು, ರಾಮಾನುಜಾಚಾರ್ಯರೊಂದಿಗೆ ಹೋಲಿಸಿ ನೋಡಿದರೆ ಅವರು ಹೊರಗಿನ ಪ್ರಪಂಚಕ್ಕೆ ತಿಳಿದಂತೆ ಮಧ್ವಾಚಾರ್ಯರು ಸ್ವಲ್ಪವೂ ಹೊರಗೆ ಪ್ರಚಾರವಾಗಲಿಲ್ಲ. ಆದಕಾರಣ ಮಧ್ವಾಚಾರ್ಯರು ಯಾರೋ ಆರ್ಯರಿಗೆ ತಿಳಿದಿಲ್ಲ. ಆದುದರಿಂದ ಮಧ್ವರು ಅದ್ವೈತ ವಿರೋಧಿಗಳೆಂಬ ವಿಷಯ ಯಾರಿಗೂ ತಿಳಿದಿಲ್ಲ ಆದಕಾರಣ ಆರ್ಯರಿಂದ ಆತನಿಗೆ ಅಪಾಯ ಇಲ್ಲದಂತೆ ಹೋಗಿದೆ. ಮಧ್ವರು ಹೊರಗಿನ ಪ್ರಪಂಚಕ್ಕೆ ತಿಳಿಯದಿರುವುದೇ ಆತನಿಗೆ ರಕ್ಷಣೆ ಆಗಿದೆ.

**ಪ್ರಶ್ನೆ :– "ಬ್ರಹ್ಮ ಸತ್ಯಂ, ಜಗತ್ ಮಿಥ್ಯ" ಎನ್ನುವ ಶಂಕರಾಚಾರ್ಯರ ಮಾತುಗಳಲ್ಲಿ ಎಷ್ಟರಮಟ್ಟಿಗೆ ಸತ್ಯವಿದೆ?**

**ಉತ್ತರ :–**ಶಂಕರಾಚಾರ್ಯರು "ಬ್ರಹ್ಮ ಸತ್ಯಂ, ಜಗತ್ ಮಿಥ್ಯ" ಎಂಬ ಮಾತನ್ನು ಹೇಳಿರುವುದು ನಿಜವೇ ಆದರೂ, ನಿಜವಾದ ಜ್ಞಾನ ಯಾವುದೋ ಶಂಕರನಿಗೆ ತಿಳಿಯದ ಸ್ಥಿತಿಯಲ್ಲಿ ಆ ಮಾತನ್ನು ಆತನು ಹೇಳಿರುವುದಾಗಿದೆ. 27 ವರ್ಷಗಳ ವಯಸ್ಸಿನಲ್ಲಿ ಭಗವದ್ಗೀತೆಯನ್ನು ಓದಿದನಂತರ "ಜಗತ್ ಮಿಥ್ಯ" ಎಂಬಮಾತು ಸರಿಯಾದುದು ಅಲ್ಲವೆಂದು ತಿಳಿದುಕೊಂಡಿದ್ದಾನೆ. ಆದರೆ ಆ ವಿಷಯ ಶಂಕರನು ಹೊರಗೆ ಹೇಳದೆಯೇ ಮರಣಿಸಿದ್ದಾನೆ. ಆದ್ದರಿಂದ ಇಂದಿಗೂ ಅದ್ವೈತವನ್ನು ಹೇಳುವವರು "ಬ್ರಹ್ಮಸತ್ಯಂ, ಜಗತ್ ಮಿಥ್ಯ" ಎಂದು ಹೇಳುತ್ತಿದ್ದಾರೆ. ಆದರೆ ಆ ಮಾತು ಪೂರ್ತಿ ಸತ್ಯವಲ್ಲವೆಂದು ಅವರಿಗೆ ತಿಳಿದಿಲ್ಲ. ಆದುದರಿಂದ ಹಾಗೇ ಹೇಳುತ್ತಿದ್ದಾರೆ.

**ಪ್ರಶ್ನೆ :– ಅದ್ವೈತರು "ಓಂ ನಮಃಶಿವಾಯ" ಎಂಬ ಮಂತ್ರವನ್ನು ಹೇಳುತ್ತಾ ತಮ್ಮ ದೇವರು ನಿರಾಕಾರ ಆದವನೆಂಬ ಗುರುತಿಗಾಗಿ ಶಿವಲಿಂಗವನ್ನು ತೋರಿಸುತ್ತಾರೆ. ವಿಶಿಷ್ಟಾದ್ವೈತರು, ದ್ವೈತರು ತಮ್ಮ ದೇವರು ಸಾಕಾರವಾದ ವಿಷ್ಣುವೆಂದು ಮೂರು ನಾಮಗಳನ್ನೇ ಧರಿಸುತ್ತಿದ್ದರು. ಅದ್ವೈತರು ವಿಷ್ಣುವನ್ನಾಗಲಿ, ಮೂರು ನಾಮಗಳನ್ನಾಗಲಿ ಪೂರ್ತಿ ವಿರೋಧಿಸುತ್ತಾರೆ. ದ್ವೈತರು, ವಿಶಿಷ್ಟಾದ್ವೈತರು ಶಿವನನ್ನು, ವಿಭೂತಿ ರೇಖೆಗಳನ್ನು ಎಲ್ಲಿಯವರೆಗು ವಿರೋಧಿಸುತ್ತಾರೆ?**

**ಉತ್ತರ :–**ಅದ್ವೈತರು ವಿಶಿಷ್ಟಾದ್ವೈತರು ಒಬ್ಬರ ದೇವರನ್ನು ಮತ್ತೊಬ್ಬರು ಪೂರ್ತಿಯಾಗಿ ವಿರೋಧಿಸುತ್ತಿದ್ದರು. ವಿಷ್ಣುವೆಂದರೆ ಅದ್ವೈತರಿಗು, ಶಿವನೆಂದರೆ ವಿಶಿಷ್ಟಾದ್ವೈತರಿಗು ಸ್ವಲ್ಪವೂ ಸರಿಹೋಗುವುದಿಲ್ಲ. ಆದರೆ ವಿಶಿಷ್ಟಾದ್ವೈತರಂತೆ ಮಧ್ವರಿಗೆ ಶಿವನೆಂದರೇ ವಿರುದ್ಧ ಭಾವನೆ ಇಲ್ಲ. ಶಿವನಿಗು ಭಾರತದಲ್ಲಿ ಅಪಾರವಾದ ಆದರಣೆ ಇರುವ ವಿಷಯ ಮಧ್ವರು ಗ್ರಹಿಸಿದ್ದಾರೆ. ಇದಕ್ಕೆ ಜೊತೆಯಾಗಿ ಮಧ್ವಾಚಾರ್ಯರು ಸ್ವತಃವಾಗಿ ಷಿವಲ್ಲಿ ಶೈವಕುಟುಂಬದಲ್ಲಿ

ಜನ್ಮಿಸಿದ್ದಾನೆ. ದಕ್ಷಿಣ ಕನ್ನಡ ದೇಶದಲ್ಲಿ ಚಂದ್ರಮೌಳೀಶ್ವರನಾಗಿ, ಅನಂತೇಶ್ವರನಾಗಿ, ಶಿವನು ಅನೇಕ ದೇವಾಲಯಗಳಲ್ಲಿ ಆರಾಧಿಸಲ್ಪಡುವುದು ಶ್ರೀ ಮಧ್ವರು ನೋಡಿದ್ದಾರೆ. ಆದ್ದರಿಂದ ದ್ವೈತ ಸಿದ್ಧಾಂತದಲ್ಲಿ ಶಿವನಿಗೆ ಅತ್ಯುನ್ನತ ಸ್ಥಾನ ಇದೆ. ಚತುರ್ಮುಖ ಬ್ರಹ್ಮ, ವಾಯುದೇವರು, ಉಳಿದ ದೇವತೆಗಳು ಶಿವನ ನಂತರದವರೇ. ಆದ್ದರಿಂದ ಶಿವನಿಗೆ ವಿರುದ್ಧವಾಗಿ ಮಧ್ವರ ದ್ವೈತದಲ್ಲಿ ಎಲ್ಲಿಯೂ, ಯಾವ ರಚನೆಯಲ್ಲಿಯೂ ಇಲ್ಲ. ಮಧ್ವರು ವಾಯುದೇವರ ಪುತ್ರನಾದ ಹನುಮಂತನನ್ನು, ಪ್ರಹ್ಲಾದನ ಅವತಾರವಾದ ರಾಘವೇಂದ್ರ ಸ್ವಾಮಿಯನ್ನು ಹೆಚ್ಚಾಗಿ ಆರಾಧಿಸುತ್ತಾರೆ. ಈಗಲೂ ಹನುಮಂತನ ದೇವಾಲಯದಲ್ಲಿ ಮಧ್ವರೇ ಅರ್ಚಕರಾಗಿರುತ್ತಾರೆ.

**ಪ್ರಶ್ನೆ :– 'ಸಿದ್ಧಾಂತ' ಎಂದರೆ ಅದು ಒಂದು ಶಾಸ್ತ್ರದಲ್ಲಿನ ಅಂಶವಾಗಿ ಇರಬೇಕು. ತ್ರಿಮತಾಚಾರ್ಯರು ಮೂವರು ವೇದಗಳನ್ನೇ ಆಶ್ರಯಿಸಿದ್ದಾರೆ. ಒಬ್ಬರು ದೇವರನ್ನು ನಿರಾಕಾರನೆಂದರೇ ಮತ್ತೊಬ್ಬರು 'ಅಲ್ಲ ಸಾಕಾರನು' ಎಂದು ಹೇಳಿದ್ದಾರೆ. ಹಾಗಿರುವಾಗ ಎರಡು ಮಾತುಗಳು ಸತ್ಯವಲ್ಲ ಅಲ್ಲವೆ! ಅದರಲ್ಲಿ ಯಾವುದೋ ಒಂದು ಮಾತ್ರ ಸತ್ಯವಾಗಿದ್ದು ಉಳಿದ ಮತ್ತೊಂದು ಅಸತ್ಯವಾಗಬಲ್ಲದು, ಯಾವುದು ಅಸತ್ಯವಾದರೂ ಅದು ಸಿದ್ಧಾಂತ ಆಗುವುದಿಲ್ಲ. ಶಾಸ್ತ್ರ ಎಂದರೇ ಸತ್ಯ ಎಂದು, ಶಾಸನ ಎಂದು ಹೇಳಲಾಗುತ್ತಿದೆ. ಹಾಗಿರುವಾಗ ಶಾಸ್ತ್ರದಲ್ಲಿನ ಯಾವ ಸಿದ್ಧಾಂತವು ಅಸತ್ಯವಾಗಿರುವುದಿಲ್ಲ. ಅದ್ವೈತ, ವಿಶಿಷ್ಟಾದ್ವೈತಗಳಲ್ಲಿ ಒಂದು ಮಾತ್ರ ಸತ್ಯವಾದಾಗ ಎರಡನೆಯದು ಸಿದ್ಧಾಂತವೇ ಅಲ್ಲ. ಈಗ ಅದ್ವೈತ, ವಿಶಿಷ್ಟಾದ್ವೈತಗಳಲ್ಲಿ ಯಾರದು ಸಿದ್ಧಾಂತ? ಯಾರದು ಸಿದ್ಧಾಂತ ಅಲ್ಲ?**

**ಉತ್ತರ :–** ಈ ದಿನ ಹಿಂದೂಮತದಲ್ಲಿ ದೊಡ್ಡದಾಗಿ ಹೇಳಿಕೊಳ್ಳುವ ಸಿದ್ಧಾಂತಗಳು ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಎನ್ನುವವಾಗಿದ್ದರೆ ಮೂರು ಶಾಸ್ತ್ರಬದ್ಧವಾದವುಗಳು ಅಲ್ಲದಿರುವುದರಿಂದ ಅವು ಸಿದ್ಧಾಂತಗಳೆನ್ನಲ್ಪಡುವುದಿಲ್ಲ. ಅದ್ವೈತವಾಗಲಿ, ವಿಶಿಷ್ಟಾದ್ವೈತವಾಗಲಿ, ದ್ವೈತವಾಗಲಿ ಮೂರೂ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿಲ್ಲ. ಶಾಸ್ತ್ರಗಳು ಭೂಮಿಮೇಲೆ ಒಟ್ಟು ಆರು ಇವೆ. ಆರು ಶಾಸ್ತ್ರಗಳಲ್ಲಿ ಕೇವಲ

ಒಂದೇ ಬ್ರಹ್ಮವಿದ್ಯಾ ಶಾಸ್ತ್ರ ಇದೆ. ದೇವರಿಗೆ ಸಂಬಂಧಿಸಿರುವುದನ್ನು ಬ್ರಹ್ಮವಿದ್ಯಾ ಶಾಸ್ತ್ರ ಎನ್ನುತ್ತೇವೆ. ಬ್ರಹ್ಮವಿದ್ಯೆ ಎಂದರೇ 'ದೊಡ್ಡ ವಿದ್ಯೆ' ಎಂದು ಅರ್ಥ. ಒಂದು ದೈವವಿದ್ಯೆಯಾದ ಬ್ರಹ್ಮವಿದ್ಯೆಗೆ ಸಂಬಂಧಿಸಿರುವುದಾಗಿದ್ದು, ಉಳಿದ ಐದು ಪ್ರಪಂಚಕ್ಕೆ ಸಂಬಂಧಿಸಿರುವವಾಗಿ ಇವೆ. ದೇವರಿಗೆ ಸಂಬಂಧಿಸಿದ ವಿಷಯವಾದ್ದರಿಂದ ಮೂವರು ಆಚಾರ್ಯರು ಹೇಳಿದ ಸಿದ್ಧಾಂತಗಳು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವಾಗಿರಬೇಕು. ಆದರೆ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮೂರು ಬ್ರಹ್ಮವಿದ್ಯೆಗೆ ಸಂಬಂಧ ಇಲ್ಲದಿರುವವಾಗಿವೆ. ಆದ್ದರಿಂದ ಮೂವರು ಆಚಾರ್ಯರು ಪ್ರತಿಪಾದಿಸಿರುವವು ಕೇವಲ ಪ್ರತಿಪಾದನೆಗಳೆ ಹೊರತು, ಅವು ಸಿದ್ಧಾಂತಗಳು ಅಲ್ಲ. ಬ್ರಹ್ಮವಿದ್ಯಾಶಾಸ್ತ್ರಕ್ಕು ಈ ಮೂರು ಸಿದ್ಧಾಂತಗಳಿಗು ಎಂತಹ ಸಂಬಂಧವಿಲ್ಲ.

**ಪ್ರಶ್ನೆ :– ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ನೋಡಿದರೆ ಅವು ಸಿದ್ಧಾಂತಗಳಲ್ಲವೆಂದು ತಿಳಿಯುತ್ತಿದೆಯೆಂದು ನೀವು ಹೇಳುತ್ತಿದ್ದೀರಿ ಅಲ್ಲವೆ! ನೀವು ಯಾವುದನ್ನು ಬ್ರಹ್ಮವಿದ್ಯೆ ಶಾಸ್ತ್ರವಾಗಿ ಲೆಕ್ಕಿಸುತ್ತಿದ್ದೀರಾ.**

**ಉತ್ತರ :–** ದೇವರು ಸ್ವತಃವಾಗಿ ಹೇಳಿರುವುದೇ ದೈವಸಿದ್ಧಾಂತಗಳಿಂದ ಕೂಡಿದ ದೈವಶಾಸ್ತ್ರವೆಂದು ಹೇಳಬಹುದು. ದೇವರು ಎನ್ನುವವನು ಸೃಷ್ಠಿ ಆದಿಯಲ್ಲಿಯೇ ತನ್ನ ಧರ್ಮಗಳನ್ನು ಕುರಿತು ಸಂಪೂರ್ಣವಾಗಿ ಹೇಳಿದ್ದಾನೆ. ಅದು ದೈವ ಧರ್ಮಗಳಿಂದ ಕೂಡಿಕೊಂಡಿರುವುದರಿಂದ ಅದನ್ನೇ ಬ್ರಹ್ಮವಿದ್ಯಾ ಶಾಸ್ತ್ರ ಎಂದು ಕರೆಯುತ್ತಿದ್ದೇವೆ. ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನ ಗ್ರಂಥರೂಪದಲ್ಲಿ ಬರೆಯಲ್ಪಡಲಿಲ್ಲ. ನಂತರ ದ್ವಾಪರಯುಗದಲ್ಲಿ ಸೃಷ್ಠಿ ಆದಿಯಲ್ಲಿನ ಜ್ಞಾನವನ್ನೇ ಕೃಷ್ಣನು ಅರ್ಜುನನಿಗೆ ಹೇಳಿದಾಗ ವ್ಯಾಸನು ಅದನ್ನು ಗ್ರಂಥರೂಪವಾಗಿ ಮಾಡಿದ್ದಾನೆ. ವ್ಯಾಸನು ಬರೆದ ಬ್ರಹ್ಮವಿದ್ಯಾಶಾಸ್ತ್ರವೇ ಈದಿನ ಭಗವದ್ಗೀತೆಯಾಗಿ ನಮ್ಮಮುಂದೆ ಇದೆ. ಶಾಸ್ತ್ರ ನಮ್ಮ ಮುಂದಿರುವಾಗ, ಏನನ್ನಾದರೂ ಶಾಸ್ತ್ರದೊಂದಿಗೆ ಹೋಲಿಸಿ ನೋಡಬಹುದು. ಹಾಗೆಯೇ ಭಗವದ್ಗೀತೆಯೊಂದಿಗೆ ಹೋಲಿಸಿ ಮೂವರ ಸಿದ್ಧಾಂತಗಳನ್ನು ನೋಡಿದರೆ ದೇವರು ಹೇಳಿದ ಧರ್ಮಗಳಿಗೆ

ಅವು ಸ್ವಲ್ಪವೂ ಸರಿಹೋಗುವುದಿಲ್ಲ. ಆದಕಾರಣ ಅದ್ವೈತ, ವಿಶಿಷ್ಟಾದ್ವೈತ, ದ್ವೈತಗಳೆನ್ನುವವು ಸಿದ್ಧಾಂತಗಳಲ್ಲ. ಶಂಕರಾಚಾರ್ಯರು ಹೇಳಿದ ಅದ್ವೈತ ಎಂದರೆ 'ಎರಡು ಅಲ್ಲದಿರುವುದು ಮೂರು' ಎಂದು ಹೇಳಿದರೇ ಅದು ಸಿದ್ಧಾಂತವಾಗುತ್ತದೆ. ಆದರೆ 'ಎರಡು ಅಲ್ಲದಿರುವುದು ಒಂದು' ಎಂದು ಹಿಂದಕ್ಕೆ ಹೇಳುವುದರಿಂದ ಅದು ಸಿದ್ಧಾಂತದಿಂದ ಇಳಿಜಾರಿಹೋಗಿದೆ. ದೇವರು ರೂಪ, ನಾಮ, ಕ್ರಿಯಾರಹಿತನು ಎನ್ನುವ ದೈವ ಧರ್ಮಕ್ಕೆ ಉಳಿದ ಎರಡು ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳಿರುವುದರಿಂದ ಅವುಗಳನ್ನು ಸಿದ್ಧಾಂತ ಗಳೆನ್ನುವುದಕ್ಕೆ ಸಾಧ್ಯವಿಲ್ಲ. ಹಾಗೆ ಹೇಳಿದರೆ ಇಲ್ಲಿಯವರೆಗೂ ಸಿದ್ಧಾಂತಕರ್ತ ರೆಂದುಕೊಂಡವರು ಸಿದ್ಧಾಂತಕರ್ತರೇ ಅಲ್ಲ.

**ಪ್ರಶ್ನೆ :– ಊರೆಲ್ಲಾ ಉತ್ತರವೆಂದರೇ ನೀವೊಬ್ಬರು ಮಾತ್ರ ದಕ್ಷಿಣವೆನ್ನುತ್ತಿದ್ದೀರಾ. ನೀವು ಹಾಗೆ ಹೇಳಬಹುದಾ?**

**ಉತ್ತರ:–** ಸತ್ಯಪ್ರಕಟಣೆ ಎಷ್ಟು ಕೆಟ್ಟದಾಗಿ ಕಾಣಿಸಿದರೂ ಸತ್ಯ ಬೇಕೆಂದುಕೊಂಡಾಗ ತಪ್ಪದೆ ಹೇಳಬೇಕಾಗಿ ಬರುತ್ತದೆ. ಅಸತ್ಯವನ್ನು ಹೇಳಿದರೂ ಫರವಾಗಿಲ್ಲ ಹೇಳಿರಿ ಎಂದರೆ ಎಲ್ಲರವೂ ಸಿದ್ಧಾಂತಗಳೇಯೆಂದು ಹೇಳಬಹುದು. ಇತರರ ಮುಖಸ್ತುತಿಗೆ ಮಾತನಾಡುವುದಕ್ಕೆ, ಇತರರಿಗೆ ಇಷ್ಟವಾಗುವಂತೆ ಹೇಳುವುದಕ್ಕೆ ಮಾತನಾಡುವಮಾತು ಇತರರನ್ನನುಸರಿಯೇ ಇರುತ್ತದೆ. ಆಗ ಸತ್ಯವನ್ನು ಮಾತನಾಡಬಹುದು ಅಸತ್ಯವನ್ನು ಮಾತನಾಡಬಹುದು. ಉದಾಹರಣೆಗೆ ಹೇಳಿದರೆ ಒಬ್ಬ ದೊಡ್ಡಮನುಷ್ಯ ಒಂದುದಿನ ಎರಡು ಸಭೆಗಳಲ್ಲಿ ಹಾಜರಾಗಿ ಅಲ್ಲಿರುವವರಿಗೆ ಯಾವುದಾದರೂ ಒಂದು ವಿಷಯವನ್ನು ತಿಳಿಸಬೇಕಾಗುತ್ತದೆ. ಮೊದಲ ಸಭೆಗೆ ಉಪನ್ಯಾಸಕನಾಗಿ ಹೋಗಿದ್ದಾನೆ. ಅಲ್ಲಿ ಸಭೆಯಲ್ಲಿರುವವರೆಲ್ಲರೂ ಒಂದು ಜೈಲಿನಲ್ಲಿ ಖೈದಿಗಳಾಗಿರುವವರು. ಅವರು ಎಲ್ಲರೂ ಕಳ್ಳತನಮಾಡಿ ಕಳ್ಳರಾಗಿ ಸಿಕ್ಕಿ ಜೈಲಿನಲ್ಲಿ ಶಿಕ್ಷೆಗಳು ಅನುಭವಿಸುತ್ತಿರುವವರು. ಅವರಮುಂದೆ ನಿಂತು ಅವರಿಗೆ ಅರ್ಥವಾಗುವ ವಿಷಯವನ್ನೇ ಹೇಳಬೇಕು. ಅವರಿಗೆ ಇಷ್ಟವಾಗದಿದ್ದರೂ, ಅವರೆಲ್ಲರಿಗೂ ವಿರುದ್ಧವಾದರೂ ಫರವಾಗಿಲ್ಲ ಅಂದು

ಕೊಂಡರೆ ಮತ್ತೊಂದು ವಿಧವಾಗಿ ಹೇಳಬೇಕು. ಅಲ್ಲಿರುವ ಕಳ್ಳರ ಮುಖಸ್ತುತಿಗೆ ಅವರಿಗೆ ಇಷ್ಟವಾಗುವಂತೆ ಮಾತನಾಡುವುದಕ್ಕೆ ಅಸತ್ಯವನ್ನು ಮಾತನಾಡಬೇಕು. ಅವರಿಗೆ ವಿರುದ್ಧವಾಗಿ ಹೇಳಿದರೂ ಫರವಾಗಿಲ್ಲ ಅಂದುಕೊಂಡರೆ ಸತ್ಯವನ್ನೇ ಮಾತನಾಡಬೇಕು.

ಉಪನ್ಯಾಸಕನಾಗಿರುವ ಆತನು ಮೊದಲು ಸಭೆಯಲ್ಲಿನವರನ್ನು ನೋಡಿ ಅವರು ಎಲ್ಲರೂ ಕಳ್ಳರೇ ಎಂದು ತಿಳಿದಿರುವುದರಿಂದ ಅವರೊಂದಿಗೆ ಒಳ್ಳೆಯದಾಗಿ ಮಾತನಾಡುವುದೇ ಚೆನ್ನಾಗಿರುತ್ತದೆಯೆಂದು ನಿರ್ಣ ಯಿಸಿಕೊಂಡಿದ್ದಾನೆ. ಆಗ ಕಳ್ಳರಿಗೆ ಇಷ್ಟವಾದಂತೆ ಹೇಳುತ್ತಾ, ಮನುಷ್ಯ ಜೀವನದಲ್ಲಿ ಕಳ್ಳತನ ಮಾಡುವುದು ಅತ್ಯಂತ ತಿಳುವಳಿಕೆಯುಳ್ಳ ಕೆಲಸ. ಒಳ್ಳೆಯ ತಿಳುವಳಿಕೆಯುಳ್ಳವರೇ ಕಳ್ಳತನ ಮಾಡಬಲ್ಲರು. ಅವರ ತಿಳುವಳಿಕೆ ಅನುಗುಣವಾಗಿ ಅವರ ಕಳ್ಳತನದಲ್ಲಿ ಕಲಾಕೌಶಲ್ಯವನ್ನು ಹೊಂದಿರುತ್ತಾರೆ. ಅಷ್ಟೇ ಅಲ್ಲದೆ ಲೋಕದಲ್ಲಿ ಎಲ್ಲರನ್ನು ಸಮಾನವಾಗಿ ನೋಡುವ ಜ್ಞಾನ ಇರುವವನೇ ಕಳ್ಳತನ ಮಾಡುತ್ತಾನೆ. ಅಂತಹವನು 'ಇತನ ಧನವನ್ನು ತೆಗೆದುಕೊಳ್ಳಬಾರದು, ಆತನ ಧನವನ್ನು ತೆಗೆದುಕೊಳ್ಳಬಹುದು.' ಎಂಬ ಬೇಧ ಇರುವುದಿಲ್ಲ. ಅಂತಹವನಿಗೆ ಎಲ್ಲರೂ ಸಮಾನವೇ. ಸುಖ ದುಃಖಗಳನ್ನು ಸಮಾನವಾಗಿ ನೋಡುವವನು' ಅವನ ಧನವನ್ನು ಕಳ್ಳತನ ಮಾಡಿದರೆ ಅವನು ಬಾಧೆಪಡುತ್ತಾನೆಂದು ಅಂದುಕೊಳ್ಳುವುದಿಲ್ಲ. ಅಂತಹವನಿಗೆ ಎಂತಹ ಬೇಧ ಗುಣ ಇರುವುದಿಲ್ಲ. ಸಮಯಕ್ಕೆ ಯಾರ ಧನ ದೊರೆತರು ಅವನು ತೆಗೆದುಕೊಳ್ಳುತ್ತಾನೆ. ಪಕ್ಕದಲ್ಲಿರುವ ವ್ಯಕ್ತಿಯ ದುಃಖವನ್ನಾಗಲಿ, ಕರ್ಮವನ್ನಾಗಲಿ ಲೆಕ್ಕ ಮಾಡದವನು ಜ್ಞಾನಿ ಎನ್ನಲಾಗುತ್ತದೆ. ಆದ್ದರಿಂದ 'ಇತರರ ಬಾಧೆಯನ್ನು ಲೆಕ್ಕಿಸದೆ ತನ್ನ ಕರ್ತವ್ಯವನ್ನು ಮಾಡುವವನು ಕಳ್ಳನಾದರೂ, ದೊರೆ ಆದರೂ ಒಂದೇ' ಎಂದು ಅಜ್ಞಾನವನ್ನು ಜ್ಞಾನವನ್ನು ಸೇರಿಸಿ ಇಲ್ಲದ ಅಸತ್ಯದ ಮಾತುಗಳೆಲ್ಲವನ್ನು ಹೇಳುವುದರಿಂದ ಅಲ್ಲಿರುವವರ ಮನೋಭಾವನೆಗಳನ್ನು ಗೌರವಿಸಿದಂತಾಗಿದೆ. ಆ ಸಭೆಯಲ್ಲಿರುವ ಕಳ್ಳರೆಲ್ಲರಿಗೂ ಆತನು ಹೇಳಿದ ಮಾತುಗಳು ಪೂರ್ತಿ ಇಷ್ಟವಾಗಿವೆ. ಆಗ ಅಲ್ಲಿರುವವರೆಲ್ಲರೂ ಆತನು ಚೆನ್ನಾಗಿ ಹೇಳಿದ್ದಾನೆಂದು ಹೊಗಳುವುದು ನಡೆದಿದೆ.

ಯಾರ ಮನೋಭಾವನೆಗಳು ಅವರಿಗೆ ಚೆನ್ನಾಗಿರುತ್ತವೆ. 'ಕಳ್ಳನಿಗೆ ಕಳ್ಳನ ಚಿಂತೆ, ವ್ಯಭಿಚಾರಿಗೆ ವ್ಯಭಿಚಾರದ ಚಿಂತೆ' ಎನ್ನುವಂತೆ ಕಳ್ಳನಿಗೆ ಕಳ್ಳತನವೇ ಮನೋಭಾವವಾಗಿರುತ್ತದೆ. ಆದರೆ ಅವನ ಮುಖಸ್ತುತಿಗೆ ಅಲ್ಲಿ ಕಳ್ಳತನ ಒಳ್ಳೆಯದೆಂದು ಹೇಳಿದರೆ ಅಸತ್ಯವನ್ನು ಹೇಳಿದಂತಾಗುತ್ತದೆ. ಸತ್ಯವನ್ನು ಮುಚ್ಚಿಟ್ಟಂತಾಗುತ್ತದೆ. ಹಾಗಲ್ಲದೆ ಸತ್ಯವನ್ನೇ ಹೇಳಿದರೆ ಅವನ ಮನೋ ಭಾವನೆಗಳಿಗೆ ದಕ್ಕೆ ಬಂದಂತಾಗುತ್ತದೆ. ಅವರ ಭಾವನೆಗಳನ್ನು ಅಗೌರಪಡಿಸಿ ದಂತಾಗುತ್ತದೆ. ಶಾಸ್ತ್ರಪದ್ಧತಿ ಪ್ರಕಾರವಾದರೆ ಸತ್ಯವನ್ನು ಹೇಳಬೇಕಾಗಿರುತ್ತದೆ. ಅಶಾಸ್ತ್ರಿಯತೆಯನ್ನು ಹೇಳಿದರೆ, ಅಸತ್ಯವನ್ನು ಹೇಳಿದಂತಾಗುತ್ತದೆ. ಈಗ ಉಪನ್ಯಾಸಕನು ಎರಡನೆ ಸಭೆಯೊಳಗೆ ಹೋಗಿದ್ದಾನೆ. ಅಲ್ಲೆಲ್ಲರೂ ನೀತಿ ನಿಜಾಯಿತಿ ಇರುವವರಿರುವುದರಿಂದ ಆ ಸಭೆಯಲ್ಲಿ ನೀತಿಯನ್ನು ಕುರಿತು, ಜ್ಞಾನವನ್ನು ಕುರಿತು ಶಾಸ್ತ್ರಪದ್ಧತಿಯಾಗಿ ಹೇಳಿದ್ದಾರೆ. ಹೇಳಿದ ಮಾತುಗಳಲ್ಲಿ ಕಳ್ಳತನ, ವ್ಯಭಿಚಾರ ಇತರರ ದುಃಖಗಳ ಮೇಲೆ ಆಧಾರಪಟ್ಟಿರುವುದರಿಂದ ಆ ಕೆಲಸಗಳು ಮಾಡುವುದರಿಂದ ಪಾಪ ಸಂಭವಿಸುತ್ತದೆ. ಪಾಪ ಬಂದರೆ ಅದರ ಕಾರಣದಿಂದ ನಂತರ ಜನ್ಮಗಳಲ್ಲಿ ಪಾಪವನ್ನು ದುಃಖರೂಪದಲ್ಲಿ, ಕಷ್ಟ ರೂಪದಲ್ಲಿ, ರೋಗರೂಪದಲ್ಲಿ ಅನುಭವಿಸಬೇಕಾಗಿ ಬರುತ್ತದೆ. ಆದ್ದರಿಂದ ಅನ್ಯಾಯ, ಅವಿನೀತಿ ಕೆಲಸಗಳಿಗೆ ಮನುಷ್ಯ ದೂರವಾಗಿರಬೇಕೆಂದು ಹೇಳಿದ್ದಾನೆ. ಇಲ್ಲಿ ಹೇಳಿರುವುದು ಒಂದುವಿಧವಾದ ಮಾತಾಗಿದ್ದು, ಕಳ್ಳರ ಸಭೆಯಲ್ಲಿ ಹೇಳಿರುವುದು ಮತ್ತೊಂದು ವಿಧವಾದ ಮಾತುಗಳು. ಆ ವಿಧವಾಗಿ ಮಾತನಾಡುವವನನ್ನು 'ಕಪಟನು' ಎಂದು ಕರೆಯುತ್ತಾರೆ. ಇನ್ನೂ ಹಾಗೆ ಎರಡು ವಿಧಗಳಲ್ಲಿ ಮಾತನಾಡುವವನನ್ನು ಸ್ಥಿರ ಬುದ್ಧಿ ಇಲ್ಲದವನೆಂದು ಸಹ ಕರೆಯುತ್ತಾರೆ. ಒಂದು ಪದ್ಧತಿಯಿಲ್ಲದ ಮನುಷ್ಯನಾಗಿ ಹೇಳಲಾಗುತ್ತದೆ. ದೇವರ ಲೆಕ್ಕದಲ್ಲಿ ಆತನು ಒಳ್ಳೆಯವನು ಅಲ್ಲ. ಆದುದರಿಂದ ಏನು ಮಾತನಾಡಬೇಡ, ಮಾತನಾಡಿದರೆ ಸಾಧ್ಯವಾದಷ್ಟು ಸತ್ಯವೇ ಹೇಳಬೇಕೆನ್ನುವುದು ಹಿರಿಯರಮಾತು. ಹಿರಿಯರ ಮಾತನ್ನು ಅನುಸರಿಸಿ ಸಮಾಜಕ್ಕೆ ಒಳ್ಳೆಯದು ಮಾಡಬೇಕೆಂದು ಕೊಂಡರೆ ತಾನು ಕೆಟ್ಟವನಾಗಿ ಕಾಣಿಸಿದರೂ ಫರವಾಗಿಲ್ಲ, ಸಮಾಜಕ್ಕೆ

ಒಳ್ಳೆಯದನ್ನು ಕೈಗೂಡಿಸುವ ಮಾತುಗಳನ್ನೇ ಹೇಳಬೇಕು. "ನಿಜ ನಿಷ್ಠೂರ, ಸತ್ಯ ಲೋಕವಿರುದ್ಧ" ಎಂಬ ಮಾತುಗಳನ್ನು ಲೆಕ್ಕಮಾಡದೆ ಒಂದು ನಿಜಾಯಿತಿಯಾಗಿ ನಾನು ನಡೆದುಕೊಂಡರೆ ನನ್ನನ್ನು ನೋಡಿ ನಾಳೆ ಸಮಾಜವು ಸಹ ನಿಜಾಯಿತಿಯಾಗಿ ನಡೆಯುತ್ತದೆ ಎಂಬ ಉದ್ದೇಶದಿಂದಲೇ ಮಾತನಾಡುವ ಮಾತಾಗಲಿ, ಮಾಡುವ ಕೆಲಸವಾಗಲಿ ಇರಬೇಕೆಂದು ಕೋರಿಕೊಳ್ಳುತ್ತಿದ್ದೇನೆ. ಆದುದರಿಂದ ಸಿದ್ಧಾಂತಕರ್ತರ ವಿಷಯದಲ್ಲಿ ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ನೋಡಿದರೆ 'ಅವರವು ಪ್ರತಿಪಾದನೆಗಳೇ ಹೊರತು, ನಿಜಕ್ಕೆ ಸಿದ್ಧಾಂತಗಳು ಅಲ್ಲವೆಂದು ಹೇಳಬಹುದು. ನನ್ನ ಮಾತಿನಲ್ಲಿನ ಸತ್ಯವು ತಿಳಿಯದವರಿಗೆ ಲೋಕ ವಿರುದ್ಧವಾಗಿಯೇ ಕಾಣಿಸಿದರೂ 'ಸತ್ಯವನ್ನೇ ಹೇಳಬೇಕು' ಎಂಬ ಉದ್ದೇಶ ದಿಂದಲೇ ಹೇಳುತ್ತಿದ್ದೇನೆ.

**ಪ್ರಶ್ನೆ :- ನೀವು ಹೇಳುವುದು ನಿಮಗೆ ಸತ್ಯವೇ ಆದರೂ, ಇನ್ನೊಬ್ಬರಿಗೆ ಅಸೂಯೆಯಿಂದ ಹೇಳುವ ಮಾತುಗಳಾಗಿ ಕಾಣಿಸುತ್ತಿರಬಹುದು. ಹಾಗಿರುವಾಗ ಅವರು ನಿಮ್ಮನ್ನು ವಿಮರ್ಶಿಸಬಹುದು. ಅದಕ್ಕೆ ನೀವೇನನ್ನುತ್ತೀರಿ?**

**ಉತ್ತರ :-** ನಾವು ಯಾರ ತಪ್ಪುಗಳನ್ನು ಲೆಕ್ಕಿಸದಂತೆ ನಮಗೆ ತಿಳಿದಿರುವ ದೈವಜ್ಞಾನವನ್ನು ನಾವು ಹೇಳುತ್ತಾ ಹೋಗುತ್ತಿರುವಾಗ ಅದ್ವೈತ ಸಿದ್ಧಾಂತವನ್ನು, ದ್ವೈತ ಸಿದ್ಧಾಂತವನ್ನು ಅನುಸರಿಸುವವರು ನಮ್ಮ ಭಕ್ತರನ್ನು ಎಷ್ಟೋಕಾಲದಿಂದ ವೇಧಿಸುವುದು, ದಾಳಿಗಳು ಮಾಡುವುದು ಮಾಡುತ್ತಿದ್ದಾರೆ. ನಾವು ನಮ್ಮ ಸಿದ್ಧಾಂತ ಭಗವದ್ಗೀತೆಯನ್ನು ಮನೆಮನೆ ಸುತ್ತಿ ಪ್ರಚಾರ ಮಾಡುತ್ತಿದ್ದರೆ ಸಂತೋಷಪಡಬೇಕಾಗಿರುವುದು ಬಿಟ್ಟು ಅಸೂಯೆಯಿಂದ ನೋಡುತ್ತಿದ್ದಾರೆ. ಬೌದ್ಧರನ್ನು, ಜೈನರನ್ನು, ಸಿಕ್ಕರನ್ನು ಹಿಂದೂಮತದಿಂದ ಬೇರೆಮಾಡಿ, ಅವರು ಬೇರೆಮತದವರೆಂದು ಹೇಳಿದ ಸೂತ್ರವನ್ನೇ ಉಪಯೋಗಿಸಿ ಹಿಂದೂ ಮತದಲ್ಲಿಯೇ ನಿಜವಾದ ಸಿದ್ಧಾಂತವಾಗಿರುವ ತ್ರೈತ ಸಿದ್ಧಾಂತವನ್ನು ಹಿಂದೂ ಮತ ಸಿದ್ಧಾಂತವೇ ಅಲ್ಲವೆನ್ನುತ್ತಾ, ಪರಮತವೆಂದು ಹೆಸರಿಟ್ಟು ದೂಷಿಸುವುದೇ ಅಲ್ಲದೆ, ಭೌತಿಕದಾಳಿಗಳು ಸಹ ಮಾಡುತ್ತಿದ್ದಾರೆ. ಎಲ್ಲದಕ್ಕಿಂತ ಸುಲಭವಾದ

ಆರೋಪಣೆ ಪರಮತ ಪ್ರಚಾರವೆಂದು ಹೆಸರಿಟ್ಟು ನಿಂದಿಸುವುದು, ದಾಳಿ ಮಾಡುವುದು ಈದಿನ ಹಿಂದೂಗಳಲ್ಲಿರುವ ಕೆಲವರು ಅಜ್ಞಾನಿಗಳಿಗೆ ಸುಲಭವಾಗಿಹೋಗಿದೆ. ಸ್ವಲ್ಪವೂ ಆತ್ಮಜ್ಞಾನವಾಗಲಿ, ಭಗವದ್ಗೀತೆ ಜ್ಞಾನವಾಗಲಿ ತಿಳಿಯದವರು ಆರ್ಯರು ಹೇಗೆ ಹೇಳಿದರೇ ಹಾಗೆ ಕೇಳುವವರು, ತಾವು ಹಿಂದೂಮತವನ್ನು ಉದ್ಧರಿಸುವ ಹಿಂದೂಮತ ರಕ್ಷಕರೆಂದು ಹೆಸರು ಇಟ್ಟುಕೊಂಡಿರುವವರು, ನಾವು ಹೇಳುವ ಜ್ಞಾನವನ್ನು ಏನೂ ಕೇಳದೆ, ಓದದೆ ಅಂತಹ ಪ್ರಯತ್ನ ಸಹ ಮಾಡದೆ ತನಗೆ ಅಗತ್ಯವಿಲ್ಲದಿದ್ದರೂ ತನಗೆ ಗುರುತಿಗಾಗಿ ನಮ್ಮ ಜ್ಞಾನವನ್ನು ವಿರೋಧಿಸುವುದು, ಈದಿನ ಮನೆಮನೆಗೂ ತಿರುಗಿ ಪ್ರಚಾರ ಮಾಡುತ್ತಿರುವ ನಮ್ಮ ಭಕ್ತರನ್ನು ಹೊಡೆದೋಡಿಸುವುದೇ ಕೆಲಸವಾಗಿ ಇಟ್ಟುಕೊಂಡಿದ್ದಾರೆ.

## ಭಗವದ್ಗೀತೆ ಪ್ರಚಾರ ಮಾಡುತ್ತಿದ್ದರೆ ದಾಳಿ ಮಾಡಿದ್ದಾರೆ

ಕೋವೂರು, ಜನವರಿ 1, 2016 ಪ್ರಭಾತವಾರ್ತೆ

ಕೋವೂರು ಮಂಡಲ ಇನಮಡುಗು ಗ್ರಾಮದಲ್ಲಿ ಶುಕ್ರವಾರ ಶ್ರೀಕೃಷ್ಣ ಮಂದಿರ ಹಿಂದೂ ಜ್ಞಾನ ವೇದಿಕೆ ಸದಸ್ಯರು ಭಗವದ್ಗೀತೆ ಮೇಲೆ ಪ್ರಜೆಗಳಿಗೆ ಅವಗಾಹನೆ ಕಲ್ಪಿಸುತ್ತಿದ್ದರೆ ಆ ಪ್ರಾದಶಕ್ಕೆ ಸೇರಿದ ಅಶೋಕ್, ಆತನ ಅನುಚರರು ತಮ್ಮ ಮೇಲೆ ದಾಳಿ ಮಾಡಿದ್ದಾರೆನ್ನುತ್ತಾ ಜ್ಞಾನವೇದಿಕೆ ಸದಸ್ಯರು ವೆಂಕಟಸುಬ್ಬಯ್ಯ, ಕೃಷ್ಣ, ಸುಬ್ಬಾನಾಯುಡು ತದಿತರರು ಕೋವೂರು ಪೊಲೀಸ್ ಸ್ಟೇಷನ್‌ನಲ್ಲಿ ದಾಖಲು ಮಾಡಿದ್ದಾರೆ. ತಾವು ಇನಮಡುಗು ಗ್ರಾಮದಲ್ಲಿ ಶುಕ್ರವಾರ ಮನೆಮನೆಗೆ ಹೋಗಿ ಭಗವದ್ಗೀತೆಯನ್ನು ಕುರಿತು ಪ್ರಜೆಗಳಿಗೆ ವಿವರಿಸುತ್ತಿದ್ದರೆ ಅಶೋಕ್ ಆತನ ಅನುಚರರು ತಮ್ಮನ್ನು ಆ ಕಾರಣವಾಗಿ ನಿಂದಿಸುವುದಲ್ಲದೆ ದಾಳಿ ಮಾಡುವುದು.. ತಮ್ಮ ವಾಹನವನ್ನು ಪೆಟ್ರೋಲ್ ಸುರಿದು ಸುಟ್ಟಿಹಾಕುತ್ತೇವೆಂದು ಹೆದರಿಸಿದ್ದಾರೆಂದಿದ್ದಾರೆ. ಭಗವದ್ಗೀತೆ ಪುಸ್ತಕಗಳನ್ನು ಕಸಿದುಕೊಂಡು ಬಿಸಾಡಿದ್ದಾರೆಂದಿದ್ದಾರೆ. ತಮಗೆ ನ್ಯಾಯ ಬೇಕೆಂದು ಅವರು ಎಸ್‌ಐನನ್ನು ಕೇಳಿಕೊಂಡಿದ್ದಾರೆ.

ಅಂತಹ ಅಜ್ಞಾನಿಗಳ ಹಿಂದೆ ಮುಖ್ಯವಾಗಿ ಆರ್ಯರಿಂದ ಪ್ರಭಾವಿತ ರಾದವರು ಇದ್ದಾರೆಂದು ನಮಗೆ ಅರ್ಥವಾಗಿದೆ. ನಾವು ಈ ಗ್ರಂಥವನ್ನು ಬರೆಯುತ್ತಿರುವಾಗಲೇ ನಾವು ಹೇಳುವುದು ಸತ್ಯವೆಂದು ಎಲ್ಲರಿಗೂ ತಿಳಿಯುವಂತೆ ಒಂದು ಸಂಘಟನೆ ನಡೆದಿದೆ. ಈ ದಿನ ಕ್ರಿ.ಶ. 2016ನೇ ವರ್ಷದ ಮೊದಲ ದಿನ ಅಂದರೇ ಜನವರಿ ಒಂದನೆ ತಾರೀಖು. ಈಗ ಜನವರಿ ಒಂದನೆಯ ತಾರೀಖು ಸಾಯಂಕಾಲ ಆರು ಗಂಟೆಗಳ ಸಮಯದಲ್ಲಿ ಪ್ರಸ್ತುತ ವಿಷಯವನ್ನು ಬರೆಯುತ್ತಿದ್ದೇವೆ. ಇದೇ ದಿನ ಬೆಳಿಗ್ಗೆ ಸುಮಾರು ಹನ್ನೊಂದು ಅಥವಾ ಹನ್ನೆರಡು ಗಂಟೆಗಳ ಸಮಯದಲ್ಲಿ ನೆಲ್ಲೂರು ಹತ್ತಿರ ನೆಲ್ಲೂರಿಗೆ ಕೇವಲ ಐದು ಕಿಲೋಮೀಟರ್‌ಗಳ ದೂರದಲ್ಲಿರುವ ಇನಮಡುಗು ಎಂಬ ಊರಿನಲ್ಲಿ ಭಗವದ್ಗೀತೆಯನ್ನು ಮತ್ತು ನಾವು ಬರೆದ ಉಳಿದ ಆಧ್ಯಾತ್ಮಿಕ ಸಂಬಂಧವಾದ 73 ಗ್ರಂಥಗಳನ್ನು ಕುರಿತು ಹೇಳುತ್ತಾ ಹಿಂದೂ ಮತವೊಂದರ ಔನ್ನತ್ಯವನ್ನು ಕಾಪಾಡುವುದಕ್ಕೆ ಪ್ರಯತ್ನಿಸುತ್ತಿರುವಾಗ, ನಾನು ಹಿಂದೂ ರಕ್ಷಕ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೇನೆಂದು ಹೇಳಿಕೊಳ್ಳುವ ವ್ಯಕ್ತಿ, ಇದು ಪರಮತ ಪ್ರಚಾರವೆಂದು ಆರೋಪಿಸಿ ಅಲ್ಲಿರುವವರನ್ನು ಸಹ ಪ್ರೇರೇಪಿಸಿ ನಮ್ಮ ಪ್ರಚಾರಕರನ್ನು ನಾಲ್ಕು ಜನರನ್ನು ಹೊಡೆದಿದ್ದಾರೆ. ಇಲ್ಲಿಗೆ ಇದು ಹತ್ತನೆಯ ದಾಳಿಯಾಗಿದ್ದು, ದೂಷಿಸಿ ಕಳಿಸಿರುವವು ಹತ್ತರ ಸಂಖ್ಯೆಗಳಲ್ಲಿ ಇವೆ. ಇವೆಲ್ಲವೂ ಒಂದು ಹಿಂದೂರಕ್ಷಕರೆನ್ನು ವವರು ಮಾತ್ರವೇ ಮಾಡುತ್ತಿದ್ದಾರೆ. ಒಂದು ಅಥವಾ ಎರಡು ಗ್ರಂಥಗಳು ಓದಿದವರು ಎಷ್ಟೋ ದೊಡ್ಡ ಜ್ಞಾನವೆಂದು ಹೊಗಳುತ್ತಾ ಗ್ರಂಥಗಳನ್ನು ಸಹ ತೆಗೆದುಕೊಂಡು ಓದುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ನಮ್ಮ ಜ್ಞಾನ ಅತ್ಯಂತ ವೇಗವಾಗಿ ಪ್ರಚಾರವಾಗುತ್ತಿದೆ.

ನಮ್ಮ ಗ್ರಂಥಗಳನ್ನು ಓದಿದವರೆಲ್ಲರೂ ಎಷ್ಟೋ ಸಂತೋಷಪಡುತ್ತಾ ಇಲ್ಲಿಯವರೆಗೂ ಹಿಂದೂಮತದಲ್ಲಿ ತಿಳಿಯದ ಜ್ಞಾನ ಈದಿನ ತಿಳಿದಿದೆಯೆಂದು ಎಷ್ಟೋ ಜನ ಹಿಂದೂಗಳು ಸಂತೋಷಪಡುತ್ತಿರುವಾಗ ಅದು ನೋಡಿ ಸಹಿಸಲಾರದ ಆರ್ಯ ಸಂಪ್ರದಾಯಗಳಲ್ಲಿ ಮುಳುಗಿ ತೇಲುತ್ತಿರುವ 'ಹಿಂದೂ

ರಕ್ಷಣೆ' ಎಂದು ಹೆಸರು ಇಟ್ಟುಕೊಂಡವರು ಮಾತ್ರ ಆಲೋಚಿಸದಂತೆ ಸ್ವಲ್ಪವೂ ನಮ್ಮ ಗ್ರಂಥಗಳನ್ನು ಓದದಂತೆ, ನಾವು ಹೇಳುವ ಬೋಧನೆಗಳನ್ನು ಕೇಳದಂತೆ ಕೇವಲ ಅಸೂಯೆಯಿಂದ ಮಾತನಾಡುವುದು, ದಾಳಿಗಳು ಮಾಡುವುದು ನಡೆಯುತ್ತಿದೆ. ಇದೆಲ್ಲವೂ ನೋಡಿದ ನಾವು ಈದಿನ ಅವರಿಗೆ ತಿಳಿಯದಂತೆಯೇ ಆರ್ಯರ ಬಲೆಯಲ್ಲಿ ಸಿಲುಕಿಕೊಂಡು, ಹಿಂದೂಮತವನ್ನು ಉದ್ಧರಿಸುವವರೆಂದು ಹೇಳಿಕೊಳ್ಳುವ ಮೂರ್ಖ ಹಿಂದೂಗಳಿಗೆ, ನಿಜವಾದ ಹಿಂದೂಜ್ಞಾನ ತಿಳಿಯುವುದಕ್ಕೆ, ನಾವು ಸಿದ್ಧಾಂತಕರ್ತರೊಂದರ ವಿಷಯವನ್ನು ಹೊರಗಿಟ್ಟು ಮಾತನಾಡುತ್ತಿದ್ದೇವೆ. ಹಿಂದೂಗಳ ಬೆರಳಿನಿಂದ ಹಿಂದೂಗಳ ಕಣ್ಣನ್ನೆ ಇರಿಯುವ ಆರ್ಯರ ಆಂತರಂಗ ಕುತಂತ್ರಗಳನ್ನು ಹೊರಗೆ ಇಡುತ್ತಿದ್ದೇವೆ. ಪೂರ್ವದಿಂದ ಎಷ್ಟೋ ತಿಳುವಳಿಕೆಯನ್ನು ಉಪಯೋಗಿಸಿದ ಆರ್ಯರು ದ್ರಾವಿಡರಲ್ಲಿಯೂ ಸಹ ತಮ್ಮ ಭಾವವನ್ನು, ತಮ್ಮ ಜ್ಞಾನವನ್ನು ತುಂಬಿ, ತಮ್ಮ ಸಂಪ್ರದಾಯಗಳೇ ನಿಜವಾದ ಜ್ಞಾನವೆನ್ನುವಂತೆ ಮಾಡಿ, ಭವಿಷ್ಯತ್ತಿನಲ್ಲಿ ಅವರಿಗೆ ವಿರೋಧಿಗಳು ಬಾರದಂತೆ ಒಂದು ಯೋಜನೆ ಪ್ರಕಾರ, 'ಹಿಂದೂ ರಕ್ಷಣೆ' ಎಂಬ ಹೆಸರನ್ನು ಮುಂದಿಟ್ಟು ತಮ್ಮ ಮತವನ್ನು ಕಾಪಾಡಿಕೊಳ್ಳುವುದಕ್ಕೆ ಪರಮತದವರನ್ನು ಓಡಿಸಬೇಕೆಂಬ ಉದ್ದೇಶವನ್ನು ಹಿಂದೂ ರಕ್ಷಣ ಸಂಸ್ಥೆಗಳಲ್ಲಿ ತುಂಬಿ ತಮಗೆ ವಿರುದ್ಧರಾಗಿರುವ ಹಿಂದೂಗಳನ್ನು ಪತಮತವೆಂಬ ಆರೋಪಣೆಯಿಂದ ವೇಧಿಸುವುದು, ಹಿಂಸಿಸುವುದು ಪ್ರಾರಂಭಮಾಡಿದ್ದಾರೆ. ಕಾಣಿಸದ ಆರ್ಯರ ವ್ಯೂಹದಲ್ಲಿ ಸಿಲುಕಿಕೊಂಡ ಹಿಂದೂಮತ ಅಭಿಮಾನಿಗಳು ಆರ್ಯರ ಕೈಯಲ್ಲಿ ಕೈಬೊಂಬೆಗಳಾಗಿ, ಅವರ ಹಿಂದೆ ನಡೆಯುವ ಕುರಿಗಳಾಗಿ ನಾವು ಏನು ಮಾಡುತ್ತಿದ್ದೇವೆಂಬ ಆಲೋಚನೆ ಇಲ್ಲದಂತೆ ತಮ್ಮಜೊತೆಯಿರುವ ಹಿಂದೂಗಳನ್ನು ನೀವು ಹಿಂದೂಗಳು ಅಲ್ಲವೆನ್ನುತ್ತಿದ್ದೀರಾ. ಇದು ಪೂರ್ವದಿಂದ ಆರ್ಯರು ಜಾರಿ ಮಾಡುವ ಘತಕವೆಂದು ಅವರಿಗೆ ತಿಳಿದಿಲ್ಲ. ಯಾರೋ ಎಲ್ಲೋ ಕ್ರೈಸ್ತನಾಗಿಯೋ, ಮುಸ್ಲಿಮ್ ಆಗಿಯೋ ಮತಬದಲಾಯಿಸಿದರೆ ಅದನ್ನು ಭೂತಕನ್ನಡಿಯಲ್ಲಿ ತೋರಿಸಿ "ಹಿಂದೂ ಮತವೆಲ್ಲವು ಕ್ಷೀಣಿಸಿ ಹೋಗುತ್ತಿದೆ" ಎಂದು ಗಂಟಲು ಹೋಗುವಂತೆ ಕಿರುಚಿಕೊಳ್ಳುವ ಹಿಂದೂ ಸಂಸ್ಥೆಗಳಿಗೆ

ಹಿಂದೂಗಳೇ ಆದ ಬೌದ್ಧರನ್ನು, ಜೈನರನ್ನು, ಸಿಕ್ಕರನ್ನು 70 ಅಥವಾ 80 ಕೋಟಿ ಜನರನ್ನು ಹಿಂದೂಗಳು ಅಲ್ಲವೆಂದು ಪರಮತವಾಗಿ ಚಿತ್ರಿಸಿದ ದಿನ ಹಿಂದೂಮತ ಕ್ಷೀಣಿಸಿದೆಯೆಂದು ತಿಳಿಯಲಿಲ್ಲವಾ?

ಮೂರು ಯುಗಗಳಿಂದ ಇಂದೂಗಳು (ಹಿಂದೂಗಳು) 'ಶಾಂತಿ ಪ್ರಿಯರು' ಎಂದು ಹೆಸರುವಾಸಿಯಾಗಿರುವಾಗ, ಕಲಿಯುಗದಲ್ಲಿ ಆರ್ಯರ ಕಾಣಿಸದ ಕಪಟಗಳಿಂದ ಹಿಂದೂಗಳು ದೌರ್ಜನ್ಯವಾಗಿ ಪ್ರವರ್ತಿಸುವವರೆಂಬ ಕೆಟ್ಟಹೆಸರು ಬಂದಿದೆ. ಈದಿನ ನಡೆಯುತ್ತಿರುವ ಸಂಘಟನೆಗಳನ್ನನುಸರಿಸಿ ಹಿಂದೂಗಳಾದ ನಾವು ಸಹ ಅದೇಮಾತನ್ನು ಹೇಳಬೇಕಾಗಿ ಬಂದಿದೆ. ಈಗಿನಿಂದ ನಮ್ಮ ತಂಟೆಗೆ ಬಂದವರನ್ನು ಸುಲಭವಾಗಿ ಬಿಡುವುದಿಲ್ಲವೆಂದು ನಾವು ದೊಡ್ಡ ಜ್ಞಾನಿಗಳಾಗಿ ನಿರೂಪಿಸಿಕೊಳ್ಳುತ್ತೇವೆಂದು ಹೇಳುತ್ತಿದ್ದೇವೆ. ನಮ್ಮನ್ನು ಕುರಿತು ನಿಮಗೇನಾದರೂ ತಿಳಿಯದಿದ್ದರೆ ನೀವು ನಮ್ಮನ್ನು ಭೇಟಿಯಾಗಿ ಪ್ರಶ್ನಿಸಬಹುದು. ಅದಕ್ಕೆ ಬೇಕಾದ ವಿವರಣೆಯನ್ನು ನಾವು ಕೊಡಬಲ್ಲೆವು. ಹಾಗಲ್ಲದೆ ನಾವು ಹೇಳುವುದು ಯಾವುದೂ ಕೇಳದೆ ದೌರ್ಜನ್ಯ ಮಾಡಿದರೆ, ನಾವು ಸಹ ನಮ್ಮ ರಕ್ಷಣೆಗಾಗಿ ಪ್ರತಿಭಟಿಸಬೇಕಾಗಿ ಬರುತ್ತದೆ.

ನಮಗೆ ಎಷ್ಟೋ ಆತಂಕಗಳು ಉಂಟಾದರೂ ಎಷ್ಟೋ ಸಹನೆಯಿಂದ ಇಷ್ಟುಕಾಲ ಇದ್ದೀನಿ. ಇಲ್ಲಿಯವರೆಗೂ ಎಪ್ಪತ್ತುಮೂರು (73) ಗ್ರಂಥಗಳನ್ನು ಬರೆದಿದ್ದೇವೆ. ಕೆಲವು ಗ್ರಂಥಗಳಲ್ಲಿ ಹಿಂದೂಗಳೇ ನಮ್ಮ ಮೇಲೆ ಮಾಡುವ ಆರೋಪಣೆಗಳನ್ನು ಬರೆದಿದ್ದೇವೆ. ಆದರೂ ಹಿಂದೂಗಳಲ್ಲಿ ಹಿಂದೂಧರ್ಮಗಳು ತಿಳಿಯದವರು ಹಿಂದೂರಕ್ಷಕರಾಗಿರುವುದರಿಂದ ಯಾರು ಒಳ್ಳೆಯದು ಮಾಡುತ್ತಿದ್ದಾರೋ, ಯಾರು ಕೆಟ್ಟದು ಮಾಡುತ್ತಿದ್ದಾರೋ ತಿಳಿಯದವರು ಆರ್ಯರ ಅಧೀನದಲ್ಲಿದ್ದು ಕುರಿಗಳಂತೆ ಯಾವಕಡೆ ಹೊಡೆದರೆ ಆಕಡೆ ಹೋಗುತ್ತಿದ್ದಾರೆ. ಈದಿನ ಹಿಂದೂ ರಕ್ಷಕರೆನ್ನುವವರಲ್ಲಿ ಯಾರಿಗೂ ಹಿಂದೂ ಧರ್ಮಗಳೆಂದರೆ ಏನೂ ತಿಳಿದಿಲ್ಲ. ಅಂತವರನ್ನು ಆಸರೆಯಾಗಿ ಮಾಡಿಕೊಂಡು ಆರ್ಯರು ಮೊದಲಿನಿಂದ ಮಾಡುವ ಮೋಸವನ್ನೇ ಮಾಡುತ್ತಿದ್ದಾರೆ.

ಶಂಕರಾಚಾರ್ಯರನ್ನು ಚಿಕ್ಕವಯಸ್ಸಿನಲ್ಲಿಯೇ ವಿಶ್ವಾಸಘಾತುಕನನ್ನಾಗಿ ಮಾಡಿದ್ದಾರೆ. ಅದೇ ಶಂಕರಾಚಾರ್ಯನ ಹೆಸರಿನಿಂದಿ ಈದಿನ ಸಹ ಹಿಂದೂ ಮತದಲ್ಲಿ ಹಿಂಬದಿಯಲ್ಲಿದ್ದು ಅಧಿಕಾರ ಚಲಾಯಿಸುತ್ತಿದ್ದಾರೆ. ತಮ್ಮನ್ನು ಮೊದಲಿನಿಂದ ವಿರೋಧಿಸುವ ರಾಮಾನುಜಾಚಾರ್ಯರನ್ನು ಸಾಯಿಸಬೇಕೆಂದು ನೋಡಿದ್ದಾರೆ. ಅದು ವಿಫಲವಾಗಿದೆ. ಅದು ನಡೆದಿದ್ದರೆ ಮೂವರು ಸಿದ್ಧಾಂತಕರ್ತರಲ್ಲಿ ಇಬ್ಬರನ್ನು ಅವರೇ ನುಂಗಿಹಾಕಿದಂತಿರುತ್ತಿತ್ತು. ದ್ವೈತವನ್ನು ಹೇಳಿದ ಮಧ್ವನು ಪ್ರಚಾರದಲ್ಲಿ ಇಲ್ಲವಾದ್ದರಿಂದ ಬದುಕಿಹೋಗಿದ್ದಾನೆ. ಈದಿನ ಆರ್ಯರ ಅದ್ವೈತಕ್ಕೆ ಪೂರ್ತಿ ವಿರೋಧವಾಗಿರುವ **ತ್ರೈತ ಸಿದ್ಧಾಂತ**ದಿಂದ ನಿಜವಾದ ಜ್ಞಾನ ಪ್ರಜೆಗಳಿಗೆ ತಿಳಿದುಹೋಗಿ ತಮ್ಮ ಇರುವಿಕೆ ಇಲ್ಲದಂತೆ ಹೋಗುತ್ತದೆಯೆಂದು ತಿಳಿದ ಆರ್ಯರು ನಮ್ಮ ಬಗ್ಗೆ ಎಷ್ಟೋ ಅಸೂಯೆ ಆವೇಶ ಹೊಂದಿದ್ದಾರೆ. ಅದರ ಫಲಿತವೇ ಈದಿನ ನಮ್ಮ ಮೇಲೆ ನಡೆಯುವ ಆರೋಪಣೆಗಳೆಂದು ತಿಳಿಯುತ್ತಿದೆ. ಅವರು ಅಷ್ಟು ಮಾಡಿದರೆ ತಪ್ಪಾಗದಿರುವುದು ನಾವು ಆರ್ಯರನ್ನು ಕುರಿತು ಅವರ ಚರಿತ್ರೆಯನ್ನು ಕುರಿತು ಬರೆದರೆ ತಪ್ಪಾಗುತ್ತದಾ? ದೇವರು ಭಗವಂತನಾಗಿ ಬಂದು ಹೇಳಿದ ಭಗವದ್ಗೀತೆ ಜ್ಞಾನವನ್ನು ಬ್ರಹ್ಮವಿದ್ಯಾ ಶಾಸ್ತ್ರಬದ್ಧವಾದ ಭಗವದ್ಗೀತೆಯನ್ನು ನಾವು ಬೋಧಿಸುತ್ತಿದ್ದೇವೆ. ಭಗವದ್ಗೀತಾ ಜ್ಞಾನದಲ್ಲಿ ದ್ವೈತ, ಅದ್ವೈತಗಳು ಎರಡೂ ಕೊಚ್ಚಿಕೊಂಡು ಹೋಗುತ್ತಿವೆ. ನಾವು ಹೇಳುವ ಸಿದ್ಧಾಂತ ಭಗವದ್ಗೀತೆಯಲ್ಲಿ ಬಲವಾಗಿ ಇದೆಯೆಂದು ಎಲ್ಲರಿಗೂ ತಿಳಿಯುತ್ತಿದೆ. ನಮ್ಮ ದೃಷ್ಟಿಯೆಲ್ಲವೂ ನಿಜವಾದ ದೈವಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದೇ. ನಾವು ನಮ್ಮ ಜ್ಞಾನ ಪ್ರಚಾರದಲ್ಲಿ ಇತರ ಮತಗಳಿಂದ ಸ್ವಲ್ಪ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ಆದರೂ ಅವರು ಪರಿಚಯಗಳ ಮೂಲಕ ಸತ್ಯವನ್ನು ತಿಳಿದುಕೊಂಡು ತಟಸ್ಥವಾಗಿ ಇರುತ್ತಿದ್ದಾರೆ. ಆದರೆ ಹಿಂದೂಗಳಲ್ಲಿ ಕೆಲವರು ಮಾತ್ರ ಪೂರ್ತಿ ನಮ್ಮನ್ನು ವಿರೋಧಿಸುತ್ತಿದ್ದಾರೆ. ಅವರು ಸಂಪ್ರದಿಸುವುದಿಲ್ಲ, ನಮ್ಮ ಮನೋಭಾವನೆಗಳನ್ನು ತಿಳಿಯುವುದಿಲ್ಲ. ಆದುದರಿಂದ ನಾವು ಎದುರು ದಾಳಿಯಾಗಿ ಉಳಿದ ಸಿದ್ಧಾಂತಗಳನ್ನು ಮುಖ್ಯವಾಗಿ ಆರ್ಯರನ್ನು ವಿಮರ್ಶಿಸಬೇಕಾಗಿ ಬಂದಿದೆ.

**ಪ್ರಶ್ನೆ :– ನೀವು 73 ಗ್ರಂಥಗಳನ್ನು ಬರೆದಿದ್ದೀರಾ?**

**ಉತ್ತರ :–** ಹೌದು ಬರೆದಿದ್ದೇವೆ. ಇನ್ನೂ ಬರೆಯುತ್ತೇವೆ. ಸುಮಾರು ನೂರು ಗ್ರಂಥಗಳವರೆಗು ನಮ್ಮ ರಚನೆಗಳು ನಿಲ್ಲುವುದಿಲ್ಲ.

**ಪ್ರಶ್ನೆ :– ಹಿಂದೂಗಳಲ್ಲಿಯೇ ಪ್ರತಿಕೂಲತೆ ಇದೆಯೆಂದು ನೀವು ಹೇಳುತ್ತಿದ್ದೀರಾ ಅಲ್ಲವೆ! ಹಾಗಿರುವಾಗ ನಿಮ್ಮ ರಚನೆಗಳಿಗೆ ಸಮಾಜದಲ್ಲಿ ಆದರಣೆ ಇದೆಯಾ?**

**ಉತ್ತರ :–** ನಮಗೆ ಹಿಂದೂಗಳೆಲ್ಲರೂ ವಿರೋಧಿಗಳಲ್ಲ. ತಮಗೆ ತಿಳಿಯದಂತೆಯೇ ಆರ್ಯರ ಬಲೆಯಲ್ಲಿ ಸಿಲುಕಿಕೊಂಡು ಹಿಂದೂ ಸಂಸ್ಥೆಗಳಲ್ಲಿ ಯಾವುದೋ ಒಂದು ಸ್ಥಾನದಲ್ಲಿರುವ ಕೆಲವರು ಹಿಂದೂಗಳು ಅವರ ಇರುವಿಕೆಯನ್ನು ಹೊರಗೆ ತಿಳಿಯುವಂತೆ ನಮ್ಮನ್ನು ಕುರಿತು ಮಾತನಾಡುವುದು ಮತ್ತು ತೊಂದರೆ ಕೊಡುವುದು ನಡೆಯುತ್ತದೆ. ಅದೂ ಹಿಂದೂ ರಕ್ಷಣ ಸಂಸ್ಥೆಗಳಲ್ಲಿ ಕೆಲಸಮಾಡುವವರು ಮಾತ್ರವೇ ನಮಗೆ ವಿರೋಧವಾದ್ದರಿಂದ ಹಿಂದೂಗಳೆಲ್ಲರಲ್ಲಿ ಶೇಕಡ ಹತ್ತರಷ್ಟು ಜನರಿಗೆ ನಾವು ನಮ್ಮ ಜ್ಞಾನ ಸರಿಹೋಗದಿರಬಹುದು. ಉಳಿದ 90 ಶೇ.ರಷ್ಟು ಜನರಿಗೆ ನಮ್ಮ ಜ್ಞಾನವು ಉತ್ತಮವಾಗಿ ಕಾಣಿಸುತ್ತಿದೆ. ಆದುದರಿಂದ ನಮ್ಮ ಗ್ರಂಥಗಳಿಗೆ ಒಳ್ಳೆಯ ಆದರಣೆ ಇದೆ. ನಮ್ಮ ಗ್ರಂಥಗಳಲ್ಲಿ ಯಾವೊಂದು ಗ್ರಂಥ ಓದಿದವರಾದರೂ ತಪ್ಪದೆ ಉಳಿದ ಗ್ರಂಥಗಳನ್ನು ಓದಬೇಕೆಂದು ಪ್ರಯತ್ನ ಮಾಡಿ ಓದುವುದು ನಡೆಯುತ್ತಿದೆ. ಹಾಗೆ ಓದಿದವರಲ್ಲಿ ಶೇ.25ರಷ್ಟು ಜನರು ನಮ್ಮ ಗ್ರಂಥಗಳನ್ನು ಕುರಿತು ಇತರರಿಗೆ ಹೇಳಿ ಅವರಿಂದಲೂ ಸಹ ಓದಿಸುತ್ತಿದ್ದಾರೆ. ಈ ವಿಧವಾಗಿ ನಮ್ಮ ಗ್ರಂಥಗಳಿಗೆ ಪ್ರಜೆಗಳಲ್ಲಿ ಹೆಚ್ಚಿನ ಆದರಣೆ ಇದೆ. ಪೋತುಲೂರಿ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಸುಮಾರು ನಾಲ್ಕುನೂರು ವರ್ಷಗಳ ಕೆಳಗೆ **"ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದು"** ಎಂದು ಬರೆದಿದ್ದಾರೆ. ಅಷ್ಟೇ ಅಲ್ಲದೆ **"ಪ್ರಬೋಧಾಶ್ರಮ ವೊಂದರ ಜ್ಞಾನ ನಂದನ ನಾಮ ಸಂವತ್ಸರದಿಂದ ಚೆನ್ನಾಗಿ ಪ್ರಚಾರವಾಗುತ್ತದೆಂದು"** ಹೇಳಿದ್ದಾರೆ. ಆತನ ಮಾತಿನ ಪ್ರಕಾರವೇ ಈ ಮಧ್ಯೆ ನಾಲ್ಕು ವರ್ಷಗಳಿಂದ

ನಮ್ಮ ಜ್ಞಾನ ಬಹಳ ವೇಗವಾಗಿ ವ್ಯಾಪ್ತಗೊಂಡಿದೆ. ಶಂಕರಾಚಾರ್ಯರ ಅದ್ವೈತವಾಗಲಿ, ಮಧ್ವಾಚಾರ್ಯರ ದ್ವೈತವಾಗಲಿ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವಾಗಲಿ ಪ್ರಚಾರವಾಗಿರುವುದಕ್ಕಿಂತ ಎರಡರಷ್ಟು ವೇಗವಾಗಿ ಪ್ರಜೆಗಳಲ್ಲಿ ವ್ಯಾಪ್ತಗೊಂಡಿದೆ.

**ಪ್ರಶ್ನೆ :– ಸುಮಾರು ನಾಲ್ಕು ನೂರು ವರ್ಷಗಳಹಿಂದೆ ವೀರಬ್ರಹ್ಮಯ್ಯನವರು ನಿಮ್ಮ ಜ್ಞಾನವನ್ನು ಕುರಿತು ಏಕೆ ಬರೆದಿದ್ದಾರೆ?**

**ಉತ್ತರ:–** ಈ ಪ್ರಶ್ನೆ ವೀರಬ್ರಹ್ಮಯ್ಯನವರನ್ನೇ ಕೇಳಬೇಕಾಗಿರುತ್ತದೆ. ಆದರೆ ನಾವು ಹೇಳುವುದು **"ಸಾಂದ್ರಸಿಂಧು ಜ್ಞಾನವೆಂದು"** ಹೇಳುವುದಲ್ಲದೆ ಬಹಳ ವಿಷಯಗಳನ್ನು ಮುನ್ನುಡಿ ಸಮಾಚಾರವಾಗಿ ತಿಳಿಸಿದ್ದಾನೆ.

**ಪ್ರಶ್ನೆ :– ನೀವು "ಎಪ್ಪತ್ತು ಮೂರು(73) ಗ್ರಂಥಗಳನ್ನು ಬರೆದಿದ್ದೇವೆ" ಎಂದು ಹೇಳಿದ್ದೀರಾ. ನಿಮ್ಮ ಜ್ಞಾನದಲ್ಲಿ ಮುಖ್ಯವಾದ ಸಿದ್ಧಾಂತ ಯಾವುದು, ಅದ್ವೈತವಾ, ವಿಶಿಷ್ಟಾದ್ವೈತವಾ? ಅಥವಾ ದ್ವೈತವಾ?**

**ಉತ್ತರ:–** ನೀವು ಕೇಳುವ ಪ್ರಶ್ನೆ ಹೇಗಿದೆಯೆಂದರೇ, "ನೀನು ರಾಜಾಧಿರಾಜನಾದ ಚಕ್ರವರ್ತಿಯೇ ಆದರೆ ನೀನು ಬಿಕ್ಷೆಬೇಡಿ ತಿನ್ನುವುದು ಚಿಪ್ಪೆಯಲ್ಲಾ, ತಟ್ಟೆಯಲ್ಲಾ, ಎಲೆಯಲ್ಲಾ? ಎಂದು ಕೇಳಿದಂತಿದೆ. ರಾಜಾಧಿರಾಜನಿಗೆ ಬಿಕ್ಷೆಬೇಡಿ ತಿನ್ನುವ ಅವಶ್ಯಕತೆ ಇಲ್ಲ. ಅದೂ ಚಿಪ್ಪೆಯಲ್ಲಿಯಾ, ತಟ್ಟೆಯಲ್ಲಿಯಾ, ಎಲೆಯಲ್ಲಿಯಾ ಎಂದು ಕೇಳುವುದು ಮತ್ತಷ್ಟು ವಿಚಿತ್ರವಾಗಿದೆ. ಅಷ್ಟೇ ಅಲ್ಲದೆ ರಾಮಾಯಣವೆಲ್ಲಾ ಕೇಳಿ ನಂತರ ಸೀತೆಗೆ ರಾಮನು ಏನಾಗುತ್ತಾನೆ? ಎಂದು ಪ್ರಶ್ನಿಸಿದಂತೆ ನಾವು ಅದ್ವೈತಕ್ಕಿಂತ, ವಿಶಿಷ್ಟಾದ್ವೈತಕ್ಕಿಂತ, ದ್ವೈತಕ್ಕಿಂತ ಭಿನ್ನವಾಗಿ ತ್ರೈತ ಸಿದ್ಧಾಂತವನ್ನು ಬೋಧಿಸುತ್ತಿದ್ದೇವೆಂದು ಅದರಿಂದಲೇ ಹಿಂದೂಮತದಲ್ಲಿ ಹೊಸ ಸಿದ್ಧಾಂತವನ್ನು ಆರ್ಯರು ವಿರೋಧಿಸುತ್ತಿದ್ದಾರೆಂದು, ಅವರ ಪ್ರೇರಣೆಯಿಂದ ಕೆಲವರು ಹಿಂದೂಗಳು ನಮ್ಮ ಭಕ್ತರಮೇಲೆ ದಾಳಿಗಳು ಮಾಡುವುದರವರೆಗು ಬಂದಿದೆಯೆಂದು ಇದಕ್ಕು ಮುಂಚೆಯೇ ಹೇಳಿದ್ದೇವೆ ಅಲ್ಲವೆ!

**ಪ್ರಶ್ನೆ :– ಹಾಗಾದರೆ ನೀವು ಹಿಂದೂಮತದಲ್ಲಿ ನಾಲ್ಕನೆ ಸಿದ್ಧಾಂತಕರ್ತರಾ?**

**ಉತ್ತರ :–** ಇದರಲ್ಲಿ ನಿಮಗೇನಾದರೂ ಅನುಮಾನವಿದೆಯಾ? ದಕ್ಷಿಣ ಭಾರತ ದೇಶ ಕೃತಯುಗದಲ್ಲಾಗಲಿ, ತ್ರೇತಾಯುಗದಲ್ಲಾಗಲಿ ಆತ್ಮಜ್ಞಾನಿಗಳಲ್ಲಿ ಒಳ್ಳೆಯ ಹೆಸರುವಾಸಿಯಾದ ಪ್ರದೇಶ. ದಕ್ಷಿಣ ದೇಶ ತ್ರೇತಾಯುಗದಲ್ಲಿ ಈದಿನ ಕರ್ನಾಟಕ, ಆಂಧ್ರ, ತಮಿಳನಾಡು, ಕೇರಳ ರಾಷ್ಟ್ರಗಳಾಗಿರುವ ನಾಲ್ಕು ಪ್ರದೇಶಗಳು ರಾವಣಬ್ರಹ್ಮ ಪಾಲನೆಯಲ್ಲಿ ಇದ್ದವು. ರಾವಣಬ್ರಹ್ಮ ವಾರಸತ್ವವಾಗಿ, ಈ ನಾಲ್ಕು ರಾಷ್ಟ್ರಗಳಲ್ಲಿ ಜ್ಞಾನ ಪ್ರಜ್ವಲಿಸುತ್ತದೆಯೆಂದು ಆ ಕಾಲದಲ್ಲಿಯೇ (ತ್ರೇತಾಯುಗದಲ್ಲಿಯೇ) ಕೆಲವರು ಜ್ಞಾನಿಗಳು ಅಂದುಕೊಳ್ಳುತ್ತಿದ್ದರು. ಅವರ ಉಪಾಯ ಆಗ ನೆರವೇರಲಿಲ್ಲ ಆದರೇ, ಕಲಿಯುಗದಲ್ಲಿ ನೆರವೇರಿದೆಯೆಂದು ಹೇಳಬಹುದು. ಕಲಿಯುಗದಲ್ಲಿಯೇ ಕೊನೆಯ ಕೇರಳ ರಾಷ್ಟ್ರದಲ್ಲಿ ಮೊದಲು ಅದ್ವೈತ ಸಿದ್ಧಾಂತಕರ್ತನಾಗಿ ಹೆಸರುವಾಸಿಯಾದ ಆದಿಶಂಕರಾಚಾರ್ಯರವರು ಜನ್ಮಿಸಿದರೆ, ಎರಡನೆ ಸಿದ್ಧಾಂತಕರ್ತನಾದ ರಾಮಾನುಜಾಚಾರ್ಯರವರು ತಮಿಳನಾಡು ರಾಷ್ಟ್ರದಲ್ಲಿ ಜನ್ಮಿಸಿದರೆ, ಮೂರನೆ ಸಿದ್ಧಾಂತಕರ್ತನಾದ ದ್ವೈತ ಸಿದ್ಧಾಂತಕರ್ತ ಮಧ್ವಾ ಚಾರ್ಯರು ಕರ್ನಾಟಕ ರಾಷ್ಟ್ರದಲ್ಲಿ ಜನ್ಮಿಸಿದ್ದಾರೆ. ಇನ್ನು ನಾಲ್ಕು ರಾಷ್ಟ್ರಗಳಲ್ಲಿ ಆಂಧ್ರಪ್ರದೇಶ್ ರಾಷ್ಟ್ರ ಕೊನೆಗೆ ಉಳಿದಿರುವಾಗ, ಆ ಪ್ರದೇಶದಲ್ಲಿ ಸಹ ಒಬ್ಬ ಸಿದ್ಧಾಂತಕರ್ತ ಹುಟ್ಟುವುದು ನಡೆದಿದೆ. ಆ ಸಿದ್ಧಾಂತವೇ **"ತ್ರೈತ ಸಿದ್ಧಾಂತ"**.

ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ ಸಿದ್ಧಾಂತಕರ್ತನ ಹೆಸರು **ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು.** ಆದರೆ ಕಲಿಯುಗದಲ್ಲಿ ಮೊದಲು ಹುಟ್ಟಿದ ಮೂವರು ಆಚಾರ್ಯರು ಬ್ರಾಹ್ಮಣ ಕುಲಜರಾದರೆ, ಪ್ರಬೋಧಾನಂದ ಯೋಗೀಶ್ವರರು ಮಾತ್ರ ಬ್ರಾಹ್ಮಣ ಕುಲಕ್ಕೆ ಸೇರಿದವರಲ್ಲ. ಹಾಗೆ ಹುಟ್ಟುವುದರಿಂದ ಅವರೆಲ್ಲರದು ಒಂದು ದಾರಿಯಾದರೆ ಪ್ರಬೋಧಾನಂದರದು ಮಾತ್ರ ಮತ್ತೊಂದು ದಾರಿ ಎನ್ನುವಂತಿದೆ. ಅಂದರೆ ಆ ಮೂರು ದಾರಿಗಳಿಗಿಂತ ವಿಭಿನ್ನವಾದ ದಾರಿಯೆಂದು ಅರ್ಥ. ಆಂಧ್ರಪ್ರದೇಶದಲ್ಲಿ ಪ್ರಬೋಧಾನಂದ ಸ್ವಾಮಿ ಎನ್ನುವ ವ್ಯಕ್ತಿ ಹುಟ್ಟುವುದರಲ್ಲಿ ಸಹ ಗಮನಿಸಿದರೆ ಸ್ವಲ್ಪ ಪ್ರತ್ಯೇಕತೆ ಇದೆ. ಆಂಧ್ರಪ್ರದೇಶ್‌ನಲ್ಲಿ

ಆತನು ಹುಟ್ಟಿದ ಪ್ರದೇಶಕ್ಕು ಪ್ರತ್ಯೇಕವಾದ ಹೆಸರು ಇದೆ. ಆ ಹೆಸರು **"ರಾಯಲಸೀಮ"**, 'ಸೀಮ' ಎಂದರೇ ಪ್ರದೇಶವೆಂದು ಅರ್ಥ. **'ರಾಯಲ'** ಅಂದರೇ **'ನಾಶ ಇಲ್ಲದಿರುವುದೆಂದು'** ಅರ್ಥ. **'ರಾಮ'** ಎಂಬ ಪದದಿಂದ **"ರಾಯ"** ಎಂಬ ಪದ ಹುಟ್ಟಿದೆ. ರಾಮ ಎಂದರೆ 'ನಾಶ ಇಲ್ಲದಿರುವುದೆಂದು' ಅರ್ಥ. ರಾಯಲಸೀಮ ಪ್ರದೇಶದಲ್ಲಿಯೇ ಯೋಗೀಶ್ವರರು ಹುಟ್ಟುವುದು ನಡೆದಿದೆ. ರಾಯಲಸೀಮೆಯಲ್ಲಿ ಹುಟ್ಟಿದವರು ಹೆಸರಿಗೆ ತಕ್ಕಂತೆ ನಾಶವಿಲ್ಲದ ಬೋಧನೆಯನ್ನೇ ಬೋಧಿಸುತ್ತಾನೆಂದು ಹೇಳದೆಯೇ ತಿಳಿಯುತ್ತಿದೆ.

**ಪ್ರಶ್ನೆ :– ಪ್ರಬೋಧಾನಂದ ಯೋಗೀಶ್ವರರು ಎಂದರೇ ನೀವೆ ಅಲ್ಲವೇ?**

**ಉತ್ತರ :–** ನೀನು ಹಾಗೆ ಅಂದುಕೊಳ್ಳುತ್ತೀಯಾ ಎಂದೇ ಈ ಗ್ರಂಥ ಪ್ರಾರಂಭದಲ್ಲಿಯೇ ಎಲ್ಲಾ ಮಾಡುತ್ತಿರುವುದು ಆತ್ಮವೇಯೆಂದು ಮೊದಲೇ ಹೇಳಿದ್ದೇನೆ. ಪ್ರಬೋಧಾನಂದ ಯೋಗಿಶ್ವರರು ಎಂದು ನಿಮ್ಮ ಭಾವನೆಯಲ್ಲಿ ನೀವು ಅಂದುಕೊಂಡರೆ ನಿನ್ನದು ಸರಿಯಾದ ಭಾವನೆ ಹೌದೋ ಅಲ್ಲವೋ? ಜೀವಾತ್ಮವಾಗಿರುವ ಒಬ್ಬ ವ್ಯಕ್ತಿ ಎಂದು ನೀವು ಅಂದುಕೊಂಡರೆ, ಆ ಜೀವಿಯು ನಾನು ಒಳಗೆ ಸಿಲುಕಿಕೊಂಡು ಕದಲಲಾರದೆ ಕಟ್ಟಿಹಾಕಿದ ನಾಯಿಯಂತಿದ್ದೇನೆ. ಹೊರಗೆ 'ನಾನು ಇಲ್ಲ' ಎಂದು ಅನ್ನುತ್ತಾನೆ. ಅದರಿಂದ ನೀನು ಅಂದು ಕೊಂಡಿರುವುದು ತಪ್ಪಾಗುತ್ತದೆ. ಒಳಗಿರುವವನೇಯೆಂದು ಅಂದುಕೊಂಡರೂ, ಒಳಗೆ ಅವನದು (ಜೀವಿದು) ಏನೂ ಇಲ್ಲ. ಅವನು ಏನೂ ಇಲ್ಲದವನು, ಎಲ್ಲಾ ನಾನೇ ಇದ್ದೀನಿ, ಎಲ್ಲಾ ನಾನೇ ಮಾಡುತ್ತೇನೆಂದು ಹೇಳುವವನು ಇದ್ದಾನೆ. ಆದುದರಿಂದ ಯಾವಕಡೆ ಹೋಲಿಸಿಕೊಳ್ಳಲಾರದ ಸ್ಥಿತಿಯಲ್ಲಿ ಮನುಷ್ಯ ಇದ್ದಾನೆ. ನಾನು ಈಗ ಮನುಷ್ಯನೇ ಆದರೂ, ನನಗೆ ತಿಳಿದಿರುವುದು ನಾನು ಹೇಳುತ್ತೇನೆ ಕೇಳು. ಯೋಗೀಶ್ವರರು 'ರಾಯಲಸೀಮ' ಎಂಬ ಪ್ರತ್ಯೇಕ ಪ್ರದೇಶದಲ್ಲಿ ಹುಟ್ಟಿ ನಾಶವಿಲ್ಲದ ಬೋಧನೆಯನ್ನು ಹೇಳುವವನೆಂದು ಪ್ರಕಟಿಸಿಕೊಂಡಿದ್ದಾನೆ. ಅಷ್ಟೇ ಅಲ್ಲದೆ ಆತನು ಹುಟ್ಟಿದ ಊರಿನ ಹೆಸರು **"ಅನಂತಪುರಂ"** , **'ಪುರ'** ಎಂದರೇ ಪೌರರು ನಿವಾಸಿಸುವುದೆಂದು ಅರ್ಥ. ನಂತರ 'ಅನಂತ' ಎಂದರೆ

**'ಅಂತ್ಯ ಇಲ್ಲದಿರುವುದೆಂದು, ಎಲ್ಲೆಗಳು ಇಲ್ಲದಿರುವುದೆಂದು'** ಹೇಳಬಹುದು. ಅನಂತವಾದವನನ್ನು ಕುರಿತು ಅನಂತವಾದ ಬೋಧನೆಯನ್ನು ಹೇಳುವವನೆಂಬ ವಿಷಯ ತಿಳಿಯುವಂತೆ ಪ್ರಬೋಧಾನಂದ ಯೋಗಿಶ್ವರರು ಅನಂತ.... ಪುರದಲ್ಲಿಯೇ ಹುಟ್ಟುವುದು ನಡೆದಿದೆ. **ರಾಯಲ** ಸೀಮದಲ್ಲಿ, **ಅನಂತಪುರದಲ್ಲಿ** ಹುಟ್ಟಿದ ಯೋಗೀಶ್ವರರ ಹೆಸರಿನಲ್ಲಿ ಸಹ ಪ್ರತ್ಯೇಕತೆ ಇದೆ. ಹುಟ್ಟಿದವನು ಎಲ್ಲದಕ್ಕಿಂತ ದೊಡ್ಡವನೆನ್ನುವಂತೆ ಯೋಗಿಶ್ವರರವರ ಹೆಸರು **"ಪೆದ್ದನ್ನ" (ದೊಡ್ಡಣ್ಣ)**ಎಂದು ಕರೆಯಲ್ಪಟ್ಟಿದೆ. ಪೆದ್ದ+ಅನ್ನ=ಪೆದ್ದನ್ನ ಆಗುತ್ತದೆ. ಪ್ರದೇಶ **ರಾಯಲ. ಪಟ್ಟಣ ಅನಂತ** ಆದಂತೆ ಅಣ್ಣರಲ್ಲಿ **'ಪೆದ್ದ' (ದೊಡ್ಡವರು)** ಎಂಬ ಪ್ರತ್ಯೇಕತೆ ಹೊಂದಿದ ಹೆಸರಿಡಲಾಗಿದೆ. ಸ್ವಲ್ಪ ಆಲೋಚಿಸುವವರಿಗೆ ಎಷ್ಟೋಅಷ್ಟು ಅರ್ಥವಾಗುತ್ತದೆ. ಇದಕ್ಕುಮೊದಲು ಹುಟ್ಟಿದ ಸಿದ್ಧಾಂತಕರ್ತರಲ್ಲಿ ಯಾರಿಗೂ ಇಂತಹ ವಿಶೇಷತೆ ಸಿಗಲಿಲ್ಲ. ಆದುದರಿಂದ ಯೋಗೀಶ್ವರರ ಘನತೆಯನ್ನು ತಿಳಿದು ಆತನ ಮೂಲಕ **ಸತ್ಯವಾದ** ಜ್ಞಾನವನ್ನು, **ಶಾಸ್ತ್ರಬದ್ಧವಾದ** ಜ್ಞಾನವನ್ನು, **ಅನುಭವಕ್ಕೆ ಬರುವ** ಜ್ಞಾನವನ್ನು, **ಪ್ರತಿ ಪ್ರಶ್ನೆಗು ಉತ್ತರ** ಇರುವ ಜ್ಞಾನವನ್ನು ತಿಳಿಯಬಹುದು.

**ಪ್ರಶ್ನೆ :- ನೀವು ಹೇಳುವುದು ಸ್ವಲ್ಪ ಅರ್ಥವಾದಂತಿದೆ, ಆದರೆ ಏನೂ ಅರ್ಥವಾಗಲಿಲ್ಲ, ಈಗ ನಿಮ್ಮನ್ನು ಏನೆಂದುಕೊಳ್ಳಬೇಕು?**

**ಉತ್ತರ :-** ಪ್ರಪಂಚ ವಿಷಯಗಳಲ್ಲಿ ಎಲ್ಲರೊಂದಿಗೆ ಸಮಾನ ಮನುಷ್ಯನೇ ಎಂದು ಅಂದುಕೊಳ್ಳಬೇಕು. ಒಂದು ದೇವರ ವಿಷಯದಲ್ಲಿ ಮಾತ್ರ ಸಾಧಾರಣ ಮನುಷ್ಯನಾಗಿ ಅಂದುಕೊಳ್ಳದೆ **ಅಸಾಧಾರಣ ಮನುಷ್ಯನಾಗಿ** ಲೆಕ್ಕಿಸಬೇಕು. ಹೇಳುವ ಜ್ಞಾನವೆಲ್ಲಾ ಸತ್ಯವಾದುದೆಂದು ತಿಳಿಯಬೇಕು. ಹಾಗೆ ದೊಡ್ಡ ಜ್ಞಾನ ತಿಳಿಯುವುದರಿಂದ **ನಮ್ಮ ಜ್ಞಾನ ಕೇಳಿದ ಪ್ರತಿಯೊಬ್ಬರೂ ಮುಕ್ತಿಯನ್ನು ಹೊಂದಬಲ್ಲರು.** ಮಾಯೆಯನ್ನು ಜಯಿಸಿ ಜ್ಞಾನಮಾರ್ಗದಲ್ಲಿ ಮುಂದಕ್ಕೆ ಹೋಗಬಲ್ಲರು. ನಮ್ಮನ್ನು ಅಸೂಯೆಯಿಂದ ನೋಡುವವರಿಗೆ ಏನು ಗತಿಹಿಡಿಯುತ್ತದೋ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಬರೆದಿಟ್ಟಿದ್ದಾರೆ.

ಆದುದರಿಂದ ಪ್ರಪಂಚ ವಿಷಯಗಳಲ್ಲಿ ನಿಮಗಿಂತ ಕಡಿಮೆಯವನಾಗಿ ತಿಳಿದರೂ ಫರವಾಗಿಲ್ಲ. ದೈವಜ್ಞಾನ ವಿಷಯದಲ್ಲಿ ತಪ್ಪದೆ ದೊಡ್ಡದಾಗಿಯೇ ಭಾವಿಸಬೇಕೆಂದು ತಿಳಿಸುತ್ತಿದ್ದೇವೆ.

**ಪ್ರಶ್ನೆ :– ಅದ್ವೈತ ಸಿದ್ಧಾಂತವನ್ನು ತಿಳಿಸಿದ ಆದಿಶಂಕರಾಚಾರ್ಯರವರು, ವಿಶಿಷ್ಟಾದ್ವೈತವನ್ನು ತಿಳಿಸಿದ ರಾಮಾನುಜಾಚಾರ್ಯರವರು, ದ್ವೈತವನ್ನು ತಿಳಿಸಿದ ಮಧ್ವಾಚಾರ್ಯರವರು ಮೂವರು ಮೂರು ದಕ್ಷಿಣ ರಾಷ್ಟ್ರಗಳಲ್ಲಿ ಹುಟ್ಟಿದಾಗ, ಮೂವರು ಬ್ರಾಹ್ಮಣ ಕುಲಕ್ಕೆ ಸೇರಿದವರಾಗಿ ಇರುತ್ತಿದ್ದರು. ಮೂವರು ಒಂದೇ ಕುಲಕ್ಕೆ ಸೇರಿದವರಾದರೂ ಮೂವರದು ಮೂರು ವಿಧಗಳ ಜ್ಞಾನವಾಗಿರುವುದರಿಂದ ಶಂಕರನ ನಂತರ ಬಂದಿರುವ ರಾಮಾನುಜರವರು ಶಂಕರನನ್ನು ವಿಮರ್ಶಿಸಿ ಶಂಕರರು ಹೇಳಿದ ದೇವರು ನಿರ್ಗುಣ, ನಿರಾಕಾರ ಅಲ್ಲವೆಂದು ತನ್ನ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರ ಸಗುಣ ಸಾಕಾರ ಎಂದು ಹೇಳಿದಂತೆ ಇದೆ. ಆದರೆ ನಂತರ ಬಂದಿರುವ ಮಧ್ವಾಚಾರ್ಯರವರು ಶಂಕರನ ಅದ್ವೈತವನ್ನು, ರಾಮಾನುಜನ ವಿಶಿಷ್ಟಾದ್ವೈತವನ್ನು ಎರಡನ್ನು ವಿಮರ್ಶಿಸಿ ಮಾತನಾಡಿದ್ದಾರೆ. ಬಂದುಹೋದವರನ್ನು ಯಾರಾದರೂ ವಿಮರ್ಶಿಸುತ್ತಾರೆ ಆದರೆ, ಬರುವಂತಹವರನ್ನು ಕುರಿತು ಯಾರೂ ವಿಮರ್ಶಿಸಲಾರರು. ಮೊದಲು ಬಂದುಹೋದವನನ್ನು ಜ್ಞಾನ ತಿಳಿದವನಾಗಲಿ, ತಿಳಿಯದವನಾಗಲಿ ವಿಮರ್ಶಿಸುವುದು ಸುಲಭ, ರಾಮಾನುಜರು ಶಂಕರನನ್ನು, ಮಧ್ವಾಚಾರ್ಯರು ರಾಮಾನುಜರನ್ನು ವಿಮರ್ಶಿಸುವಂತೆ ನೀವು ಸಹ ಮಧ್ವಾಚಾರ್ಯರನ್ನು ವಿಮರ್ಶಿಸುತ್ತೀರಾ?**

**ಉತ್ತರ :–** ನಾನು ಅನವಶ್ಯವಾಗಿ ವಿಮರ್ಶಿಸುವುದಕ್ಕೆ ಬರಲಿಲ್ಲ. **ಶಾಸ್ತ್ರಬದ್ಧವಾದ ಜ್ಞಾನವನ್ನು ತಿಳಿಸುವುದು, ಶಾಸ್ತ್ರಬದ್ಧವಲ್ಲದ ಜ್ಞಾನವನ್ನು ಖಂಡಿಸುವುದು ಮಾತ್ರವೇ ನನ್ನ ಕೆಲಸ.** ಅಷ್ಟೇ ಹೊರತು, ಮೊದಲು ಬಂದವರನ್ನು ವಿಮರ್ಶಿಸುವುದು ನನ್ನ ಕೆಲಸವಲ್ಲ. ನಾನು ಮೂವರು ಆಚಾರ್ಯರಿಗಿಂತ ಹಿಂದೆ ಬಂದವನು. ಆದುದರಿಂದ ಮೂವರು ಆಚಾರ್ಯರು ನನ್ನನ್ನು ವಿಮರ್ಶಿಸುವುದಕ್ಕೆ ಅವಕಾಶವಿಲ್ಲ. ಆದರೆ ನನಗಿಂತ ಮೊದಲುಬಂದಿರುವ ಮೂವರು ಆಚಾರ್ಯರ

ತಪ್ಪು ಒಪ್ಪುಗಳನ್ನು ಕುರಿತು ಹೇಳುವ ಅವಕಾಶ ಇದೆ. ಅಸೂಯೆ ಗುಣದಿಂದ ಎಷ್ಟು ದೊಡ್ಡವನನ್ನಾದರೂ, ಚಿಕ್ಕವನಾದವನು ವಿಮರ್ಶಿಸಿ ಮಾತನಾಡಬಹುದು.

ನಾವು ತಪ್ಪುಗಳನ್ನು ತಪ್ಪುಗಳಾಗಿ, ಒಪ್ಪುಗಳನ್ನು ಒಪ್ಪುಗಳಾಗಿ ಗ್ರಹಿಸುತ್ತೇವೆ. ಆದುದರಿಂದ ನಾವು ಒಳ್ಳೆಯದನ್ನು ಒಳ್ಳೆಯದಾಗಿಯೇ, ಕೆಟ್ಟದನ್ನು ಕೆಟ್ಟದಾಗಿಯೇ ಹೇಳುತ್ತೇವೆ. ಅನವಶ್ಯವಾಗಿ ಕೆಟ್ಟದನ್ನು ಒಳ್ಳೆಯದನ್ನಾಗಾಗಲಿ, ಒಳ್ಳೆಯದನ್ನು ಕೆಟ್ಟದನ್ನಾಗಾಗಲಿ ಹೇಳುವ ಅವಶ್ಯಕತೆ ನಮಗೆ ಇಲ್ಲ. ನಾನು ಆದಿಶಂಕರಾಚಾರ್ಯರನ್ನು ಯಾವಾಗಲೂ ಅನವಶ್ಯಕವಾಗಿ ವಿಮರ್ಶಿಸಲಿಲ್ಲ. ಮೊದಲಿನಿಂದ ಶಂಕರನ ಮೇಲೆ ಎಷ್ಟೋ ಸಹಾನುಭೂತಿಯಿಂದ ಮಾತನಾಡುತ್ತಿದ್ದೇನೆ. "ಆರ್ಯರು ಮಾಡಿದ ಕುತಂತ್ರಕ್ಕೆ ಆತನು ಬಲಿಯಾಗಿಹೋಗಿದ್ದಾನೆ" ಎಂದು ಹೇಳಿದ್ದೇವೆ. ಅದ್ವೈತವನ್ನು ಯಾವಕಡೆ ನೋಡಿದರೂ ಶಾಸ್ತ್ರಬದ್ಧವಲ್ಲ. ಆದರೂ ಶಂಕರನು ಅದಕ್ಕೆ ಜವಾಬ್ದಾರಿ ಅಲ್ಲವೆಂದೇ ಹೇಳಿದ್ದೇವೆ. ಅದ್ವೈತ ಸಿದ್ಧಾಂತ ಆರ್ಯರದಾದರೆ ವಿನಾಕಾರಣವಾಗಿ ಶಂಕರನನ್ನು ಆರ್ಯರು ತೋರಿಸುವುದು ನಡೆದಿದೆ. ಸ್ವಲ್ಪವಯಸ್ಸು ಬಂದು ವ್ಯಕ್ತಿತ್ವ ಏರ್ಪಟ್ಟ ನಂತರ ಶಂಕರನು ಕ್ರಮೇಣ ಆರ್ಯರ ಕುತಂತ್ರವನ್ನು ಗ್ರಹಿಸಲ್ಪಟ್ಟಿದ್ದಾನೆ. ಆರ್ಯರು ಎಷ್ಟೋ ತಿಳುವಳಿಕೆಯುಳ್ಳವರು, ತಮ್ಮ ಆಲೋಚನೆಯನ್ನು ನಿಶ್ಯಬ್ಧವಾಗಿ ಯಾರಿಗೂ ತಿಳಿಯದಂತೆ ದ್ರಾವಿಡ ಬ್ರಾಹ್ಮಣನಾದ ಶಂಕರನ ಮೂಲಕ ನೆರವೇರಿಸಿದ್ದಾರೆ. ಭವಿಷ್ಯತ್ತಿನಲ್ಲಿ ದ್ರಾವಿಡ ಬ್ರಾಹ್ಮಣರ್‍ಯಾರೂ ಆರ್ಯರನ್ನು ಎದುರಿಸದಂತಿರುವುದಕ್ಕೆ ಏನು ವಿಮರ್ಶಿಸಿ ಮಾತನಾಡಿದರೂ ಅದೆಲ್ಲವೂ ಶಂಕರನಿಗೇ ಎನ್ನುವಂತೆ ಜಾಣ್ಮೆಯಿಂದ ಶಂಕರನಿಂದ ಅದ್ವೈತ ಸಿದ್ಧಾಂತವನ್ನು ಪ್ರಯೋಗಿಸಿದ್ದಾರೆ.

ಶ್ರೀ ಶಂಕರಾಚಾರ್ಯರು ಸಹ ಆರ್ಯರನ್ನು ಮೀರಿದ ತಿಳಿವಳಿಕೆ ಯುಳ್ಳವನು. ಸ್ವಲ್ಪಕ್ಕೆಸ್ವಲ್ಪ ಆರ್ಯರ ಕುತಂತ್ರಗಳನ್ನು ಗ್ರಹಿಸಲ್ಪಟ್ಟಿದ್ದಾನೆ. ತಾನು ಬೇರೆ ಮಾರ್ಗದಲ್ಲಿ ಪ್ರಯಾಣಿಸಬೇಕೆಂದುಕೊಂಡನು. ವ್ಯಾಸನು ಬರೆದ ಭಗವದ್ಗೀತೆಯನ್ನು ಓದಿದ್ದಾನೆ. ವ್ಯಾಸನು ಬರೆದ ಭಗವದ್ಗೀತೆಯನ್ನು ಪ್ರಚಾರ

ಮಾಡಬೇಕೆಂದುಕೊಂಡಿದ್ದಾನೆ. ಅದ್ವೈತವನ್ನು ಅಲ್ಲಿಗೆ ನಿಲ್ಲಿಸಬೇಕೆಂದುಕೊಂಡನು. ಭಗವದ್ಗೀತೆಯಲ್ಲಿನ ಕೆಲವು ಶ್ಲೋಕಗಳಿಂದ ಶಂಕರನು ಪೂರ್ತಿಯಾಗಿ ತನ್ನ ದಾರಿಯನ್ನು ಬದಲಾಯಿಸಿಕೊಂಡಿದ್ದಾನೆ. ಅದರ ಪ್ರಕಾರ ನೋಡಿದರೆ ಶಂಕರನು ಎಷ್ಟೋ ಉತ್ತಮನೆಂದು ಅರ್ಥವಾಗುತ್ತಿದೆ. ಭಗವದ್ಗೀತೆಯಲ್ಲಿನ ಭಾವವನ್ನು ಅರ್ಥ ಮಾಡಿಕೊಂಡಿದ್ದಾನೆ. ಯಾವಾಗ ಭಗವದ್ಗೀತೆಗೆ ಹತ್ತಿರವಾಗಿದ್ದಾನೋ ಆಗಲೇ ವೇದಗಳಿಗೆ ದೂರವಾಗುತ್ತಾ ಬಂದಿದ್ದಾನೆ. **"ತ್ರೈಗುಣ್ಯಾ ವಿಷಯಾವೇದಾ"** ಎಂಬ ವಾಕ್ಯ, **"ಗುಣಮಯಿ ಮಮ ಮಾಯಾ"** ಎಂಬ ಭಗವದ್ಗೀತಾ ವಾಕ್ಯಗಳಿಂದ ಬದಲಾದ ಶಂಕರನು ತನ್ನ ಬದಲಾವಣೆಯನ್ನು ಬಹಿರಂಗವಾಗಿ ಪ್ರಕಟಿಸದೇ, ಆತನಲ್ಲಿನ ಬದಲಾವಣೆಯನ್ನು ಯಾರಿಗೂ ತಿಳಿಯದಮುನ್ನವೇ ಅಕಾಲಮೃತ್ಯುವು ಆತನನ್ನು ಆಹ್ವಾನಿಸಿದೆ. ಶಂಕರಾಚಾರ್ಯರನ್ನು ವಿಮರ್ಶಿಸುವುದಕ್ಕೆ ಆತನಲ್ಲಿ ಯಾವ ತಪ್ಪು ಕಾಣಿಸುತ್ತಿಲ್ಲ. ಆತನು ತಾಯಿಮರೆಯಲ್ಲಿನ ಮಗುವಿನಂತೆ, ಎಲೆಮರೆಯಲ್ಲಿನ ಈಚಿನಂತೆ ಬದುಕಿದ್ದಾನೆ. ಕೊನೆಯಲ್ಲಿ ಆತನಿಗೆ ತಿಳಿದ ಭಾವನೆಗಳು ಮನುಷ್ಯರಿಗೆ ತಿಳಿದಿದ್ದರೆ ಪ್ರಜೆಗಳಿಗು ಆಧ್ಯಾತ್ಮಿಕ ವಿದ್ಯೆಯಲ್ಲಿ ಎಷ್ಟೋ ಒಳ್ಳೆಯದು ನಡೆದಿರುತ್ತಿತ್ತು.

**ಪ್ರಶ್ನೆ :– ನೀವು ಈಗ ಆಚಾರ್ಯ ಶಂಕರರನ್ನು ಎಷ್ಟೋ ಹೊಗಳುತ್ತಿದ್ದೀರ. ಇದಕ್ಕುಮುನ್ನ ಆತನು ಸಿದ್ಧಾಂತಕರ್ತನೇ ಅಲ್ಲವೆಂದು, ಆತನು ಹೇಳಿದ ಅದ್ವೈತ ಸಿದ್ಧಾಂತ ಶಾಸ್ತ್ರಬದ್ಧ ಅಲ್ಲವೆಂದು ಹೇಳಿದ್ದೀರಿ. ಅಲ್ಲಿಯೇನೊ ಶಂಕರಾಚಾರ್ಯರನ್ನು ವಿಮರ್ಶಿಸಿದ ನೀವು ಇಲ್ಲಿಯೇನೊ ಎಷ್ಟೊಂದು ಸಮರ್ಥಿಸುತ್ತಿದ್ದೀರ. ಈ ಎರಡರಲ್ಲಿ ನಾವು ಯಾವ ಮಾತು ಸತ್ಯವಾದುದೆಂದು ತಿಳಿಯಬೇಕು?**

**ಉತ್ತರ :–** ನೀವು, ನಾವು ಹೇಳುವ ವಿಷಯವನ್ನು ಅರ್ಥ ಮಾಡಿಕೊಳ್ಳದೆ ನಾವು ಎರಡು ವಿಧಗಳು ಮಾತನಾಡಿದಂತೆ ಹೇಳುತ್ತಿದ್ದೀರ. ಅಲ್ಲಿ ಶಂಕರರನ್ನು ವಿಮರ್ಶಿಸಿರುವುದು ನಿಜವೇ ಆದರೂ, ಅದು ಪರೋಕ್ಷವಾಗಿ ಆರ್ಯರನ್ನು ವಿಮರ್ಶಿಸುವುದು ನಡೆದಿದೆ. ಶಂಕರನನ್ನು ಮುಂದಿಟ್ಟು ಕಥೆಯನ್ನು ನಡೆಸಿದವರು ಆರ್ಯರು. ಆ ವಿಷಯವನ್ನು ನಾವು ಮೊದಲಿನಿಂದ ಹೇಳುತ್ತಿದ್ದೇವೆ. ಹಾಗೆ

ಮಾಡುವುದು ಅವರಿಗೆ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ. ಆಗಾಗಲಿ, ಈಗಾಗಲಿ ಹಾಗೆಯೇ ವ್ಯವಹರಿಸುತ್ತಿದ್ದಾರೆ. ಯಾರ ಊಹೆಗು ಸಹ ಸಿಗದ ವಿಧವಾಗಿ ಆರ್ಯರು ತಮ್ಮ ಉದ್ದೇಶವನ್ನು ನೆರವೇರಿಸಿಕೊಳ್ಳುವ ಬುದ್ಧಿವಂತರು. ಈದಿನ ಎಲ್ಲಿಯಾದರೂ ಕಾಣಿಸದಂತೆ ನೂರು ವರ್ಷಗಳ ಮೊದಲೇ ಬ್ರಿಟೀಷರ ಆಡಳಿತದಲ್ಲಿ ಭಾರತದೇಶ ಇರುವಾಗಲೇ, ಅದೇ ಸರಿಯಾದುದೆಂದು ತಿಳಿದ ಆರ್ಯರು ಪ್ರಜೆಗಳಲ್ಲಿ ದೇಶಭಕ್ತಿ ಬೀಜಗಳನ್ನು ನಾಟಿ ಎಷ್ಟೋ ಒಳ್ಳೆಯವರಂತೆ ದೇಶಕ್ಕಾಗಿ ಹೋರಾಡುವವರಂತೆ ಪ್ರಜೆಗಳ ಗೌರವವನ್ನು ಹೊಂದಿದ್ದಾರೆ. ಆ ದೇಶಭಕ್ತಿ ಸೂತ್ರ ಸ್ವಲ್ಪದಿನಗಳಲ್ಲಿಯೇ ದೇಶದಲ್ಲಿನ ಪ್ರಜೆಗಳಲ್ಲಿ ಪೂರ್ತಿಯಾಗಿ ಹರಡಿಕೊಂಡಿದೆ. ನಂತರ ಅವರು ಎಲ್ಲಿಯೂ ಕಾಣಿಸದಂತೆ ಕಣ್ಮರೆಯಾಗಿ ಹೋಗಿದ್ದಾರೆ.

ಸೈಕಲ್ ತುಳಿಯುವಾಗ ಆ ವಿದ್ಯೆ ಬರದವನಿಗೆ ಮೊದಲು ಬರುವವನು ಕಲಿಸುತ್ತಾನೆ. ಸೈಕಲ್ ಮೇಲೆ ಹತ್ತಿಸಿ ಹಿಂದುಗಡೆ ಸೀಟನ್ನು ಹಿಡಿದುಕೊಂಡು ಸೈಕಲ್ ಕೆಳಗೆ ಬೀಳದಂತೆ ಹತ್ತಿದವನಿಂದ ಸೈಕಲ್ ತುಳಿಯುವಂತೆ ಮಾಡುವನು. ಹಿಂದೆ ಸೈಕಲ್ ಹಿಡಿದುಕೊಂಡವನು ಇದ್ದಾನೆಂಬ ಧೈರ್ಯದಿಂದ ಸೈಕಲ್ ಹತ್ತಿದವನು ತುಳಿಯುವುದಕ್ಕೆ ಪ್ರಾರಂಭಿಸುತ್ತಾನೆ. ಹಾಗೆ ಕೆಲವು ಗಂಟೆಗಳು ಸಾಧನೆ ಮಾಡಿಸಿದ ನಂತರ ನಾನು ಇದ್ದೀನೆಂದು ಹೇಳಿ ಅವನಿಂದ ನಡೆಸುವವನು ಕೆಲವು ಗಂಟೆಗಳ ನಂತರ ಸೈಕಲನ್ನು ಬಿಡುತ್ತಾನೆ. ಆಗ ಸೈಕಲ್ ಏರಿದವನು ಸ್ವತಃವಾಗಿ ಸೈಕಲ್ ತುಳಿಯುವುದಕ್ಕೆ ಅಭ್ಯಾಸವಾಗುತ್ತಾನೆ. ಹಾಗೆ ಮೊದಲು ಹತ್ತಿರವಿದ್ದು ದೇಶಭಕ್ತಿಯನ್ನು ಕಲಿತವರು ಪ್ರಜೆಗಳಲ್ಲಿ ಸ್ವತಃವಾಗಿ ದೇಶಭಕ್ತಿ ಏರ್ಪಟ್ಟ ನಂತರ ಪ್ರಜೆಗಳಿಂದಲೇ ಆ ಪದ್ಧತಿಯನ್ನು ಮುಂದುವರೆಸಿದ್ದಾರೆ. ಹಾಗೆ ಪ್ರಜೆಗಳಿಗೆ ದೇಶಭಕ್ತಿಯನ್ನು ಕಲಿಸಿ ಪ್ರಜೆಗಳ ಹತ್ತಿರವಿರುವ **ದೇಹಿಭಕ್ತಿಯನ್ನು** ಇಲ್ಲದಂತೆ ಮಾಡುವುದೇ ಆರ್ಯರ ಮುಖ್ಯ ಉದ್ದೇಶ. ಅದು ನೂರು ವರ್ಷಗಳ ಮೊದಲೇ ನೆರವೇರಿದೆ. ಅದಕ್ಕು ಮೊದಲು ದೇಶಭಕ್ತಿ ಎಂದರೇ ಏನೋ ತಿಳಿಯದ ಪ್ರಜೆಗಳಲ್ಲಿ ದೇಶಭಕ್ತಿ ಹೊರಗೆ ಬಂದಿದೆ. ಅಲ್ಲಿಯವರೆಗೂ ಪ್ರಜೆಗಳ

ಹತ್ತಿರವಿರುವ **ದೇಹಿಭಕ್ತಿ (ಆತ್ಮಭಕ್ತಿ)** ಸ್ವಲ್ಪವೂ ಕಾಣಿಸದಂತೆ ಹೋಗಿದೆ. ನೂರು, ಇನ್ನೂರು ವರ್ಷಗಳ ಮೊದಲೇ ಅಷ್ಟೋ ಇಷ್ಟೋ ಇದ್ದ ಆತ್ಮಜ್ಞಾನವು ದೇಶಭಕ್ತಿಯಿಂದ ಇಲ್ಲದಂತೆ ಹೋಗಿದೆ.

ಈದಿನ ಹಿಂದೂ ಧರ್ಮಸಂಸ್ಥೆಗಳೆಂದು ಹೆಸರು ಇಟ್ಟುಕೊಂಡ ಯಾವ ಸಂಸ್ಥೆಯನ್ನು ಕದಲಿಸಿ ನೋಡಿದರೂ ಅದರಲ್ಲಿನ ಪ್ರಜೆಗಳು ದೇಶಭಕ್ತಿಯನ್ನು ಕುರಿತೇ ಹೇಳುತ್ತಾರೆ ಆದರೆ **ಆತ್ಮಜ್ಞಾನವನ್ನು (ದೇಹಿಭಕ್ತಿಯನ್ನು)** ಕುರಿತು ಹೇಳುವುದಿಲ್ಲ. ಪೂರ್ವದಲ್ಲಿ ಆರ್ಯರು ರೂಪಿಸಿದ ಸಂಚನ್ನು ಅನುಸರಿಸಿ ಈದಿನ ಹಿಂದೂಸಂಸ್ಥೆಗಳಲ್ಲಿರುವ ಪ್ರಜೆಗಳು ಆರ್ಯರು ಅಲ್ಲದಿದ್ದರೂ ಆರ್ಯರಂತೆ ಮಾತನಾಡುವುದು ಪ್ರಾರಂಭಮಾಡಿದ್ದಾರೆ. ಆರ್ಯರು ಇದ್ದರೂ ಇಲ್ಲದಿದ್ದರೂ ನಿರಂತರವಾಗಿ ಆರ್ಯರ ಯೋಜನೆ ನೆರವೇರುವಂತೆ ಈದಿನವಿರುವ ಹಿಂದೂ ಸಂಸ್ಥೆಗಳನ್ನು ತಯಾರು ಮಾಡಿಟ್ಟಿದ್ದಾರೆ. ಈದಿನ ದಕ್ಷಿಣ ಭಾರತ ದೇಶದಲ್ಲಿಯೇ ಹೆಚ್ಚಾಗಿ ಹಿಂದೂಮತಕ್ಕೆ ಸಂಬಂಧಿಸಿದ ಅನೇಕ ಸಂಸ್ಥೆಗಳಿವೆ. ಅದರಲ್ಲಿ ಕೆಲಸಮಾಡುವವರೆಲ್ಲರೂ ದ್ರಾವಿಡರೇ. ಆದರೂ ಅವರು ಆರ್ಯರ ಮಾತನ್ನೇ ಮಾತನಾಡುತ್ತಿದ್ದಾರೆ ಹೊರತು ತಾವು ದ್ರಾವಿಡರೆಂಬ ಜ್ಞಪ್ತಿ ಸಹ ಇಲ್ಲದಂತೆ ಹೋಗಿದೆ. ಪೂರ್ವದಲ್ಲಿ ದ್ರಾವಿಡ ರಾಜ್ಯ ಆತ್ಮಜ್ಞಾನದಲ್ಲಿ ಎಷ್ಟೋ ಮುಂದಿರುವಾಗ ಈದಿನ ಆತ್ಮಜ್ಞಾನ ಎಂದರೇ ಏನೋ ಅರ್ಥವಾಗದ ಸ್ಥಿತಿಯಲ್ಲಿ ಇದ್ದಾರೆ. ಹಿಂದೂಸಂಸ್ಥೆಗಳಲ್ಲಿ ಕೆಲಸಮಾಡುತ್ತಿದ್ದರೂ ಹಿಂದೂ ಧರ್ಮಗಳ್ಯಾವೋ ತಿಳಿಯದ ಸ್ಥಿತಿಯಲ್ಲಿದ್ದಾರೆ. ದೇಶಭಕ್ತಿ ಹೊರತು ದೇಹ ಭಕ್ತಿ ಸ್ವಲ್ಪವೂ ಇಲ್ಲದಂತೆ ಇದ್ದಾರೆ. ಈ ವಿಧವಾಗಿ ದ್ರಾವಿಡರು ಈದಿನ ಆರ್ಯರ ಕೈಯಲ್ಲಿ ಕೀಲುಗೊಂಬೆಗಳಾಗಿದ್ದಾರೆ. ಈದಿನ ಸಹ ತಮಗೆ ದ್ರಾವಿಡರಲ್ಲಿಯೇ ಅನುಕೂಲ ವಾತಾವರಣವಿರುವಂತೆ ಮಾಡಿಕೊಂಡಿದ್ದಾರೆ. ಈದಿನ ದ್ರಾವಿಡ ರಾದವರೇ ದ್ರಾವಿಡರನ್ನೇ ನಿಂದಿಸುತ್ತಿದ್ದಾರೆಂದರೇ ಇದಕ್ಕೆ ಕಾರಣ ಆರ್ಯರೆಂದು ಅರ್ಥವಾಗುತ್ತಿದೆ. ಆದಿನ ಶಂಕರನನ್ನು ಸಹ ಹಾಗೆಯೇ ತಯಾರು ಮಾಡಿದ್ದಾರೆ. ಆದರೆ ಆದಿನ ಶಂಕರಾಚಾರ್ಯರು ಸ್ವಲ್ಪ ವಿವೇಕದಿಂದ ಆರ್ಯರ ಉದ್ದೇಶವನ್ನು

ಕಂಡುಹಿಡಿದಿದ್ದಾನೆ. ಆದರೆ ಈದಿನ ಹಿಂದೂ ಸಮಾಜದಲ್ಲಿ ಹಿಂದೂ ರಕ್ಷಕರಾಗಿ ತಯಾರಾದ ದ್ರಾವಿಡರು ಆರ್ಯರ ಸೃಷ್ಟಿ ಆಗಿರುವುದರಿಂದ ಅವರು ಆರ್ಯರಾಗಿಯೇ ತಯಾರಾಗಿದ್ದಾರೆ. ನಾವು ದ್ರಾವಿಡರಾಗಿಯೇ ಇದ್ದು ಆತ್ಮಜ್ಞಾನವನ್ನು ಹೇಳುತ್ತಿದ್ದರೂ ನಮ್ಮನ್ನು ವಿರೋಧಿಸಿ ಮಾತನಾಡುತ್ತಿದ್ದಾರೆ. ಭಗವದ್ಗೀತೆ ಜ್ಞಾನವನ್ನು ಅಲ್ಲಗಳೆದು ವೇದ ಜ್ಞಾನವನ್ನು ಬೋಧಿಸಿರೆಂದು ಒತ್ತಡ ತರುತ್ತಿದ್ದಾರೆ. ತಮ್ಮಮಾತನ್ನು ಕೇಳದವರ ಮೇಲೆ ದಾಳಿಗಳು ಮಾಡುತ್ತಿದ್ದಾರೆ. ಪೂರ್ವದಲ್ಲಿ ಶಂಕರನು ಆರ್ಯರ ಸೃಷ್ಠಿಯೇ ಆದರೂ ಆತನು ಕೊನೆಯಲ್ಲಿ ಬದಲಾಗಿದ್ದಾನೆ. ಈದಿನ ದ್ರಾವಿಡರು ಎಷ್ಟೋ ಜನ ಹಿಂದೂ ರಕ್ಷಣ ಸಂಘಗಳಲ್ಲಿದ್ದು ಕುರುಡರಾಗಿ ಕೊನೆಗೆ ದ್ರಾವಿಡರು ದ್ರಾವಿಡರನ್ನೇ ಹಿಂಸಿಸುವ ಸ್ಥಿತಿಗೆ ಬಂದಿದ್ದಾರೆ. ಹಾಗೆ ತಯಾರು ಮಾಡಿರುವುದು ಆರ್ಯರಾಗಿರುವುದರಿಂದ ಇಲ್ಲಿ ಮುಖ್ಯವಾಗಿ ಆರ್ಯರದೇ ತಪ್ಪೆಂದು ಹೇಳಬಹುದು. ದ್ರಾವಿಡರನ್ನು ನಿಂದಿಸುವ ದ್ರಾವಿಡರದು ತಪ್ಪೆಂದು ಹೇಳಿದರೂ ಹಾಗೆ ತಯಾರುಮಾಡಿರುವುದು ಆರ್ಯರೇ ಆಗಿರುವುದರಿಂದ ಪ್ರತ್ಯಕ್ಷ ಕುತಂತ್ರಕ್ಕಿಂತ ಕಾಣಿಸದ ಪರೋಕ್ಷ ಕುತಂತ್ರಗಳೇ ಹೆಚ್ಚಾಗಿ ಅಪಾಯಕರ ವಾದವುಗಳು. ಆದುದರಿಂದ ಮೇಲ್ನೋಟಕ್ಕೆ ನಾವು ಶಂಕರನನ್ನು ತಪ್ಪೆಂದು ಹೇಳಿದರೂ, ಅದಕ್ಕ ಜವಾಬ್ಧಾರಿ ಆರ್ಯರೇ ಆಗಿರುವುದರಿಂದ ಪರೋಕ್ಷವಾಗಿ ಆರ್ಯರನ್ನೇ ವಿಮರ್ಶಿಸಿದಂತಾಗಿದೆ. ಅರ್ಥ ಮಾಡಿಕೊಳ್ಳದವರು ಶಂಕರನನ್ನು ಒಂದುಕಡೆ ವಿಮರ್ಶಿಸಿದಂತೆ, ಮತ್ತೊಂದುಕಡೆ ಹೊಗಳಿದಂತೆ ಅರ್ಥ ಮಾಡಿಕೊಂಡಿದ್ದಾರೆ. ಈದಿನ ಅನೇಕ ಹಿಂದೂ ಸಂಸ್ಥೆಗಳಲ್ಲಿ ಇರುವವರು ನಾವು ಎಷ್ಟು ದೊಡ್ಡ ಜ್ಞಾನವನ್ನು ಹೇಳಿದರೂ, ಅದನ್ನು ಗ್ರಹಿಸದೆ ನಮಗೆ ವಿರುದ್ಧವಾಗಿ ಮಾತನಾಡುತ್ತಿದ್ದಾರೆಂದರೇ ಅದು ಎಲ್ಲವೂ ಆರ್ಯರ ಕೆಲಸವೆಂದು ತಿಳಿದ ನಾವು ಪ್ರತ್ಯಕ್ಷವಾಗಿ ಹಿಂದೂ ಸಂಸ್ಥೆಗಳನ್ನು ದೂಷಿಸಿದರೂ ಅದು ಪರೋಕ್ಷವಾಗಿರುವ ಆರ್ಯರನ್ನೇಯೆಂದು ಅರ್ಥ ಮಾಡಿಕೊಳ್ಳಬೇಕು.

**ಪ್ರಶ್ನೆ :– ಈದಿನ ಹಿಂದೂ ಧರ್ಮರಕ್ಷಣೆ ಸಂಸ್ಥೆಯಲ್ಲಿರುವ ದ್ರಾವಿಡರು ವಿವೇಚನೆ**

**ಇಲ್ಲದಂತೆ ನಡೆದುಕೊಳ್ಳುತ್ತಿದ್ದಾರೆಂದು ನೀವು ಹೇಳುವವರೆಗು ನಮಗೂ ಸಹ ತಿಳಿಯಲಿಲ್ಲವೆಂದು. ಅವರ ಬೆರಳಿನಿಂದ ಅವರ ಕಣ್ಣನ್ನು ಇರಿಯುವ ವಿಧ ಆರ್ಯರದೆಂದು ನಮಗೆ ಈಗ ಸ್ವಲ್ಪ ಅರ್ಥವಾಗಿದೆ. ಮನುಷ್ಯ ದೇಹಿಭಕ್ತಿಯಿಂದ ಜೀವನ ಸಾಫಲ್ಯವಾಗುತ್ತದೆ ದೇಶಭಕ್ತಿಯಿಂದ ಮಾಡುವುದೇನು ಇಲ್ಲ. ಅದು ಹೆಸರಿಗೆ ಮಾತ್ರವೇ! ದೇಶ ಸರಿಹದ್ದಿನಲ್ಲಿ ಚಳಿಗೆ, ಮಳೆಗೆ, ಬಿಸಿಲಿಗೆ ಕಾವಲಾಗಿ ಕಾಯುತ್ತಿರುವ ಸೈನಿಕರಿಗೆ ಅಷ್ಟೋ ಇಷ್ಟೋ ದೇಶಭಕ್ತಿ ಇರಬಹುದು ಆದರೆ, ದೇಶದಲ್ಲಿ ಕುಳಿತುಕೊಂಡು ತಾವು ದೇಶಕ್ಕೆ ಏನು ಮಾಡದಿದ್ದರೂ ಅವರು ದೇಶಭಕ್ತಿ ಎನ್ನುವುದು ವಿಚಿತ್ರವಾಗಿರುತ್ತದೆ. ದೇಶಭಕ್ತಿ ಇರುವಂತೆ ಕಾಣಿಸುವ ಸೈನಿಕರಲ್ಲಿ ಸಹ ಈದಿನ ದೇಶಭಕ್ತಿ ಬರವಾಗಿಹೋಗಿದೆ ನಿಜವೇ ಅಲ್ಲವೆ?**

**ಉತ್ತರ :–** ನಿಜವಾಗಲು ಅದು ಯಾರಲ್ಲಿಯೂ ಇಲ್ಲ. ಮಾತನಾಡುವುದಕ್ಕೆ ಮಾತ್ರ ದೇಶಭಕ್ತಿ ಕೆಲಸಕ್ಕೆ ಬರುತ್ತದೆ. ನಾನು ಒಂದುಸಮಯದಲ್ಲಿ ಮಿಲಟರೀಯಲ್ಲಿ ಒಂದು ಭಾಗವಾದ ಆರ್ಮಿಯಲ್ಲಿ (ಭೂ ಸೈನ್ಯದಲ್ಲಿ) ಕೆಲಸ ಮಾಡಿದಾಗ ನಮ್ಮ ಆಫೀಸರ್ ಒಂದು ಪ್ರಶ್ನೆಯನ್ನು ಕೇಳುತ್ತಿದ್ದನು. ನೀವು ಯಾವುದಕ್ಕಾಗಿ ಸೈನ್ಯದೊಳಗೆ ಬಂದಿದ್ದೀರೆಂದು ಕೇಳಿದನು. ಆಗ ಒಬ್ಬೊಬ್ಬರು ಎದ್ದು **"ದೇಶ್ ಸೇವಾಕೇಲಿಯೇ"** ಎಂದು ಹಿಂದೀಯಲ್ಲಿ ಹೇಳುತ್ತಿದ್ದರು. ಅದರ ಅರ್ಥ **"ದೇಶ ಸೇವೆಗಾಗಿ ಬಂದಿದ್ದೇವೆಂದು"** ಹೇಳುತ್ತಿದ್ದರು. ಕೊನೆಯದಾಗಿ ನನಗೆ ಹೇಳುವ ಸರದಿ ಬಂದಿದೆ. ಆಗ ನಾನು ಹೀಗೆ ಹೇಳಿದೆನು. "ಉಚಿತವಾಗಿ ಪ್ರತಿ ಫಲಿತವನ್ನು ಆಶಿಸದೆ ಮಾಡುವುದು ಸೇವೆ ಆಗುತ್ತದೆ. ನಾವು ಹಣಕ್ಕಾಗಿ ಸರಕಾರ ಕೊಡುವ ತಿಂಗಳ ಸಂಬಳಕ್ಕಾಗಿ ಬಂದಿದ್ದೇವೆ. ಮನೆಯಹತ್ತಿರವಿರುವ ತಂದೆತಾಯಿಯನ್ನು ಪೋಷಿಸುವುದಕ್ಕಾಗಿ ಸೈನ್ಯದೊಳಗೆ ಬಂದಿದ್ದೇವೆ.' ದೇಶವೊಂದರ ಸೇವೆ ಎಂದರೆ ಏನೋ ನಮಗೆ ತಿಳಿದಿಲ್ಲ. ಇಂತಹ ಕೆಲಸ ದೇಶಸೇವೆ ಎನ್ನುವುದು ಯಾರಿಗೂ ತಿಳಿದಿಲ್ಲ. ಆದುದರಿಂದ ನಾನು ದೇಶಸೇವೆಗಾಗಿ ಬಂದಿದ್ದೇನೆ ಎನ್ನುವುದು ಅಸತ್ಯ. ಸತ್ಯ ಹೇಳಬೇಕೆಂದರೆ "ದೇಶ್ ಸೇವಾಕೇಲಿಯೇ ನಹೀ ಆಯಾಹು! ಹಮ್ ಪೇಟ್‌ಕಾ ಸೇವಾಕೇಲಿಯೇ ಆಯಾಹು!" ಎಂದು ಹೇಳಿದೆನು. ಆಗ

ಎಲ್ಲರೂ ಚಪ್ಪಾಳೆ ಹೊಡೆದು "ಏ ಸಹೀ ಹೈ!" ಅಂದಿದ್ದಾರೆ. ನಾನು ಹೇಳಿದ ಮಾತಿನಲ್ಲಿ "ನಾನು ದೇಶಸೇವೆಗಾಗಿ ಬರಲಿಲ್ಲ, ನಮ್ಮ ಹೊಟ್ಟೆ ಸೇವೆಗಾಗಿ ಬಂದಿದ್ದೇನೆ" ಎಂದು ಹೇಳಿದ್ದೇನೆ. ಆಗ "ಇದು ಸತ್ಯ" ಎಂದು ಚಪ್ಪಾಳೆ ಹೊಡೆದು ಹೇಳಿದ್ದಾರೆ. ನಮ್ಮ ಕಮಾಂಡರ್ ಸಹ ನಾನು ಸತ್ಯ ಹೇಳಿದ್ದೇನೆಂದು ಮೆಚ್ಚುಕೊಂಡು ಮೀಟಿಂಗ್‌ನಲ್ಲಿ ಹೀಗೆ ಹೇಳಿದನು. "ದೇಶಸೇವೆಗಾಗಿ ನಾನು ಸಹ ಬರಲಿಲ್ಲ. ನಾವೆಲ್ಲಾ ಯಾರೂ ಅದಕ್ಕಾಗಿ ಬರಲಿಲ್ಲ. ದೇಶಸೇವೆ ಎಂದರೇ ಏನೋ ಯಾರೂ ಹೇಳಲಿಲ್ಲ. ಯಾವ ಗ್ರಂಥದಲ್ಲಿಯೂ ಇದು ದೇಶಸೇವೆ ಎಂದು ಬರೆಯಲಿಲ್ಲ. ಒಬ್ಬ ಮನುಷ್ಯ ಸ್ವಚ್ಛಂದವಾಗಿ ಕೆಲಸ ಮಾಡುತ್ತಿದ್ದಾನೆಂದರೆ ಅದರಲ್ಲಿ ಸಹ ಮೇಲ್ನೋಟಕ್ಕೆ ಕಾಣಿಸದ ಸ್ವಾರ್ಥ ಯಾವುದೋ ಒಂದು ಇದ್ದೇ ಇರುತ್ತದೆ. ಹಾಗಿರುವಾಗ ದೇಶವೊಂದರ ಸೊತ್ತು ತಿನ್ನುತ್ತಾ ದೇಶಸೇವೆ ಮಾಡುತ್ತಿದ್ದೇವೆನ್ನುವುದು ಅಸತ್ಯವಾಗುತ್ತದೆ" ಅಂದನು. ಆಗ ಒಬ್ಬ ಜವಾನ್ ಎದ್ದು "ಕರ್ತವ್ಯ ನಿರ್ವಹಣೆಯಲ್ಲಿ ಯುದ್ಧ ಬಂದರೆ ನಾವು ಪ್ರಾಣಗಳನ್ನು ಲೆಕ್ಕಮಾಡದೆ ಹೋರಾಡುತ್ತಿದ್ದೇವೆ, ಯುದ್ಧದಲ್ಲಿ ಮರಣಿಸುತ್ತಿದ್ದೇವೆ. ಪ್ರಾಣ ಕಳೆದುಕೊಂಡರೂ ಅದು ದೇಶಸೇವೆ ಅಲ್ಲವೆಂದು ಹೇಳಿದರೆ ದೇಶಸೇವೆ ಎಂದರೇ ಏನೋ ಹೇಳಿರಿ' ಎಂದು ಕೇಳಿದನು. ಅದಕ್ಕೆ ಆಫೀಸರ್ 'ನಗುತ್ತಾ ನೀನು ತಿಂಗಳ ಸಂಬಳ ತೆಗೆದುಕೊಳ್ಳದೆ ಯುದ್ಧದಲ್ಲಿ ಪಾಲ್ಗೊಂಡರೇ ದೇಶಸೇವೆ ಆಗುತ್ತದೆ. ಹಣಕ್ಕಾಗಿ ಕೆಲಸ ಮಾಡುವುದು ಸೇವೆಯಲ್ಲ. ಹಾಗೆ ಕರ್ತವ್ಯ ನಿರ್ವಹಣೆಯಲ್ಲಿ ಮರಣಿಸಿದವರಿದೆಲ್ಲಾ ದೇಶಸೇವೆ ಆದರೆ, ಒಬ್ಬ ಕಳ್ಳನಿಗೆ ಕಳ್ಳತನ ಮಾಡುವುದೇ ಕೆಲಸವಾಗಿರುತ್ತದೆ. ತಾನು ಕಳ್ಳತನ ಮಾಡುತ್ತಾ ವಿಧಿವಶಾತ್ತು ಮರಣಿಸಿದ್ದಾನೆ ಅಂದುಕೊಳ್ಳೋಣ. ಆಗ ಅವನು ಅವನ ಕರ್ತವ್ಯ ನಿರ್ವಹಣೆಯಲ್ಲಿ ಮರಣಿಸಿದಂತೆ ಅಲ್ಲವೆ! ಕೋಟಿವಿದ್ಯೆಗಳು ಕೂಳಿಗಾಗಿಯೇ ಎಂದು ನಮ್ಮ ಹಿರಿಯರು ಹೇಳಿದಂತೆ ಕಳ್ಳ ಅವನಿಗಾಗಿ ಅವನು ಕೆಲಸ ಮಾಡುತ್ತಾ ಮರಣಿಸಿದ್ದಾನೆ. ಹಾಗೆಯೇ ಯಾರಾದರೂ ಅವನಿಗಾಗಿ ಅವನು ಕೆಲಸಮಾಡುತ್ತಾ ಮರಣಿಸಿದಾಗ ಅದು ದೇಶಸೇವೆ ಹೇಗಾಗುತ್ತದೆ?

ಕೋಟಿವಿದ್ಯೆಗಳು ಕೂಳಿಗಾಗಿಯೇ ಎನ್ನುವಂತೆ, ಕೋಟಿ ಕೆಲಸಗಳು (ಉದ್ಯೋಗಗಳು) ಹೊಟ್ಟೆಗಾಗಿಯೇ ಎಂದು ತಿಳಿಯುತ್ತಿದೆ. ಹಾಗಿರುವಾಗ ಯಾವುದನ್ನೂ ದೇಶಸೇವೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಒಂದು ಪ್ರಾಣವಿರುವ ಜೀವಿಗೆ ಅಂದರೇ ಮನುಷ್ಯನಿಗಾಗಲಿ, ಪ್ರಾಣಿಗಾಗಲಿ, ಪಕ್ಷಿಗಾಗಲಿ ಯಾವುದಕ್ಕಾದರೂ ಆಗಲಿ ಅದಕ್ಕಾಗಿ ಸ್ವಾರ್ಥ ಇಲ್ಲದಂತೆ, ಯಾವ ಫಲಕಾಂಕ್ಷೆ ಇಲ್ಲದಂತೆ ಕೆಲಸಮಾಡಿದರೆ ಅದು ಸೇವೆ ಆಗುತ್ತದೆ. ಹಾಗೆ ಮಾಡುವುದಕ್ಕೆ ದೇಶ ಒಬ್ಬ ಮನುಷ್ಯನಲ್ಲ, ಒಂದು ಪ್ರಾಣಿಯಲ್ಲ, ಒಂದು ಪಕ್ಷಿಯಲ್ಲ, ಅಂತಹ ಪ್ರಾಣವಿಲ್ಲದಿರುವುದಕ್ಕಾಗಿ ಸೇವೆ ಮಾಡುವುದೆನ್ನುವುದೇ ಇಲ್ಲ. ಪ್ರಾಣವಿರುವ ಮನುಷ್ಯನ ಸಂತೋಷಕ್ಕಾಗಿ ಇನ್ನೊಬ್ಬನು ಕಷ್ಟಪಟ್ಟರೆ ಅದು ಸೇವೆಯಾಗುತ್ತದೆ. ದೇಶ ವಿಶಾಲವಾದುದು ಅದಕ್ಕೆ ಪ್ರಾಣ ಇಲ್ಲವಾದ್ದರಿಂದ ಅದು ಸಂತೋಷಿಸುವುದು ಇಲ್ಲ. ಹಾಗಿರುವಾಗ ದೇಶಸೇವೆ ಎನ್ನುವುದಕ್ಕೆ ಅರ್ಥವೇ ಇಲ್ಲ. ಹಾಗಿರುವಾಗ ದೇಶಭಕ್ತಿ ಎನ್ನುವುದು ಪೂರ್ತಿ ತಪ್ಪಾಗುತ್ತದೆ. ಪ್ರಪಂಚದಲ್ಲಿ ದೇಶಭಕ್ತಿ ಎನ್ನುವುದು ಇಲ್ಲ. "ದೇಹಿಭಕ್ತಿಯನ್ನು" ಸೃಷ್ಠಿ ಆದಿಯಲ್ಲಿಯೇ ದೇವರು ತನ್ನ ಜ್ಞಾನದಲ್ಲಿ ಬೋಧಿಸಿದ್ದಾನೆ. ಅದೇ ಜ್ಞಾನವನ್ನೇ ದ್ವಾಪರಯುಗದಲ್ಲಿ ಹೇಳಿದ ಭಗವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗ, ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಲಾಗಿದೆ. ಆದರೆ ಮನುಷ್ಯರನ್ನು ದೇಹಿಭಕ್ತಿ (ಆತ್ಮಭಕ್ತಿ) ಯಿಂದ ದಾರಿ ಮರಳಿಸುವುದಕ್ಕೆ ಆರ್ಯರು "ದೇಶಭಕ್ತಿ" ಎಂಬ ಹೆಸರನ್ನು ಹೊರಗೆ ತಂದಿದ್ದಾರೆ. ಭಗವದ್ಗೀತೆಗೆ ವಿರೋಧಿಗಳಾದ ಆರ್ಯರ ಸಂಚನ್ನು ತಿಳಿಯದ ಮನುಷ್ಯರು ಅವರ ಪ್ರಭಾವಕ್ಕೊಳಗಾಗಿ ಅವರ ಮಾತುಗಳನ್ನೇ ಮಾತನಾಡುತ್ತಿದ್ದಾರೆ. ಹಾಗೆ ಮಾತನಾಡುವವರ ಮಾತುಗಳು ದೇವರಿಗೂ, ದೇವರ ಜ್ಞಾನಕ್ಕೂ ವಿರುದ್ಧವೆಂದು ಅವರಿಗೆ ತಿಳಿದಿಲ್ಲ.

**ಪ್ರಶ್ನೆ :– ಇದೆಲ್ಲಾ ನಮಗೂ ಸಹ ಚೆನ್ನಾಗಿ ಅರ್ಥವಾಗಿದೆ. ನಿಮ್ಮ ಗ್ರಂಥಗಳು ಓದದಿದ್ದರೆ ನಮಗೆ ಬೆಳ್ಳಗಿರುವವೆಲ್ಲಾ ಹಾಲೇ ಎಂದುಕೊಳ್ಳುತ್ತಿದ್ದೆವು. ನಿಮ್ಮ ಗ್ರಂಥಗಳು ಓದಿರುವುದರಿಂದ ಬೆಳ್ಳಗಿರುವವೆಲ್ಲ ಹಾಲಲ್ಲ, ಹಾಗೆ ಬೆಳ್ಳಗೆ ಕಾಣಿಸುವವುಗಳಲ್ಲಿ**

**ಮಜ್ಜಿಗೆ ಇದೆ, ಸುಣ್ಣದ ನೀರೂ ಇದೆ, ಎಕ್ಕಿ ಗಿಡದ ಹಾಲು ಇವೆಯೆಂದು ತಿಳಿದಂತೆ, ಈದಿನ ದೇಶದಲ್ಲಿರುವ ಜ್ಞಾನ ಎಷ್ಟು ವಿಧಗಳಿದೆಯೋ ತಿಳಿದುಹೋಗಿದೆ.**

**ಪ್ರಸ್ತುತ ಭಾರತದೇಶದಲ್ಲಿ ಆರ್ಯರು ಪೂರ್ವದಲ್ಲಿ ಜಾರಿ ಮಾಡಿರುವ ಪ್ರಣಾಳಿಕೆಯಿಂದ ಈದಿನ ಭಾರತದೇಶದಲ್ಲಿ ಅದ್ವೈತ ಹೆಚ್ಚಾಗಿ ಇದೆ. ನಂತರ ಹುಟ್ಟಿದ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಎರಡನೆಯ ಸ್ಥಾನದಲ್ಲಿ ಇದೆ. ಮಧ್ವಾಚಾರ್ಯರ ದ್ವೈತ ಮೂರನೆಯ ಸ್ಥಾನದಲ್ಲಿ ಇದೆ, ದ್ವೈತವಾಗಲಿ, ವಿಶಿಷ್ಟಾದ್ವೈತವಾಗಲಿ ಎರಡೂ ಅದ್ವೈತಕ್ಕೆ ವಿರುದ್ಧವೇ ಅಲ್ಲವೆ! ಅವರ ಹಿಂದೆ ಯಾರೂ ಇಲ್ಲದಿದ್ದರೂ ರಾಮಾನುಜರು, ಮಧ್ವರು ಇಬ್ಬರೂ ದ್ರಾವಿಡ ಬ್ರಾಹ್ಮಣರೇ ಆಗಿರುವುದರಿಂದ ಅವರು ಇಬ್ಬರೂ ಅದ್ವೈತಕ್ಕೆ ವಿರೋಧಿಗಳೇ, ಇಲ್ಲಿ ದ್ರಾವಿಡರು ಆರ್ಯರು ಎಂಬ ಭೇದ ಇಲ್ಲದಿದ್ದರೂ, ಅದ್ವೈತ ಸಿದ್ಧಾಂತ ತಪ್ಪು ಎಂಬ ಉದ್ದೇಶದಿಂದ ರಾಮಾನುಜನು, ಮಧ್ವರು ಅದ್ವೈತವನ್ನು ವಿರೋಧಿಸಿದಾಗ, ಸಿದ್ಧಾಂತಮೂಲವಾಗಿ ರಾಮಾನುಜನನ್ನು, ಮಧ್ವರು ವಿರೋಧಿಸಿದ್ದಾರೆ. ಇಲ್ಲಿಯವರೆಗೂ ಹೇಳಿರುವುದರಲ್ಲಿ ಅದ್ವೈತಕ್ಕೆ ಶಂಕರನು ಹೊಣೆಯಲ್ಲ, ಅದ್ವೈತವೆಲ್ಲಾ ಆರ್ಯರದೇ ಎಂದು ಹೇಳಿದ್ದೀರ. ಅದರಿಂದ ಶಂಕರಾಚಾರ್ಯರವರು ಈ ಸಿದ್ಧಾಂತಗಳ ಸಮಸ್ಯೆಯಿಂದ ಹೊರಬಿದ್ದಂತೆಯೆ! ಶಂಕರಾಚಾರ್ಯರ ದೋಷವೇನು ಇಲ್ಲದಂತೆಯೆ! ಆದರೆ ಶಂಕರಾಚಾರ್ಯರವರು ಇಪ್ಪತ್ತು ಗ್ರಂಥಗಳನ್ನು (20) ಬರೆದಂತಿದೆ. ಶಂಕರಾಚಾರ್ಯರು ಹೇಳಿದ್ದಾನೆಂಬ ಅದ್ವೈತವೇ ಆರ್ಯರ ಸೃಷ್ಠಿ ಅದಾಗ ತನ್ನ ಸಿದ್ಧಾಂತವೇ ಇಲ್ಲದಿರುವಾಗ ಶಂಕರನು ಇಪ್ಪತ್ತು ಗ್ರಂಥಗಳು ಬರೆದಿರುತ್ತಾನಾ? ಎಂದು ಅನುಮಾನ ಉಂಟಾಗುತ್ತಿದೆ. ಇದನ್ನು ಕುರಿತು ನೀವೇನನ್ನುತ್ತೀರಾ?**

**ಉತ್ತರ :–** ನನ್ನ ಉತ್ತರಗಿಂತ ನಿನ್ನ ಪ್ರಶ್ನೆ ಬಹಳ ಉದ್ದವಾಗಿದೆ. ಯಾವುದು ಏನಾದರೂ ಪ್ರಶ್ನಿಸುವುದು ಮುಖ್ಯ. ಅದರಲ್ಲಿ ಪದ್ಧತಿಯಾಗಿ ಹೇತುವಾಗಿ ಪ್ರಶ್ನಿಸುವುದು ಒಳ್ಳೆಯದು. ಹಾಗೆ ಪ್ರಶ್ನಿಸುವುದರಿಂದ ಬರುವ ಉತ್ತರ ಕೇಳಿದವನಿಗೇ ಅಲ್ಲದೇ, ಉಳಿದವರಿಗೂ ಸಹ ಉತ್ತರವಾಗಿರುತ್ತದೆ. ಅದರಿಂದ

ಎಷ್ಟೋ ಜನರಿಗೆ ಸತ್ಯ ತಿಳಿದಂತಾಗುತ್ತದೆ. ನೀನು ಕೇಳಿದ ಪ್ರಶ್ನೆಗೆ ಉತ್ತರ ಬೇಕೆಂದರೆ ಮೊದಲು ಶಂಕರನು ಬರೆದ ಗ್ರಂಥಗಳು ಯಾವುವೆಂದು ತಿಳಿದುಕೊಳ್ಳೋಣ. ಇಪ್ಪತ್ತು ಗ್ರಂಥಗಳು ಕ್ರಮವಾಗಿ ಇವೆ ನೋಡಿರಿ.

| | | | |
|---|---|---|---|
| **1)** | **ಗೀತಾಭಾಷ್ಯ** | **11)** | **ಬ್ರಹ್ಮಸೂತ್ರಭಾಷ್ಯ** |
| **2)** | **ವಿವೇಕ ಚೂಡಾಮಣಿ** | **12)** | **ಉಪದೇಶ ಸಹಸ್ರಿ** |
| **3)** | **ಅಪರೋಕ್ಷಾನುಭೂತಿ** | **13)** | **ಆತ್ಮಬೋಧನೆ** |
| **4)** | **ವಾಕ್ಯಸುಧ** | **14)** | **ತತ್ತ್ವಬೋಧನೆ** |
| **5)** | **ವಾಕ್ಯಮಿತ್ರ** | **15)** | **ಪಂಚೀಕರಣ** |
| **6)** | **ಶಿವಾನಂದ ಲಹರಿ** | **16)** | **ಸೌಂದರ್ಯಲಹರಿ** |
| **7)** | **ನಿರ್ಗುಣ ಮಾನಸಪೂಜೆ** | **17)** | **ಕನಕಧಾರ ಸ್ತೋತ್ರ.** |
| **8)** | **ಭಜಗೋವಿಂದ.** | **18)** | **ಭವಾನಿ ಅಷ್ಟಕ.** |
| **9)** | **ನಿರ್ವಾಣ ಶತಕ** | **19)** | **ಸಾಧನಾ ಪಂಚಕ.** |
| **10)** | **ಶಿವಮಾಸ ಪೂಜೆ** | **20)** | **ಸಿದ್ಧಾಂತ ತತ್ವವಿಂದು.** |

ಈದಿನ ಪೂರ್ವಕ್ಕಿಂತ ಹೆಚ್ಚಾಗಿ ವಿದ್ಯಾವಂತರಿದ್ದಾರೆ. ಪೂರ್ವದಲ್ಲಿ ಓದು ಬಂದವರು ಬಹಳ ಕಡಿಮೆ ಇರುತ್ತಿದ್ದರು. ಪ್ರಸ್ತುತ ಕಾಲದಲ್ಲಿ ವಿಶೇಷವಾಗಿ ಓದಿ ಎಷ್ಟೋ ರಂಗಗಳಲ್ಲಿ ಎಷ್ಟೋ ತಿಳುವಳಿಕೆಯಿಂದ ಇರುವವರು ಇದ್ದಾರೆ. ಕೆಲವು ವಿಷಯಗಳಲ್ಲಿ ಅತಿ ಬುದ್ಧಿವಂತಿಕೆಯಿಂದ ಮಾತನಾಡುವವರೂ ಇದ್ದಾರೆ. ಆದರೇ ದೇವರ ವಿಷಯದಲ್ಲಿ ಮಾತ್ರ ವಿಚಕ್ಷಣೆ ಇಲ್ಲದವರಾಗಿ, ಪೂರ್ತಿ ಕುರುಡರಾಗಿ ಪ್ರವರ್ತಿಸುತ್ತಿದ್ದಾರೆ. ಯಾರು ಏನು ಹೇಳಿದರೆ ಅದನ್ನು ನಿಜವೆಂದು ನಂಬುತ್ತಿದ್ದಾರೆ. ಪ್ರಪಂಚದಲ್ಲಿರುವ ವಿಚಕ್ಷಣೆ ಬುದ್ಧಿ ಪರಮಾತ್ಮ ವಿಷಯಗಳಲ್ಲಿ ಇಲ್ಲದಂತೆ ಹೋಗುತ್ತಿದೆ. ಹಾಗಲ್ಲದೆ ಪ್ರಪಂಚ ವಿಷಯಗಳಲ್ಲಿ ವಿವೇಚನೆ ಇಲ್ಲದಿದ್ದರೂ ಪರವಾಗಿಲ್ಲ. ಅದೆಲ್ಲವೂ ಕರ್ಮವನ್ನನುಸರಿಸಿ ನಡೆಯುತ್ತದೆ. ಮನುಷ್ಯನ ವಿವೇಕ ಪ್ರಪಂಚ ವಿಷಯದಲ್ಲಿ ಇದ್ದರೂ ಒಂದೇ ಇಲ್ಲದಿದ್ದರೂ

ಒಂದೇ. ಪ್ರಪಂಚ ವಿಷಯಗಳು ಮನುಷ್ಯನ ವಿಚಕ್ಷಣೆಯನ್ನು ಅನುಸರಿಸಿ ನಡೆಯುವುದಿಲ್ಲ. ಕರ್ಮ ಹೇಗೆ ನಿರ್ಣಯಿಸಲ್ಪಟ್ಟಿದೆಯೋ ಹಾಗೆ ನಡೆಯುತ್ತದೆ. ಆದರೆ ದೇವರ ಜ್ಞಾನ ಮನುಷ್ಯನ ವಿಚಕ್ಷಣೆಯನ್ನು ಅನುಸರಿಸಿ ಇರುತ್ತದೆ. ಮನುಷ್ಯ ತನ್ನ ವಿಚಕ್ಷಣೆಯಿಂದ ಜ್ಞಾನದ ಮೇಲೆ ಆಸಕ್ತಿಯನ್ನು ಬೆಳೆಸಿಕೊಳ್ಳಬಹುದು. ಮನುಷ್ಯನಲ್ಲಿರುವ ಆಸಕ್ತಿಯನ್ನನುಸರಿಸಿ (ಶ್ರದ್ಧೆಯನ್ನನು ಸರಿಸಿ) ಮನುಷ್ಯನಿಗೆ ಜ್ಞಾನ ಲಭಿಸುತ್ತದೆ. ಆದುದರಿಂದ ಜ್ಞಾನ ವಿಷಯಗಳಲ್ಲಿ ವಿಚಕ್ಷಣೆ ಇಲ್ಲದೆ ಯಾವ ಮನುಷ್ಯ ಇರಬಾರದು.

ಈಗ ಶಂಕರಾಚಾರ್ಯರವರು ಇಪ್ಪತ್ತು (20) ಗ್ರಂಥಗಳು ಬರೆದಿದ್ದಾರೆಂಬ ವಿಷಯ ನಮ್ಮ ಮುಂದಕ್ಕೆ ಬಂದಿದೆ. ಈ ವಿಷಯದಲ್ಲಿ ವಿವೇಕ 'ಇಲ್ಲದಿದ್ದರೆ ಅವರು ಹೇಳಿದಂತೆ ಶಂಕರನು ಇಪ್ಪತ್ತು ಗ್ರಂಥಗಳನ್ನು ಬರೆದಿದ್ದಾನೆಂದು ನಾವು ಸಹ ತಿಳಿಯಬೇಕಾಗಿದ್ದೆ. ಹಾಗಲ್ಲದೆ ಮನುಷ್ಯನಲ್ಲಿ ಸ್ವಲ್ಪ ವಿವೇಕ ಹೊಂದಿ ಪರಿಶೀಲನಾ ದೃಷ್ಟಿಯಿಂದ ನೋಡಿದರೆ ಶಂಕರಾ ಚಾರ್ಯರು ಇಪ್ಪತ್ತು ಗ್ರಂಥಗಳನ್ನು ಬರೆಯಲಿಲ್ಲವೆಂದು ಹೇಳಬೇಕಾಗಿದ್ದೆ! ಶಂಕರನು ಅಷ್ಟು ಗ್ರಂಥಗಳನ್ನು ಬರೆಯಲಿಲ್ಲವೆಂದು ಹೇಳುವುದಕ್ಕೆ ಎಷ್ಟೋ ಆಧಾರಗಳು ಇವೆ. ವಿಚಕ್ಷಣೆಯಿಂದ ಆಲೋಚನೆ ಮಾಡದಿರುವಾಗ ಇತರರು ಏನು ಹೇಳಿದರೂ ಕೇಳಬೇಕಾಗಿ ಬರುತ್ತದೆ. ಹಾಗಲ್ಲದೆ ಇದು ಜ್ಞಾನ ವಿಷಯವಾಗಿರುವುದರಿಂದ ನಾವು ಆಲೋಚನೆಯಿಂದ ಪ್ರಶ್ನೆ ರೂಪದಲ್ಲಿ ಪ್ರಶ್ನಿಸಿಕೊಂಡರೇ ಅದಕ್ಕೆ ಸಮಾಧಾನಗಳು ಇಲ್ಲದಿರುವಾಗ ಅಸತ್ಯವೆಂದು, ಸಮಾಧಾನಗಳು ಇದ್ದಾಗ ಸತ್ಯವೆಂದು ನಂಬಬಹುದು. ಯಾವ ಮನುಷ್ಯನಾದರೂ ವಿಚಕ್ಷಣಾ ಬುದ್ಧಿಯಿಂದಲೇ ಸತ್ಯಾಸತ್ಯಗಳು ತಿಳಿಯುತ್ತವೆ.

ಆದಿಶಂಕರಾಚಾರ್ಯರವರು ಚಿಕ್ಕವಯಸ್ಸಿನಲ್ಲಿಯೇ ಆರ್ಯರಿಂದ ಉತ್ತರ ದೇಶಯಾತ್ರೆಯನ್ನು 15 ಅಥವಾ 16ನೇ ವರ್ಷವೇ ಪ್ರಾರಂಭಿಸುವುದು ನಡೆದಿದೆ. ಕೇರಳ ರಾಷ್ಟ್ರದಿಂದ ಕಾಲುನಡೆಯಲ್ಲಿ ಪ್ರಯಾಣಿಸುತ್ತಾ 18 ವರ್ಷಗಳ ವಯಸ್ಸಿನಲ್ಲಿ ಗುಜರಾತ್ ರಾಷ್ಟ್ರದಲ್ಲಿ ಸೇರಿ, ಅಲ್ಲಿ ದ್ವಾರಕದಲ್ಲಿ ದ್ವಾರಕಾಪೀಠವನ್ನು

ಸ್ಥಾಪಿಸುವುದು ನಡೆದಿದೆ. ನಂತರ ಅಲ್ಲಿಂದ ಯಾತ್ರೆಯನ್ನು ಪ್ರಾರಂಭಿಸಿ ಸುಮಾರು ಐದು ವರ್ಷಗಳ ಪಾದಯಾತ್ರೆಯ ನಂತರ ಶಂಕರನ ವಯಸ್ಸು 23 ವರ್ಷಗಳಿರುವಾಗ ಹಿಮಾಲಯದಲ್ಲಿನ ಉತ್ತರಾಖಂಡ್ ರಾಷ್ಟ್ರದಲ್ಲಿರುವ ಬದ್ರಿಯಲ್ಲಿ ಜ್ಯೋತಿರ್ ಪೀಠವನ್ನು ಸ್ಥಾಪಿಸಿ, ಪುನಃ ಅಲ್ಲಿಂದ ಬಹಳ ವೇಗವಾಗಿ ಒಂದು ವರ್ಷದ ಅವಧಿಯಲ್ಲಿಯೇ ಕಾಲುನಡೆಯಲ್ಲಿ ಒರಿಸ್ಸಾ ರಾಷ್ಟ್ರದಲ್ಲಿನ ಪೂರಿ ಪಟ್ಟಣಕ್ಕೆ ಬರುವುದು ನಡೆದಿದೆ. ಅಲ್ಲಿ ಜಗನ್ನಾಥ ಪೀಠವನ್ನು ಸ್ಥಾಪಿಸುವುದು ನಡೆದಿದೆ. ಆಗ ಶಂಕರನ ವಯಸ್ಸು 24 ವರ್ಷಗಳು. ಅಲ್ಲಿಂದ ಶಂಕರಾಚಾರ್ಯರವರು ಕರ್ನಾಟಕ ರಾಷ್ಟ್ರದಲ್ಲಿನ ಶೃಂಗೇರಿಗೆ ಬಂದಿದ್ದಾರೆ. ಅಲ್ಲಿ ಶಾರದಾಪೀಠವನ್ನು ತನ್ನ 25ನೇ ವರ್ಷದಲ್ಲಿ ಸ್ಥಾಪಿಸಿದ್ದಾರೆ. ಅಲ್ಲಿಂದ ತನ್ನ ಸ್ವಂತ ರಾಷ್ಟ್ರವಾದ ಕೇರಳದಲ್ಲಿ ತಾನು ಹುಟ್ಟಿದ ಊರಿಗೆ ಬಂದು ಅಲ್ಲಿಂದ ತಮಿಳನಾಡು ರಾಷ್ಟ್ರವನ್ನು ಸೇರಿ ಕಂಚಿ ಪಟ್ಟಣದಲ್ಲಿ ತನ್ನ 27ನೇ ವರ್ಷ ಕಾಮಕೋಟಿ ಪೀಠವನ್ನು ಸ್ಥಾಪಿಸಿದ್ದಾರೆ. ಈ ವಿಧವಾಗಿ 15 ವರ್ಷಗಳ ವಯಸ್ಸಿನಿಂದ ನಿರಂತರವಾಗಿ ಪಾದಯಾತ್ರೆಯಲ್ಲಿ ದೇಶದ ನಾಲ್ಕು ಮೂಲೆಗಳಲ್ಲಿ ತಿರುಗಿ ಕೊನೆಗೆ 27 ವರ್ಷಗಳಿಗೆ ತನಗೆ ಸ್ವಸ್ಥಾನವನ್ನು ಕಂಚಿಯಲ್ಲಿ ಏರ್ಪಾಟು ಮಾಡಿಕೊಳ್ಳುವುದು ನಡೆದಿದೆ. ಇದೆಲ್ಲವೂ ನಮಗೆ ತಿಳಿದಿರುವ ವಿಷಯವೇ. ಕಂಚಿ ಪೀಠದಲ್ಲಿ ಸುಮಾರು ವರ್ಷ ಅಥವಾ ಒಂದೂವರೆ ವರ್ಷವಿದ್ದ ಶಂಕರಾಚಾರ್ಯರು ಭಗವದ್ಗೀತೆಗೆ ವಿವರವನ್ನು ಬರೆಯುವುದು ನಡೆದಿದೆ.

ಭಗವದ್ಗೀತೆಯ ವಿವರವನ್ನು ಬರೆದ ನಂತರ 29ನೇ ವರ್ಷವೇ ಪುನಃ ಉತ್ತರದೇಶ ಯಾತ್ರೆ ಪ್ರಾರಂಭಿಸುವುದು ನಡೆದಿದೆ. 30, 31ನೇ ವರ್ಷದಲ್ಲಿ ಯಾತ್ರೆಯಲ್ಲಿರುವ ಶಂಕರನು ತನ್ನ 32ನೇ ವರ್ಷ ಬದ್ರಿ ಸೇರಿಕೊಂಡು ಅಲ್ಲಿಂದ ಕೇದಾರ್‌ನಾಥ್‌ಗೆ ಬಂದು ಅಕಾಲ ಮರಣವನ್ನು ಹೊಂದಿದ್ದಾನೆ. ಈ ವಿಧವಾಗಿ ಆತನ ಜೀವನವೆಲ್ಲಾ ಕಾಲುನಡೆಯಲ್ಲಿ ನಡೆಯುವುದಾಗಿದೆ. ಒಂದು ವರ್ಷದ ಕಾಲ ಅವಧಿಯಲ್ಲಿ ತನ್ನ ಕಂಚಿಪೀಠದಲ್ಲಿರುವಾಗ ಭಗವದ್ಗೀತೆ ಭಾಷ್ಯ ಬರೆಯುವುದು ನಡೆದಿದೆ. ಭಗವದ್ಗೀತೆಯನ್ನು ಬರೆಯುವುದಕ್ಕೆ ಸುಮಾರು

ಆರು ತಿಂಗಳಿಂದ ವರ್ಷದವರೆಗು ಹಿಡಿಸಿರುತ್ತದೆ. ಒಂದು ಗ್ರಂಥವನ್ನು ಬರೆಯಬೇಕೆಂದರೆ ಅಕ್ಷರ ಅಕ್ಷರದಿಂದ ಲೆಕ್ಕಿಸಿದರೆ ಕೆಲವು ಕೋಟಿ ಅಕ್ಷರಗಳು ಬರೆಯಬೇಕಾಗಿರುತ್ತದೆ. ಒಂದು ಅಕ್ಷರಕ್ಕೆ ಕೆಲವು ಸೆಕಂಡುಗಳ ಲೆಕ್ಕದಲ್ಲಿ ನೋಡಿದರೂ ಒಂದು ಗ್ರಂಥ ಬರೆಯುವುದಕ್ಕೆ ಕೆಲವುದಿನಗಳು ಬೇಕಾಗುತ್ತದೆ. ಆದರೆ ಇಲ್ಲಿ ಶಂಕರನು ಅಷ್ಟು ಗ್ರಂಥಗಳು ಬರೆಯುವುದಕ್ಕೆ ಆತನಿಗೆ ಅವಧಿ ಎಲ್ಲಿದೆ? ಈ ಪ್ರಶ್ನೆಗೆ ಉತ್ತರವನ್ನು ಯಾರೂ ಹೇಳಲಾರರು. ಎಷ್ಟು ವೇಗವಾಗಿ ಬರೆದರೂ ಇಪ್ಪತ್ತು ಗ್ರಂಥಗಳು ಬರೆಯುವುದಕ್ಕೆ ಕನಿಷ್ಟ ಐದು ವರ್ಷಗಳ ಕಾಲವಾದರೂ ಹಿಡಿಸುತ್ತದೆ. ಮನುಷ್ಯ ಒಂದು ಗ್ರಂಥವನ್ನು ಬರೆಯಬೇಕೆಂದರೆ ಎಷ್ಟೋ ಆಲೋಚಿಸಿ ಬರೆಯುವುದು ನಡೆಯುತ್ತದೆ. ಬಿಡದೆ ಬರೆದರೂ ಐದು ವರ್ಷಗಳಕಾಲ ಹಿಡಿದರೆ ಅವುಗಳನ್ನು ಕುರಿತು ಆಲೋಚಿಸುವುದಕ್ಕೆ ಕನಿಷ್ಟ ಎರಡು ವರ್ಷಗಳ ಕಾಲವಾದರೂ ಬೇಕಾಗುತ್ತದೆ. ಕನಿಷ್ಟ ಏಳು ವರ್ಷಗಳ ಕಾಲವಾದರೂ ಇಲ್ಲದೆ ಇಪ್ಪತ್ತು ಗ್ರಂಥಗಳು ಬರೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಶಂಕರನ ಜೀವನದಲ್ಲಿ ಅಷ್ಟು ಕಾಲವನ್ನು ಶಂಕರನು ಯಾವಾಗ ಉಪಯೋಗಿಸಿದ್ದಾನೆ ಎಂದು ನೋಡಿದರೆ ಶಂಕರನು ಗ್ರಂಥಗಳು ಬರೆದಿದ್ದಾನೆನ್ನುವುದು ಶುದ್ಧ ಸುಳ್ಳು, ಆತನು ಬರೆದಿರುವುದು ಭಗವದ್ಗೀತೆ ಒಂದೇಯೆಂದು ಹೇಳುತ್ತಿದ್ದೇವೆ.

ಪ್ರಸ್ತುತ ಕಾಲದಲ್ಲಿ ಸುಲಭವಾಗಿ ಬರೆಯುವ ಲೇಖನಿಗಳು, ವೇಗವಾಗಿ ಬರೆಯುವ ಕೊನೆಗಳಿರುವ ಜೆಲ್ ಪೆನ್ನುಗಳು, ಬರೆದಂತೆಲ್ಲ ಬರಹಬೀಳುವ ತೆಳುವಾದ ಪೇಪರ್‌ಗಳು, ಯಾವ ಪೆನ್ನಿನಿಂದ ಸುಲಭವಾಗಿ ಬರೆದರೂ ಬರೆಯುವಂತಹ ಬಿಳಿಯ ಪೇಪರ್‌ಗಳು, ಕುಳಿತುಕೊಳ್ಳುವುದಕ್ಕೆ ಕುರ್ಚಿಗಳು, ಪೇಪರ್‌ಗಳನ್ನು ಹದವಾಗಿ ಇಟ್ಟುಕೊಳ್ಳುವುದಕ್ಕೆ ಟೇಬಲ್‌ಗಳು, ಅದರಮೇಲೆ ಕನ್ನಡಿ ಟೇಬಲ್‌ಟಾಪ್‌ಗಳು ಇರುವಾಗ, ಎರಡುನೂರು ಪೇಜಿಗಳು ಬರೆಯುವುದಕ್ಕೆ ಒಂದು ತಿಂಗಳಕಾಲ ಹಿಡಿಸುತ್ತಿದೆ. 200 ಪೇಜಿಗಳ ಗ್ರಂಥವನ್ನು ನೋಡಿ ಬರೆದರೂ ಸುಮಾರು 15 ದಿನಗಳ ಕಾಲ ಬೇಕಾಗುತ್ತದೆ. ಇದೆಲ್ಲವೂ ಈಗಿನ ಕಾಲದಲ್ಲಿನ ಪರಿಸ್ಥಿತಿ. ಆಗ ಶಂಕರನು ಗ್ರಂಥವನ್ನು ಬರೆದದಿನ

ಪೇಪರ್‌ಗಳು ಇಲ್ಲ, ಪೆನ್ನುಗಳಾಗಲಿ ಪೆನ್ಸಿಲ್‌ಗಳಾಗಲಿ ಇಲ್ಲ. ರಾತ್ರಿಸಮಯ ಕಾಣಿಸುವ ಕರೆಂಟು ಲೈಟ್‌ಗಳು ಇಲ್ಲ. ಆ ದಿನಗಳಲ್ಲಿ ತಾಳೆ ಎಲೆಗಳ ಮೇಲೆ ಕಬ್ಬಿಣದ ವಸ್ತುವಿನಿಂದ ಗೆರೆಗಳು ಇಡುತ್ತಾ ಬರೆಯಬೇಕಾಗಿರುತ್ತದೆ. ಮೊನೆಚೂಪಾದ ಕಬ್ಬಿಣದಕಡ್ಡಿಯನ್ನು ಅಂಗೈಯಲ್ಲಿ ಅದಮಿಡಿದು ಮಂದ ವಾಗಿರುವ ತಾಳೆಎಲೆ ಮೇಲೆ ಬರೆಯಬೇಕಾಗಿರುತ್ತದೆ. ಈ ಕಾಲದಲ್ಲಿ ಒಂದು ಪೇಜಿನಲ್ಲಿ ಅಚ್ಚುಹಾಕುವ ಬರಹವನ್ನು ಆ ಕಾಲದಲ್ಲಿ ಕನಿಷ್ಟ 20 ಅಥವಾ 25 ತಾಳೆ ಎಲೆಗಳ ಮೇಲೆ ಬರೆಯಬೇಕಾಗಿರುತ್ತದೆ. ಆದಿನ ಭಗವದ್ಗೀತೆಗೆ ವಿವರವನ್ನು ಬರೆದ ಶಂಕರನು ಎಷ್ಟೋ ಕಷ್ಟಪಟ್ಟರೆ ಮಾತ್ರ ಗೀತೆಯನ್ನು ಬರೆಯುವುದಕ್ಕೆ ಕನಿಷ್ಟ ಒಂದು ವರ್ಷಕಾಲ ಬೇಕಾಗಿರುತ್ತದೆ. ತಾಳೆ ಎಲೆಗಳು 15 ಸಾವಿರದಿಂದ 20 ಸಾವಿರದ ಎಲೆಗಳವರೆಗು ಹಿಡಿಸಿರುತ್ತದೆ. ಯಾವ ಭಾಷೆಯಲ್ಲಿ ಬರೆದರೂ ಎಲೆಮೇಲೆ ಬರೆಯುವ ಅಕ್ಷರ ಕನಿಷ್ಟ ತೊಗರಿಬೇಳೆಯಷ್ಟು ದೊಡ್ಡದಾಗಿರಬೇಕು. ಅದಕ್ಕಿಂತ ಚಿಕ್ಕದಾಗಿ ಬರೆಯುವುದಕ್ಕೆ ಎಲೆಮೇಲೆ ಸಾಧ್ಯವಾಗುವುದಿಲ್ಲ. ಒಂದು ಅಕ್ಷರ ಬರೆಯುವುದಕ್ಕೆ ಈಗಿನಕಾಲದಲ್ಲಿ ಎಷ್ಟು ವೇಗವಾಗಿ ಬರೆದರೂ ಕನಿಷ್ಟ ಎರಡು ಸೆಕೆಂಡುಗಳ ಕಾಲವಾದರೂ ಬೇಕಾಗುತ್ತದೆ. ಎರಡು ಸೆಕೆಂಡ್‌ಗಳಲ್ಲಿ ನುಣುಪಾದ ಪೇಪರ್‌ಮೇಲೆ, ಮೆತ್ತನೆಯ ಪೆನ್ನಿನಿಂದ ಬರೆಯುವ ಅಕ್ಷರ, ಅದೇ ತಾಳೆಎಲೆಗಳ ಮೇಲೆ, ಕಬ್ಬಿಣದ ಕುಂಚದಿಂದ ಬರೆಯುವುದಕ್ಕೆ ಕನಿಷ್ಟ 30 ಸೆಕಂಡ್‌ಗಳ ಕಾಲದಿಂದ 50 ಅಥವಾ 60 ಸೆಕಂಡ್‌ಗಳ ಕಾಲ ಹಿಡಿಯ ಬಹುದು. ಅಂತಹ ವಸತಿ ಇರುವ ಈ ಕಾಲದಲ್ಲಿ ಎಷ್ಟೋ ಅಭ್ಯಾಸದಿಂದ, ಎಷ್ಟೋ ಸಹನೆಯಿಂದ ಶಂಕರಾಚಾರ್ಯರು ಭಗವದ್ಗೀತೆಯನ್ನು ಬರೆಯುವುದಕ್ಕೆ ಕನಿಷ್ಟ ಒಂದು ವರ್ಷದಕಾಲ ಹಿಡಿಸಿದೆ. ಒಂದು ಗ್ರಂಥವನ್ನು ಬರೆಯುವುದಕ್ಕೆ ಆತನಲ್ಲಿನ ಸಹನೆ ಸಹಕಾರ ಎರಡೂ ಮುಗಿದುಹೋಗಿರುತ್ತದೆ. ಪುನಃ ಎರಡನೆ ಗ್ರಂಥವನ್ನು ಬರೆಯುವುದಕ್ಕೆ ಮೊದಲು ಉಂಟಾದ ಆತಂಕದಿಂದ ಚೇತರಿಸಿಕೊಂಡು ಪ್ರಾರಂಭಿಸುವುದಕ್ಕೆ ಕನಿಷ್ಟ ಮೂರು ತಿಂಗಳ ಕಾಲವಾದರೂ ಇರಬೇಕು. ಇಲ್ಲದಿದ್ದರೆ ಮೆದುಳಿನಲ್ಲಿ ಏರ್ಪಟ್ಟಿರುವ  ಹಾನಿಯಿಂದ, ಬರೆಯುವಂತಹ ಗ್ರಂಥವೊಂದರ ವಿಷಯ  ಬದಲಾಗಿಹೋಗುತ್ತದೆ.

ಬರೆಯಬೇಕೆಂದುಕೊಂಡಷ್ಟು ಬರೆಯಲಾರರು. ಸ್ವಲ್ಪ ವಿಶ್ರಾಂತಿ ನಂತರ ಸುಲಭವಾಗಿ ಬರೆಯುವುದಕ್ಕೆ ಮಾನಸಿಕ ಶಕ್ತಿ ಬರುತ್ತದೆ. ಇದೆಲ್ಲವೂ ನಾವು ಗ್ರಂಥಗಳು ಬರೆದ ಅನುಭವದಿಂದ  ಹೇಳುತ್ತಿದ್ದೇವೆ. ಈಗ ನಾವು ಈ ಗ್ರಂಥವನ್ನು ಬರೆಯುತ್ತಿರುವ ಸಮಯ 4. 1. 2016 ರಾತ್ರಿ 1. 40 ನಿಮಿಷಗಳು. ರಾತ್ರಿ 12. 30 ನಿಮಿಷಗಳಿಗೆ ಎದ್ದು ಪೂರ್ತಿಯಾಗಿ ತಯಾರಾಗಿ ಕುಳಿತುಕೊಳ್ಳುವುದಕ್ಕೆ ಅರ್ಧಗಂಟೆ ಸಮಯ ಬೇಕಾದರೆ ಒಂದುಗಂಟೆಯಿಂದ ಬರೆಯುತ್ತಿದ್ದೇವೆ. ಇಲ್ಲಿಗೆ 40 ನಿಮಿಷಗಳಿಂದ ಬರೆಯುತ್ತಿದ್ದರೂ ಒಂದೂವರೆ ಪುಟಕ್ಕಿಂತ ಹೆಚ್ಚಾಗಿ ಬರೆಯಲಿಲ್ಲ. ಎಲ್ಲಾ ಸೌಕರ್ಯಗಳಿದ್ದರು ಈಕಾಲದಲ್ಲಿಯೇ ಈ ಗ್ರಂಥ ಬರೆಯುವುದಕ್ಕೆ ಕನಿಷ್ಟ ಒಂದು ತಿಂಗಳಕಾಲ ಬೇಕಾಗುತ್ತಿದೆ. ಯಾವ ಸೌಕರ್ಯವಿಲ್ಲದ ಆ ಕಾಲದಲ್ಲಿ ಇದೇ ಗ್ರಂಥವನ್ನು ಬರೆಯುವುದಕ್ಕೆ ಕನಿಷ್ಟ ನಾಲ್ಕು ತಿಂಗಳಿಂದ ಆರು ತಿಂಗಳ ಕಾಲವಾದರೂ ಹಿಡಿಯಬಹುದು. ಇದರಿಂದ ಆತನ ಜೀವನದಲ್ಲಿ 20 ಗ್ರಂಥಗಳು ಬರೆದಿದ್ದಾರೆಂದು ನೀವು ಹೇಳಬಲ್ಲಿರಾ?

ಶಂಕರಾಚಾರ್ಯರು ಭಗವದ್ಗೀತಾ ಗ್ರಂಥವನ್ನು ಮಾತ್ರ ತನ್ನ ಜೀವನದಲ್ಲಿ ಬರೆಯಲ್ಪಟ್ಟಿದ್ದಾರೆ. ಉಳಿದ ಗ್ರಂಥಗಳು ಬರೆದಿದ್ದಾನೆಂದು ಹೇಳುವುದು ಪೂರ್ತಿ ಅಸತ್ಯವಾಗಿ ಕಾಣಿಸುತ್ತಿದೆ. ಭಗವದ್ಗೀತಾ ಜ್ಞಾನವನ್ನು ಹೇಳಿದವನು ಪರಮಾತ್ಮ (ದೇವರು). ಆದರೆ ದೇವರು ಸ್ವತಃವಾಗಿ ಯಾರೊಂದಿಗೂ ನೇರವಾಗಿ ಮಾತನಾಡುವುದಿಲ್ಲ. ಆದುದರಿಂದ ಭಗವಂತನಾಗಿ ಬಂದು ಭಗವಂತನಾಗಿ ಮಾತನಾಡಿ ಹೇಳಿದ ಬೋಧನೆ ಭಗವದ್ಗಿತೆ. **ಭಗವದ್ಗೀತೆ ನಿಜವಾದ ದೇವರ ಜ್ಞಾನ. ನಿಜವಾದ ದೇವರು ಭಗವಂತನಾಗಿ ಹೇಳಿದ ಜ್ಞಾನ**. ಭಗವದ್ಗೀತೆ ಮುಂದೆ ಉಳಿದ ಮನುಷ್ಯರು ಹೇಳಿದ ಗ್ರಂಥಗಳೆಲ್ಲವೂ ಕಡಿಮೆ ಎಂದೇ ಹೇಳಬಹುದು. ಭಗವದ್ಗೀತೆಯನ್ನು ಜೇನುತುಪ್ಪಕ್ಕೆ ಹೋಲಿಸಿದರೆ, ಉಳಿದ ಗ್ರಂಥಗಳನ್ನು ಬೆಲ್ಲದಿಂದ ತಯಾರು ಮಾಡಿದ ಪಾನಕವಾಗಿ ಹೇಳಬಹುದು. ಜೇನನ್ನು ಕುಡಿದವನು ಪಾನಕವನ್ನು ಕುಡಿದರೆ 'ಪಾನಕ ಜೇನುತುಪ್ಪಕ್ಕಿಂತ ಅತ್ಯಂತ ಕಡಿಮೆ' ಎಂದು ಹೇಳುತ್ತಾನೆ. ಅಂತಹ ಭಗವದ್ಗೀತೆಗೆ ವಿವರವನ್ನು ಬರೆದವನು ಅದಕ್ಕಿಂತ

ಭಿನ್ನವಾಗಿರುವುದನ್ನು ಒಪ್ಪಿಕೊಳ್ಳುವುದಿಲ್ಲ, ಬರೆಯುವುದಿಲ್ಲ. ಅಂಥವನು ಯಾವ ಗ್ರಂಥವನ್ನು ಬರೆದರೂ ಭಗವದ್ಗೀತೆಯನ್ನು ಆಧಾರವಾಗಿ ತೋರಿಸುತ್ತಾ, ಭಗವದ್ಗೀತಾ ಶಾಸ್ತ್ರಕ್ಕೆ ಅನುಗುಣವಾಗಿರುವ ಗ್ರಂಥಗಳನ್ನೇ ಬರೆಯುತ್ತಾನೆ.

ಶಂಕರಾಚಾರ್ಯರು ಭಗವದ್ಗೀತೆಗೆ ವಿವರ ಬರೆದಿದ್ದಾನೆ ಎನ್ನುವುದು ಸತ್ಯ. ಆದರೆ ಅದೇ ಶಂಕರನೇ ಭಗವದ್ಗೀತೆಗೆ ಸ್ವಲ್ಪ ಭಿನ್ನವಾಗಿರುವುದನ್ನು ಬರೆಯುತ್ತಾನಾ ಎಂದರೇ ಭಗವದ್ಗೀತೆಯ ಬೆಲೆ ತಿಳಿದ ನಂತರ ಅದಕ್ಕೆ ಭಿನ್ನವಾಗಿ ಬರೆಯುವುದಿಲ್ಲ. ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿ ಇಲ್ಲದ ವಿಷಯಗಳನ್ನು ಕಲ್ಪಿಸಿ ಬರೆಯುವುದಿಲ್ಲ. ಭಗವದ್ಗೀತೆ ನಂತರ ಶಂಕರರ "ವಿವೇಕ ಚೂಡಾಮಣಿ" ಎಂಬ ಗ್ರಂಥವನ್ನು ಬರೆದಿದ್ದಾನೆಂದು ಹೇಳುತ್ತಿದ್ದಾರೆ. ವಿವೇಕ ಚೂಡಾಮಣಿ ಎಂಬ ಗ್ರಂಥದಲ್ಲಿ ಅನ್ನಮಯ ಕೋಶ, ಪ್ರಾಣಮಯ ಕೋಶ, ಮನೋಮಯ ಕೋಶ, ವಿಜ್ಞಾನಮಯ ಕೋಶ, ಆನಂದಮಯ ಕೋಶ ಎಂಬ ಐದು ಕೋಶಗಳನ್ನು ಬರೆದಿದ್ದಾರೆ. ಆದರೆ ಭಗವದ್ಗೀತೆಯಲ್ಲಿ ಈ ಐದು ಕೋಶಗಳು ಹೇಳಲಿಲ್ಲ. ಭಗವದ್ಗೀತೆಯಲ್ಲಿ ಹೇಳದ ಭಗವದ್ಗೀತೆಗೆ ಸ್ವಲ್ಪ ಭಿನ್ನವಾಗಿರುವ ವಿಷಯಗಳನ್ನು ಶಂಕರನು ಹೇಗೆ ಹೇಳುತ್ತಾನೆ? ಇದರಿಂದ 'ವಿವೇಕ ಚೂಡಾಮಣಿ' ಎಂಬ ಗ್ರಂಥವನ್ನು ಶಂಕರನು ಬರೆಯಲಿಲ್ಲವೆಂದು ಹೇಳಬಹುದು. ಮತ್ತೊಂದು ವಿಷಯವನ್ನು ತೆಗೆದುಕೊಂಡು ನೋಡಿದರೆ ಅದೇ ಗ್ರಂಥದಲ್ಲಿ ಶರೀರವನ್ನು ಎರಡು ಭಾಗಗಳಾಗಿ ವಿಭಜಿಸಿ ಹೇಳಿದಾಗ, ಸ್ಥೂಲ, ಸೂಕ್ಷ್ಮ ಭಾಗಗಳೆಂದು ಹೆಸರಿಟ್ಟು ಶರೀರಭಾಗಗಳನ್ನು ಬರೆದಿದ್ದಾರೆ. ಹಾಗೆ ಶಂಕರನು ಬರೆದಿರುವುದಿಲ್ಲ. ಯೋಗ ಚೂಡಾಮಣಿ ಉಪನಿಷತ್ತಿನಲ್ಲಿ ಒಂದು ಶ್ಲೋಕ ಹೀಗೆ ಇದೆ. "ಜ್ಞಾನ ಕರ್ಮೇಂದ್ರಿಯೈಃ ಪ್ರಾಣಾದಿ ಪಂಚವಾಯು ಮನೋಬುದ್ಧಿಶ್ಚ ಸೂಕ್ಷ್ಮಲಿಂಗ ಮಿತ್ಯುಚ್ಯತೇ" ಎಂದು ಹೇಳಿದ್ದಾರೆ. ಇದನ್ನನುಸರಿಸಿ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಪ್ರಾಣಾದಿ ಪಂಚವಾಯುವುಗಳು ಐದು , ಮನಸ್ಸು, ಬುದ್ಧಿ ಒಟ್ಟು ಹದಿನೇಳು (17) ಸೂಕ್ಷ್ಮ ಶರೀರವೆಂದು ಅನ್ನುತ್ತಾರೆ ಎಂದು ಇದೆ. ಈ ಶ್ಲೋಕವನ್ನು

ಯೋಗಚೂಡಾಮಣಿ ಉಪನಿಷತ್ತಿನಲ್ಲಿ ವ್ಯಾಸನು ಬರೆದಿರುವಾಗ ಅದೇ ವಿಷಯವನ್ನೇ ಶ್ಲೋಕವನ್ನು ಬದಲಾಯಿಸಿ ಹೇಳಿದಂತೆ ಇದೆ. ಭಗವದ್ಗೀತೆ ಜೇನುತುಪ್ಪದಂತೆ ಇರುವಾಗ, ಪಾನಕದಂತಹ ವಿಷಯಗಳನ್ನು ಶಂಕರನು ಬರೆದಿರುವುದಿಲ್ಲ. ಭಗವದ್ಗೀತೆ 701 ಶ್ಲೋಕಗಳಿರುವಾಗ, 'ವಿವೇಕ ಚೂಡಾಮಣಿ' ಗ್ರಂಥ ಒಂದನೆಯ ಭಾಗದಲ್ಲಿ 581 ಶ್ಲೋಕಗಳು, ಎರಡನೆ ಭಾಗದಲ್ಲಿ 267 ಶ್ಲೋಕಗಳು ಇವೆ. ಎರಡು ಭಾಗಗಳ ಗ್ರಂಥಗಳಲ್ಲಿ ಒಟ್ಟು ಶ್ಲೋಕಗಳು 848 ಶ್ಲೋಕಗಳು ಇವೆ. ಭಗವದ್ಗೀತೆಯಲ್ಲಿನ 700 ಶ್ಲೋಕಗಳಿಗೆ ವಿವರವನ್ನು ಬರೆಯುವುದಕ್ಕೆ ಶಂಕರಾಚಾರ್ಯರಿಗೆ ಒಂದು ವರ್ಷಕಾಲ ಬೇಕಾಗಿರುವಾಗ 848 ಶ್ಲೋಕಗಳನ್ನು ಮತ್ತು ಅವುಗಳ ವಿವರವನ್ನು ಬರೆಯುವುದಕ್ಕೆ ಎಷ್ಟುಕಾಲ ಹಿಡಿಸುತ್ತದೋ ನೀವು ಊಹಿಸಿಕೊಳ್ಳಬಹುದು. ಭಗವದ್ಗೀತೆಯಲ್ಲಿನ 700 ಶ್ಲೋಕಗಳು ವ್ಯಾಸನು ಮೊದಲೇ ಛಂದೋಬದ್ಧದಿಂದ (ವ್ಯಾಕರಣ ಪ್ರಕಾರ) ಬರೆದಿರುವಾಗ, ಅವುಗಳಿಗೆ ವಿವರವನ್ನು ಮಾತ್ರ ಶಂಕರನು ಬರೆದಿದ್ದಾನೆ. ವಿವೇಕ ಚೂಡಾಮಣಿಯಲ್ಲಿ ಹಾಗಲ್ಲದೆ ಒಟ್ಟು ಶ್ಲೋಕಗಳನ್ನು ಹೊಸದಾಗಿ ಬರೆಯುವುದು ನಡೆದಿದೆ. ಒಂದು ಶ್ಲೋಕವನ್ನು ಬರೆದು ಅದರ ಛಂದಸ್ಸನ್ನು ನೋಡುವುದಕ್ಕೆ ತಪ್ಪದೆ ಸ್ವಲ್ಪ ಸಮಯ ಬೇಕಾಗುತ್ತದೆ. 848 ಶ್ಲೋಕಗಳನ್ನು ಛಂದೋಬದ್ಧವಾಗಿ ಬರೆಯುವುದಕ್ಕೆ, ನಂತರ ಅವುಗಳ ವಿವರವನ್ನು ಬರೆಯುವುದಕ್ಕೆ ಎಷ್ಟುಕಾಲ ಬೇಕಾಗುತ್ತದೋ ನೀವೆ ನೋಡಿರಿ, ಇದೆಲ್ಲವೂ ಗಮನಿಸಿದರೇ ವಿವೇಕ ಇರುವವನು ಶಂಕರನು ವಿವೇಕ ಚೂಡಾಮಣಿ ಬರೆಯುವುದಕ್ಕೆ ಅವಧಿ ಇಲ್ಲವೆಂದು ಹೇಳಬಲ್ಲನು. ಎರಡನೆ ಗ್ರಂಥವನ್ನು ಬರೆಯುವುದಕ್ಕೆ ಅವಧಿ ಇಲ್ಲದಂತೆ ಕಾಣಿಸುತ್ತಿರುವಾಗ, ಉಳಿದ 18 ಗ್ರಂಥಗಳನ್ನು ಬರೆಯಲಿಲ್ಲವೆಂದು ನಿರ್ಣಯ ಮಾಡಬಹುದು.

ಶಂಕರನು ಮೊದಲೇ ತನ್ನ 28ನೇ ವರ್ಷದ ವಯಸ್ಸಿನಲ್ಲಿಯೇ ಭಗವದ್ಗೀತೆಯನ್ನು ಬರೆದಿದ್ದಾನೆ. ಜೇನುತುಪ್ಪದಂತಹ ಗ್ರಂಥವನ್ನು ಬರೆದ ನಂತರ ಪಾನಕದಂತಹ ಉಳಿದ ಗ್ರಂಥಗಳನ್ನು ಬರೆಯಬೇಕಾದ ಅಗತ್ಯ ಆತನಿಗೆ

ಇಲ್ಲ. ಉಳಿದ 19 ಗ್ರಂಥಗಳನ್ನು ಆರ್ಯರು ಮೊದಲೇ ಬರೆದಿರುವವೆಂದು, ಶಂಕರನು ಮರಣಿಸಿದ ನಂತರ ತಾವು ಬರೆದ 19 ಗ್ರಂಥಗಳನ್ನು ಶಂಕರನೇ ಬರೆದಿದ್ದಾನೆಂದು ಪ್ರಚಾರ ಮಾಡಿದ್ದಾರೆಂದು, ಹಾಗೆ ಶಂಕರನ ಹೆಸರು ಹೇಳುವುದರಿಂದ ಶಂಕರನಿಗೆ ಪ್ರಜೆಗಳಲ್ಲಿ ತಾವು ಕಲ್ಪಿಸಿದ ಗೌರವವನ್ನನುಸರಿಸಿ ತಮ್ಮ ಬೋಧನೆಗಳು ಶಂಕರನ ಹೆಸರಿನಿಂದ ಪ್ರಜೆಗಳಲ್ಲಿ ಸೇರಿಹೋಗುತ್ತವೆಂದು ಅಂದುಕೊಂಡಿದ್ದಾರೆ. ಈ ವಿಧವಾಗಿ ಆರ್ಯರು ಜಾಣ್ಮೆಯಿಂದ ಮಾಡಿದ ಎಷ್ಟೋ ಕೆಲಸಗಳಲ್ಲಿ ಇದೊಂದು ಕೆಲಸವೆಂದು ಹೇಳಬಹುದು. ಯಾವಾಗಲೋ ಪೂರ್ವದಲ್ಲಿ ಆರ್ಯರು ಮಾಡಿದ ಕೆಲಸಗಳಿಂದ ಅವರ ಗ್ರಂಥಗಳು, ಅವರ ಭಾವನೆಗಳು ಪ್ರಜೆಗಳಲ್ಲಿ ವ್ಯಾಪಿಸಿಹೋಗಿವೆಯೆಂದು ಹೇಳಬಹುದು. ಎಷ್ಟೋ ಕಾಲದಿಂದ ಯೋಜನೆಯ ಪ್ರಕಾರ ಪ್ರಜೆಗಳಲ್ಲಿ ಸೇರಿಸಿರುವ ಆರ್ಯರ ಭಾವನೆಗಳು ದ್ರಾವಿಡರಲ್ಲಿ ಸೇರಿಹೋಗಿವೆ, ದ್ರಾವಿಡರು ಸಹ ಆರ್ಯರ ಭಾವನೆಗಳಲ್ಲಿ ಸಿಲುಕಿಕೊಂಡು ಹೊಗಿರುವುದರಿಂದ 'ನಾವು ದ್ರಾವಿಡರು' ಎಂಬ ಧ್ಯಾಸವನ್ನು ಮರೆತುಹೋಗಿ ನಾವು ಮೊದಲಿನಿಂದಿರುವ ಭಗವದ್ಗೀತೆ ಜ್ಞಾನವನ್ನು ಹೇಳಿದರೆ ನಮ್ಮನ್ನು ವಿರೋಧಿಸುತ್ತಿದ್ದಾರೆ.

ಕ್ರಿ.ಶ. 1824 ರಿಂದ 1883 ರರವರೆಗು ಪೂರ್ವದಲ್ಲಿ ದಯಾನಂದ ಸರಸ್ವತಿ ಎಂಬ ಒಬ್ಬ ಗುರು ಇದ್ದನು. ಆತನು ಸ್ವಚ್ಛವಾದ ಆರ್ಯನೆಂದು ಬಹಳಜನರಿಗೆ ತಿಳಿದಿಲ್ಲ. ಆರ್ಯರು ಪೂರ್ವದಲ್ಲಿ ಕೆಲವು ಸಾವಿರಾರೂ ವರ್ಷಗಳ ಪೂರ್ವದಲ್ಲಿ ಹಾಕಿದ ಬುನಾದಿಗೆ ಪುನಃ ಬಲವನ್ನು ಕೈಗೂಡಿಸಿದವನು ದಯಾನಂದ ಸರಸ್ವತಿ. ಇಲ್ಲಿಯವರೆಗೂ 'ಆರ್ಯರು' ಎಂಬ ಗುಂಪು ಪದವನ್ನು ಬಳಸುತ್ತಾ ಬಂದಿದ್ದೇವೆ ಆದರೆ, ಇಂಥದೆಂದು ಯಾರ ಹೆಸರಿಟ್ಟು ನಾವು ಹೇಳಲಿಲ್ಲ. ಪೂರ್ವದಲ್ಲಿ ಆರ್ಯರು ತಮ್ಮ ಕೆಲಸಗಳಿಗೆ ಪ್ರಾಧಾನ್ಯತೆ ಕೊಟ್ಟಿದ್ದಾರೆ ಆದರೆ, ಅವರ ಹೆಸರುಗಳ ಗುರುತಿಗಾಗಲಿ, ವ್ಯಕ್ತಿಗತ ಪ್ರಚಾರವಾಗಲಿ ಮಾಡಿಕೊಳ್ಳಲಿಲ್ಲ. ಯಾವ ಕೆಲಸದಲ್ಲಿಯಾದರೂ ಇಂತಹ ಆರ್ಯರಿದ್ದಾರೆಂದು ತಿಳಿಯುವಂತೆ ಪ್ರವರ್ತಿಸುವ ಪ್ರತಿಯೊಂದನ್ನು ಹಿಂದೆಯಿದ್ದು ಕಾಣಿಸದಂತೆ

ನಡೆಸಿದ್ದಾರೆ. ತ್ರೇತಾಯುಗದಿಂದಲೇ ಆರ್ಯರ ಗೊಂದಲ ಭಾರತ ದೇಶದಲ್ಲಿ ಕಾಣಿಸಿದೆ. ತ್ರೈತಾಯುಗದಲ್ಲಿಯೇ ಮಧ್ಯ ಏಶಿಯಾ ಪ್ರಾಂತದಿಂದ ಭಾರತದೇಶಕ್ಕೆ ವಲಸೆ ಬಂದಿರುವ ಆರ್ಯರು ಮಹಾ ಮೇಧಾವಿಗಳು. ಭಾರತದೇಶದಲ್ಲಿ ಅವರ ಆಧಿಪತ್ಯಕ್ಕಾಗಿ ಏನು ಮಾಡಬೇಕೋ ಅವು ಎಲ್ಲಾ ಮಾಡಿದ್ದಾರೆ. ಕೊನೆಗೆ ಭಾರತದೇಶದಲ್ಲಿ ಅವರ ಆಧಿಪತ್ಯವನ್ನು ಸಾರಿಕೊಂಡಿದ್ದಾರೆ. ಆದರೂ ಆರ್ಯರು ಯಾರ ದೃಷ್ಠಿಯಲ್ಲಿ ಬಿಳಲಿಲ್ಲ. ಪ್ರಜೆಗಳ ದೃಷ್ಠಿಯಲ್ಲಿ ಬಿದ್ದರೆ ಜಿಷ್ಠಿ ತಗಲುತ್ತದೆಂದು ಅವರಿಗೆ ತಿಳಿದಿದೆ. ಆದುದರಿಂದ ಇದು ಆರ್ಯರ ಕೆಲಸವೆಂದು ಯಾರೂ ಗುರುತಿಸದಂತೆ ಅವರು ಮೊದಲೇ ಘತಕದ ಪ್ರಕಾರ ತಮ್ಮ ಕೆಲಸಗಳನ್ನು ಮಾಡುತ್ತಾಬಂದಿದ್ದಾರೆ. ಭಾರತದೇಶ 'ಇಂದೂದೇಶ'ವಾಗಿ ಇದ್ದರೆ ಅದರ ಹೆಸರನ್ನು 'ಹಿಂದೂದೇಶ'ವಾಗಿ ಮಾರ್ಪಡಿಸಿದ್ದಾರೆ. ಜ್ಞಾನಿಗಳೆಲ್ಲರನ್ನು ಅಜ್ಞಾನಿಗಳನ್ನು ಮಾಡಿ, ಅವರ ಭಾವನೆಗಳು ಎಲ್ಲರಲ್ಲಿಯೂ ಹರುಡುವಂತೆ ಮಾಡಿದ್ದಾರೆ.

ಪೂರ್ವದಲ್ಲಿ ಮುಂದಸ್ಥರಾಗಿ ಆರ್ಯರು ಮಾಡಿದ ಕೆಲಸದಿಂದ ಭಗವದ್ಗೀತೆಯ ಜ್ಞಾನ ಭಾರತದೇಶದಲ್ಲಿ ಇಂದಿಗೂ ವ್ಯಾಪಿಸಲಿಲ್ಲ. ಭಗವದ್ಗೀತೆಗೆ ವಿರುದ್ಧವಾದ ಕೆಲಸಗಳು ಮಾಡುತ್ತಿದ್ದರೂ ಇದು ದೈವ ವಿರುದ್ಧವಾದ ಕೆಲಸ ಅಲ್ಲವೆ! ಎಂದು ಯಾರ ಜ್ಞಾಪಕಕ್ಕು ಬರದಂತೆ ಆರ್ಯರು ಮಾಡಿದ್ದಾರೆಂದರೇ ಅವರ ಮೇಧಾಶಕ್ತಿ ದೊಡ್ಡದೆಂದೇ ಹೇಳಬಹುದು. ಹೀಗೆ ತಮ್ಮ ಭಾವನೆಗಳಿಗು, ತಮ್ಮ ಜ್ಞಾನಕ್ಕು ಎದುರು ಇಲ್ಲದಂತೆ ಮಾಡಿಕೊಂಡವರು ಯಾರೂ ಗುರುತಿಸದಂತೆ ಇದ್ದಾರೆ. ಈ ಕೆಲಸಗಳು ಮಾಡಿರುವುದು ಆರ್ಯರೆಂದು ನಾವು ಹೊರತು ಯಾರೂ ಹೇಳಲಿಲ್ಲ. ಅವರಿಗೆ ವಿರುದ್ಧವಾಗಿ ಮಾತನಾಡಿದರೆ ಹಿಂದೂಗಳಲ್ಲಿಯೇ ಬೆರೆತುಹೋಗಿರುವ ಆರ್ಯರ ಮೂಲಕ ನಮಗೆ ವಿರೋಧತೆ ತಪ್ಪುವುದಿಲ್ಲವೆಂದು ನಮಗೆ ತಿಳಿದರೂ, ಈಗಲೇ ಎಷ್ಟೋ ಪ್ರತಿಕೂಲತೆಗಳು ಬಂದರೂ ಛಲಬಿಡದೆ ಸತ್ಯವನ್ನೇ ಹೇಳುತ್ತಿದ್ದೇವೆ. ಈಗಲಾದರೂ ದ್ರಾವಿಡರು ಕಣ್ತೆರೆದು ಪ್ರವರ್ತಿಸಬೇಕೆಂದು ತಿಳಿಸುತ್ತಿದ್ದೇವೆ. ನೀವು ಮಾಡುವ ಭಕ್ತಿ ಭಗವದ್ಗೀತೆಗೆ ವಿರುದ್ಧವೇನೋ ಒಂದುಬಾರಿ ಹಿಂದಿರುಗಿ ನೋಡಿಕೊಳ್ಳಿರಿ.

ಸುಮಾರು ನೂರು ವರ್ಷಗಳ ಪೂರ್ವದಲ್ಲಿ ಗುಜರಾತ್‌ನಲ್ಲಿ ತಂಕರ ಗ್ರಾಮದಲ್ಲಿ ಹುಟ್ಟಿದ ಮೂಲ್ ಶಂಕರ್ ಎಂಬ ಬ್ರಾಹ್ಮಣನು ಕಾಲಕ್ರಮವಾಗಿ ದಯಾನಂದ ಸರಸ್ವತಿಯಾಗಿ ಬದಲಾಗಿದ್ದಾನೆ. ದಯಾನಂದ ಸರಸ್ವತಿ ಆರ್ಯರ ವಾರಸನಾದ್ದರಿಂದ ಆತನು ಆರ್ಯಸಮಾಜವೆಂಬ ಒಂದು ಸಂಸ್ಥೆಯನ್ನು ತಯಾರುಮಾಡಿದ್ದಾರೆ. ತಮ್ಮ ಪೂರ್ವಿಕರು ಹೇಗೆ ಮಾಡಿದ್ದಾರೋ ಆತನು ಹಾಗೆ ಮಾಡಿದ್ದಾನೆ. ಆದರೇ ಪೂರ್ವದಲ್ಲಿ ಆರ್ಯರು ಎಲ್ಲಿಯೂ ಕಾಣಿಸದಂತೆ ಮಾಡಿದ್ದಾರೆ. ದಯಾನಂದ ಸರಸ್ವತಿ ಪೂರ್ತಿ ಕಾಣಿಸುವಂತೆ ಮಾಡಿದ್ದಾನೆ. ಗತದಲ್ಲಿನ ಆರ್ಯರು ಶಂಕರಾಚಾರ್ಯರನ್ನು ಮುಂದಕ್ಕೆ ಇಟ್ಟು ತಾವು ಹಿಂದೆಯಿದ್ದು ಮಾಡಿದ್ದಾರೆ. ದಯಾನಂದ ಸರಸ್ವತಿ ಹಾಗೆ ಅಲ್ಲದೆ ತಾನೇ ಮುಂದಿದ್ದು ಮಾಡಿದ್ದಾನೆ. ಎಲ್ಲಿಯೂ ಶಂಕರಾಚಾರ್ಯರನ್ನು ಮುಂದಕ್ಕೆ ತೋರಿಸಲಿಲ್ಲ. ತಾನೇ ಸ್ವತಃವಾಗಿ ಆರ್ಯಸಮಾಜವನ್ನು ದೇಶವೆಲ್ಲಾ ಸ್ಥಾಪಿಸಿದ್ದಾನೆ. ಆಗಿನಿಂದ ಅವು ಬೆಳೆಯುತ್ತಾಹೋಗಿ ಈದಿನ ದೇಶವೆಲ್ಲಾ ಆರ್ಯಸಮಾಜಗಳು ಎಲ್ಲಿ ನೋಡಿದರೂ ಇವೆ. ಹೈದರಾಬಾದ್‌ನಲ್ಲಿ ಮತ್ತು ಸಿಕಿಂದ್ರಾಬಾದ್‌ನಲ್ಲಿಯೇ ಸುಮಾರು ಹತ್ತುಕಡೆ ಆರ್ಯಸಮಾಜ ಸಂಘಗಳಿರು ವಂತೆ ಕೇಳಿಬಂದಿದೆ.

**ಪ್ರಶ್ನೆ :– ದಯಾನಂದ ಸರಸ್ವತಿ ಶಂಕರಾಚಾರ್ಯ ಅದ್ವೈತವನ್ನೇ ಪ್ರಚಾರ ಮಾಡಿದ್ದಾನೆ ಅಲ್ಲವೆ! ಅದ್ವೈತವನ್ನು ಪ್ರಚಾರ ಮಾಡುವುದೇ ಆತನ ಕೆಲಸ ಅಲ್ಲವೆ!**

**ಉತ್ತರ :–** ಆತನು ಅದ್ವೈತವನ್ನೇ ಪ್ರಚಾರ ಮಾಡಿದರೂ ಪೂರ್ವದ ಆರ್ಯರ ಹಾಗೆ ಕಾಣಿಸದಂತೆ ಮಾಡಲಿಲ್ಲ. ಪ್ರತಿಯೊಂದು ಸ್ಥಳದಲ್ಲಿ ಆರ್ಯರ ಸಂಸ್ಕೃತಿಗೆ ಕನ್ನಡಿ ಹಿಡಿಯುವಂತೆ ಪ್ರವರ್ತಿಸಿದ್ದಾನೆ. ಪೂರ್ವದಲ್ಲಿನ ಆರ್ಯರಿಗೆ ಹಿಂದೂಗಳು ಒಬ್ಬರೇ ಗುರಿಯಾಗಿ ಇದ್ದರು. ಅವರು ಹಿಂದುಗಳಲ್ಲಿಯೇ ಎಲ್ಲಾ ಗೊಂದಲ ಮಾಡಿದ್ದಾರೆ. ಆದರೆ ದಯಾನಂದ ಸರಸ್ವತಿ ಹಿಂದೂಗಳನ್ನೇ ಅಲ್ಲದೆ ಕ್ರೈಸ್ತರನ್ನು, ಮುಸ್ಲಿಮ್‌ರನ್ನು ಸಹ ವಿಮರ್ಶಿಸಿದ್ದಾನೆ. ಆದುದರಿಂದ ಆತನು ಹೊರಗೆ ಚೆನ್ನಾಗಿ ಕಾಣಿಸಿದ್ದಾನೆ. ದಯಾನಂದ ಆರ್ಯ ಸಮಾಜಗಳನ್ನು

ಸ್ಥಾಪಿಸಿದರೂ ಆತನು ಆರ್ಯನೆಂದು ಯಾರೂ ಗ್ರಹಿಸಲಿಲ್ಲ. ಸಾಧಾರಣ ಗುರುವಾಗಿಯೇ ಲೆಕ್ಕಿಸಿದ್ದಾರೆ.

**ಪ್ರಶ್ನೆ :– ಒಂದು ಮತದವರು ಮತ್ತೊಂದು ಮತವನ್ನು ವಿಮರ್ಶಿಸಿಕೊಳ್ಳುವುದು ಎಲ್ಲರಿಗೂ ಅಭ್ಯಾಸವಾಗಿಹೋಗಿದೆ. ದಯಾನಂದ ಸರಸ್ವತಿ ಹಿಂದುವು ಆಗಿರುವುದರಿಂದ ಕ್ರೈಸ್ತರನ್ನು, ಮುಸ್ಲಿಮ್‌ರನ್ನು ವಿಮರ್ಶಿಸಿರಬಹುದು. ಆದರೆ ಆತನು ಹಿಂದೂವಾಗಿ ಕಾಣಿಸುತ್ತಾ ಹಿಂದೂಗಳನ್ನು ಹೇಗೆ ವಿಮರ್ಶಿಸಿದ್ದಾನೆ. ಯಾರನ್ನು ವಿಮರ್ಶಿಸಿದ್ದಾನೋ ತಿಳಿಸುತ್ತೀರಾ?**

**ಉತ್ತರ :–** ಪಾತ್ರೆಯಲ್ಲಿ ಅನ್ನ ಬೆಂದಿದೆಯಾ ಇಲ್ಲವಾಯೆಂದು ಒಂದು ಅಗಳನ್ನು ಹಿಡಿದು ನೋಡುತ್ತೇವೆ. ಒಂದು ಅಗಳಿ(ಒಂದು ಕಾಳನ್ನು)ನಿಂದ ಪಾತ್ರೆಯಲ್ಲಿನ ಅನ್ನ ಎಲ್ಲಾ ಹಾಗೆಯೇ ಇರುತ್ತದೆಂದು ಅಂದುಕೊಳ್ಳುತ್ತೇವೆ. ಒಂದು ಅಗಳಿರುವಂತೆ ಉಳಿದ ಅಗಳುಗಳು ಹಾಗೆ ಇರುವುದು ನಿಜವೇಯಾಗುತ್ತದೆ. ಅದೇ ವಿಧವಾಗಿ ದಯಾನಂದ ಸರಸ್ವತಿ ಮಾಡಿದ ವಿಮರ್ಶೆಗಳಲ್ಲಿ ಒಂದನ್ನು ನೋಡಿ ಉಳಿದವುಗಳೆಲ್ಲ ಹಾಗೆ ಇರುತ್ತವೆಂದು ತಿಳಿಯಬಹುದು. ಒಂದುದಿನ ಹಿಂದೂಮತದಲ್ಲಿನ ವೈಷ್ಣವನನ್ನು ನೋಡಿ ಆತನ ಮುಖದ ಮೇಲಿರುವ ನಾಮವನ್ನು ದಯಾನಂದನು ಹೇಳನವಾಗಿ ಮಾತನಾಡಿದ್ದಾನೆ. ಆಗ ಹೇಳನವಾಗಿ ಮಾತನಾಡುತ್ತಾ **"ಮುಖದ ಮೇಲೆ ಒಂದು ನಾಮ ಇಟ್ಟುಕೊಂಡರೆ ವೈಕುಂಠ ಪ್ರಾಪ್ತಿಸುತ್ತದೆ ಅಂದುಕೊಂಡರೆ ಮುಖದತುಂಬಾ ಹೆಚ್ಚಾಗಿ ನಾಮಗಳನ್ನಿಟ್ಟುಕೊಂಡರೆ ವೈಕುಂಠಕ್ಕಿಂತ ಶ್ರೇಷ್ಠವಾದುದು ಪ್ರಾಪ್ತಿಸುತ್ತದೆ ಅಲ್ಲವೆ!"** ಅಂದನು. ಈ ವಿಧವಾಗಿ ವಿಶಿಷ್ಟಾದ್ವೈತವನ್ನು ಅನುಸರಿಸುವವರನ್ನು ವಿಮರ್ಶಿಸುತ್ತಾ ಅವರಿಗೆ ವಿರುದ್ಧವಾಗಿ ಮಾತನಾಡುತ್ತಿದ್ದನು.

**ಪ್ರಶ್ನೆ :– ದೇವರು ಸಾಕಾರನೆಂದು ನಂಬುತ್ತಿದ್ದರು ವಿಶಿಷ್ಟಾದ್ವೈತರು, ದೇವರು ನಿರಾಕಾರನೆಂದು ಹೇಳುತ್ತಿದ್ದರು ಅದ್ವೈತರು. ಅದ್ವೈತರೆಂದರೆ ಆರ್ಯರು, ಆರ್ಯರಲ್ಲಿನವನೆ ದಯಾನಂದನು. ಆದುದರಿಂದ ಆತನು ಅದ್ವೈತವನ್ನೇ**

**ಹೇಳಬಹುದು. ಅದ್ವೈತದ ಪ್ರಕಾರ ದೇವರು ನಿರಾಕಾರನೆಂದು ಸಹ ಹೇಳಬಹುದು. ಹಾಗೆ ಅದ್ವೈತ ಬೋಧನೆಯನ್ನು ದೇವರ ನಿರಾಕಾರತ್ವವನ್ನು ದಯಾನಂದನು ಹೇಳಲಿಲ್ಲವಾ?**

**ಉತ್ತರ:–** ಆತನು ಪೂರ್ತಿ 'ಅದ್ವೈತನು', 'ಸಂಪೂರ್ಣ ಆರ್ಯನು' ಆಗಿರುವುದರಿಂದ ದೇವರ ನಿರಾಕಾರವನ್ನೇ ಸಮರ್ಥಿಸುತ್ತಾನೆ ಹೊರತು ಸಾಕಾರವನ್ನು ಒಪ್ಪಿಕೊಳ್ಳುವುದಿಲ್ಲ ಅದೇ ವಿಧಾನವನ್ನೇ ಒಂದುಕಡೆ ಹೀಗೆ ಹೇಳಿದ್ದಾನೆ ನೋಡಿರಿ. "ಈಶ್ವರನು ನಿರಾಕಾರನೆಂದೇ ಹೇಳಬೇಕು. ಏಕೆಂದರೇ! ಸಾಕಾರನಾದರೆ ವ್ಯಾಪಕನು ಆಗುವುದಿಲ್ಲ. ವ್ಯಾಪಕನು ಆಗದಪಕ್ಷದಲ್ಲಿ ಸರ್ವವು ಆತನಲ್ಲಿ ಇರುವುದಿಲ್ಲ. ದೇವರು ಒಂದು ಅವತಾರವಾದರೆ, ಒಂದು ಸಾಕಾರವಾದರೆ ಆತನು ಗುಣಕರ್ಮ ಸ್ವಭಾವಗಳನ್ನು ಪರಿಮಿತವಾಗಿ ಹೊಂದಿರುತ್ತಾನೆ. ಹಾಗೆಯೇ ಶಿತೋಷ್ಣಗಳು, ಹಸಿವುಬಾಯಾರಿಕೆಗಳು, ರೋಗ ದೋಷಗಳು ಮುಂತಾದವುಗಳಲ್ಲಿ ಪರಿಮಿತವಾಗುತ್ತಾನೆ. ಆದ್ದರಿಂದ ಈಶ್ವರನು ಸಾಕಾರನೆಂದು ಹೇಳಬಾರದು, ನಿರಾಕಾರನೆಂದೇ ಹೇಳಬೇಕು. ಈಶ್ವರನು ಸಾಕಾರನಾದರೆ ಆತನಿಗೆ ಕಣ್ಣು, ಮೂಗು ಕಿವಿಗಳು ಮೊದಲಾದವು ನಿರ್ಮಿಸುವವನು ಮತ್ತೊಬ್ಬನಿರಬೇಕಾಗಿ ಬರುತ್ತದೆ. ಸಂಯೋಗದಿಂದ ತಯಾರಾದವನನ್ನು ಸಂಯುಕ್ತ ಮಾಡುವ ನಿರಾಕಾರ ಚೇತನವೊಂದು ಇರಬೇಕು. ಒಂದುವೇಳೆ ಯಾರಾದರೂ ಈಶ್ವರನು ತನ್ನ ಶರೀರವನ್ನು ತಾನೇ ನಿರ್ಮಿಸಿಕೊಳ್ಳುತ್ತಾನೆ ಎಂದು ಹೇಳಿದರೂ, ಆಗ ಶರೀರವನ್ನು ಏರ್ಪಡಿಸಿಕೊಳ್ಳುವುದಕ್ಕೆ ಮೊದಲು ಈಶ್ವರನು ನಿರಾಕಾರನಾಗಿಯೇ ಇರುತ್ತಾನೆ. ಪರಮೇಶ್ವರನು ಶರೀರವನ್ನು ಯಾವಾಗಲೂ ಧರಿಸುವುದಿಲ್ಲ. ಈಶ್ವರನು ನಿರಾಕಾರನಾಗಿದ್ದು ಜಗತ್ತೆಲ್ಲವನ್ನು ಸೂಕ್ಷ್ಮ ಕಾರಣಗಳಿಂದ ಸ್ಥೂಲಾಕಾರಗಳಿಗೆ ತರುತ್ತಾನೆ" ಎಂದು ಹೇಳಿದನು. ಹೀಗೆ ದಯಾನಂದ ಸರಸ್ವತಿ ದೇವರು ನಿರಾಕಾರನೆಂದು, ದೇವರೇ ಈಶ್ವರನೆಂದು ತನ್ನ ಭಾವದಲ್ಲಿನ ಅದ್ವೈತವನ್ನೇ ಹೊರಗೆ ಹೇಳಿದ್ದಾನೆ. ದೇವರು ಸಾಕಾರನೆಂದು ವಿಶಿಷ್ಟಾದ್ವೈತರ ಸಿದ್ಧಾಂಥವಾದಾಗ

ಸಾಕಾರನಲ್ಲ ಎಂದು ಹೇಳುವುದು ಅದ್ವೈತ ಸಿದ್ಧಾಂತದಲ್ಲಿದೆ. ಅದ್ವೈತದ ಪ್ರಕಾರವೇ ದಯಾನಂದನು ನಿರಾಕಾರ ಬೋಧನೆಯನ್ನು ಹೇಳಿದ್ದಾನೆಂದು ತಿಳಿಯುತ್ತಿದೆ.

**ಪ್ರಶ್ನೆ :– ದಯಾನಂದ ಸರಸ್ವತಿ ಸಿದ್ಧಾಂತಕರ್ತನಲ್ಲ ಅಲ್ಲವೇ! ಹಾಗಿರುವಾಗ ಆತನ ಪ್ರಸ್ಥಾವನೆ ನಮಗೆ ಅವಶ್ಯಕತೆ ಇಲ್ಲ ಅಲ್ಲವೆ?**

**ಉತ್ತರ:–** ದಯಾನಂದ ಸರಸ್ವತಿ ಸಿದ್ಧಾಂತಕರ್ತ ಅಲ್ಲದಿದ್ದರೂ ಅದ್ವೈತರ ಸಿದ್ಧಾಂತವನ್ನು ಪ್ರಚಾರ ಮಾಡುವುದರಲ್ಲಿಯೂ, ವೇದಗಳ ಪ್ರಚಾರದಲ್ಲಿಯೂ ಮುಖ್ಯವಾದ ಪಾತ್ರವನ್ನು ಪೋಷಿಸಿದ್ದಾನೆ. ಅಷ್ಟೇ ಅಲ್ಲದೆ ಆರ್ಯಸಮಾಜವನ್ನು ಸ್ಥಾಪಿಸಿ ಅದರಲ್ಲಿರುವವರೆಲ್ಲರೂ ನಿತ್ಯ ಯಜ್ಞಗಳನ್ನು ಮಾಡುವಂತೆ ಮಾಡಿ ಅದ್ವೈತಕ್ಕು ಆರ್ಯರ ಮನೋಭಾವನೆಗಳಿಗು ಬಲವನ್ನು ಕೈಗೂಡಿಸಿದ ಆರ್ಯಜಾತಿಯವನು. ಆರ್ಯರೆಂದರೆ ಯಾರೋ ತಿಳಿಯದವರಿಗೆ “ನಾನು ಆರ್ಯನು’ ಎಂದು ಕಾಣಿಸುವಂತೆ ಆರ್ಯಸಮಾಜವನ್ನು ಪ್ರತ್ಯಕ್ಷವಾಗಿ ಸ್ಥಾಪಿಸಿದವನು ದಯಾನಂದ ಸರಸ್ವತಿ. ಈತನು ‘ಮೂರ್ತಿ ಪೂಜೆ’ಯನ್ನು ಪೂರ್ತಿ ವಿರೋಧಿಸುತ್ತಿದ್ದನು. ದೇವರು ನಿರಾಕಾರನೆಂದು ಹೇಳುತ್ತಾ ವಿಶಿಷ್ಟಾದ್ವೈತರಿಗೆ ವಿರುದ್ಧ ಗುರುವಾಗಿ ಹೆಸರುವಾಸಿಯಾದನು. ದಯಾನಂದ ಸರಸ್ವತಿ ಬರುವಿಕೆಯಿಂದ ಪುನಃ ಆರ್ಯರ ಧೀಶಕ್ತಿ ಎಲ್ಲರಿಗೂ ಕಾಣಿಸಿದೆ. “ವೇದತತ್ವ ಪ್ರಕಾಶ” ಎಂಬ ಗ್ರಂಥವನ್ನು ರಚಿಸಿ ಪುನಃ ವೇದಗಳನ್ನು ಯಾರೂ ಮರೆಯದಂತೆ ಮಾಡಿದ್ದಾನೆ. ವೇದಾಧ್ಯಯನಕ್ಕೆ ಬಲವನ್ನು ಕೈಗೂಡಿಸಿದ್ದಾನೆ. ಸುಮಾರು 59 ವರ್ಷಗಳು ಬದುಕಿದ ದಯಾನಂದನು ಆರ್ಯರ ಪಾತ್ರವನ್ನು ಚೆನ್ನಾಗಿ ಪೋಷಿಸಿದವನು.

**ಪ್ರಶ್ನೆ :– ಶಂಕರಾಚಾರ್ಯರು ಭಗವದ್ಗೀತೆಯನ್ನು ಒಂದನ್ನು ಬರೆದಿದ್ದರೆ, ಇಪ್ಪತ್ತು ಗ್ರಂಥಗಳನ್ನು ಬರೆದಿದ್ದಾನೆಂದು ಪ್ರಚಾರ ಮಾಡಬೇಕಾದ ಅವಶ್ಯಕತೆ ಆರ್ಯರಿಗೆ ಏನು ಬಂದಿದೆ?**

**ಉತ್ತರ :-** 'ಗಿಡದ ಹೆಸರುಹೇಳಿ ಕಾಯಿಗಳನ್ನು ಮಾರಿದಂತೆ' ಆರ್ಯರು ಮಾಡಿದ್ದಾರೆ. ಶಂಕರಾಚಾರ್ಯರನ್ನು ಆರ್ಯರೇ ದೇಶವೆಲ್ಲಾ ತಿರುಗಿಸಿ ಚೆನ್ನಾಗಿ ಪ್ರಚಾರ ಮಾಡಿ ಹಿಂದೂ ಮತದಲ್ಲಿ ದೊಡ್ಡವನು ಎನ್ನುವಂತೆ ಆರ್ಯರೇ ಮಾಡಿದ್ದಾರೆ ಅಲ್ಲವೆ! ಅದರಿಂದ ಶಂಕರನು ದೊಡ್ಡವನೆಂದು ಎಲ್ಲರಿಗೂ ತಿಳಿದಿದೆ. ದೊಡ್ಡವನಾದ ಶಂಕರನು ಬರೆದಂತೆ ಹೇಳಿದರೆ ಅವು ಶ್ರೇಷ್ಠವಾಗಿರುತ್ತವೆ ಎಂಬ ಭಾವದಿಂದ ಆರ್ಯರು ಬರೆದ 19 ಗ್ರಂಥಗಳನ್ನು ಶಂಕರನು ಬರೆದಂತೆ ಶಂಕರನ ಹೆಸರಿನಿಂದ ಪ್ರಚಾರ ಮಾಡಿದ್ದಾರೆ. 19 ಗ್ರಂಥಗಳಲ್ಲಿ ಆರ್ಯರ ಬೋಧನೆ ಸಂಪೂರ್ಣವಾಗಿದೆ. ಆದರೂ ಆ ವಿಷಯ ಯಾರಿಗೂ ತಿಳಿದಿಲ್ಲ. 20 ಗ್ರಂಥಗಳನ್ನು ಶಂಕರಾಚಾರ್ಯರವರೇ ಬರೆದಿದ್ದಾನೆಂದು ಎಲ್ಲರೂ ನಂಬಿದ್ದಾರೆ.

ಹನ್ನೆರಡು ವರ್ಷಗಳು ಕಲಿಯಬೇಕಾದ 'ಪರಕಾಯ ಪ್ರವೇಶ ವಿದ್ಯೆ'ಯನ್ನು ಶಂಕರನು ಎಂದೂ ಕಲಿಯಲಿಲ್ಲ. ಆದರೂ ಶಂಕರನು ಪರಕಾಯ ಪ್ರವೇಶ ವಿದ್ಯೆಯನ್ನು ಕಲಿತಂತೆ ಪ್ರಕಟಿಸಿದ ಆರ್ಯರು, ತಾವು ಬರೆದ ಗ್ರಂಥಗಳ ಮುಂದೆ ಶಂಕರಾಚಾರ್ಯನ ಹೆಸರಿಟ್ಟು ಆತನೇ 20 ಗ್ರಂಥಗಳನ್ನು ಬರೆದಿದ್ದಾನೆಂದು ಎಲ್ಲರೂ ನಂಬುವಂತೆ ಮಾಡಿದ್ದಾರೆ. ಗೀತಾಭಾಷ್ಯವನ್ನು ಶಂಕರರವರು ಬರೆದಿದ್ದಾರೆ. ಉಳಿದ ಗ್ರಂಥಗಳು ಶಂಕರನವು ಅಲ್ಲ. ಶಂಕರನು ಯಾವುದನ್ನೂ ಬರೆಯಲಿಲ್ಲ. ಗೀತೆಗೆ ವಿರುದ್ಧವಾದ ಭಾವಗಳು ಎಷ್ಟೋ ಉಳಿದ 19 ಗ್ರಂಥಗಳಲ್ಲಿ ಇರುವುದರಿಂದ ಶಂಕರನು ಅವುಗಳನ್ನು ಬರೆಯಲಿಲ್ಲ ವೆಂದು ಸುಲಭವಾಗಿ ಹೇಳುತ್ತಿದ್ದೇವೆ.

**ಪ್ರಶ್ನೆ :- ಹಿಂದೂಮತದಲ್ಲಿರುವ ಸಿದ್ಧಾಂತಕರ್ತರಲ್ಲಿ ಮೊದಲನೆಯವನು ಶಂಕರಾಚಾರ್ಯರಾದರೂ ಅದ್ವೈತವೇ ಆತನದಲ್ಲ, ಅದ್ವೈತ ಪೂರ್ತಿ ಆರ್ಯರದೇಯೆಂದು ನೀವು ಹೇಳಿದ್ದೀರಾ. ಈ ವಿಷಯವನ್ನು ಪ್ರಕಟಿಸುವುದು ದೊಡ್ಡ ಸಾಹಸವಾದ ಕೆಲಸವೆಂದು ಹೇಳಬಹುದು. ಶಂಕರರ ನಂತರ ಬಂದಿರುವ ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜರಿಗೂ ಶಂಕರನಿಗೂ ಏನು ವ್ಯತ್ಯಾಸವೆಂದು ಕೆಲವರು ಕೇಳುತ್ತಿದ್ದಾರೆ.**

**ಉತ್ತರ :–** ಸಿದ್ಧಾಂತಕರ್ತರ ವಿಷಯ ಸ್ವಲ್ಪವೂ ಯಾರಿಗೂ ತಿಳಿಯದಂತೆ ಹೋಗಿರುವುದರಿಂದ ಅವರ ಭೇದವು ಪ್ರಜೆಗಳಿಗೆ ತಿಳಿಯದಂತೆ ಹೋಗಿದೆ. ಈದಿನ ಹಿಂದೂಮತದಲ್ಲಿ ಸಿದ್ಧಾಂತಕರ್ತರು ಯಾರು? ಎಂದು ಕೇಳಿದರೆ ಅದಕ್ಕೆ ಪ್ರಜೆಗಳ ಹತ್ತಿರ ಉತ್ತರವೇ ಇಲ್ಲ. ಇದರಿಂದ ಈದಿನ ಸಿದ್ಧಾಂತಕರ್ತರ ವಿಷಯ ಪ್ರಜೆಗಳಿಗೆ ತಿಳಿಯದಂತೆ ಹೋಗಿದೆಯೆಂದು ಹೇಳಬಹುದು. ಅಸಲು ವಿಷಯಕ್ಕೆ ಬಂದರೆ ಶಂಕರಾಚಾರ್ಯರು ತಾನು ಸ್ವತಃವಾಗಿ ಅದ್ವೈತವನ್ನು ಪ್ರಚಾರ ಮಾಡಲಿಲ್ಲ. ತನ್ನದು ಅದ್ವೈತ ಸಿದ್ಧಾಂತವೆಂದು ಸ್ವತಃವಾಗಿ ಎಲ್ಲಿಯೂ ಹೇಳಲಿಲ್ಲ. ಶಂಕರಾಚಾರ್ಯರವರ ಹಿಂದಿರುವ ಆರ್ಯರೇ ಅದ್ವೈತವನ್ನು ಆದಿಶಂಕರರಿಗೆ ಅಂಟಿಸಿ ಅದಕ್ಕೆ ಕರ್ತ ಶಂಕರರೇಯೆಂದು ಹೇಳಿದ್ದಾರೆ. ನಿಜಕ್ಕೆ ಶಂಕರನು ಅಮಾಯಕನು. ಅಸಲು ಮಾಯಕರು ಆರ್ಯರೇ. ಶಂಕರಾ ಚಾರ್ಯರು ಬದುಕಿರುವಾಗಾಗಲಿ, ಮರಣಿಸಿದ ನಂತರವಾಗಲಿ ಶಂಕರಾ ಚಾರ್ಯರವರೇ ಅದ್ವೈತ ಸಿದ್ಧಾಂತವನ್ನು ಕಂಡುಹಿಡಿದಿದ್ದಾನೆಂದು ಹೇಳುತ್ತಾ ಬಂದಿದ್ದಾರೆ. ಆದ್ದರಿಂದ ಶಂಕರನನ್ನು ಸಿದ್ಧಾಂತಕರ್ತರಿಂದ ತೆಗೆದುಹಾಕಬೇಕಾಗಿ ಬರುತ್ತದೆ. ಹಾಗೆ ತೆಗೆದುಹಾಕಿ ನೋಡಿದರೆ ಇಬ್ಬರೇ ಸಿದ್ಧಾಂತಕರ್ತರು ಉಳಿಯುತ್ತಾರೆ. ಅವರು ಹೇಳಿದ ಸಿದ್ಧಾಂತಗಳು ಅವರವೇ ಆಗಿರುವುದರಿಂದ ಸಿದ್ಧಾಂತಕರ್ತರು ಇಬ್ಬರೇ ಎಂದು ಹೇಳಬಹುದು. ಸಿದ್ಧಾಂತಕರ್ತರು ಪ್ರತಿಪಾದಿಸಿದ ಸಿದ್ಧಾಂತಗಳು ಸಹ ಎರಡೇಯೆಂದು ಹೇಳಬಹುದು. ಎರಡರಲ್ಲಿ ಒಂದು ವಿಶಿಷ್ಟಾದ್ವೈತ, ಎರಡು ದ್ವೈತ. ವಿವರವಾಗಿ ಹೇಳಿದರೆ ವಿಶಿಷ್ಟ+ಅದ್ವೈತ=ವಿಶಿಷ್ಟಾದ್ವೈತ ಎಂದು ಬಿಡಿಸಿ ಹೇಳಬಹುದು. ರಾಮಾನುಜರದು ಅದ್ವೈತವೇ ಆಗಿದ್ದರೇ, ಮಧ್ವಾಚಾರ್ಯರದು ಅದಕ್ಕೆ ಭಿನ್ನವಾಗಿರುವ ದ್ವೈತ ಎಂದು ಹೇಳಬಹುದು.

ದೇವರು ಸಾಕಾರನು ನಿರಾಕಾರನಲ್ಲ ಎಂದು ಹೇಳುವ ರಾಮಾನುಜ ರವರು ಸಾಕಾರವಾದ ದೇವರಲ್ಲಿ ಭಕ್ತಿಹೊಂದಿ ಆರಾಧಿಸುವುದೇ ವಿಶೇಷತೆ. ಆದುದರಿಂದ ರಾಮಾನುಜರವರದು ವಿಶಿಷ್ಟಾದ್ವೈತ ಸಿದ್ಧಾಂತವಾಗಿದೆ. ದೇವರು

ಸಾಕಾರನೇ ಆತನನ್ನು ಆರಾಧಿಸುವುದೇ ವಿಶೇಷವಾದಾಗ ಆರಾಧಿಸುವವನು ದೇವರಿಗಿಂತ ಬೇರೆಯಾಗಿರಬೇಕಾಗಿದ್ದೆ. ಆದುದರಿಂದ ಒಂದುಕಡೆ ದೇವರು ಮತ್ತೊಂದು ಕಡೆ ದೇವರನ್ನು ಆರಾಧಿಸುವುದಕ್ಕೆ ಜೀವಿಯು ಇರಬೇಕೆಂದು, ಹಾಗೆ ಜೀವಿಯು, ದೇವರು ಇಬ್ಬರು ಇದ್ದಾರೆಂದು ಹೇಳುವುದೇ ದ್ವೈತ.

**ಪ್ರಶ್ನೆ :– ಶಂಕರಾಚಾರ್ಯರು ಸಿದ್ಧಾಂತಕರ್ತನಲ್ಲ, ಆತನು ಒಬ್ಬ ಸಿದ್ಧಾಂತಕರ್ತನಾಗಿ ಆರ್ಯರ ಸೃಷ್ಠಿಯೇ ಹೊರತು ಸ್ವತಃವಾಗಿ 'ನಾನು ಸಿದ್ಧಾಂತಕರ್ತನು' ಎಂಬ ಭಾವನೆ ಶಂಕರನಿಗೆ ಇಲ್ಲ. ಲೋಕದ ದೃಷ್ಟಿಯಲ್ಲಿ 'ಸಿದ್ಧಾಂತಕರ್ತರು ಮೂವರು' ಎಂದು ಇದೆ. ಆದರೆ ಆರ್ಯರ ಒಳಗುಟ್ಟು ತಿಳಿದವನಿಗೆ ಯಾರಿಗಾದರೂ ಸಿದ್ಧಾಂತಕರ್ತರು ಇಬ್ಬರೇಯೆಂದು ಹೇಳುತ್ತಾರೆ. ಇಬ್ಬರು ಸಿದ್ಧಾಂತಕರ್ತರಿದ್ದರೂ ಅವರು ಸಹ ಸತ್ಯವಾದ ಜ್ಞಾನವನ್ನು ತಿಳಿಯದಿರುವುದರಿಂದ, ಹಿಂದೂ ಮತದಲ್ಲಿ ಸಿದ್ಧಾಂತ ಲೋಪವಿದೆಯೆಂದು ಹೇಳಬಹುದು. ಮೊದಲಿನಿಂದಿರುವ ಸಿದ್ಧಾಂತಕರ್ತರ ಮೂಲಕ ದೇವರು ಭಗವದ್ಗೀತೆಯಲ್ಲಿ ಹೇಳಿದ ಜ್ಞಾನ ಪೂರ್ತಿ ಹೊರಗೆ ಬರಲಿಲ್ಲ. ಪ್ರಜೆಗಳಲ್ಲಿ ಸಂಪೂರ್ಣ ಜ್ಞಾನ ಬರಬೇಕೆಂದರೆ ಸಿದ್ಧಾಂತದ ಲೋಪವನ್ನು ಸರಿತಿದ್ದಬೇಕಾಗಿರುತ್ತದೆ. ವಿಶಿಷ್ಟಾದ್ವೈತದಲ್ಲಿನ ತಪ್ಪನ್ನು, ದ್ವೈತದಲ್ಲಿನ ತಪ್ಪನ್ನು ಬಿಡಿಸಿ ತೋರಿಸುವವರು ಬರಬೇಕು. ಹಾಗೆ ಬಂದವರು ಎರಡು ಸಿದ್ಧಾಂತಗಳು ಅಲ್ಲವೆಂದು ಸ್ವಚ್ಛವಾದ ಜ್ಞಾನಕ್ಕೆ ಆಧಾರವಾದ ಸಿದ್ಧಾಂತವನ್ನು ಪ್ರಜೆಗಳು ನಂಬುವಂತೆ ತೋರಿಸಬೇಕಾಗಿರುತ್ತದೆ. ಇದು ನಡೆಯುವ ಕೆಲಸವೇನಾ?**

**ಉತ್ತರ :–** ಅನ್ನ ತಿನ್ನುವಾಗ ಎರಡು ಮೂರು ಸಾರುಗಳನ್ನು ಅನ್ನದಲ್ಲಿ ತಿಂದರೂ ಕೊನೆಯಲ್ಲಿ ಸ್ವಲ್ಪವಾದರೂ ಮೊಸರು ಅನ್ನ ತಿನ್ನದೆಯೇ ಕೆಲವರಿಗೆ ತೃಪ್ತಿ ಇರುವುದಿಲ್ಲ. ಹಾಗೆಯೇ ತಮಗೆ ತಿಳಿದ ಜ್ಞಾನದಲ್ಲಿ ಎಷ್ಟೋ ಸಿದ್ಧಾಂತಗಳಿದ್ದರೂ ಕೊನೆಗೆ ತೃಪ್ತಿಕೊಡುವ ಜ್ಞಾನ ತಿಳಿಯದವರೆಗು ಹೊಸ ಸಿದ್ಧಾಂತಕ್ಕಾಗಿ, ಅದರಿಂದ ತಿಳಿಯಲ್ಪಡುವ ಹೊಸ ಜ್ಞಾನಕ್ಕಾಗಿ ಹುಡುಕುತ್ತಾರೆ. **"ಸಂಪೂರ್ಣ ಶ್ರದ್ಧೆ ಇರುವವರಿಗೆ ಸಂಪೂರ್ಣವಾದ ಜ್ಞಾನ ಲಭಿಸುತ್ತದೆಂಬ"** ದೇವರ ಮಾತು ವ್ಯರ್ಥವಾಗುವುದಿಲ್ಲ. ಹಾಗೆಯೇ **"ನಿನ್ನ ವಿರೋಧಿಗಳು ನಿನಗೆ**

**ಎದುರಿಲ್ಲದ ಜ್ಞಾನವನ್ನು ನಾನು ಕೊಡುತ್ತೇನೆಂದು"** ಹೇಳಿದ ಭಗವಂತನ ಮಾತು ವ್ಯರ್ಥವಾಗುವುದಿಲ್ಲ. ಆದುದರಿಂದ ಸಂಪೂರ್ಣ ಜ್ಞಾನವನ್ನು ತಿಳಿಸುವ ಹೊಸ ಸಿದ್ಧಾಂತ ಬರುತ್ತದೆಯೆಂದು ಧೈರ್ಯವಾಗಿ ಹೇಳಬಹುದು.

**ಪ್ರಶ್ನೆ :– ಶಂಕರರು ಸಿದ್ಧಾಂತಕರ್ತರಲ್ಲ. ಆತನು ಸ್ವತಃವಾಗಿ ಅದ್ವೈತ ಸಿದ್ಧಾಂತವನ್ನು ಹೇಳಲಿಲ್ಲ ಎಂದಿದ್ದೀರ. ನಂತರ ಬಂದಿರುವ ರಾಮಾನುಜಾಚಾರ್ಯರವರು ಹೇಳಿರುವ ಜ್ಞಾನವನ್ನು ಅಲ್ಲಗಳೆದು, ಹಾಗೆ ನಂತರ ಸ್ವಲ್ಪಕಾಲಕ್ಕೆ ಬಂದಿರುವ ಮಧ್ವಾಚಾರ್ಯರ ಜ್ಞಾನವನ್ನು ಅಲ್ಲಗಳೆದು ಇನ್ನೂ ಉತ್ತಮವಾದ ಜ್ಞಾನ ಇದೆಯೆನ್ನುತ್ತೀರಾ?**

**ಉತ್ತರ :–** ಇಬ್ಬರು ಸಿದ್ಧಾಂತಕರ್ತರು ಹೇಳಿದ ಜ್ಞಾನ ಇರುವಾಗ, ಆ ಎರಡು ಮಾರ್ಗಗಳಲ್ಲಿ ಜ್ಞಾನವನ್ನು ಹೇಳಿದಾಗ, ಅದರಲ್ಲಿ ಒಂದು ಸತ್ಯವಾಗಬಹುದು ಮತ್ತೊಂದು ಅಸತ್ಯವಾಗಬಹುದು. ಎರಡೂ ಎರಡು ಮಾರ್ಗಗಳಾದಾಗ ಯಾವುದೋ ಒಂದು ಸತ್ಯ, ಮತ್ತೊಂದು ಅಸತ್ಯವಾಗಬಹುದು ಅಥವಾ ಎರಡೂ ಅಸತ್ಯವಾಗಬಹುದು. ಅಷ್ಟೇ ಹೊರತು ಎರಡೂ ಸತ್ಯವಲ್ಲ. ಈ ಸೂತ್ರದ ಪ್ರಕಾರ ಅವರ ಜ್ಞಾನವನ್ನು ನಿರ್ಣಯಿಸಿ ಹೇಳುವುದಕ್ಕೆ ಅವರು ಬರೆದ ಗ್ರಂಥಗಳನ್ನು ನೋಡಬೇಕಾಗಿರುತ್ತದೆ. ಶಂಕರಾಚಾರ್ಯರ ನಂತರ ಬಂದಿರುವ ರಾಮಾನುಜಾಚಾರ್ಯರು 120 ವರ್ಷಗಳು ಬದುಕಿ ಆತನ ಸಿದ್ಧಾಂತದ ಮೇಲಿರುವ ಜ್ಞಾನವನ್ನು ಒಂಭತ್ತು (9) ಗ್ರಂಥಗಳಾಗಿ ಬರೆದಿದ್ದಾನೆ. ಅವು ಕ್ರಮವಾಗಿ ಹೀಗೆ ಇವೆ.

1) **ವೇದಾಂತ ಸಂಗ್ರಹ.**
2) **ಗೀತಾಭಾಷ್ಯ.**
3) **ವೇದಾಂತ ಸಾರ.**
4) **ಶ್ರೀರಂಗ ಗದ್ಯ.**
5) **ನಿತ್ಯಗ್ರಂಥ.**
6) **ಶ್ರೀಭಾಷ್ಯ.**
7) **ವೇದಾಂತ ದೀಪ.**
8) **ಶರಣಾಗತ ಗದ್ಯ.**
9) **ಶ್ರೀ ವೈಕುಂಠ ಗದ್ಯ.**

ಈ ಒಂಭತ್ತು ಗ್ರಂಥಗಳನ್ನು ರಾಮಾನುಜಾಚಾರ್ಯರು ಬರೆದಿದ್ದಾರೆ. ರಾಮಾನುಜರ ನಂತರ ಬಂದಿರುವ ಮಧ್ವಾಚಾರ್ಯರವರು 37 ಗ್ರಂಥಗಳನ್ನು ಬರೆದಿದ್ದಾರೆ. ಅವು ಕ್ರಮವಾಗಿ ಹೀಗಿವೆ.

1) ಯಮಕ ಭಾರತ
2) ಭಾಗವತ ತಾತ್ಪರ್ಯ ನಿರ್ಣಯ
3) ಕೃಷ್ಣಜಯಂತಿ ನಿರ್ಣಯ
4) ಯತಿ ಪ್ರಣವ ಕಲ್ಪ.
5) ಮಹಾಭಾರತ ತಾತ್ಪರ್ಯ ನಿರ್ಣಯ
6) ಸದಾಚಾರಸ್ಮೃತಿ
7) ಕೃಷ್ಣಾಮೃತಿ ಮಹಾರ್ಣವ.
8) ತಂತ್ರಸಾರ ಸಂಗ್ರಹ.

**ಬ್ರಹ್ಮಸೂತ್ರದ ಮೇಲೆ ನಾಲ್ಕು ರಚನೆಗಳು :–**

1) ಬ್ರಹ್ಮಸೂತ್ರ ಭಾಷ್ಯ.
2) ಅನು ವ್ಯಾಖ್ಯಾನ.
3) ಅನು ಭಾಷ್ಯ.
4) ನ್ಯಾಯ ವಿವರಣ.

**ಭಗವದ್ಗೀತೆ ಮೇಲೆ ಎರಡು ರಚನೆಗಳು :–**

1) ಗೀತಾಭಾಷ್ಯ.
2) ಗೀತಾ ತಾತ್ಪರ್ಯ ನಿರ್ಣಯ.

**ಪ್ರಕರಣೆಗಳ ಮೇಲೆ ಹತ್ತು ರಚನೆಗಳು ;–**

1) ವಿಷ್ಣುತತ್ವ ನಿರ್ಣಯ.
2) ತತ್ವೋದ್ಯೋತ
3) ಪ್ರಮಾಣ ಲಕ್ಷಣ
4) ಕರ್ಮನಿರ್ಣಯ
5) ಪ್ರಪಂಚ ಮಿಥ್ಯತ್ವ ಅನುಮಾನ ಖಂಡನ
6) ತತ್ವಸಾಂಖ್ಯಾನ.
7) ತತ್ವವಿವೇಕ
8) ಕಥಲಕ್ಷಣ
9) ಉಪಾಧಿಖಂಡನೆ
10) ಮಾಯ ವದ ಖಂಡನೆ

**ಋಗ್ವೇದದ ಮೇಲೆ ಒಂದು ರಚನೆ :–**

1) ಋಗ್‌ಭಾಷ್ಯ

**ಉಪನಿಷತ್ತುಗಳ ಮೇಲೆ ಹತ್ತು ರಚನೆಗಳು ;–**

**1) ಈಶಾವಾಸ್ಯ ಉಪನಿಷತ್ ಭಾಷ್ಯ. 6) ಕೇನೋ ಉಪನಿಷತ್ ಭಾಷ್ಯ.**

**2) ಕಠೋ ಉಪನಿಷತ್ ಭಾಷ್ಯ. 7) ಮಂಡಕ ಉಪನಿಷತ್ ಭಾಷ್ಯ.**

**3) ಸತ್ರಶ್ನ ಉಪನಿಷತ್ ಭಾಷ್ಯ. 8) ಮಂಡೂಕ್ಯ ಉಪನಿಷತ್ ಭಾಷ್ಯ.**

**4) ಐತರೇಯ ಉಪನಿಷತ್ ಭಾಷ್ಯ. 9) ತೈತ್ತೆರೇಯ ಉಪನಿಷತ್ ಭಾಷ್ಯ**

**5) ಬೃಹಾದಾರಣ್ಯಕ ಉಪನಿಷತ್ ಭಾಷ್ಯ.10) ಚಾಂದೋಗ್ಯ ಉಪನಿಷತ್ ಭಾಷ್ಯ.**

**ಸ್ತೋತ್ರಗಳ ಮೇಲೆ ಎರಡು ರಚನೆಗಳು ;–**

**1) ದ್ವಾದಶ ಸ್ತೋತ್ರಗಳು 2) ನರಸಿಂಹ ನಖ ಸ್ತುತಿ**

ಈ ವಿಧವಾಗಿ ದ್ವೈತ ಸಿದ್ಧಾಂತಕರ್ತ 79 ವರ್ಷಗಳು ಬದುಕಿ ತನ್ನ ಜೀವನದಲ್ಲಿ 37 ಗ್ರಂಥಗಳು ಬರೆದಿದ್ದಾನೆ ಎಂದರೇ ಪೂರ್ತಿಯಾಗಿ ನಂಬಬಹುದು. ಹಾಗೆಯೇ 120 ವರ್ಷಗಳು ಬದುಕಿದ ರಾಮಾನುಜರು ತನ್ನ ಜೀವನದಲ್ಲಿ 9 ಗ್ರಂಥಗಳು ಬರೆದಿದ್ದಾನೆ ಎಂದರೇ ನಂಬಬಹುದು. ಆದರೆ ಶಂಕರಾಚಾರ್ಯರವರು 32 ವರ್ಷಗಳು ಬದುಕಿದರೂ ತನ್ನ ಜೀವನವೆಲ್ಲವೂ ಯಾತ್ರೆಗಳಲ್ಲಿ ಸಾಗಿಸಿ ಬರೆಯುವುದಕ್ಕೆ ಯಾವ ಅವಧಿ ಇಲ್ಲದಿರುವಾಗ 20 ಗ್ರಂಥಗಳು ಬರೆದಿದ್ದಾನೆ ಎನ್ನುವುದು ಪೂರ್ತಿ ಅಸತ್ಯವಾಗುತ್ತದೆ. ಆತನು ಬರೆಯಲಿಲ್ಲವೆಂದು ದೃಢವಾಗಿ ತಿಳಿದುಹೋಗುತ್ತಿದೆ. ರಾಮಾನುಜಾಚಾರ್ಯರು ಬರೆದ ಒಂಭತ್ತು ಗ್ರಂಥಗಳನ್ನು ನಾವು ಓದಲಿಲ್ಲ ಆದ್ದರಿಂದ ಆತನ ಗ್ರಂಥಗಳ ಸಾರಾಂಶ ತಿಳಿದಿಲ್ಲವೆಂದೇ ಹೇಳಬೇಕು. ರಾಮನುಜಾಚಾರ್ಯರ ಗ್ರಂಥಗಳು ಆತನ ಸಿದ್ಧಾಂತಕ್ಕೆ ಹತ್ತಿರ ಸಂಬಂಧದಿಂದಲೇ ಇವೆಯೆಂದು ತಿಳಿದಿದ್ದೇವೆ. ಇನ್ನು ಮಧ್ವಾಚಾರ್ಯರ ವಿಷಯಕ್ಕೆ ಬಂದರೆ. ಆತನು ಬರೆದ ಗೀತಾಭಾಷ್ಯವನ್ನು ನೋಡಿದ್ದೇವೆ ಉಳಿದ ಗ್ರಂಥಗಳು ಯಾವು ನಾನು ನೋಡಲಿಲ್ಲ. ರಾಮಾನುಜರ ಗೀತಾಭಾಷ್ಯವನ್ನು ನಾನು ನೋಡಿದ್ದೇನೆ. ಮೂವರು ಬರೆದ ಆಚಾರ್ಯತ್ರಯ ಭಗವದ್ಗೀತೆಗಳನ್ನು ನೋಡಿದ್ದೇವೆ. ಕೆಲವು ಶ್ಲೋಕಗಳು ಅವರವರ ಸಿದ್ಧಾಂತಗಳಿಗೆ ಅನುಗುಣವಾಗಿ ಬರೆದರೂ ಕೆಲವು

ಶ್ಲೋಕಗಳನ್ನು ಹೊರಗಿನ ಪಂಡಿತರು ಬರೆದಂತೆ ಬರೆದಿದ್ದಾರೆ. ಪುರುಷೋತ್ತಮ ಪ್ರಾಪ್ತಿಯೋಗದಲ್ಲಿನ 16, 17 ಶ್ಲೋಕಗಳು ಎರಡು, ಮೂವರು ಆಚಾರ್ಯರ ಸಿದ್ಧಾಂತಗಳಿಗೆ ಸಂಬಂಧವಿಲ್ಲದೇ ಇರುವುದರಿಂದ ಅಲ್ಲಿ ಮೂವರು ಆಚಾರ್ಯರವರು ತಪ್ಪಿಸಿಕೊಳ್ಳುವ ಪ್ರಯೋಗ ಮಾಡಿ 'ನಾಲ್ವರೊಂದಿಗೆ ನಾರಾಯಣ' ಎನ್ನುವಂತೆ ಹೇಳಿದ್ದಾರೆ. ಮೂವರು ಸಿದ್ಧಾಂತಕರ್ತರೇ ಭಗವದ್ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಬೊರ್ಲಬಿದ್ದು ಎಗಿರಿ ಆ ಎರಡು ಶ್ಲೋಕಗಳನ್ನು ದಾಟಿಹೋಗಿದ್ದಾರೆ ಎಂದರೇ ಭಗವಂತನು ಅಲ್ಲಿ ಹೇಳಿದ ವಿಷಯ ಆ ಮೂವರಿಗೆ ಅರ್ಥವಾಗಲಿಲ್ಲವೆಂದು ಹೇಳಬಹುದು. ಮೂವರು ಸಿದ್ಧಾಂತಕರ್ತರಿಗೆ ಅರ್ಥವಾಗದ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿನ ಶ್ಲೋಕಗಳು ಉಳಿದ ಪಂಡಿತರಿಗೆ ಸಹ ಅರ್ಥ ವಾಗಲಿಲ್ಲವೆಂದೇ ಹೇಳಬಹುದು. ನಮಗಿಂತ ಮೊದಲು ಭಾರತದೇಶದಲ್ಲಿನ ಎಲ್ಲಾ ಭಾಷೆಗಳಲ್ಲಿ ಭಗವದ್ಗೀತಾ ಶ್ಲೋಕಗಳನ್ನು ಸುಮಾರು ಮೂನ್ನೂರು ಜನರು(300) ವಿವರವನ್ನು ಬರೆದಿರುತ್ತಾರೆ. ಆದರೂ ಬರೆದವರೆಲ್ಲರೂ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿನ 16, 17 ಶ್ಲೋಕಗಳ ಹತ್ತಿರ ಎಲ್ಲರೂ ಮಾಡಿದಂತೆ ಮಾಡುತ್ತಾ ಹೋಗಿದ್ದಾರೆ. ಮೊದಲು ಬರೆದಿರುವ ಸಿದ್ಧಾಂತಕರ್ತರನ್ನು ಅನುಸರಿಸಿ ಉಳಿದವರು ಸಹ ಅಲ್ಲಿ ತಪ್ಪಿಸಿಕೊಳ್ಳುವ ಪ್ರಯೋಗವನ್ನೇ ಮಾಡಿದ್ದಾರೆ. ಅಲ್ಲಿ ಆ ಪ್ರಯೋಗ ಮಾಡದಿದ್ದರೆ ಬೇರೆದಾರಿ ಇಲ್ಲ. ಅಲ್ಲಿ ಯಾವ ಸಂಬಂಧವಿಲ್ಲದ ಪ್ರಕೃತಿಯನ್ನು ಉಪಯೋಗಿಸಿ ಆ ಶ್ಲೋಕಗಳಿಗೆ ವಿವರವನ್ನು ಹೇಳಿದ್ದಾರೆ. ಆ ಶ್ಲೋಕಗಳಿಗು ಪ್ರಕೃತಿಗು ಯಾವ ವಿಧವಾಗಿ ನೋಡಿದರೂ ಸ್ವಲ್ಪವೂ ಅನುಬಂಧವಿಲ್ಲ. ಹಾಗಿರುವಾಗ ಪ್ರಕೃತಿಯನ್ನು ಉಪಯೋಗಿಸಿ ಬರೆಯಬೇಕಾದ ಅವಶ್ಯಕತೆ ಏನು ಬಂದಿದೆಯೆಂದು ಯಾರೂ ಆಲೋಚಿಸಲಿಲ್ಲ.

**ಪ್ರಶ್ನೆ :– ಮೂವರು ಸಿದ್ಧಾಂತಕರ್ತರು ತಮ್ಮತಮ್ಮ ಭಾವನೆಗಳನ್ನು ಅಕ್ಷರ ರೂಪದಲ್ಲಿ ಬರೆದು ಗ್ರಂಥಗಳನ್ನು ಮಾಡಿದ್ದಾರೆ. ಅವರ ಗ್ರಂಥಗಳನ್ನು ಅವರಿಗನುಗುಣವಾಗಿ**

**ಬರೆದುಕೊಂಡಿರುತ್ತಾರೆ. ಅವರ ಸಿದ್ಧಾಂತಗಳು ನಿಮಗೆ ತಿಳಿದುಹೋಗಿವೆ. ಆದುದರಿಂದ ಅವರ ಗ್ರಂಥಗಳನ್ನು ನೋಡಬೇಕಾದ ಕೆಲಸವಾಗಲಿ, ಅವುಗಳನ್ನು ಪ್ರಸ್ಥಾವಿಸಬೇಕಾದ ಕೆಲಸವಾಗಲಿ ನಿಮಗೆ ಇಲ್ಲ ಅಲ್ಲವೆ!**

**ಉತ್ತರ :–** ಸಾಮಾನ್ಯ ಮನುಷ್ಯನಿಗಾದರೆ ನೀವು ಹೇಳಿದಂತೆ ಏನು ಕೆಲಸವಿಲ್ಲ. ದೇವರು ಸಹ ಸಾಮಾನ್ಯನಾಗಿದ್ದರೆ ಪ್ರಜೆಗಳು ಹೇಗೆ ಹೋದರೆ ನನಗೇನೆಂದು ಪ್ರಜೆಗಳಿಗೆ ಜ್ಞಾನ ಹೇಳಿರುವವನಲ್ಲ. ಪ್ರಜೆಗಳಿಗೆ ಜ್ಞಾನ ಹೇಳುವ ಜವಾಬ್ಧಾರಿ ದೇವರಿಗಿದೆ ಆದ್ದರಿಂದ ಪ್ರಜೆಗಳಲ್ಲಿರುವ ಅಜ್ಞಾನವನ್ನು ಎತ್ತಿ ತೋರಿಸಿ ಅದು ಸರಿಯಾದ ಮಾರ್ಗ ಅಲ್ಲವೆಂದು ಹೇಳಿ ಸರಿಯಾದ ಮಾರ್ಗ ಜ್ಞಾನಮಾರ್ಗವೆಂದು ಪ್ರಜೆಗಳಿಗೆ ಜ್ಞಾನವನ್ನು ತಿಳಿಸಿದ್ದಾನೆ. ಅದು ದೇವರ ವಿಧಾನವಾಗಿದ್ದು, ದೇವರ ವಿಧಾನದಲ್ಲಿ ದೈವ ಸಿದ್ಧಾಂತಕರ್ತರಾಗಿರುವವರಿಗೆ ದೈವಜ್ಞಾನದಿಂದ ಕೂಡಿದ ಸಿದ್ಧಾಂತಗಳನ್ನೇ ಬೋಧಿಸುವುದು ಅವರ ವಿಧಿ. ಹೆಸರಿಗೆ ಸಿದ್ಧಾಂತಗಳೆಂದು ಹೇಳಿ ಬೋಧಿಸುವ ಬೋಧನೆಯಲ್ಲಿ ದೈವತ್ವವು ಇಲ್ಲದಿದ್ದರೆ ಅಂತಹ ಸಿದ್ಧಾಂತಗಳು ಪ್ರಜೆಗಳನ್ನು ಸರಿಯಾದ ಜ್ಞಾನಮಾರ್ಗದಲ್ಲಿ ನಡೆಸಲಾರವು. ಹಾಗಿರುವಾಗ ಜವಾಬ್ಧಾರಿಯಿರುವ ಸಿದ್ಧಾಂತಕರ್ತರು ಆ ತಪ್ಪುಗಳನ್ನು ಸರಿತಿದ್ದಿಹೇಳಿ, ಪರಿಷ್ಕರಿಸಿ ಬೋಧಿಸಬೇಕಾದ ಅವಶ್ಯಕತೆ ಇದೆ. ಆದ್ದರಿಂದ ಗತದಲ್ಲಿ ಹೇಳಲಾದ ಸಿದ್ಧಾಂತಗಳನ್ನು ಕುರಿತು, ಆ ಸಿದ್ಧಾಂತಕರ್ತರು ಬರೆದ ಗ್ರಂಥಗಳನ್ನು ಕುರಿತು ನಾವು ಬಿಡಿಸಿ ಹೇಳಬೇಕಾದ ಅವಶ್ಯಕತೆ ಬಂದಿದೆ.

**ಪ್ರಶ್ನೆ :– ಎಷ್ಟೋ ದೊಡ್ಡ ಹೆಸರುವಾಸಿಯಾದ ಸಿದ್ಧಾಂತಕರ್ತರು ಹೇಳಿರುವುದನ್ನು ನೀವು ವಿಮರ್ಶಿಸುವುದಕ್ಕಾಗಲಿ, ಬಿಡಿಸಿ ಹೇಳುವುದಕ್ಕಾಗಲಿ ಆರ್ಹರಾಗುತ್ತೀರಾ?**

**ಉತ್ತರ :–** ಅರ್ಹತೆ ಹೊರಗೆ ಕಾಣಿಸುವುದಲ್ಲ ಆದರೆ, ಮೂವರು ಸಿದ್ಧಾಂತಕರ್ತರಂತೆ ನಾನು ಒಬ್ಬ ದೈವ ಸಿದ್ಧಾಂತಕರ್ತನೇ ಆದ್ದರಿಂದ ಅವರಲ್ಲಿನ ತಪ್ಪು ಒಪ್ಪುಗಳನ್ನು ಬಿಡಿಸಿ ಹೇಳುವುದಕ್ಕೆ ನಾನು ಅರ್ಹನೇಯೆಂದು ಹೇಳುತ್ತಿದ್ದೇನೆ. ಆರ್ಹತೆ ಎನ್ನುವುದು ಪ್ರಪಂಚ ವಿದ್ಯೆಗಳೊಂದರ ಡಿಗ್ರಿಗಳಂತಹದ್ದಲ್ಲ.

ಮನುಷ್ಯನಲ್ಲಿರುವ ಜ್ಞಾನಶಕ್ತಿಯನ್ನು ಅನುಸರಿಸಿ ಮನುಷ್ಯರಲ್ಲಿ ಅರ್ಹತೆಗಳು ನಿರ್ಣಯಿಸಲ್ಪಡುತ್ತವೆ. ಆದರೆ ಜ್ಞಾನಶಕ್ತಿ ಬುದ್ಧಿಗೆ ತಿಳಿಯುವುದು, ಅನುಭವಕ್ಕೆ ಬರುವುದು. ಆದುದರಿಂದ ಮನುಷ್ಯನನ್ನು ನೋಡುತ್ತಲೇ ಮನುಷ್ಯನಲ್ಲಿನ ಅರ್ಹತೆಯನ್ನು ಯಾರೂ ಗುರುತಿಸಲಾರರು.

**ಪ್ರಶ್ನೆ :– ನೀವು ಪ್ರತಿಪಾದಿಸಿದ ಸಿದ್ಧಾಂತ ಇದೆಯಾ?**

**ಉತ್ತರ :–** ನೀವು ಮರೆತುಹೋಗಿದ್ದೀರಿ ಆದರೆ, ನನ್ನ ಸಿದ್ಧಾಂತವನ್ನು ಕುರಿತು ಮೊದಲೇ ಹೇಳಿದ್ದೇನೆ. ಆದರೂ ಈಗ ಎಲ್ಲರಿಗೂ ತಿಳಿಯುವಂತೆ ಹೇಳುತ್ತಿದ್ದೇನೆ ನೋಡಿರಿ. ನನ್ನ ಸಿದ್ಧಾಂತ ತ್ರೈತ ಸಿದ್ಧಾಂತ, ನನ್ನ ಹೆಸರು ಪ್ರಬೋಧಾನಂದ ಯೋಗೀಶ್ವರರು.

**ಪ್ರಶ್ನೆ :– ಈಗ ಅರ್ಥವಾಗಿದೆ ನಿಮ್ಮ ವಿಷಯವನ್ನು ಕುರಿತು ನೀವು ಮೊದಲೇ ಹೇಳಿದ್ದೀರಿ. ನೀವು ಸಹ 81 ಗ್ರಂಥಗಳನ್ನು ಬರೆದಂತೆ ಹೇಳಿದ್ದೀರ. ನೂರು ಗ್ರಂಥಗಳವರೆಗು ಬರೆಯುತ್ತೇವೆಂದು ಸಹ ಹೇಳಿದ್ದೀರಾ. ನೀವು ಹುಟ್ಟಿರುವುದು ರಾಯಲಸೀಮ ಯೆಂದು, ಜನ್ಮಸ್ಥಳ ಅನಂತಪುರ ಪಟ್ಟಣವೆಂದು ಸಹ ಹೇಳಿದ್ದೀರ. ನೀವು 81 ಗ್ರಂಥಗಳನ್ನು ಬರೆದಿದ್ದೀರಿ ಅಲ್ಲವೆ! ಅವುಗಳ ಹೆಸರುಗಳನ್ನು ತಿಳಿಸುತ್ತೀರಾ?**

**ಉತ್ತರ :–** ಹೇಳಿದ ವಿಷಯ ಜ್ಞಾಪಕ ಬಂದಿರುವುದಕ್ಕೆ ಸಂತೋಷ. ನಾವು ಬರೆದ ಗ್ರಂಥಗಳ ವಿವರವನ್ನು ಕೆಳಗೆ ತಿಳಿಸುತ್ತಿದ್ದೇವೆ ನೋಡಿರಿ.

**01.** **ತ್ರೈತ ಸಿದ್ಧಾಂತ ಭಗವದ್ಗೀತೆ.**

**02.** **ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.**

**03.** **ಧರ್ಮ–ಅಧರ್ಮ.**

**04.** **ಇಂದೂತ್ವವನ್ನು ಕಾಪಾಡೋಣ.**

**05.** **ಯಜ್ಞಗಳು (ಸತ್ಯವಾ–ಅಸತ್ಯವಾ?)**

**06.** **ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.**

07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ! ಭಗವಂತನಾ!!
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿನ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿನ ಜ್ಞಾನ–ಆಶೀರ್ವಾದಗಳಲ್ಲಿನ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.

33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿನ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.

59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65. ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿನ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿನ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿನ ಜ್ಞಾನವಾಕ್ಯಗಳು (ಎರಡನೆಯ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣನ ಮರಣದ ನಂತರ ಜೀವನ)
84. ಒರೆಗಲ್ಲು

**85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು**

**86. ಹೇತುವಾದ ಪ್ರಶ್ನೆಗಳು – ಸತ್ಯವಾದ ಉತ್ತರಗಳು**

**87. ದೈವ ಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ**

ಇಲ್ಲಿಗೆ 87 ಗ್ರಂಥಗಳನ್ನು ನಾವು ಬರೆಯುವುದು ನಡೆದಿದೆ. ಇನ್ನೂ ಬರೆಯುವಂತಹ ಗ್ರಂಥಗಳು ಇಪ್ಪತ್ತಕ್ಕು ಮೇಲೆ ಇರುತ್ತವೆ. ಒಟ್ಟು ನೂರು ಗ್ರಂಥಗಳಿಗೆ ಮೇಲೆ ಇರುತ್ತವೆ. ಗ್ರಂಥಗಳು ಯಾರು ಎಷ್ಟು ಬರೆದಿರುವುದು ತಿಳಿದಿದೆ ಅಲ್ಲವೆ! ಈ ಗ್ರಂಥಗಳ ಪ್ರಸ್ಥಾವನೆಯಲ್ಲಿ ಸ್ವಲ್ಪ ಪ್ರತ್ಯೇಕತೆ ಇದೆ. ಹಿಂದೂಮತದಲ್ಲಿ ಪ್ರಕಟಿತ ಸಿದ್ಧಾಂತಕರ್ತ ಆದಿಶಂಕರಾಚಾರ್ಯರ ಅದ್ವೈತ ಆದಿಶಂಕರದು ಅಲ್ಲ. ಅದು ಅಪ್ರಕಟಿತ ಸಿದ್ಧಾಂತಕರ್ತರಾದ ಆರ್ಯರದು. ಪ್ರಕಟಿತ ಅದ್ವೈತ ಸಿದ್ಧಾಂತಕರ್ತ ಆದಿಶಂಕರಾಚಾರ್ಯರು ಒಂದು ಗ್ರಂಥವನ್ನು ಬರೆದಿದ್ದಾನೆ ಅದೇ 'ಗೀತಾಭಾಷ್ಯ'. ಶಂಕರಚಾರ್ಯರು ಬರೆದಿದ್ದಾನೆಂದು ಪ್ರಚಾರವಾದ ಉಳಿದ 19 ಗ್ರಂಥಗಳು ಅಸಲಾದ ಅದ್ವೈತ ಸಿದ್ಧಾಂತಕರ್ತರಾದ ಆರ್ಯರು ಬರೆದಿದ್ದಾರೆ. ಆ ನಂತರ 1500 ವರ್ಷಗಳಿಗೆ ಬಂದಿರುವ ರಾಮಾನುಜಾಚಾರ್ಯರು ಒಂಭತ್ತು ಗ್ರಂಥಗಳನ್ನು ಬರೆದಿದ್ದಾನೆ. ರಾಮಾನುಜಾ ಚಾರ್ಯರು ನಂತರ ಬಂದಿರುವ ಮಧ್ವಾಚಾರ್ಯರವರು 37 ಗ್ರಂಥಗಳನ್ನು ಬರೆದಿದ್ದಾನೆ. ಈ ವಿಧವಾಗಿ ಮೂರು ಸಿದ್ಧಾಂತಗಳ ನಂತರ ಬಂದಿರುವ ಪ್ರಬೋಧಾನಂದ ಯೋಗೀಶ್ವರರು ಇಲ್ಲಿಗೆ 81 ಗ್ರಂಥಗಳು ಬರೆದಿದ್ದಾರೆ.

| | | | | |
|---|---|---|---|---|
| **1)** | **ಆದಿಶಂಕರಾಚಾರ್ಯರು** | **–** | **1** | **ಗ್ರಂಥ** |
| **2)** | **ಆರ್ಯರು** | **–** | **19** | **ಗ್ರಂಥಗಳು** |
| **3)** | **ರಾಮಾನುಜಾಚಾರ್ಯರು** | **–** | **9** | **ಗ್ರಂಥಗಳು** |
| **4)** | **ಮಧ್ವಾಚಾರ್ಯರು** | **–** | **37** | **ಗ್ರಂಥಗಳು** |
| **5)** | **ಪ್ರಬೋಧಾನಂದ ಯೋಗೀಶ್ವರರು** | **–** | **81** | **ಗ್ರಂಥಗಳು** |

ಪ್ರಜೆಗಳನ್ನು ಜ್ಞಾನಮಾರ್ಗದಲ್ಲಿ ನಡೆಸುವುದಕ್ಕೆ ಐದು ವಿಧಗಳ ಮನೋಭಾವಗಳಿರುವ ಹಿಂದೂಧರ್ಮ ಪ್ರಚಾರಕರಾದವರು ಒಟ್ಟು 147 ಗ್ರಂಥಗಳನ್ನು ಬರೆದಿದ್ದಾರೆ. ಅದರಲ್ಲಿ ನಾಲ್ಕು ವಿಧಗಳ ಮನೋಭಾವಗಳ ಸಿದ್ಧಾಂತಕರ್ತರು 66 ಗ್ರಂಥಗಳನ್ನು ಬರೆದರೆ ಪ್ರಬೋಧಾನಂದ ಯೋಗೀಶ್ವರರು ಒಬ್ಬರು ಮಾತ್ರ 81 ಗ್ರಂಥಗಳನ್ನು ಬರೆದಿದ್ದಾರೆ. ಇನ್ನೂ ಬರೆಯುತ್ತಾರೆಂದು ಸಹ ತಿಳಿದಿದೆ.

**ಪ್ರಶ್ನೆ :– ಪ್ರಬೋಧಾನಂದ ಯೋಗೀಶ್ವರರು ಎಂಬ ವ್ಯಕ್ತಿ ನೀವೇ ಅಲ್ಲವೆ! ಹಾಗಿರುವಾಗ ನೀವು ಬೇರೆಯಾದಂತೆ ಪ್ರಬೋಧಾನಂದ ಬೇರೆಯೆನ್ನುವಂತೆ ನೀವು ಪ್ರಬೋಧಾನಂದ 81 ಗ್ರಂಥಗಳು ಬರೆದಿದ್ದಾನೆಂದು ಹೇಳುತ್ತಿದ್ದೀರಾ. ನಾವು 81 ಗ್ರಂಥಗಳನ್ನು ಬರೆದಿದ್ದೇವೆಂದು ನೀವು ನೇರವಾಗಿ ಹೇಳದೆ ಒಂದುಬಾರಿ ಪ್ರತ್ಯಕ್ಷವಾಗಿ 'ನಾವು' ಎಂದು ಮಾತನಾಡುತ್ತಿದ್ದೀರ. ಮತ್ತೊಂದು ಬಾರಿ ಪರೋಕ್ಷವಾಗಿ ಪ್ರಬೋಧಾನಂದ ಯೋಗೀಶ್ವರರು ಈ ಕೆಲಸ ಮಾಡಿದ್ದಾನೆಂದು ಹೇಳುತ್ತಿದ್ದೀರ. ಹಾಗೆ ಹೇಳುವುದರಿಂದ ನಮಗೆ ಯಾರು ಹೇಳುವುದು ಅರ್ಥವಾಗಲಿಲ್ಲ. ಹಾಗೆ ನೀವು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಏಕೆ ಮಾತನಾಡುತ್ತಿದ್ದೀರಿ?**

**ಉತ್ತರ :–** ಉಳಿದವರು ಯಾರು ಮಾತನಾಡಿದರೂ ಅವರ ಭಾವನೆಯಲ್ಲಿ ಒಬ್ಬರೇ ಮಾತನಾಡುತ್ತಿದ್ದಾರೆ. ಆದ್ದರಿಂದ ಅವರು ಒಬ್ಬರಾಗಿಯೇ ಪ್ರತ್ಯಕ್ಷವಾಗಿ ಮಾತನಾಡುತ್ತಿರುತ್ತಾರೆ. ನಾವು ಹಾಗಲ್ಲದೆ ಮಾತನಾಡುತ್ತಿದ್ದೇವೆ. ಅಸಲು ವಿಷಯ ಏನೆಂದರೆ! ನಾವು ಮಾತನಾಡುವುದು ಒಬ್ಬರಲ್ಲ. ನಾವು ಮೂವರು ಈ ಶರೀರದಲ್ಲಿ ಇದ್ದೇವೆ. ನಾನು ಮಾತನಾಡುವಾಗ ಪ್ರತ್ಯಕ್ಷವಾಗಿ ನಾನು ಎಂದು ಹೇಳುತ್ತಾ ಮಾತನಾಡುತ್ತಿದ್ದೇನೆ. 'ನಾನು' ಅಲ್ಲದೆ 'ನಾವು' ಎನ್ನುವುದರಲ್ಲಿ ಇನ್ನೊಬ್ಬರು ಮಾತನಾಡುವಾಗ ಪ್ರಬೋಧಾನಂದ ಈ ಕೆಲಸ ಮಾಡಿದ್ದಾನೆಂದು ಹೇಳುತ್ತಿದ್ದೇವೆ. ಈ ವಿಷಯ ಈಗ ಮೂರನೆಯಬಾರಿ ಪ್ರಸ್ಥಾವನೆಗೆ ಬಂದಿದೆ. ಇದಕ್ಕುಮೊದಲೆ ಎರಡುಬಾರಿ ಹೇಳಿದ್ದೇನೆ. ಮೊದಲು ಹೇಳಿದಾಗ ಎಲ್ಲಾ ಕೆಲಸಗಳು ಮಾಡುವುದು ಆತ್ಮವೇಯೆಂದು ಹೇಳಿದ್ದೇನೆ. ಎರಡನೆಯಬಾರಿ

ಪ್ರಬೋಧಾನಂದ ಎಂಬ ಹೆಸರು ನನ್ನದಲ್ಲವೆಂದು ಸಹ ಹೇಳುವುದಾಗಿದೆ. ಈಗ ಪ್ರತಿಸಾರಿ ಭಾವವನ್ನು ಅನುಸರಿಸಿ ಮಾತಿರುತ್ತದೆ. **ಮಾತನಾಡುವ ಭಾವವನ್ನನುಸರಿಸಿ ಇಂಥವರು ಮಾತನಾಡುತ್ತಿದ್ದಾರೆಂದು ಗ್ರಹಿಸಬೇಕಾಗಿದೆ. ಇಲ್ಲಿ ಅರ್ಥವಾದರೆ ಜ್ಞಾನ ಸಂಪೂರ್ಣವಾಗಿ ಅರ್ಥವಾಗುತ್ತದೆ.** ಪ್ರಬೋಧಾನಂದ ಯೋಗೀಶ್ವರರು ಹೇಳುವ ತ್ರೈತ ಸಿದ್ಧಾಂತವೆಲ್ಲವೂ ಅರ್ಥವಾಗುತ್ತದೆ. ತ್ರೈತ ಸಿದ್ಧಾಂತವೆಂದರೇ ಮೂರನೆ ಸಿದ್ಧಾಂತವೆಂದು ಅರ್ಥ. ನಮ್ಮ ಭಾರತದೇಶದಲ್ಲಿ ಇಗಾಗಲೇ ಮೂವರು ಸಿದ್ಧಾಂತಕರ್ತರು ಬಂದು ದೇವರ ಜ್ಞಾನ ಪ್ರಜೆಗಳಿಗೆ ತಿಳಿಸುವುದಕ್ಕಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳೆಂಬ ಬುನಾದಿಗಳ ಮೇಲೆ ತಮ್ಮ ಜ್ಞಾನವನ್ನು ಹೇಳುವುದು ನಡೆದಿದೆ. ಆದರೆ ಪ್ರಜೆಗಳಿಗೆ ಈ ಮೂರು ಸಿದ್ಧಾಂತಗಳ ಬಗ್ಗೆ ತಿಳಿದಿಲ್ಲ. ಆಯಾ ಸಿದ್ಧಾಂತಗಳನ್ನು ಅನುಸರಿಸುವವರಿಗೆ ಮಾತ್ರ ಆಯಾ ಸಿದ್ಧಾಂತಗಳನ್ನು ಕುರಿತು ತಿಳಿಯುತ್ತದೆ. ಶೇಕಡ 70 ರಷ್ಟು ಪ್ರಜೆಗಳಿಗೆ ಸಿದ್ಧಾಂತಗಳೆಂದರೇ ಏನೋ, ಸಿದ್ಧಾಂತಗಳು ಎಷ್ಟು ಇವೆಯೋ, ಸಿದ್ಧಾಂತ ಜ್ಞಾನ ಏನೋ ತಿಳಿದಿಲ್ಲ.

ಪ್ರಸ್ತುತ ಕಾಲದಲ್ಲಿ ಕ್ರೈಸ್ತ ಮತದಲ್ಲಿ 'ತ್ರಿತ್ವ' ಎಂಬ ಹೆಸರು ಇದೆ. ತ್ರಿತ್ವ ಎಂದರೆ ಮೂರು ಎಂದು ಅರ್ಥ. ಬಹಳಜನ ಪ್ರಜೆಗಳಿಗೆ ತ್ರಿತ್ವವೆಂದರೆ ಏನೋ ಯಾರದೋ ತಿಳಿಯದಿದ್ದರೂ ಹಿಂದೂ ಪರಿರಕ್ಷಣ ಸಂಸ್ಥೆಗಳಲ್ಲಿ ಕೆಲಸಮಾಡುವವರ ದೃಷ್ಠಿಯೆಲ್ಲವೂ ಇತರ ಮತಗಳ ಮೇಲೆ ಇರುತ್ತದೆ. ಆದುದರಿಂದ ತ್ರಿತ್ವ ಎಂದರೆ ಮೂರೆಂದು ಅದು ಕ್ರೈಸ್ತರ ಮುಖ್ಯಸೂತ್ರವೆಂದು ಹಿಂದೂ ಮತ ರಕ್ಷಣ ಸಂಘದವರಿಗೆ ತಿಳಿದಿದೆ. ಆದರೆ ಈ ತ್ರಿತ್ವವಿರುವ ಕ್ರೈಸ್ತ ಮತ ಹುಟ್ಟಿರುವುದು ಎರಡುಸಾವಿರ ವರ್ಷಗಳ ಕೆಳಗೆ. ಕಲಿಯುಗದಲ್ಲಿ ಭಾರತದೇಶದಲ್ಲಿ ಸುಮಾರು 2500 ವರ್ಷಗಳ ಕೆಳಗಿನಿಂದ ಆಧ್ಯಾತ್ಮಿಕ ರಂಗದಲ್ಲಿ ಸಿದ್ಧಾಂತಗಳು ಹುಟ್ಟುತ್ತಾ ಬಂದಿವೆ. ಮೊದಲು ಹುಟ್ಟಿರುವುದು ಅದ್ವೈತ ಸಿದ್ಧಾಂತ. ಅದರ ಕರ್ತ ಆದಿಶಂಕರಾಚಾರ್ಯರೆಂಬ ವಿಷಯ ತಿಳಿದಿರುವುದೇ. ನಂತರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜರವರು, ಅದರ ನಂತರ ದ್ವೈತ

ಸಿದ್ಧಾಂತವನ್ನು ಮಧ್ವಾಚಾರ್ಯರು ಹೇಳುವುದಾಗಿದೆ. ಪ್ರಸ್ತುತ ಭೂಮಿ ಮೇಲಕ್ಕೆ **'ತ್ರೈತ ಸಿದ್ಧಾಂತ'** ಬಂದಿದೆ. ತ್ರೈತಸಿದ್ಧಾಂತ ಹಿಂದೂಮತದಲ್ಲಿ ನಾಲ್ಕನೆಯ ಸಿದ್ಧಾಂತವಾದರೆ ಕ್ರೈಸ್ತರಲ್ಲಿ ತ್ರಿತ್ವ ಇದೆಯೆಂದು ತಿಳಿದ ಹಿಂದೂ ಸಮಾಜದವರು ತ್ರೈತವೆಂದರೇ ತ್ರಿತ್ವವೇ ಅಲ್ಲವೆ! ಕ್ರೈಸ್ತರು ಹಿಂದೂಗಳ ಮುಸುಗಿನಲ್ಲಿ ತಮ್ಮ ತ್ರಿತ್ವವನ್ನು ತ್ರೈತವಾಗಿ ಹಿಂದೂಗಳಲ್ಲಿ ಪ್ರಚಾರ ಮಾಡುತ್ತಿದ್ದಾರೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಇದರಿಂದ ತಮ್ಮ ಸಿದ್ಧಾಂತಗಳನ್ನು, ತಮ್ಮ ಜ್ಞಾನವನ್ನು ಗುರುತಿಸಲಾರದ ಸ್ಥಿತಿಯಲ್ಲಿ ಹಿಂದೂಗಳಿದ್ದಾರೆಂದು ತಿಳಿಯುತ್ತಿದೆ. ಕುರುಡರಾಗಿ ತಮ್ಮ ಸಿದ್ಧಾಂತಗಳನ್ನು ಗುರುತಿಸಲಾರದ ಹಿಂದೂಗಳ ಮೂಲಕ ನಮಗೆ ಸ್ವಲ್ಪ ವಿರೋಧತೆ ಇರುವ ತ್ರೈತ ಸಿದ್ಧಾಂತವು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳಿಗಿಂತಲು ವೇಗವಾಗಿ ಪ್ರಜೆಗಳಲ್ಲಿ ಪ್ರಚಾರವಾಗುತ್ತಿದೆ.

ತ್ರೈತಸಿದ್ಧಾಂತದಲ್ಲಿ ಸಿದ್ಧಾಂತ ಎನ್ನುವುದು ಶಾಸ್ತ್ರದಲ್ಲಿ ಭಾಗವಾಗಿದೆಯೆಂದು ಮೊದಲೇ ಹೇಳಿದ್ದೇವೆ. ತ್ರೈತ ಎಂದರೇ ಮೂರೆಂದು ಅರ್ಥ. ಮೂರು ಎನ್ನುತ್ತಲೇ ಕ್ರೈಸ್ತರು ಜ್ಞಾಪಕ ಬರಬಾರದು. ಅವರ ತ್ರಿತ್ವಕ್ಕೆ ಅವರು ಅರ್ಥ ಹೇಳಲಾರರು. ತ್ರಿತ್ವ ಎನ್ನುವುದು ಅವರ ಜ್ಞಾನವಲ್ಲ. ತ್ರಿತ್ವ ಎನ್ನುವುದು ಅವರಲ್ಲಿನ ಒಂದು ಗುಂಪುಯೆಂದು ಅರ್ಥ. ಇಲ್ಲಿ ಹಿಂದೂಮತದಲ್ಲಿನದು ದ್ವೈತ, ಅದ್ವೈತ ಸಿದ್ಧಾಂತಗಳಂತೆ ಪ್ರತ್ಯೇಕವಾದ ಸಿದ್ಧಾಂತ. ಆ ವಿಷಯವನ್ನು ಹಿಂದೂಗಳೇ ಅದೂ ಹಿಂದೂ ಧರ್ಮರಕ್ಷಣೆಯಲ್ಲಿ ಕೆಲಸ ಮಾಡುವ ಹಿಂದೂಗಳಿಗೇ ಅರ್ಥವಾಗಲಿಲ್ಲ. ಕೆಲವರಿಗೆ ಇದು ಹಿಂದೂಮತದಲ್ಲಿ ಹುಟ್ಟಿದ ಹೊಸ ಸಿದ್ಧಾಂತವೆಂದು ತಿಳಿದರೂ, ಅವರು ಮೊದಲೇ ಅದ್ವೈತದಲ್ಲಿಯೋ, ದ್ವೈತದಲ್ಲಿಯೋ ಇರುವುದರಿಂದ ತ್ರೈತ ಎಂದರೇ ಅಸೂಯೆಯನ್ನು ತೋರಿಸುತ್ತಿದ್ದಾರೆ. ಅಸೂಯೆಯನ್ನು ಜಾಣ್ಮೆಯಿಂದ ತ್ರೈತ ಎಂದರೇ ಪರಮತವೆಂದು ತ್ರೈತಪ್ರಚಾರ ಎಂದರೇ ಪರಮತ ಪ್ರಚಾರವೆಂದು ತಪ್ಪಾಗಿ ಆರೋಪಣೆ ಮಾಡುತ್ತಾ ತಮ್ಮ ವಿರೋಧವನ್ನು ಸಾರಿಕೊಳ್ಳುತ್ತಿದ್ದಾರೆ. ಯಾವುದು ಏನಾದರೂ ಎಲ್ಲಾ ಸಿದ್ಧಾಂತಗಳಿಗಿಂತ ವೇಗವಾಗಿ ತ್ರೈತ ಸಿದ್ಧಾಂತ ಪ್ರಚಾರವಾಗುತ್ತಿದೆ.

**ಪ್ರಶ್ನೆ :– ತ್ರೈತ ಸಿದ್ಧಾಂತ ಮೊದಲು ಬಂದಿರುವ ದ್ವೈತ, ಅದ್ವೈತ ಸಿದ್ಧಾಂತಗಳಿಗಿಂತ ಶ್ರೇಷ್ಠವಾದುದಾ?**

**ಉತ್ತರ :–** ದೇಶದಲ್ಲಿ ಈಗ ಮೂರು, ನಾಲ್ಕು ರಾಜಕೀಯ ಪಾರ್ಟೀಗಳಿವೆ ಅಲ್ಲವೆ! ಆಯಾ ಪಾರ್ಟೀಗಳ ನಾಯಕರು ಅವರವರ ಪಾರ್ಟೀಗಳನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುತ್ತಾರೆ. ಇತರ ಪಾರ್ಟೀ ಕುರಿತು ಕೆಟ್ಟದಾಗಿ ಹೇಳುತ್ತಾರೆ. ಒಂದು ಪಾರ್ಟೀಇನ್ನೊಂದು ಪಾರ್ಟೀಯನ್ನು ತಪ್ಪು ಆರೋಪಣೆಗಳನ್ನು ಹೇಳುತ್ತಾ ತಮ್ಮ ಪಾರ್ಟೀಯೊಂದರ ಒಳ್ಳೆಯದನ್ನು ಸಾರಿಕೊಳ್ಳುತ್ತಾರೆ. ಹಾಗೆಯೇ ಈಗಿರುವ ಆಧ್ಯಾತ್ಮಿಕ ಸಿದ್ಧಾಂತಗಳು ಸಹ ಹಾಗೇ ಇವೆ. ಒಂದು ಸಿದ್ಧಾಂತವನ್ನು ಮತ್ತೊಂದು ಸಿದ್ಧಾಂತದವರು ತಪ್ಪಾಗಿ ಹೇಳುತ್ತಾ ತಮ್ಮ ಸಿದ್ಧಾಂತವನ್ನು ಒಳ್ಳೆಯದಾಗಿ ಹೇಳಿಕೊಳ್ಳುತ್ತಾರೆ. ಯಾರು ಹೇಗೆ ಹೇಳಿಕೊಂಡರೂ **ತ್ರೈತ ಸಿದ್ಧಾಂತ ದೊಡ್ಡದು**. ಈದಿನ ಹಿಂದೂ ಮತದಲ್ಲಿನ ಸಿದ್ಧಾಂತಗಳೆಲ್ಲ ಏಕವಾಗಿ ತ್ರೈತ ಎಂದರೆ ಪರಮತವೆಂದು, ಕ್ರೈಸ್ತ ಮತವೆಂದು ಕೆಟ್ಟದಾಗಿ ಆರೋಪಿ ಸುತ್ತಿದ್ದರೂ ತ್ರೈತ ಸಿದ್ಧಾಂತವು ಎಷ್ಟೋ ವೇಗವಾಗಿ ಪ್ರಜೆಗಳಲ್ಲಿ ನಾಟಿಕೊಂಡು ಹೋಗುತ್ತಿದೆ. ತ್ರೈತ ಸಿದ್ಧಾಂತ ಜ್ಞಾನ ತಿಳಿದ ಪ್ರತಿಯೊಬ್ಬ ಮನುಷ್ಯ ತ್ರೈತ ಸಿದ್ಧಾಂತವನ್ನು ಕುರಿತು ತನಗೆ ತಾನಾಗಿ ಪ್ರಚಾರ ಮಾಡುತ್ತಿದ್ದಾನೆ. ಹೀಗೆ ಯಾರಿಗವರು ಪ್ರಚಾರ ಮಾಡುವುದರಿಂದ ಅದಷ್ಟಕ್ಕದೇ ಪ್ರಚಾರವಾಗಿ ಪ್ರಜೆಗಳಲ್ಲಿ ಹೋಗುತ್ತಿದೆ. ತ್ರೈತ ಸಿದ್ಧಾಂತ ಜ್ಞಾನ ತಿಳಿದವರು ಇದರಲ್ಲಿನ ಜ್ಞಾನವನ್ನು ನೋಡಿ ಇಲ್ಲಿಯವರೆಗು ನಮಗೆ ತಿಳಿಯದ ಜ್ಞಾನ ಈಗ ತಿಳಿಯುತ್ತಿದೆಯೆಂದು ಹೇಳುತ್ತಾ ಮತ್ತೊಂದುಮಾತು ಸಹ ಹೀಗೆ ಹೇಳುತ್ತಿದ್ದಾರೆ. **"ನಾವು ಎಷ್ಟೋಜನ ಗುರುಗಳನ್ನು, ಬೋಧಕರನ್ನು ಜ್ಞಾನಿಗಳೆಂದು ನಂಬಿದ್ದೆವು. ಈ ಜ್ಞಾನದ ಪ್ರಕಾರ ನೋಡಿದರೆ ಅವರಿಗೆ ಜ್ಞಾನವೊಂದರ ವಾಸನೆ ಸಹ ತಿಳಿಯದೆಂದು"** ಹೇಳುತ್ತಿದ್ದಾರೆ. ಕೆಲವರು **"ನಮಗೆ ತಿಳಿದ ಜ್ಞಾನ ಸಹ ಬೋಧಕರಿಗು ತಿಳಿಯದೆಂದು"** ಹೇಳುತ್ತಿದ್ದಾರೆ. ಇದನ್ನನುಸರಿಸಿ ತ್ರೈತ ಸಿದ್ಧಾಂತ ಜ್ಞಾನ ಶ್ರೇಷ್ಠವಾದುದೆಂದು ತಿಳಿಯುತ್ತಿದೆ.

**ಪ್ರಶ್ನೆ :– ತ್ರೈತ ಸಿದ್ಧಾಂತ ಹೊಸದಾಗಿ ಬಂದಿದೆ ಅಲ್ಲವೆ! ಪೂರ್ವದಿಂದ ಇರುವ ದ್ವೈತ, ಅದ್ವೈತಗಳಿಗಿಂತ ಶ್ರೇಷ್ಠವಾದುದೆಂದು ಹೇಳುವುದರಲ್ಲಿ ಅರ್ಥವೇನು?**

**ಉತ್ತರ :–** ಇದೇನೋ ಹೊಗಳಿಕೆಗೆ ಹೇಳಿಕೊಳ್ಳುವ ವಿಷಯವಲ್ಲ. ತ್ರೈತ ಸಿದ್ಧಾಂತವು ಈ ದಿನದಲ್ಲಿ ಹೊಸದಾಗಿ ಹೊರಗೆ ಬಂದಂತೆ ಕಾಣಿಸಿದರೂ ಇದು ಸನಾತನವಾದುದು, ಎಲ್ಲಾ ಸಿದ್ಧಾಂತಗಳಿಗಿಂತ ಮೊದಲೇ ಹೊರಗೆ ಬಂದಿದೆ. ಆದರೆ ಮಸಿಬಟ್ಟೆಯಲ್ಲಿ ಅಡಕವಾಗಿರುವ ಮಾಣಿಕ್ಯದಂತೆ ಇಷ್ಟುಕಾಲ ಮರೆಯಾಗಿದ್ದು ಈಗಲೇ ಮಸಿಬಟ್ಟೆಯಿಂದ ಹೊರಬಿದ್ದಿದೆ ಎನ್ನುವಂತೆ ಪ್ರಕಾಶಿಸುತ್ತಿದೆ. ನನ್ನಮಾತು ಸತ್ಯವೆನ್ನುವುದಕ್ಕೆ ಒಂದು ಆಧಾರವನ್ನು ಹೇಳುತ್ತೇನೆ ನೋಡಿರಿ. ಪ್ರಪಂಚ ಸೃಷ್ಠಿಸಲ್ಪಟ್ಟ ನಂತರ ನಡೆಯುವಂತಹ ಕಾಲವನ್ನು ನಾಲ್ಕು ಯುಗಗಳಾಗಿ ದೇವರೇ ವಿಭಜಿಸಿದ್ದಾನೆ. ವಿಭಜಿಸಿದ ನಾಲ್ಕು ಯುಗಗಳಿಗೆ ವಿಶೇಷವಾದ ಅರ್ಥದಿಂದ ಕೂಡಿದ ಹೆಸರುಗಳನ್ನಿಡುವುದು ನಡೆದಿದೆ. ನಿಜಕ್ಕೆ ಈದಿನ ನಾವು ಯುಗ ಎಂದು ಕರೆಯುವ ಪದ ಪೂರ್ವದಲ್ಲಿ ಹಾಗೆ ಇಲ್ಲ. ಪೂರ್ವ **'ಯೋಗ'** ಎಂಬ ಪದವಾಗಿದೆ. ಈದಿನ ಕಾಲಕ್ರಮವಾಗಿ ಬದಲಾವಣೆಯಾಗಿ, 'ಯೋಗ' ಹೋಗಿ 'ಯುಗ' ಆಗಿದೆ. ನಾಲ್ಕು ಯುಗಗಳಲ್ಲಿ ಮೊದಲ ಯುಗದ ಹೆಸರು ಕೃತಯುಗ, ಎರಡನೆಯದರ ಹೆಸರು ತ್ರೈತಾಯುಗ, ಮೂರನೆಯದರ ಹೆಸರು ದ್ವಾಪರಯುಗ, ನಾಲ್ಕನೆಯದರ ಹೆಸರು ಕಲಿಯುಗ. ಈದಿನ ಹೇಳುವ ಯುಗವನ್ನು ಪೂರ್ವದಂತೆ ಯೋಗ ಎಂದು ಹೇಳಿದರೆ ಹೀಗಿರುತ್ತದೆ. 1) ಕೃತ ಯೋಗ 2) ತ್ರೈತಾ ಯೋಗ 3) ದ್ವಾಪರ ಯೋಗ 4) ಕಲಿಯೋಗ ಎನ್ನುವವು ನಿಜವಾದ ಜ್ಞಾನಯುಕ್ತವಾದ ಹೆಸರುಗಳು. ಇದರಲ್ಲಿ ಏನು ಜ್ಞಾನವಿದೆಯೆಂಬ ಅನುಮಾನ ಇಲ್ಲದಂತೆ ನಾವು ಹೇಳುವುದೇನೆಂದರೆ!

ಕೃತ ಎಂದರೇ 'ಮಾಡಲ್ಪಟ್ಟ', 'ಸೃಷ್ಠಿಸಲ್ಪಟ್ಟ' ಎಂದು ಅರ್ಥಬರುತ್ತದೆ. 'ಕೃತ್' ಎಂಬ ಪದದಿಂದ 'ಕೃತ' ಎಂಬ ಪದ ಹುಟ್ಟಿದೆ. ಮೊದಲು ಪ್ರಪಂಚ ದೇವರಿಂದ ಸೃಷ್ಠಿಸಲ್ಪಟ್ಟಿದೆ ಅದರಿಂದ ಮೊದಲೇ ಕೃತ್ ಎಂಬ ಪದವನ್ನು ಉಪಯೋಗಿಸಿ 'ಕೃತ್‌ಯೋಗ' ಎಂದು ಹೇಳಿದ್ದಾರೆ. "ಪ್ರಪಂಚವನ್ನು ಸೃಷ್ಠಿಸಿದ

ಸೃಷ್ಠಿಕರ್ತನಲ್ಲಿ ನೀನು ಬೆರೆತುಹೋಗು", "ನಿನ್ನನ್ನು ತಯಾರು ಮಾಡಿದ ದೇವರಲ್ಲಿ ನೀನು ಐಕ್ಯವಾಗಿ ಹೋಗು" ಎಂಬ ಅರ್ಥಬರುವಂತೆ 'ಕೃತ್‌ಯೋಗ' ಎಂದು ಹೇಳಿದ್ದಾರೆ. ಯೋಗ ಎಂದರೆ 'ಸೇರುವಿಕೆ' ಎಂದು ಅರ್ಥ. ಸೃಷ್ಠಿಕರ್ತನಾದ ದೇವರಲ್ಲಿ ಐಕ್ಯವಾಗೆಂದು ಹೇಳುವುದೇ ಕೃತ್ ಯೋಗವೊಂದರ ಅರ್ಥ. ಈ ವಿಧವಾಗಿ ಮೊದಲ ಕಾಲದ ಹೆಸರನ್ನು 'ಕೃತ್‌ಯೋಗ' ಎಂದು ಹೇಳುವುದು ನಡೆದಿದೆ. ಕಾಲ ಎಂದರೇ ದೇವರು ಎಂದು ಅರ್ಥ. ಆದುದರಿಂದ ಕಾಲವೊಂದರ ನಾಲ್ಕು ಭಾಗಗಳಿಗು ದೇವರ ಜ್ಞಾನವನ್ನೇ ಜೋಡಿಸಲಾಗಿದೆ.

ಎರಡನೆಯ ಯುಗವನ್ನು ತ್ರೈತಾಯುಗ ಎಂದು ಹೇಳಿದ್ದಾರೆ. ನಿಜಕ್ಕೆ ಅದರ ಹೆಸರು ತ್ರೈತಾಯೋಗ. ಆದರೆ ಈದಿನ ತ್ರೈತಾ ಎಂಬ ಪದ ತ್ರೇತಾವಾಗಿ ಬದಲಾಗಿದೆ. ತ್ರೈ ಕೆಳಗಿರುವ ಒಂದು ಗುರುತು ಹೋಗಿರುವುದರಿಂದ, ಕಾಲಕ್ರಮವಾಗಿ ಇಲ್ಲದಂತೆ ಹೋಗುವುದರಿಂದ 'ತ್ರೈ' ಎಂಬ ಶಬ್ಧವು 'ತ್ರೇ' ಎಂಬ ಶಬ್ಧವಾಗಿ ಬದಲಾಗಿಹೋಗಿದೆ. ಪೂರ್ವದಲ್ಲಿ ತ್ರೈತಾಯೋಗವಾಗಿ ಇದೆ. ಈದಿನ ತ್ರೇತಾ ಯುಗವಾಗಿ ಬದಲಾಗಿಹೋಗಿದೆ. 'ತ್ರೈತಾ' ಎಂಬ ಪದಕ್ಕೆ ಮೂರು ಎಂದು ಅರ್ಥವಿದೆ ಆದರೆ, ತ್ರೇತಾ ಎಂಬ ಪದ ಅರ್ಥ ಇಲ್ಲದಿರುವುದು. ಕಾಲಗಮನದಲ್ಲಿ ಬದಲಾಗಿಹೋದ ಅರ್ಥವಿಲ್ಲದ ಪದವನ್ನು ಈಕ್ಷಣದಿಂದ ಅರ್ಥವಿರುವ ಪದವಾಗಿ ಎಲ್ಲರೂ 'ತ್ರೈತಾ' ಎಂದು ಕರೆದುಕೊಳ್ಳೋಣ. ತ್ರೈತಾಯೋಗ ಎಂಬ ಪದದಲ್ಲಿ "ಮೂರಾಗಿರುವ ದೇವರಲ್ಲಿ ಬೆರೆತುಹೋಗು" ಎಂದು ಅರ್ಥ. ತ್ರೈತ ಸಿದ್ಧಾಂತಕ್ಕು ತ್ರೈತಾಯೋಗಕ್ಕು ಹತ್ತಿರ ಸಂಬಂಧವಿರುವಂತೆ ತಿಳಿಯಬಲ್ಲದು. ಈದಿನ ಹೊಸದಾಗಿ ಕಾಣಿಸಿದ ಸಿದ್ಧಾಂತವಾದ ತ್ರೈತ ಸಿದ್ಧಾಂತವು ಪ್ರಾಚೀನವಾದುದೆಂದು ಎಲ್ಲದಕ್ಕಿಂತ ಮೊದಲನೆಯದೆಂದು ಹೇಳಬಹುದು.

ಇನ್ನು ನಾಲ್ಕು ಯುಗಗಳಲ್ಲಿ ಎರಡು ಯುಗಗಳ ವಿವರ ತಿಳಿದಿದೆ. ಕಾಲದಲ್ಲಿ ಮೂರನೆ ಯುಗದ ಹೆಸರು ದ್ವಾಪರ ಯೋಗ ಎಂದು ಇದೆ. ಯೋಗ ಎಂದರೆ 'ಸೇರುವಿಕೆ' ಎಂದು ತಿಳಿದಿದೆ. ದ್ವಾಪರ ಎಂದರೇ ದ್ವಾ

ಎಂದರೆ ಎರಡು ಎಂದು ಅರ್ಥ. ಪರ ಎಂದರೇ ಬೇರೆಯೆಂದು ಅರ್ಥ. ದ್ವಾಪರ ಎಂದರೇ ಎರಡು ಅಲ್ಲದಿರುವುದು ಮೂರೆಂದು ಅರ್ಥ. ತ್ರೈತಾಯೋಗಕ್ಕೆ ಯಾವ ಅರ್ಥವಿದೆಯೋ ಅದೇ ಅರ್ಥ ದ್ವಾಪರ ಯೋಗದಲ್ಲಿ ಸಹ ಇದೆ. ಮೂರಾಗಿರುವ ದೇವರಲ್ಲಿ ಬೆರೆತುಹೋಗೆಂದು ಅರ್ಥಕೊಡುವ ಪದವಾಗಿ ದ್ವಾಪರ ಯೋಗವಿದೆ. ಇಲ್ಲಿ ಚಿಕ್ಕ ವಿವರಣೆ ಏನೆಂದರೆ! ದ್ವಾಪರ ಎಂದರೇ ಎರಡು ಅಲ್ಲದಿರುವುದು ಎಂದು ಅರ್ಥ ಅಲ್ಲವೆ! ಎರಡಲ್ಲದಿರುವುದು ಮೂರೆಂದು ಹೇಳದಂತೆ ಒಂದೆಂದು ಹೇಳಬಹುದು ಅಲ್ಲವೆ! ಎಂದು ಯಾರಾದರೂ ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಶೂನ್ಯ ಎಂದರೇ ಗಣಿತಶಾಸ್ತ್ರದಲ್ಲಿ ಸೊನ್ನೆ ಎಂದು ಅರ್ಥ. ಅಶೂನ್ಯ ಎಂದರೇ ಸೊನ್ನೆಯಲ್ಲದಿರುವುದು ಒಂದು ಎಂದು ಹೇಳಬೇಕು. ಎಂದಿಗಾದರೂ ಮುಂದಿರುವ ಅಂಕೆಯನ್ನೇ ಹೇಳಬೇಕು. ಸೊನ್ನೆಗೆ ಹಿಂದೆ ಏನೂಯಿಲ್ಲವಾದ್ದರಿಂದ ಅಶೂನ್ಯ ಎಂದರೇ ಸೊನ್ನೆ ಅಲ್ಲದಿರುವುದು ಒಂದು ಎಂದು ಹೇಳಬೇಕಾಗಿರುತ್ತದೆ. ಒಂದುವೇಳೆ ಅದೇ ಪದವನ್ನೇ ಇನ್ನೊಂದು ವಿಧವಾಗಿ ಶೂನ್ಯಪರ ಎಂದು ಹೇಳಿದರೆ ಸೊನ್ನೆಗಿಂತ ಬೇರೆಯಾದುದು ಒಂದು ಎಂದು ಹೇಳಬಹುದು. ಹೀಗೆ ಮುಂದಿನ ಅಂಕೆಯನ್ನು ಹೇಳಬೇಕೆ ಹೊರತು ಹಿಂದಿನ ಅಂಕೆಯನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಸೊನ್ನೆಗಿಂತ ಹಿಂದೆ ಏನೂಯಿಲ್ಲ ಆದಕಾರಣ ಯಾವಾಗಾದರೂ ಗಣಿತದ ಪ್ರಕಾರ ಮುಂದಕ್ಕೇ ಹೇಳಬೇಕು. ಅದರ ಪ್ರಕಾರ ಅದ್ವೈತ ಎಂದರೇ ಎರಡಲ್ಲದಿರುವುದು ಮೂರು ಎಂದು ಹೇಳಬೇಕು. ಆದರೆ ಅದನ್ನು ಸಿದ್ಧಾಂತಕರ್ತರೇ ತಪ್ಪಾಗಿ ಹೇಳಿಕೊಂಡಿದ್ದಾರೆ. ಎರಡಲ್ಲದಿರುವುದು ಒಂದು ಅಂದಿದ್ದಾರೆ. ಒಂದನ್ನು ಕುರಿತು ಹೇಳಬೇಕಾಗಿ ಬಂದರೆ ಅಶೂನ್ಯ ಎಂದೂ ಅಥವಾ ಶೂನ್ಯಪರ ಎಂದು ಹೇಳಬಹುದು. ಮೂರನ್ನು ಕುರಿತು ಪರೋಕ್ಷವಾಗಿ ಹೇಳಬೇಕೆಂದರೆ **'ದ್ವಾಪರ'** ಎಂದು ಹೇಳಬೇಕು. ಪ್ರತ್ಯಕ್ಷವಾಗಿ ಹೇಳಬೇಕು ಎಂದರೆ **'ತ್ರೈತ'** ಎಂದು ಹೇಳಬೇಕು.

ದೇವರು ಪ್ರಜೆಗಳನ್ನು, ಸಮಸ್ತ ವಿಶ್ವವನ್ನು ಸೃಷ್ಟಿಸುವವನೇ ಅಲ್ಲದೆ ನಾಶ ಮಾಡುವವನು ಕೂಡಾ. ಆದುದರಿಂದ ದೇವರನ್ನು ಒಂದು ವಿಧವಾಗಿ 'ಸೃಷ್ಠಿಕರ್ತ' ಎಂದೂ ಮತ್ತೊಂದು ವಿಧವಾಗಿ 'ಪ್ರಳಯಕರ್ತ' ಎಂದು ಹೇಳಬಹುದು. ಸೃಷ್ಠಿಕರ್ತ ಎನ್ನುವುದಕ್ಕೆ ಆಧಾರವಾಗಿ ಕೃತ್ ಎಂಬ ಹೆಸರನ್ನು ಕಾಲಕ್ಕೆ ಇಡಲಾಗಿದೆ. ಪ್ರಳಯಕರ್ತ ಎನ್ನುವುದಕ್ಕೆ ಗುರುತಾಗಿ ಕಲಿಯುಗ ಎಂಬ ಹೆಸರನ್ನು ಇಡಲಾಗಿದೆ. ಕಲಿ ಎಂದರೇ ನಾಶ ಎಂದು ಅರ್ಥವಾದ್ದರಿಂದ ನಾಶ ಮಾಡುವ ದೇವರಲ್ಲಿ ಐಕ್ಯವಾಗುಯೆಂದು ಹೇಳುವ ವಾಕ್ಯವಾಗಿ ಕಲಿಯೋಗ ಎಂದು ಹೇಳಲಾಗಿದೆ. ಈ ವಿಧವಾಗಿ ನಾಲ್ಕು ಯೋಗಗಳ (ಯುಗಗಳ) ಹೆಸರುಗಳನ್ನು ಇಡಲಾಗಿದೆ. ಮನುಷ್ಯ ಮೊದಲು ಹುಟ್ಟಿ ನಂತರ ಸ್ವಲ್ಪಕಾಲಕ್ಕೆ ಮರಣಿಸುವುದು ನಡೆಯುತ್ತಿದೆ. ಜನನ ಮರಣಗಳ ಮಧ್ಯದಲ್ಲಿರುವುದು ಮನುಷ್ಯ ಜೀವನ. ಮನುಷ್ಯನಾದ ನಿನ್ನ ಜೀವನದಲ್ಲಿ ಹುಟ್ಟಿದಾಗಿನಿಂದ ಮರಣಿಸುವ ವರೆಗಿರುವ ಜೀವನದಲ್ಲಿ ನಿನ್ನಮುಂದೆ, ನಿನ್ನ ಹಿಂದಿರುವ ದೇವರನ್ನು ತಿಳಿದುಕೋ, ಆತನೊಳಗೆ ಬೆರೆತುಹೋಗು ಎಂದು ಹೇಳುವುದಕ್ಕೆ ಒಂದೇ ದೇವರನ್ನು ಮೊದಲು ಪ್ರತ್ಯಕ್ಷವಾಗಿ 'ತ್ರೈತ' ಎಂದು ಹೇಳಿ ಎರಡನೆಯಬಾರಿ ಪರೋಕ್ಷವಾಗಿ 'ದ್ವಾಪರ' ಎಂದು ಹೇಳಲಾಗಿದೆ. ಹಾಗೆ ಎರಡು ವಿಧಗಳ ತ್ರೈತ, ದ್ವಾಪರ ಎಂದು ಹೇಳುವುದಕ್ಕೆ ಕಾರಣ ನಿನ್ನಮುಂದೆ, ನಿನ್ನಹಿಂದೆ ಎರಡು ವಿಧಗಳಲ್ಲಿ ದೇವರಿರುವುದರಿಂದ ಹಾಗೆ ಎರಡು ವಿಧಗಳಲ್ಲಿ ಹೇಳಬೇಕಾಗಿಬಂದಿದೆ. ಹಾಗೆ ನನಗೆ ಮುಂದಿರುವವನು, ನನಗೆ ಹಿಂದಿರುವವನು ಅವನಿಗೆ ಮಧ್ಯದಲ್ಲಿ ನಾನು ಇರುವುದರಿಂದ ಯಾರು ಯಾವಾಗ ಮಾತನಾಡುವುದು ನಿನಗೆ ಅರ್ಥವಾಗಲಿಲ್ಲ.

ಇದೆಲ್ಲಾ ಹೇಳುವುದಕ್ಕೆ ಕಾರಣ ತ್ರೈತ ಸಿದ್ಧಾಂತ ಜ್ಞಾನ ಶ್ರೇಷ್ಠವಾದುದೆಂದು ಹೇಳುವುದಕ್ಕೆ ಆಧಾರವಾಗಿ ಕಾಲವನ್ನು ಕುರಿತು ಹೇಳಿದ್ದೇವೆ. ಅಷ್ಟೇ ಅಲ್ಲದೆ ಇದರಿಂದ ತ್ರೈತ ಪೂರ್ವದಿಂದ ಇದೆಯೆಂದು ಯಾರಿಗಾದರೂ ಅರ್ಥವಾಗುತ್ತದೆ. ಅಷ್ಟೇ ಅಲ್ಲದೆ ಹುಟ್ಟಿದ ನಂತರ ಸಾವಿನವರೆಗು ಒಂದು ತ್ರೈತ ಹೊರತು ಬೇರೆ ಇಲ್ಲವೆಂದು ಹೇಳುವುದಕ್ಕೆ ಮೊದಲು ತ್ರೈತವೆಂದು

ಪ್ರತ್ಯಕ್ಷವಾಗಿ, ದ್ವಾಪರವೆಂದು ಪರೋಕ್ಷವಾಗಿ ಹೇಳಿದ್ದಾರೆ. ಮೂರು ಹೊರತು ಏನೂ ಇಲ್ಲ. ಆದ್ದರಿಂದ ದ್ವೈತ ಸಿದ್ಧಾಂತ ಎನ್ನುವುದು ಸಿದ್ಧಾಂತ ಅಲ್ಲ. ಹಾಗೆಯೇ ಅದ್ವೈತ ಸಿದ್ಧಾಂತವೆನ್ನುವುದು ಸಹ ಸಿದ್ಧಾಂತವಲ್ಲ. ಒಂದು ತ್ರೈತ ಸಿದ್ಧಾಂತ ಹೊರತು ಉಳಿದವು ಸಿದ್ಧಾಂತಗಳೇ ಅಲ್ಲ ಎನ್ನುವಂತೆ ಕಾಲಕ್ಕೆ ಇಟ್ಟಿರುವ ನಾಲ್ಕು ಹೆಸರುಗಳಲ್ಲಿ ಮಧ್ಯದಲ್ಲಿರುವ ಎರಡಕ್ಕು ತ್ರೈತ ಎಂದೂ, ದ್ವಾಪರ ಎಂದೂ ಹೇಳುವುದಾಗಿದೆ. ಉಳಿದ ಕಲಿ, ಕೃತ ಹೆಸರುಗಳ ಹತ್ತಿರ ಅದ್ವೈ, ದ್ವೈತ ಹೆಸರುಗಳನ್ನು ಇಡಲಾಗಿದೆ. ಆದರೆ ಅವು ಸಿದ್ಧಾಂತಗಳಲ್ಲ ಆದ್ದರಿಂದ ಅವುಗಳ ಪ್ರಸ್ಥಾವನೆ ಅಲ್ಲಿ ಬರಲಿಲ್ಲ.

**ಪ್ರಶ್ನೆ :– ಅದ್ವೈತವೆಂದರೇ ಎರಡಲ್ಲದಿರುವುದು ಮೂರು ಎಂದು ನೀವು ಹೇಳಿದಂತೆ ಮೊದಲ ಅಂಕೆಯನ್ನು ತೆಗೆದುಕೊಂಡರೆ ತಿಳಿಯುತ್ತಿದೆ. ಅದ್ವೈತವೆಂದರೆ ಒಂದೇ ಎಂದು ಅವರು ಪ್ರಚಾರ ಮಾಡಿಕೊಂಡಿದ್ದಾರೆ. ಅದ್ವೈತವನ್ನು ಪದ್ಧತಿ ಪ್ರಕಾರ ಏನನ್ನಬೇಕು.** ?

**ಉತ್ತರ :–** ಅದ್ವೈತ ಎಂದರೇ ಎರಡು ಅಲ್ಲದಿರುವುದು ಮೂರೆಂದು ಅರ್ಥ ಬರುತ್ತದೆ. ಹೇಳಿದಮಾತು ಒಂದಾದರೆ, ಅವರ ಹೃದಿಯದಲ್ಲಿನ ಭಾವನೆ ಮತ್ತೊಂದು. ಆಗ ಅವರ ಭಾವದ ಪ್ರಕಾರ ಅದ್ವೈತ ಎಂಬಮಾತೇ ತಪ್ಪಾಗುತ್ತದೆ. ಅವರು ಹಾಗೆ ಅದ್ವೈತ ಎಂದು ಹೇಳದಂತೆ ಪ್ರತ್ಯಕ್ಷವಾಗಿ ಏಕ ಎಂದು ಹೇಳಿರಬೇಕಾಗಿತ್ತು. ಹಾಗಲ್ಲದಿದ್ದರೆ ಅಶೂನ್ಯ ಎಂದೋ ಶೂನ್ಯಪರ ಎಂದೋ ಹೇಳಬೇಕಾಗಿತ್ತು. ಇಷ್ಟು ಪ್ರಚಾರವಾಗಿ ಹೋಗಿ, ಇಷ್ಟು ವರ್ಷಗಳು ಕಳೆದ ನಂತರ ಈಗ ಹೆಸರನ್ನು ಬದಲಾಯಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಅವರು ಎಷ್ಟುಕಾಲವಿದ್ದರು ಸಕ್ರಮವಲ್ಲದ ಹೆಸರಿನಿಂದಲೇ ಅಕ್ರಮವಾದ ಹೆಸರಿನಿಂದಲೇ ಚಲಾವಣೆ ಆಗಬೇಕಾಗಿದ್ದೆ. ಅದ್ವೈತವೆಂದರೆ ಎರಡಲ್ಲದಿರುವುದು ಮೂರು ಅಲ್ಲವೆ! ಎಂದು ಯಾರು ಕೇಳಿದರೂ ಅದಕ್ಕೆ ಸರಿಯಾದ ಸಮಾಧಾನವನ್ನು ಹೇಳಲಾರರು.

**ಪ್ರಶ್ನೆ :– ನೀವು ಇಂದಿಗೆ ಮೊದಲುಬಂದುಹೋದ ಸಿದ್ಧಾಂತಕರ್ತರಿಗಿಂತಲು ಹೆಚ್ಚಾಗಿ ಗ್ರಂಥಗಳನ್ನು ಬರೆದಿದ್ದೀರಿ ಇನ್ನು ಬರೆಯುತ್ತೇವೆ ಎಂದಿದ್ದೀರಿ. ತ್ರೈತ ಸಿದ್ಧಾಂತವನ್ನು ಕುರಿತು ಒಂದು ಗ್ರಂಥದಲ್ಲಿ ಬರೆದರೂ ಸರಿಹೋಗುತ್ತದೆ ಅಲ್ಲವೆ! ಹಲವು ಗ್ರಂಥಗಳನ್ನು ಏಕೆ ಬರೆಯಬೇಕು?**

**ಉತ್ತರ :–** ನಾವು ಬರೆದ ಗ್ರಂಥಗಳೆಲ್ಲವೂ ತ್ರೈತ ಸಿದ್ಧಾಂತ ಆಧಾರದಿಂದಲೇ ಇವೆ. ಎಲ್ಲಾ ಗ್ರಂಥಗಳಲ್ಲಿ ಹೇಳಲಾಗಿರುವ ಜ್ಞಾನ ತ್ರೈತ ಸಿದ್ಧಾಂತವನ್ನು ಆಧಾರ ಮಾಡಿಕೊಂಡು ಹೇಳಿರುವುದೇ. ಎಲ್ಲಾ ಗ್ರಂಥಗಳಲ್ಲಿಯೂ ತ್ರೈತ ಸಿದ್ಧಾಂತವನ್ನು ಹೇಳಲಿಲ್ಲ. ಆ ಸಿದ್ಧಾಂತ ಆಧಾರದಿಂದ ಅನೇಕ ವಿಧಗಳ ಜ್ಞಾನವನ್ನು ಹೇಳಿದ್ದೇನೆ. ನಿಮಗೆ ಪ್ರತಿ ಗ್ರಂಥದಲ್ಲಿಯೂ ಹೊಸ ವಿಷಯವನ್ನು ತಿಳಿಸಬೇಕೆಂಬ ಉದ್ದೇಶದಿಂದ ಜ್ಞಾನವನ್ನು ಅನೇಕ ವಿಧಗಳಲ್ಲಿ ಅರ್ಥವಾಗುವುದಕ್ಕೆ ಅನೇಕ ಹೆಸರುಗಳಿಂದ ಗ್ರಂಥಗಳು ಬರೆದು ಹೇಳಲಾಗಿದೆ.

**ಪ್ರಶ್ನೆ :– ಉಳಿದ ಮೂವರು ಸಿದ್ಧಾಂತಕರ್ತರು ಒಟ್ಟು 66 ಗ್ರಂಥಗಳನ್ನು ಬರೆದಿದ್ದಾರೆ ಅಲ್ಲವೆ! ಅವರ ಗ್ರಂಥಗಳಿಗಿಂತ ಹೆಚ್ಚು ಜ್ಞಾನವನ್ನು ನಿಮ್ಮ ಗ್ರಂಥಗಳು ತಿಳಿಸಿವೆಯಾ? ಒಂದುವೇಳೆ ಅವರಿಗಿಂತ ಹೆಚ್ಚಾಗಿ ತಿಳಿಸಿವೆಯೆಂದುಕೊಂಡರೂ, ಅವರ ಗ್ರಂಥಗಳು ಸಹ ನಿಮಗಿಂತ ಕಡಿಮೆ ಆದರೂ ಸ್ವಲ್ಪವಾದರೂ ಜ್ಞಾನ ಹೇಳಿರುತ್ತಾರೆ ಅಲ್ಲವೆ! ನೀವು ವಿದ್ಯೆಯಲ್ಲಾಗಲಿ, ಸಂಸ್ಕೃತ ಪಾಂಡಿತ್ಯದಲ್ಲಾಗಲಿ ಅವರಿಗಿಂತ ಎಲ್ಲಾ ವಿಧಗಳಲ್ಲಿ ಕಡಿಮೆ ಇರುವವರೇ. ಹಾಗಿರುವಾಗ ನೀವು ಅವರಿಗಿಂತ ಹೆಚ್ಚು ಜ್ಞಾನವನ್ನು ಹೇಳಿದ್ದಾರೆಂದರೇ ಅದು ನಂಬುವಂತಹ ಮಾತೇನಾ? ಆದಿಶಂಕರಾಚಾರ್ಯ ನೆಂದರೇ ಎಷ್ಟೋ ದೊಡ್ಡವನೆಂದು ದೇಶವೆಲ್ಲಾ ಅಂದುಕೊಳ್ಳುತ್ತಿದ್ದಾರೆ. ಉಳಿದ ರಾಮಾನುಜರವರ ಚರಿತ್ರೆ ಎಷ್ಟೋ ಉತ್ತಮವಾಗಿದೆ. ಮಧ್ವಾಚಾರ್ಯರವರು ಎಷ್ಟೋ ದೊಡ್ಡ ಪಂಡಿತನೆಂದು ತಿಳಿದಿದೆ. ಇಷ್ಟುದೊಡ್ಡ ಉದ್ಧಂಡ ಪಂಡಿತರಾದವರು, ಸಿದ್ಧಾಂತಕರ್ತರಾದವರು ಎಷ್ಟೋ ತಿಳುವಳಿಕೆಯಿಂದ ಬರೆದ ಗ್ರಂಥಗಳಿಗಿಂತ ನಿಮ್ಮ ಗ್ರಂಥಗಳಲ್ಲಿ ಜ್ಞಾನ ಹೆಚ್ಚಾಗಿದೆಯೆಂದು ನೀವು ಹೇಳಿಕೊಂಡರೂ ನಾವು ನಂಬುವುದಕ್ಕೆ ನಿಮ್ಮ ಹತ್ತಿರ ಏನಾದರೂ ಆಧಾರ ಇದೆಯಾ?**

**ಉತ್ತರ:–** ಆಧಾರ ತೋರಿಸಿ ನಿಮ್ಮನ್ನು ನಂಬಿಸಬೇಕಾದ ಅವಶ್ಯಕತೆ ನನಗಿಲ್ಲ ಆದರೆ, ನನ್ನ ಜ್ಞಾನವನ್ನು ಯಾರು ನೋಡಿದರೂ ನಾನು ಹೇಳಿದ ಮಾತನ್ನು ಅವರೇ ಹೇಳುತ್ತಾರೆ. ನನ್ನನ್ನು ಪ್ರಶ್ನಿಸುವವರೇ ನನ್ನ ಪರವಾಗಿ ಮಾತನಾಡುವ ಸಾಮರ್ಥ್ಯ ಕೊಡುವ ನನ್ನ ಜ್ಞಾನವನ್ನು ಕುರಿತು ನಾನು ದೊಡ್ಡದಾಗಿ ಹೇಳಿಕೊಳ್ಳುವ ಕೆಲಸವಿಲ್ಲ ಅಲ್ಲವೆ! ಗ್ರಂಥಗಳನ್ನು ಯಾರು ಬರೆಯುತ್ತಾರೋ ಅವರನ್ನು ಅನುಸರಿಸಿ ಗ್ರಂಥಗಳಲ್ಲಿ ಶಕ್ತಿ ಇರುತ್ತದೆ. ಮನುಷ್ಯನಲ್ಲಿ ಪಂಚಭೂತಗಳಾಗಿರುವ ಪ್ರಕೃತಿ ಇದೆ. ಅಂದರೇ ಐದು ಭಾಗಗಳಾಗಿರುವ ಪ್ರಕೃತಿಯಿಂದ ಶರೀರವು ನಿರ್ಮಾಣವಾಗಿದೆ. ಪ್ರಕೃತಿ ನಿರ್ಮಾಣದಿಂದ ತಯಾರಾದ ಶರೀರಗಳು, ಶರೀರದಲ್ಲಿ ಚೈತನ್ಯವಾಗಿ ಮೂರು ಭಾಗಗಳಾಗಿರುವ ಆತ್ಮಗಳು ಇವೆ. ಈ ವಿಷಯ ಭಗವದ್ಗೀತೆಯಲ್ಲಿನ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ ಹೇಳಲಾಗಿದೆ. ನಂತರ ಭಗವದ್ಗೀತೆಯನ್ನು ಅನುಸರಿಸಿ ದೈವಗ್ರಂಥಗಳಾಗಿ ತಯಾರಾದ ಬೈಬಲ್, ಖುರಾನ್ ಗ್ರಂಥಗಳಲ್ಲಿ ಸಹ ಇದೇ ಮೂರು ಆತ್ಮಗಳನ್ನು ಕುರಿತು ಹೇಳಲಾಗಿದೆ. ಭಗವದ್ಗೀತೆಯಲ್ಲಿ ಹೇಳಿದ ಮೂರು ಆತ್ಮಗಳಲ್ಲಿ ಈಗ ನಿನ್ನೊಂದಿಗೆ ಮಾತನಾಡಿದಂತೆ ಬರೆಯುತ್ತಿರುವ ನಾನು ಒಬ್ಬನು, ಉಳಿದವರು ಇಬ್ಬರು ಇದ್ದಾರೆ. ಮಾತನಾಡುವವನು ನಾನು ಯಾರಾಗಿರುವುದು ನಾನು ಹೇಳಬಾರದು. ಅದು ನೀನು ಗ್ರಹಿಸಿಕೊಳ್ಳಬೇಕಾದ ಸಮಸ್ಯೆ. ನಾನಲ್ಲದೇ ಇಬ್ಬರಿದ್ದಾರೆ ಅಲ್ಲವೆ! ಅವರಲ್ಲಿ ಒಬ್ಬನು ಚಲನವಿಲ್ಲದೆ ಎಂದಿಗೂ ಮಾತನಾಡುವುದಿಲ್ಲ, ಯಾವ ಕೆಲಸ ಮಾಡುವುದಿಲ್ಲ. ಇನ್ನೊಬ್ಬನು ನನ್ನನ್ನು ಪಕ್ಕಕಿಟ್ಟು ತಾನೇ ಮಾತನಾಡುತ್ತಾನೆ ತಾನೇ ಮಾಡುತ್ತಾನೆ.

ಈ ವಿಧವಾಗಿ ಹೇಳಿದರೆ ಏನು ಅರ್ಥ ಆಗದಿರಬಹುದು. ಆದುದರಿಂದ ಮೂವರ ಪಾತ್ರ ಹೇಗಿರುತ್ತದೋ ಪ್ರತ್ಯಕ್ಷ ಅನುಭವದ ಮೂಲಕ ತಿಳಿಯುವಂತೆ ಒಬ್ಬ ಮನುಷ್ಯ ಶರೀರದಲ್ಲಿ ನಡೆಯವ ಸಂಘಟನೆಯಲ್ಲಿ ಯಾವ ಆತ್ಮ ಹೇಗೆ ಪ್ರವರ್ತಿಸಿದೆಯೋ ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ. ಕ್ರಿಸ್ತ ಶಕಕಿಂತ ಮೊದಲು, ಕ್ರಿಸ್ತ ಶಕಕ್ಕಿಂತ ಹಿಂದೆ ಹುಟ್ಟಿದ ಒಬ್ಬ ವ್ಯಕ್ತಿಯಲ್ಲಿ ನಡೆದ ಮೂರು ಆತ್ಮಗಳ

ಕೆಲಸವನ್ನು ಒಂದುಬಾರಿ ಗಮನಿಸೋಣ. A.D. ಗಿಂತ ಮುಂದೆ B.C. ಗಿಂತ ಹಿಂದಿರುವ ವ್ಯಕ್ತಿಯನ್ನು ಕುರಿತು ಹೇಳುತ್ತಿದ್ದೇವೆ ಅಂದರೇ A.D. ಆಗಲಿ B.C ಯಾಗಲಿ ಆತನಿಗೆ ಅನ್ವಯಿಸುವುದಿಲ್ಲ. ಆ ಎರಡಕ್ಕು ಮಧ್ಯದಲ್ಲಿ ಬದುಕಿದ ವ್ಯಕ್ತಿಯಲ್ಲಿ ನಡೆದ ಆತ್ಮಗಳ ಕೆಲಸವನ್ನು ಸೂಚನೆಯಾಗಿ ಹೇಳಿಕೊಳ್ಳೋಣ.

**ಪ್ರಶ್ನೆ :– ಒಂದು ನಿಮಿಷ ನಿಲ್ಲಿ! ನೀವು ಹೇಳುತ್ತಾ ಹೋದರೆ ನಿಮ್ಮ ಹಿಂದೆ ಕೇಳುತ್ತಾ ಬರುವುದಕ್ಕೆ ನಾವು ಕುರಿಗಳಲ್ಲ. ನಮ್ಮ ಪ್ರಶ್ನೆಗೆ ಉತ್ತರವನ್ನು ಹೇಳಿದ ನಂತರ ನೀವೇನು ಹೇಳುತ್ತಿರೋ ಆಗ ಕೇಳುತ್ತೇವೆ. A.D ಗು B.C ಗು ಮಧ್ಯೆ ಎಂದರೇ ಸುಮಾರು 2016 ವರ್ಷಗಳ ಹಿಂದೆ ಎಂಬಮಾತು A.D ಗು B.C ಗು ಮಧ್ಯದಲ್ಲಿನ ಕಾಲ ಕೇವಲ 33 ವರ್ಷಗಳೇ ಅಂದರೇ ಯೇಸು ಪ್ರಭು ಬದುಕಿರುವ ಕಾಲ ಎಂಬಮಾತು. ಅಂದಿನಕಾಲದಲ್ಲಿ ಭಾರತದೇಶದ ಜನಸಂಖ್ಯೆ ಖಚಿತವಾಗಿ 30 ಕೋಟಿಗಳು. ಇಸ್ರಾಯೇಲ್ ದೇಶದಲ್ಲಾದರೆ ಮೂರು (3) ಕೋಟಿಗಳು ಮಾತ್ರವೇ, ಇಸ್ರಾಯೇಲ್ ಪಾಲಸ್ತೀನಾ ಬೆರೆತಿರುವ ಕಾಲವದು. ಎರಡು ದೇಶಗಳು ಬೆರೆತರೂ ಮೂರುಕೋಟಿಗಳಿಗಿಂತ ಮಿಂಚಿದ ಜನಸಂಖ್ಯೆ ಇಲ್ಲದ ದೇಶವದು. ನೀವು ಯಾವ ದೇಶದಲ್ಲಿನ ವ್ಯಕ್ತಿಯನ್ನು ಕುರಿತು ಹೇಳಿದರೂ ಅಷ್ಟು ಜನಸಂಖ್ಯೆಯಲ್ಲಿ ಯಾರನ್ನು ಕುರಿತು ಹೇಳುತ್ತಿದ್ದಾರೋ ನಿನಗೆ ತಿಳಿದಿದೆಯಾ ಎನ್ನುವುದು ನಮ್ಮ ಮೊದಲ ಪ್ರಶ್ನೆ? 2016 ವರ್ಷಗಳ ಪೂರ್ವದಲ್ಲಿ ಒಬ್ಬ ಮನುಷ್ಯನಲ್ಲಿ ನಡೆದ ವಿಷಯ ಈಗ ನಮ್ಮ ಮುಂದಿರುವ ನೀನು ಹೇಗೆ ಹೇಳುತ್ತೀಯಾ ಇದು ನಮ್ಮ ಎರಡನೆ ಪ್ರಶ್ನೆ? ಈ ಎರಡು ಪ್ರಶ್ನೆಗಳಿಗೆ ಉತ್ತರ ದೊರೆತ ನಂತರ ನೀವು ಹೇಳುವುದನ್ನು ಕೇಳುತ್ತೇವೆ. ಮೊದಲು ನಮ್ಮ ಎರಡು ಪ್ರಶ್ನೆಗಳಿಗೆ ಉತ್ತರಗಳು ಹೇಳಿರಿ ನೋಡೋಣ?**

**ಉತ್ತರ :–** ಕೇಳಿಸಿಕೊಳ್ಳುವ ಸಾಮಾನ್ಯ ಮನುಷ್ಯನ ಪ್ರಶ್ನೆ ಕೇಳಿದಾಗಲೇ ಹೇಳುವ ವಿಷಯವನ್ನು ಜಾಗ್ರತೆಯಾಗಿ ಕೇಳುತ್ತಿದ್ದಾನೆಂದು ಹೇಳುವವನಿಗೆ ಅರ್ಥವಾಗುತ್ತದೆ. ನೀನು ಜಾಗ್ರತೆಯಾಗಿ ಕೇಳುತ್ತಿದ್ದೀಯಾ ಆದ್ದರಿಂದ ಪ್ರಶ್ನಿಸುತ್ತಿದ್ದೀಯಾ. ನೀನು ಪ್ರಶ್ನೆ ಕೇಳುವುದು ನಮಗೆ ಸಂತೋಷವೇ. ನಿಮ್ಮ ಮೊದಲ ಪ್ರಶ್ನೆಗೆ ಉತ್ತರ

ಏನೆಂದರೆ! ನಾನು ಯಾರನ್ನು ಕುರಿತು ಹೇಳುತ್ತಿದ್ದೇನೋ ನನಗೆ ಚೆನ್ನಾಗಿ ತಿಳಿದಿದೆ. ಇಲ್ಲಿ ಯಾವ ವ್ಯಕ್ತಿ ಎನ್ನುವುದು ಮುಖ್ಯವಲ್ಲ ಆದರೆ, ಆ ವ್ಯಕ್ತಿಯಲ್ಲಿ ಏನು ನಡೆದಿದೆಯೆಂದು ತಿಳಿಯುವುದೇ ಮುಖ್ಯ. ನಾನು ಈಗ ಇಂತಹ ವ್ಯಕ್ತಿಯನ್ನು ಕುರಿತು ಹೇಳುತ್ತಿದ್ದೇನೆಂದು ಹೇಳಿದರೂ ಆ ವ್ಯಕ್ತಿ ಯಾರೋ ನಿನಗೆ ತಿಳಿದಿಲ್ಲ ಅಲ್ಲವೆ! ಆಗ ಯಾರು ಎಲ್ಲಿರುವುದು ನಿನಗೆ ತಿಳಿದಿಲ್ಲ ಆದ್ದರಿಂದ ಆ ವ್ಯಕ್ತಿ ಯಾರು? ಎಂದು ಕೇಳಿದ ಪ್ರಶ್ನೆಯ ಮೂಲಕ ಅದರ ಉತ್ತರದ ಮೂಲಕ ನಿಮಗೆ ಏನು ಲಾಭವಿಲ್ಲ. ಶರೀರದಲ್ಲಿ ನಡೆದ ಆತ್ಮಗಳ ಕೆಲಸವನ್ನು ಕುರಿತು ಹೇಳಿದರೂ ಹೇಳಿರುವುದನ್ನು ಕೇಳಬೇಕಾಗಿದ್ದೇ ಹೊರತು ಶರೀರದಲ್ಲಿ ಏನು ನಡೆದಿರುವುದು ಸಹ ನಿಮಗೆ ತಿಳಿದಿಲ್ಲ. ಇನ್ನೂ ನಾನು ನಿಮಗೆ ಹೇಗೆ ಅಂದಿನ ವಿಷಯವನ್ನು ಹೇಳುತ್ತಿದ್ದೇನೆನ್ನುವುದು ಮುಖ್ಯವಾದ ಪ್ರಶ್ನೆ. ಆ ಉತ್ತರ ಎಲ್ಲರಿಗೂ ಅಗತ್ಯವೇ ಆದ್ದರಿಂದ ಹೇಳಬೇಕಾದ ಜವಾಬ್ದಾರಿ ಸಹ ನಮಗೆ ಇದೆ. ಈ ವಿಷಯವನ್ನು ಎಷ್ಟೋ ಪರಿಶೋಧನಾ ಬುದ್ಧಿಯಿಂದ, ವಿವೇಚನಾ ಶಕ್ತಿಯಿಂದ ನೋಡಬೇಕಾಗಿರುತ್ತದೆ. ಹಾಗಲ್ಲದೆ ನಿಮ್ಮದು ಪೂರ್ವವಾದರೆ ನಮ್ಮದು ಪಶ್ಚಿಮ ಎಂಬ ವಿಧಾನದಿಂದ ಅಡ್ಡಗೋಡೆಯಾಗಿ ಮಾತನಾಡಬಾರದೆಂದು ಮೊದಲೇ ಹೇಳುತ್ತಿದ್ದೇವೆ. ಹಾಗೆ ಮಾತನಾಡಿದರೆ ನಮಗೆ ಏನು ನಷ್ಟ, ಕಷ್ಟ ಬರುವುದಿಲ್ಲ ಆದರೆ, ಮಾತನಾಡಿದವರಿಗೆ ಕಾಣಿಸದ ನಷ್ಟ ಕಷ್ಟ ಉಂಟಾಗುತ್ತದೆ. ಆದುದರಿಂದ ಜಾಗ್ರತೆಯಾಗಿ ಕೇಳಿರಿ. ಅವಶ್ಯಕತೆ ಬಂದರೇ ಪ್ರಶ್ನಿಸಿರಿ. ಹಾಗೆಂದು ಅವಶ್ಯಕತೆ ಇಲ್ಲದಕಡೆ ಪ್ರಶ್ನಿಸುವುದು ಸಹ ಒಳ್ಳೆಯದಲ್ಲ.

ಸುಮಾರು ಇಲ್ಲಿಗೆ 2016 ಸಂವತ್ಸರಗಳ ಪೂರ್ವದಲ್ಲಿ ಪ್ರತ್ಯೇಕವಾದ ಒಬ್ಬ ವ್ಯಕ್ತಿ ಇಸ್ರಾಯೇಲ್ ದೇಶದಲ್ಲಿಯೇ ಇದ್ದನು. ಆ ವ್ಯಕ್ತಿಯಲ್ಲಿ ಮಾತ್ರವೇ ಮೂರು ಆತ್ಮಗಳ ಕೆಲಸವಿದ್ದಂತೆ ತಿಳಿದಿದೆ. ಆಗಾಗಲಿ ಈಗಾಗಲಿ ಎಷ್ಟೋ ಜನ ಮನುಷ್ಯರಿದ್ದಾರೆ. ಆದರೆ ಎಲ್ಲರಲ್ಲಿಯೂ ಮೂರು ಆತ್ಮಗಳಿದ್ದರೂ ಎಲ್ಲರಲ್ಲೂ ಮೂರು ಆತ್ಮಗಳು ಕೆಲಸಮಾಡಲಿಲ್ಲ. ಎಲ್ಲರಲ್ಲಿ ಎರಡು ಆತ್ಮಗಳ ಕೆಲಸವೇ

ಲೆಕ್ಕಿಸಲ್ಪಡುತ್ತಿದೆ. ಮೂರು ಆತ್ಮಗಳಲ್ಲಿ ಮೂರನೆಯದಾದ ಪರಮಾತ್ಮ ಎನ್ನುವ ಆತ್ಮ ಏನು ಮಾಡದೆ ಎಲ್ಲರಲ್ಲಿ ಸುಮ್ಮನಿರುತ್ತಿದೆ. ಮೂರನೆಯ ಆತ್ಮ ಅಪರೂಪವಾಗಿ ತಾನಿದ್ದೇನೆಂಬ ನಿರೂಪಣೆಗಾಗಿ ಅಪರೂಪವಾಗಿ ಕೆಲವು ಸಾವಿರಾರು ವರ್ಷಗಳಿಗೋ ಅಥವಾ ಕೆಲವು ಲಕ್ಷಗಳ ವರ್ಷಗಳಿಗೋ ಎಲ್ಲಿಯೋ ಒಬ್ಬ ವ್ಯಕ್ತಿ ಶರೀರದಲ್ಲಿ ಮಾತನಾಡುವುದು ನಡೆಯುತ್ತಿದೆ. ಇಂದಿಗೂ ನಮಗೆ ತಿಳಿದಷ್ಟುಮಟ್ಟಿಗೆ ದ್ವಾಪರಯುಗದ ಕೊನೆಯಲ್ಲಿ ಒಂದುಬಾರಿ ಕಲಿಯುಗ ಬಂದ ನಂತರ ಒಂದುಬಾರಿ ಮೂರನೆಯ ಆತ್ಮ ಮಾತನಾಡುವುದು ನಡೆಯುತ್ತಿದೆ. ಯುಗಕ್ಕೆ ಒಂದುಬಾರಿ ತನ್ನ ವಿಧಾನವನ್ನು, ತನ್ನ ಜ್ಞಾನವನ್ನು ದೇವರು ನಿರೂಪಿಸಿಕೊಳ್ಳುತ್ತಾನೆ. ಎಲ್ಲಾ ಶರೀರಗಳಲ್ಲಿ ನಿತ್ಯ ಎರಡು ಆತ್ಮಗಳ ಕೆಲಸಗಳು ದಾಖಲೆಯಾಗುತ್ತಿವೆ. ಆದರೆ ಎಲ್ಲಾದರೂ, ಯಾರಲ್ಲಾದರೂ ಕದಲದ ಮೆದಲದ ಮಾತನಾಡದ ಮೂರನೆಯ ಆತ್ಮ ಅಪರೂಪವಾಗಿ ಯಾವಾಗಲೋ ಒಂದುಬಾರಿ ಯಾರಾಲ್ಲಿಯೋ ಒಬ್ಬರಲ್ಲಿ ಮಾತನಾಡುತ್ತದೆ. ಆಂದಿನ ವಿಷಯವನ್ನೇ ನಾನು ಈಗ ಹೇಳುತ್ತಿದ್ದೇನೆ. ನಾನು ಈ ವಿಷಯವನ್ನು ಹೇಳುವುದಕ್ಕೆ ಮೊದಲು ನಿನಗೆಹೇಗೆ ತಿಳಿಯುತ್ತದೋ ಹೇಳಿರೆಂದು ಕೇಳಿದ್ದೀರಿ, ಅದಕ್ಕೆ ಉತ್ತರನ್ನು ನೋಡಿರಿ.

ನಾನು ಸಹ ಎಲ್ಲರಂತೆ ಶರೀರವನ್ನು ಧರಿಸಿರುವ ಒಬ್ಬ ಮನುಷ್ಯನು. ನನಗೆ ಪ್ರಕೃತಿಯಿಂದ ಕೂಡಿಕೊಂಡಿರುವ ಶರೀರವಿದ್ದರೂ ಅದು ಜಢವಾಗಿರುವುದು, ಚೈತನ್ಯ ಇಲ್ಲದಿರುವುದು. ನನ್ನ ಶರೀರದಲ್ಲಿ ನಾನಲ್ಲದೆ ನನ್ನ ಹಿಂದೆ ಒಬ್ಬರು, ನನ್ನಮುಂದೆ ಒಬ್ಬರು ಇಬ್ಬರಿದ್ದಾರೆ. ನಾನು ಒಂದು ಆತ್ಮನಾಗಿದ್ದು ಉಳಿದ ಎರಡು ಆತ್ಮಗಳು ಶರೀರದಲ್ಲಿಯೇ ಇವೆ. ನನ್ನ ಶರೀರದಲ್ಲಿರುವ ಮೂರನೆ ಆತ್ಮ ಸ್ವಲ್ಪವೂ ಕದಲದೆ ಮೆದಲದೆ ಸುಮ್ಮನಿದೆ. ಆದರೆ ಪೂರ್ವದಲ್ಲಿ ಮೂರನೆ ಆತ್ಮ ಕದಲಿ ಮಾತನಾಡಿದ ಶರೀರದಲ್ಲಿ ಸಹ ಮೂರು ಆತ್ಮಗಳೇ ಇರುವುದರಿಂದ ನನಗೆ ಅಲ್ಲಿ ಏನು ನಡೆದಿದೆಯೋ ತಿಳಿದುಕೊಳ್ಳುವುದಕ್ಕೆ ಸುಲಭವಾಗುತ್ತದೆ. ಎಲ್ಲರಲ್ಲಿಯೂ ಆತ್ಮಗಳ ವಿಧಾನದಲ್ಲಿ

ಒಂದೇ ವಿಧವಾಗಿ ಇದ್ದರೂ ಅವರಿಗೆ ಮೂರು ಆತ್ಮಗಳ ಜ್ಞಾನ ತಿಳಿದಿಲ್ಲ. ನನಗೆ ಪ್ರತ್ಯೇಕಿಸಿ ಮೂರು ಆತ್ಮಗಳ ಜ್ಞಾನ ತಿಳಿದಿರುವುದರಿಂದ, ಅದರಲ್ಲಿ ಒಂದು ಆತ್ಮದಿಂದ ಎಲ್ಲಾ ಶರೀರಗಳಲ್ಲಿನ ಆತ್ಮಗಳೊಂದಿಗೆ ಸಂಬಂಧ ಏರ್ಪಡಿಸಿಕೊಳ್ಳಬಹುದು. ನನ್ನ ಆತ್ಮ ಪೂರ್ವದಲ್ಲಿ ಮೂರು ಆತ್ಮಗಳು ಕೆಲಸಮಾಡಿದ ಶರೀರದಲ್ಲಿನ ಆತ್ಮದೊಂದಿಗೆ ಸಂಬಂಧ ಏರ್ಪಡಿಸಿಕೊಂಡಿರುವು ದರಿಂದ ಆಗ ಆ ಶರೀರದಲ್ಲಿ ಏನು ನಡೆದಿದೆಯೋ ಮೂರನೆ ಆತ್ಮ ಏನು ಮಾತನಾಡಿದೆಯೋ ಸುಲಭವಾಗಿ ತಿಳಿಯುತ್ತಿದೆ. ನನಗೆ ತಿಳಿದಿರುವ ಈ ಕೆಲಸ ಆತ್ಮಜ್ಞಾನವನ್ನು ತಿಳಿದುಕೊಂಡರೆ ನಿಮಗು ಸಹ ಸುಲಭವೇ ಆಗುತ್ತದೆ.

2016 ವರ್ಷಗಳ ಪೂರ್ವದಲ್ಲಿ ಒಬ್ಬ ವ್ಯಕ್ತಿಯಲ್ಲಿನ ಒಂದು ಆತ್ಮ ಆ ಶರೀರದಲ್ಲಿ ಎದುರಾಗುವ ಕಷ್ಟಗಳನ್ನು ಪೂರ್ತಿಯಾಗಿ ಅನುಭವಿಸುತ್ತಾ ಬಾಧೆಪಟ್ಟಿದೆ. ಹೆಚ್ಚಾಗಿ ನಡೆಯುವುದರಿಂದ ಕಾಲುಗಳಲ್ಲಿ ನೋವನ್ನು ಅನುಭವಿಸುತ್ತಿತ್ತು. ಕಾಲಿಗೆ ಚಪ್ಪಲಿ ಇಲ್ಲದಿರುವುದರಿಂದ ಕಾಲಿಗೆ ಮುಳ್ಳುಚುಚ್ಚಿ ಕೊಂಡಾಗ ಅದರಿಂದ ಆ ಶರೀರದಲ್ಲಿನ ಒಂದು ಆತ್ಮ ಬಾಧೆಪಡುತ್ತಿರುವಾಗ ಇನ್ನೊಂದು ಆತ್ಮ ನೋಡುತ್ತಿರುವಾಗ, ಮತ್ತೊಂದು ಆತ್ಮ ಸಮಾಧಾನಪಡಿಸುತ್ತಿತ್ತು. ಇದೆಲ್ಲಾ ನಿನ್ನ ಶರೀರದಲ್ಲಿ ಸಹ ನಡೆಯುತ್ತಿದೆ. ನೀನು ದುಃಖವನ್ನು ಅನುಭವಿಸುತ್ತಿರುವಾಗ, ನಿನ್ನಲ್ಲಿನ ಒಂದು ಆತ್ಮ ನೋಡುತ್ತಿರುವಾಗ, ಮತ್ತೊಂದು ಆತ್ಮ ನಿನ್ನನ್ನು ಸಮಾಧಾನಪಡಿಸುತ್ತದೆ. ಅನುಭವಿಸುವವನು ನೀನೇ ಎಂದು ನಿನಗೆ ಅರ್ಥವಾದರೂ, ನೋಡುವವನು ಯಾರೋ, ಸಮಾಧಾನಪಡಿಸುವವನು ಯಾರೋ ನಿನಗೆ ತಿಳಿದಿಲ್ಲ. ನಿನಗೇ ಅಲ್ಲ ಯಾರಿಗೂ ತಿಳಿದಿಲ್ಲ. ಆದರೆ ನನಗೆ ಚೆನ್ನಾಗಿ ತಿಳಿದಿದೆ ಯಾರು ನೋಡುತ್ತಿದ್ದಾನೋ, ಯಾರು ಅನುಭವಿಸುತ್ತಿದ್ದಾನೋ, ಯಾರು ಸಮಾಧಾನ ಪಡಿಸುತ್ತಿದ್ದಾನೋ ಮೂವರು ನನಗೆ ಗೊತ್ತು. ಆ ಮೂವರಲ್ಲಿ ನಾನು ಯಾರೋ ಸಹ ನನಗೆ ಚೆನ್ನಾಗಿ ತಿಳಿದಿದೆ. ಆದುದರಿಂದ ಪೂರ್ವದಲ್ಲಿ 2016 ವರ್ಷದಲ್ಲಿ ದುಃಖವನ್ನು ಅನುಭವಿಸಿದ ಆತ್ಮ ಒಂದಾಗಿದ್ದು, ಆತನ ಶರೀರದಲ್ಲಿ ಉಳಿದ ಎರಡು ಆತ್ಮಗಳಲ್ಲಿ ಒಂದು ಯಾವಾಗಲೂ

ಕೆಲಸಮಾಡುತ್ತಿರುವಾಗ, ಮೂರನೆ ಆತ್ಮ ಯಾವ ಕೆಲಸ ಮಾಡದೆ ಸುಮ್ಮನಿದೆ. ಒಂದು ದಿನ ಆ ವ್ಯಕ್ತಿಗೆ ಕಾಲಿನಲ್ಲಿಯೂ, ಕೈಯಲ್ಲಿಯೂ ಮುಳ್ಳುಗಳು ಚುಚ್ಚಿಕೊಂಡು ಬಹಳ ದುಃಖಪಡುತ್ತಿದ್ದಾನೆ. ಅದೇ ವ್ಯಕ್ತಿ ಒಂದುದಿನ ಭಯಂಕರವಾಗಿ ವಿಜೃಂಭಿಸಿದ ತುಫಾನನ್ನು ನಿಂತುಹೋಗೆಂದರೆ ಅದು ನಿಂತುಹೋಗಿದೆ. ಮುಳ್ಳಿಗೆ ದುಃಖಪಟ್ಟ ವ್ಯಕ್ತಿ ತನ್ನಕಣ್ಣಲ್ಲಿ ದೂಳುಬಿದ್ದಿದೆಯೆಂದು ತುಫಾನನ್ನು ಹೇಗೆ ನಿಯಂತ್ರಿಸಿದ್ದಾನೆ? ಆತನು ನಿಂತುಹೋಗು ಎನ್ನುತ್ತಲೇ ತುಫಾನು ಏಕೆ ನಿಂತುಹೋಗಿದೆ? ಎಂಬ ಪ್ರಶ್ನೆಗಳು ಬಾರದೆ ಇರುವುದಿಲ್ಲ. ಅವುಗಳಿಗೆ ಉತ್ತರವನ್ನು ನೋಡಿದರೆ ಹೀಗೆ ಇದೆ.

ಆ ವ್ಯಕ್ತಿಯಲ್ಲಿ ಕದಲದೆ ಮೆದಲದೆ ಇರುವ ಮೂರನೆಯ ಆತ್ಮ ತುಫಾನು ಸಮಯದಲ್ಲಿ ಮಾತ್ರ ಮಾತನಾಡಿ ತುಫಾನನ್ನು ಅಣಗಿಹೋಗೆಂದು ಒಂದೇವೊಂದು ಮಾತು ಹೇಳಿದೆ. ಆಗ ಪ್ರಕೃತಿಯಾದ ತುಫಾನು ಮೂರನೆ ಆತ್ಮಮಾತನ್ನು ಕೇಳಿ ತಕ್ಷಣ ನಿಂತುಹೋಗುವುದು ನಡೆದಿದೆ. ಮೂರನೆ ಆತ್ಮಕ್ಕೆ ಒಟ್ಟು ಪ್ರಪಂಚವೇ ಆಧೀನದಲ್ಲಿರುವಂತೆ, ಮೂರನೆ ಆತ್ಮಮಾತಿಗೆ ಪ್ರಕೃತಿಯೆಲ್ಲವೂ ತಲೆಬಾಗಿಸಿ ಕೆಲಸ ಮಾಡುತ್ತದೆಯೆಂದು ತಿಳಿಯುತ್ತಿದೆ. ಎಲ್ಲದಕ್ಕು ದೊಡ್ಡವ ಎಲ್ಲವನ್ನು ನಿಯಂತ್ರಿಸುವವನು ದೇವರೇ ಆಗಿರುವುದರಿಂದ ನಮ್ಮ ಶರೀರದಲ್ಲಿ ಮೂರನೆ ಆತ್ಮವಾಗಿ ಇರುವವನು ದೇವರೇ ಎಂದು ತಿಳಿಯುತ್ತಿದೆ. 2016 ವರ್ಷದಲ್ಲಿ ಮಾತನಾಡಿದ ಮೂರನೆ ಆತ್ಮ ದ್ವಾಪರಯುಗ ಕೊನೆಯಲ್ಲಿ ಶ್ರೀಕೃಷ್ಣನ ಶರೀರದಿಂದ ಮಾತನಾಡಿದೆ. ನೇರವಾಗಿ ಅರ್ಜುನನೊಂದಿಗೆ ಮಾತನಾಡಿ ತನ್ನ ಇರುವಿಕೆಯನ್ನು ಪ್ರಜೆಗಳಿಗೆ ತಿಳಿಯುವಂತೆ ಮಾಡಿದೆ. ಆ ಮೂರನೆ ಆತ್ಮವನ್ನೇ ನಾವು **'ದೇವರು'** ಎನ್ನುತ್ತಿದ್ದೇವೆ. ಮೂರು ಆತ್ಮಗಳ ವಿಷಯ ಆ ಮೂರು ಆತ್ಮಗಳಲ್ಲಿ ಒಂದು ಆತ್ಮದೊಂದಿಗೆ ಸಂಬಂಧ ಏರ್ಪಡಿಸಿಕೊಳ್ಳುವುದು ನನಗೆ ತಿಳಿದಿದೆಯಾದ್ದರಿಂದ ಅಂದಿನ ಎರಡನೆ ಆತ್ಮದೊಂದಿಗೆ ಸಂಬಂಧ ಏರ್ಪಡಿಸಿಕೊಂಡು ಅಲ್ಲಿ ಏನು ನಡೆದಿರುವುದು ಯಾರು ನಡೆಸಿರುವುದು ತಿಳಿದುಕೊಂಡಿದ್ದೇವೆ. ಆ ವಿಷಯವನ್ನೇ ಇಲ್ಲಿ ತಿಳಿಸುತ್ತಿದ್ದೇನೆ. ಪ್ರಬೋಧಾನಂದ

ಯೋಗೀಶ್ವರರು ಎಂಬ ಶರೀರದಲ್ಲಿ ಎರಡನೆ ಆತ್ಮವಾಗಿರುವ ನಾನು ಸರ್ವಜೀವರಾಶಿಗಳ ಶರೀರದಲ್ಲಿ ಎರಡನೆ ಆತ್ಮವಾಗಿ ಇದ್ದೇನೆ. ಎಲ್ಲರಲ್ಲಿ ಮಾತನಾಡದವನು ದೇವರಾದರೆ ನಾನು ಮಾತನಾಡುವವನಾಗಿದ್ದೇನೆ. "ಪ್ರಬೋಧಾನಂದ ಯೋಗೀಶ್ವರರು ಎಂಬ ಶರೀರವು ನನ್ನದೇ. ನನ್ನ ಶರೀರದಲ್ಲಿ ಜೀವಿಯು ಸಹ ಇದ್ದಾನೆ. ಆದರೆ ಯಾವಾಗಲೂ ನಾನು ಮಾತನಾಡದೆ ಆಗಾಗ ನಿಮ್ಮೊಂದಿಗೆ ಜೀವಾತ್ಮವಾಗಿರುವ ಅವನನ್ನೇ ಮಾತನಾಡೆಂದು ಹೇಳುತ್ತಿರುತ್ತೇನೆ. ಆತನು ಅಂದರೇ ಜೀವಾತ್ಮ ನನ್ನ ಆಜ್ಞೆಯಿಂದ ಮಾತನಾಡುತ್ತಿರುತ್ತೇನೆ. ಆದರೆ ಪ್ರಬೋಧಾನಂದ ಯೋಗೀಶ್ವರರ ಶರೀರದಿಂದ ನಾನು ಯಾವಾಗ ಮಾತನಾಡುತ್ತಿರುತ್ತೇನೋ, ನನ್ನ ಪಕ್ಕದಲ್ಲಿರುವ ಜೀವಾತ್ಮ ಯಾವಾಗ ಮಾತನಾಡುತ್ತದೋ ಯಾರಿಗೂ ಸ್ವಲ್ಪವೂ ಸಹ ತಿಳಿಯುವುದಿಲ್ಲ. ಒಂದೊಂದುಸಲ ನಾನು ಮಾತನಾಡುವಾಗ 'ನಾನು' ಎಂದು ತಿಳಿಯದೆ ನನ್ನೊಂದಿಗೆ ತರ್ಕಿಸಿ, ನನ್ನನ್ನು ಹೇಳನವಾಗಿ ಮಾತನಾಡಿದವರು ಸಹ ಇದ್ದಾರೆ. ಅವರ ಶರೀರದಲ್ಲಿ ಅವರ ಪಕ್ಕದಲ್ಲಿರುವುದು ನಾನೇಯೆಂದು, ಅವರ ಜುಟ್ಟು ನನ್ನ ಕೈಯಲ್ಲಿದೆಯೆಂದು ಅವರಿಗೆ ತಿಳಿದಿಲ್ಲ.

ಸರ್ವ ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ನನ್ನ ಶರೀರದಲ್ಲಿನ ಜೀವಾತ್ಮದಿಂದ ಹೇಳಿಸಿದ್ದೇನೆ. ಮೊದಲು ಹೇಳಿರುವುದು ನಾನೇ ಆಗಿದ್ದು ನಂತರ ಹೇಳಿರುವುದು ನನ್ನ ಪಕ್ಕದಲ್ಲಿರುವ ಜೀವಾತ್ಮ. ಜೀವಾತ್ಮ ಆದವನು ಮಾತನಾಡುವುದಕ್ಕೆ ಕೈಲಾಗದವನು. ಹಾಗೆ ಯಾವ ಕೆಲಸವನ್ನು ಮಾಡಲಾಗದವನಾಗಿ ಇದ್ದಾನೆ. ಆದರೆ ಜೀವಾತ್ಮ ಭಾವನೆಗಳನ್ನು ತಿಳಿದು ಆ ಭಾವನೆಗಳನ್ನು ನಾನೇ ಹೇಳಿದರೂ ಅದು ನಾನು ಹೇಳಿದಂತೆ ಲೆಕ್ಕಿಸಲ್ಪಡುವುದಿಲ್ಲ. ಭಾವನೆ ಆತನದು ಆದ್ದರಿಂದ ಆತನೇ ಆ ಮಾತು ಮಾತನಾಡಿದಂತೆ ಲೆಕ್ಕಿಸಲ್ಪಡುತ್ತದೆ. **ಹಾಗೆಯೇ ಜೀವಾತ್ಮನಾಗಿ ಇರುವವನು ಯಾವ ಕೆಲಸವನ್ನು ಸಹ ಮಾಡದವನು. ಅವನಿಗೆ ಕಾಲು ಕೈಗಳು, ಮೂಗು, ಮುಖ ಏನೂ ಇಲ್ಲ. ಜೀವಿಯು ದುಂಡನೆಯ ಮುದ್ದೆಯಾಗಿದ್ದಾನೆ.** ಅಂಥವನ ಭಾವನೆಗಳನ್ನು ನಾನೇ

ಸ್ವೀಕರಿಸಿ ಆ ಭಾವನೆಗಳ ಪ್ರಕಾರ ಅವನ ಕೆಲಸವನ್ನು ನಾನೇ ಮಾಡುತ್ತಿದ್ದೇನೆ. **ಕೆಲಸ ನಾನೇ ಮಾಡಿದರೂ ಭಾವನೆ ಜೀವಿಯದಾದ್ದರಿಂದ ಆ ಕೆಲಸವನ್ನು ಜೀವಿಯು ಮಾಡಿದಂತೆ ಲೆಕ್ಕಿಸಲ್ಪಡುತ್ತಿದೆ.** ಕೆಲವು ವಿಷಯಗಳಲ್ಲಿ ದೇವರ ಭಾವನೆ ಪ್ರಕಾರವೇ ನಾನು ಕೆಲಸ ಮಾಡಿದರೂ, ಆ ಕೆಲಸಗಳನ್ನು ನಾನೇ ಸ್ವತಃವಾಗಿ ಕೆಲಸಮಾಡಿದಂತೆ ಲೆಕ್ಕಿಸಲ್ಪಡುತ್ತದೆ. ನನ್ನ ಶರೀರದಲ್ಲಿನ ಜೀವಾತ್ಮಕ್ಕೆ ಆತ್ಮಗ್ಗಳ ಜ್ಞಾನ ತಿಳಿಯುವುದರಿಂದ ನನ್ನ ಭಾವನೆಗಳನ್ನೇ ಆತನು ಹೊಂದಿರುವುದರಿಂದ ಆಗ ಆತನ ಕರ್ಮ ಪ್ರಕಾರವೇ ನಾನು ಮಾಡಿದರೂ ಆಗ ಆತನಿಗೆ ಕರ್ಮಗಳು ಅಂಟುವುದಿಲ್ಲ."

"ಪ್ರಪಂಚದಲ್ಲಿನ ಉಳಿದ ಪ್ರಜೆಗಳಲ್ಲಿನ ಜೀವಿಗಳು ಅಜ್ಞಾನ ಭಾವನೆಯನ್ನು ಹೊಂದಿರುತ್ತಾರೆ. ಜೀವಿಯು ಭಾವನೆಗಳು ಹೊಂದಿರುವವನೇ ಹೊರತು ಸ್ವತಃವಾಗಿ ಕೆಲಸಗಳು ಮಾಡುವುದಕ್ಕೆ ಶಕ್ತಿಯಾಗಲಿ, ಶರೀರ ಅವಯವಗಳಾಗಲಿ ಆತನಿಗೆ ಇಲ್ಲ. ಆದ್ದರಿಂದ ಅವನ ಭಾವನೆ ಪ್ರಕಾರ ನಾನೇ ಕೆಲಸ ಮಾಡುತ್ತಿದ್ದೇನೆ. ಆ ಕೆಲಸವನ್ನು ನಾನು ಮಾಡಿದರೂ ಭಾವನೆ ಜೀವಾತ್ಮದೇ ಆಗಿರುವುದರಿಂದ ಆ ಕೆಲಸ ಜೀವಿಯು ಮಾಡಿದಂತಾಗುತ್ತದೆ. ಅಜ್ಞಾನ ಜೀವಿಗಳ ಭಾವನೆಗಳು ಅಜ್ಞಾನದಿಂದಲೇ ಕೂಡಿಕೊಂಡಿರುವುದರಿಂದ, ಆತನ ಲೆಕ್ಕದಲ್ಲಿ ಸೇರಿದ ಕೆಲಸಗಳು ಸಹ ಅಜ್ಞಾನದಿಂದಲೇ ಕೂಡಿಕೊಂಡಿರುತ್ತವೆ. ಅಂತಹ ಅಜ್ಞಾನ ಕೆಲಸಗಳಲ್ಲಿ ಸಹ ಕೆಲವು ಒಳ್ಳೆಯ ಕೆಲಸಗಳು ಇರುತ್ತವೆ, ಕೆಲವು ಕೆಟ್ಟ ಕೆಲಸಗಳು ಇರುತ್ತವೆ. ಒಳ್ಳೆಯ ಕೆಲಸಗಳಿಂದ ಬರುವ ಫಲಿತದಲ್ಲಿ ಪುಣ್ಯ ಬರುತ್ತಿದೆ. ಕೆಟ್ಟ ಕೆಲಸಗಳಿಂದ ಬರುವ ಫಲಿತದಲ್ಲಿ ಪಾಪ ಬರುತ್ತಿದೆ. ಈ ವಿಧವಾಗಿ ನಾನು ಮಾಡಿದ ಕೆಲಸಗಳಲ್ಲಿನ ಫಲಿತಗಳು ಜೀವಿಯನ್ನು ಸೇರುತ್ತಿವೆ. ಆದರೆ ಜೀವಿಯ ಭಾವನೆಗೆ ಸಂಬಂಧ ಇಲ್ಲದಂತೆ ನಾನು ಸ್ವತಃವಾಗಿ ಮಾಡುವ ಕೆಲಸಗಳು ಅನೇಕ ಇವೆ. ಅವುಗಳಿಂದ ನನಗೆ ಎಂತಹ ಪಾಪ ಬರುವುದಿಲ್ಲ. ಎಂತಹ ಪುಣ್ಯವು ಬರುವುದಿಲ್ಲ. ಪ್ರತಿ ಕಾರ್ಯದಲ್ಲಿಯೂ ಅಗ್ನಿಗೆ ಹೊಗೆ ಅಂಟಿಕೊಂಡಿರುವಂತೆ ಪಾಪಪುಣ್ಯಗಳು ಅಂಟಿಕೊಂಡಿರುತ್ತವೆ. ಆದರೆ

ಕರ್ಮಗಳು (ಪಾಪ+ಪುಣ್ಯ) ಅಂಟದ ವಿಧಾನ ನನಗೆ ತಿಳಿದಿದೆ ಆದಕಾರಣ ನನಗೆ ಎಂತಹ ಕೆಲಸದಲ್ಲಿನ ಪಾಪವಾಗಲಿ, ಪುಣ್ಯವಾಗಲಿ ಅಂಟುವುದಿಲ್ಲ. ಈ ವಿಧವಾಗಿ ಶರೀರದಲ್ಲಿ ನಾನು ಇರುತ್ತಾ ನನ್ನೊಂದಿಗೆ ಜೀವಾತ್ಮ ಇರುವಾಗ, ನಮ್ಮ ಇಬ್ಬರೊಂದಿಗೆ ಪರಮಾತ್ಮ ಸಹ ಶರೀರದಲ್ಲಿಯೇ ಇದ್ದಾನೆ. ನಿಜಕ್ಕೆ ಶರೀರದಲ್ಲಿ ಎಲ್ಲರಲ್ಲಿಯೂ ನಡೆಯುವ ವಿಧಾನ, ಇರುವ ನಿರ್ಮಾಣ, ಹೀಗೆಯೇ ಇದೆ.”

“ಈ ಆತ್ಮಗಳ ವಿಷಯ ಯಾರು ತಿಳಿದುಕೊಳ್ಳುತ್ತಾನೋ ಅವನು ಆತ್ಮಜ್ಞಾನಿ ಅನ್ನಲ್ಪಡುತ್ತಾನೆ. ಆದರೆ ಈದಿನ ಪ್ರಪಂಚದಲ್ಲಿ ಆತ್ಮಗಳ ವಿಧಾನ ತಿಳಿದವರು ಬಹಳ ಅಪರೂಪವಾಗಿದ್ದಾರೆ. ಒಂದು ವಿಧವಾಗಿ ಇಲ್ಲವೆಂದೇ ಹೇಳಬಹುದು. ಹಿಂದೂ ಮತದಲ್ಲಿ ದೊಡ್ಡ ಜ್ಞಾನಿಗಳೆನಿಸಿಕೊಂಡ ಸಿದ್ಧಾಂತಕರ್ತರಿಗು ಶರೀರದಲ್ಲಿನ ಆತ್ಮಗಳ ವಿಷಯ, ಶರೀರದಲ್ಲಿಯೇ ಇರುವ ದೇವರ ವಿಷಯ ತಿಳಿಯದೆ ಒಬ್ಬರು ಅದ್ವೈತವೆಂದರೇ ಮತ್ತೊಬ್ಬರು ವಿಶೀಷ್ಟಾದ್ವೈತ ಎಂದಿದ್ದಾರೆ. ಇನ್ನೊಬ್ಬರು ದ್ವೈತ ಎಂದಿದ್ದಾರೆ. ಅವರ ನಂತರ ಜ್ಞಾನಿಗಳಾಗಿ ಬಂದವರು, ಗುರುಗಳಾಗಿ ಪ್ರಕಟಿಸಿಕೊಂಡಿದ್ದಾರೆ. ಬೋಧಕರಾಗಿ ಹೇಳಿಕೊಂಡ ಅವರು ಹೊರಗೆ ದೇವತೆಗಳನ್ನು ಆಧಾರ ಮಾಡಿಕೊಂಡು ಅವರ ಭಕ್ತಿಯನ್ನು ದೇವತೆಗಳ ಮೇಲೆ ತೋರಿಸುತ್ತಿದ್ದಾರೆ. ಯಾರಿಗೂ ಸಹ ಶರೀರದಲ್ಲಿಯೇ ಜ್ಞಾನವೆಲ್ಲಾ ಇದೆಯೆಂದು ತಿಳಿದಿಲ್ಲ. ಆತ್ಮಗಳೆಂದು ಹೆಸರಿಗೆ ಅಂದರೂ ಆತ್ಮವೆಂದರೇ ದೆವ್ವವೆಂದು ಅಂದುಕೊಳ್ಳುವವರು ಇದ್ದಾರೆ. ಆತ್ಮಗಳ ಜ್ಞಾನ ಎಂದರೇ ದೇವ್ವಗಳ ಜ್ಞಾನ ಎನ್ನುವವರು ಇದ್ದಾರೆ. ಒಟ್ಟಾರೆ ಆಧ್ಯಾತ್ಮಿಕದಲ್ಲಿ ಸಿದ್ಧಾಂತಕರ್ತರೆನ್ನುವ ವರಿಂದ ಯಾರಿಗೂ ಆತ್ಮಜ್ಞಾನ ತಿಳಿದಿಲ್ಲ. ಆದ್ದರಿಂದ ನನ್ನ ದೃಷ್ಟಿಯಲ್ಲಿ ಯಾರೂ ಆತ್ಮಜ್ಞಾನಿಗಳಲ್ಲ. ಆತ್ಮಜ್ಞಾನ ಸ್ವಲ್ಪವೂ ಇಲ್ಲದ ಇಂತಹ ಸಮಾಜದಲ್ಲಿ ನಾನೇ ಸ್ವತಃವಾಗಿ ತಿಳಿಸಬೇಕೆಂದುಕೊಂಡಿದ್ದೇನೆ.

ನಾನು ಅಂದುಕೊಂಡ ಕೆಲಸವನ್ನು ತಕ್ಷಣ ಮಾಡುವವನಾದ್ದರಿಂದ ನನ್ನ ಶರೀರದ ಮೂಲಕ ನಾನೇ ಮೂರು ಆತ್ಮಗಳ ವಿಷಯವನ್ನು ತಿಳಿಸಿದ್ದೇನೆ.

ನನ್ನ ಶರೀರದಲ್ಲಿ ಜಾಗ್ರತೆಯಾಗಿ ನನ್ನ ಕೆಲಸಗಳನ್ನು, ನನ್ನ ಮಾತುಗಳನ್ನು ಗಮನಿಸುತ್ತಿರುವ ಜೀವಾತ್ಮನಿಗೆ ಮೂರು ಆತ್ಮಗಳ ವಿಷಯ ತಿಳಿದುಹೋಗಿದೆ. ಆದಕಾರಣ ನನ್ನ ಪಕ್ಕದಲ್ಲಿರುವ ಜೀವಾತ್ಮ ಕೆಲವು ಸಂದರ್ಭಗಳಲ್ಲಿ ಮೂರು ಆತ್ಮಗಳನ್ನು ತಿಳಿಸಿದಾಗ ಇನ್ನು ಕೆಲವು ಸಂದರ್ಭಗಳಲ್ಲಿ ನಾನೇ ಮಾತನಾಡಿ ಬಹಳಜನರಿಗೆ ಮೂರು ಆತ್ಮಗಳ ವಿಷಯಗಳನ್ನು ಹೇಳಿದ್ದೇನೆ. ನನ್ನ ಶರೀರ ಎಲ್ಲರ ಶರೀರಗಳೊಂದಿಗೆ ಸಮಾನವಾಗಿರುವುದರಿಂದ, ನನ್ನ ಮಾತುಗಳು ಜೀವಿಗಳು ಮಾತನಾಡುವ ಮಾತುಗಳಿರುವಂತೇ ಇರುವುದರಿಂದ, ನನ್ನನ್ನು ಸಹ ಸಾಧಾರಣ ಮನುಷ್ಯನನ್ನಾಗಿ ಲೆಕ್ಕಿಸಿ, ನಾನು ಹೇಳಿದ ಮೂರು ಆತ್ಮಗಳ ವಿಷಯವನ್ನು ಪರಮತ ಬೋಧನೆಯೆಂದು ಹೇಳನೆ ಮಾಡಿ ನನ್ನನ್ನು ಅವಮಾನಿಸಿದವರು ಸಹ ಇದ್ದಾರೆ. ಈ ವಿಷಯವನ್ನು ಭಗವದ್ಗೀತೆಯಲ್ಲಿನ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ ಹೇಳಿದ್ದೇನೆ."

**ಶ್ಲೋ॥ 11. ಅವಜಾನಂತಿ ಮಾಂ ಮೂಢಾ ಮಾನುಷೀಮ್ ತನು ಮಾಶ್ರೀತಮ್।**
**ಪರಂ ಭಾವ ಮಜಾನಂತೋ ಮಮ ಭೂತಮಹೇಶ್ವರಮ್॥**

**ಭಾವಾರ್ಥ :– "ಸರ್ವ ಜೀವರಾಶಿಗಳನ್ನು ನಡೆಸುವ ಅಧಿಪತಿಯಾಗಿರುವ ನಾನು ನರ ಶರೀರ ಧರಿಸಿರುವುದರಿಂದ ನನ್ನ ಹಿರಿಮೆಯನ್ನು, ನನ್ನ ಶ್ರೇಷ್ಠತ್ವವನ್ನು ತಿಳಿಯದ ಅಜ್ಞಾನಿಗಳು ನನ್ನನ್ನು ಅವಮಾನಿಸುತ್ತಿದ್ದಾರೆ."**

ಹೆಚ್ಚಾಗಿ ಹಿಂದೂಗಳಲ್ಲಿಯೇ ಆತ್ಮವನ್ನು ಅವಮಾನಿಸಿದವರು ಇದ್ದಾರೆ. ನಾನು ಜೀವಾತ್ಮನಾಗಿದ್ದು ಶರೀರದಲ್ಲಿರುವ ಆತ್ಮಗಳ ವಿಷಯವನ್ನು ಒಂದು ಸಿದ್ಧಾಂತರೂಪದಲ್ಲಿ ಹೇಳಿದ್ದೇನೆ. ಸಿದ್ಧಾಂತ ಎಂದು ಹೆಸರಿಟ್ಟು ಹೇಳಿದರೆ ಪ್ರಜೆಗಳು ಗುರುತಿಸುತ್ತಾರೆಂದು ನಾನು ಹೇಳುವುದು **"ತ್ರೈತ ಸಿದ್ಧಾಂತ"** ಎಂದು ಸಹ ಹೇಳಿದ್ದೇನೆ. ನಾನು ಜೀವಾತ್ಮನಾಗಿದ್ದರೂ ಎಲ್ಲರ ಜೀವಾತ್ಮಗಳಿಗಿರುವ ಅಹಂ ನನ್ನಲ್ಲಿ ಇಲ್ಲ. ನನಗೆ ಆತ್ಮಜ್ಞಾನ ಚೆನ್ನಾಗಿ ತಿಳಿದಿದೆ. ನಾನಿರುವ ಶರೀರದಲ್ಲಿಯೇ ನನ್ನ ಆತ್ಮದ ಮೂಲಕ ಆತ್ಮಜ್ಞಾನ ನನಗೆ ತಿಳಿದಿದೆ. ಆಂದಿನಿಂದ

ನಾನು ಸ್ವತಃವಾಗಿ ಏನು ಮಾಡಲಿಲ್ಲ. ಏನು ಮಾತನಾಡಲಿಲ್ಲ. ಎಲ್ಲಾ ಆತ್ಮ ಆಜ್ಞೆಯಾಗಿಯೇ ಹೇಳುತ್ತಿದ್ದೇನೆ. ನನ್ನಲ್ಲಿನ ಅಹಮ್ ಪೂರ್ತಿಯಾಗಿ ಹೋಗಿದೆ. ಆದುದರಿಂದ ಆತ್ಮದ ಹಾಗೆ ನನಗೂ ಸಹ ಕರ್ಮಗಳು ಅಂಟುವುದಿಲ್ಲ. ಪಾಪಪುಣ್ಯಗಳೆಂಬ ಕರ್ಮಗಳನ್ನು ಅಂಟದ ಸ್ಥಿತಿಗೆ ನನ್ನನ್ನು ಸೇರಿಸಿರುವುದು ನನ್ನಲ್ಲಿನ ಆತ್ಮವೇಯೆಂದು ಧೈರ್ಯವಾಗಿ ಹೇಳುತ್ತಿದ್ದೇನೆ. ಇದಕ್ಕೂ ಮೊದಲು ಮನುಷ್ಯರು ನನ್ನನ್ನು ಅವಮಾನಿಸುತ್ತಿದ್ದಾರೆಂದು ಹೇಳಿರುವುದು ಸ್ವತಃವಾಗಿ ನನ್ನ ಅಧಿಕಾರಿಯಾದ ಆತ್ಮವೇ. ಈಗ ನಿಮ್ಮೊಂದಿಗೆ ಮಾತನಾಡೆಂದು ಆಜ್ಞೆ ಮಾಡಿರುವುದು ನನ್ನ ಅಧಿಕಾರಿಯಾದ ನನ್ನ ಅಧಿಪತಿಯಾದ ಆತ್ಮವೇ. ನಾನು ಮಾತನಾಡುವ ಮಾತುಗಳು ನನ್ನ ಆತ್ಮ ನನಗೆ ಹೇಳಿರುವವೇ ಹೊರತು ಸ್ವತಃವಾಗಿ ನನ್ನವಲ್ಲ. ನನ್ನ ಆತ್ಮದ ಅನುಮತಿಯಿಂದ ಜೀವಿಯಾದ ನಾನು ತ್ರೈತ ಸಿದ್ಧಾಂತವೆಂಬ ಮೂರು ಆತ್ಮಗಳ ಸಿದ್ಧಾಂತವನ್ನು ಶಾಸ್ತ್ರಬದ್ಧವಾಗಿ **"ತ್ರೈತ ಸಿದ್ಧಾಂತ ಭಗವದ್ಗೀತೆ"ಯಲ್ಲಿ** ಬರೆಯುವುದು ನಡೆದಿದೆ. ಆದರೆ "ತ್ರೈತ ಸಿದ್ಧಾಂತ ಭಗವದ್ಗೀತೆ"ಯನ್ನು ಸಂತೋಷವಾಗಿ ಸ್ವೀಕರಿಸಿ ಓದಿದವರು ಕೆಲವರಿದ್ದಾರೆ. ಆದರೆ ಮತ್ತೆ ಕೆಲವರು ಅಜ್ಞಾನ ತುಂಬಿದವರಾಗಿ, ಅಹಂ ಭಾವನೆಯಿಂದ ಅಸೂಯೆ ಗುಣದಿಂದ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಪರಮತಕ್ಕೆ ಸಂಬಂಧಿಸಿರುವುದೆಂದು ಬೀದಿಯೊಳಗೆ ಬಿಸಾಡಿದವರು ಇದ್ದಾರೆ, ಬೆಂಕಿ ಇಟ್ಟು ಸುಟ್ಟವರು ಇದ್ದಾರೆ.

ಅಂತಹವರ ಶರೀರದಲ್ಲಿ ಅವರನ್ನು ನಡೆಸುತ್ತಿರುವವನು, ಮಾತನಾಡುತ್ತಿರುವವನು ಆತ್ಮವೇ ಆದರೂ, ಅವರ ಭಾವನೆ ಪ್ರಕಾರವೇ ಆತ್ಮ ಕೆಲಸಗಳು ಮಾಡುವುದು ನಡೆಯುತ್ತಿದೆ. ಶರೀರದಲ್ಲಿನ ಪ್ರತಿಕೆಲಸ ಆತ್ಮವೇ ಮಾಡಿದರೂ ತನ್ನ ಭಗವದ್ಗೀತೆಯನ್ನು ಅವರ ಭಾವನೆ ಪ್ರಕಾರವೇ ಬೀಸಾಕುವುದು, ಅವರ ಭಾವನೆ ಪ್ರಕಾರ ಸುಟ್ಟುಹಾಕುವುದು ಮಾಡಿರುವುದು ಆತ್ಮವೇ. ಆದರೇ ದೈವಧರ್ಮದ ಪ್ರಕಾರ (ದೇವರ ಕಾನೂನಿನ ಪ್ರಕಾರ) ಜೀವಿಯ ಭಾವನೆಗೆ ಅನುಗುಣವಾಗಿ ಆತ್ಮ ಮಾಡಿದರೂ ಆ ಕೆಲಸ ಜೀವಿಯು ಮಾಡಿದಂತೇ

ಲೆಕ್ಕಿಸಲ್ಪಡುತ್ತದೆ ಎಂದು ಮೊದಲೇ ಹೇಳಿದ್ದೇವೆ. ಆದ್ದರಿಂದ ಭಗವದ್ಗೀತೆಯನ್ನು ಅವಮಾನಿಸಿದ ಕಾರಣದಿಂದ ಅವರಿಗೆ ಬರುವ ಫಲಿತ 'ಭಯಂಕರವಾದ ಪಾಪ' ಎಂದು ಹೇಳಬಹುದು. ಅದು ಕ್ಷಮಿಸಲಾರದ ಪಾಪವೆಂದು ಮಧ್ಯ ದೈವಗ್ರಂಥದಲ್ಲಿ ಹೇಳಲಾಗಿದೆ. ಅಲ್ಲಿ ಹೇಳಿದ ವಿಷಯ ಹೀಗೆ ಇದೆ ನೋಡಿರಿ. **ಅಲ್ಲಿ ಹೇಳಿರುವುದು ಯಾರೋ ಅಲ್ಲ ನಿಮ್ಮಲ್ಲಿನ ಆತ್ಮವೇ ಎಂದು ಹೇಳುತ್ತಿದ್ದೇನೆ. "ಮನುಷ್ಯರು ಮಾಡುವ ಪ್ರತಿ ಪಾಪವನ್ನು, ದೂಷಣೆಯನ್ನು ಅವರಿಗೆ ಕ್ಷಮಿಸಲ್ಪಡುತ್ತದೆ ಆದರೇ, ಆತ್ಮ ವಿಷಯವಾದ ದೂಷಣೆಗೆ ಪಾಪ ಕ್ಷಮಾಪಣೆ ಇಲ್ಲ. ಮನುಷ್ಯರಿಗೆ ವಿರುದ್ಧವಾಗಿ ಮಾತನಾಡುವವನಿಗೆ ಕ್ಷಮಾಪಣೆ ಇದೆ ಆದರೇ, ದೇವರಿಗೆ ವಿರೋಧವಾಗಿ ಮಾತನಾಡುವವನಿಗೆ ಈ ಯುಗದಲ್ಲಾದರೂ, ಮುಂಬರುವಂತಹ ಯುಗದಲ್ಲಾದರೂ ಪಾಪಕ್ಷಮಾಪಣೆ ಇಲ್ಲ."**

ಆ ವಾಕ್ಯವನ್ನು ಹೇಳಿದವನು ಆತ್ಮವೇಯೆಂದು ನಾನು ಹೇಳುತ್ತಿದ್ದೇನೆ. ನಾನು ಆತ್ಮಪಕ್ಕದಲ್ಲಿಯೇ ಜೀವಿಯಾಗಿದ್ದೇನೆ ಆದ್ದರಿಂದ ಆ ವಿಷಯ ಸ್ವತಃವಾಗಿ ಆತ್ಮವೇ ಹೇಳಿದೆಯೆಂದು ರೂಢೀಯಾಗಿ ಹೇಳುತ್ತಿದ್ದೇನೆ. ನಾನು ಜೀವಾತ್ಮವಾಗಿ ಶರೀರದಲ್ಲಿ ಒಂದು ಮೂಲೆಯಲ್ಲಿರುವವನು, ಶರೀರಕ್ಕೆ ಅಧಿಪತಿ ಆತ್ಮವೇ. ಆತ್ಮ ಅನುಮತಿಯಿಂದ ನಾನು ಶರೀರದಲ್ಲಿ ನಿವಾಸಿಸುತ್ತಿದ್ದೇನೆ. ನನಗೆ ಎಲ್ಲರಂತೆ ಹೊರಗಿನ ಭಕ್ತಿಯಿಲ್ಲ. ಶರೀರದಲ್ಲಿಯೇ ನನ್ನ ಭಕ್ತಿಯೆಲ್ಲವೂ ಇದೆ. ಶರೀರದಲ್ಲಿಯೇ ನನ್ನ ಜ್ಞಾನವೆಲ್ಲವೂ ಇದೆ. ಆದುದರಿಂದ ಶರೀರದಲ್ಲಿ ಈಶ್ವರನಾಗಿ (ಅಧಿಪತಿಯಾಗಿ) ರುವ ಆತ್ಮದ ಬಗ್ಗೆ ಭಕ್ತಿಹೊಂದಿದ್ದೇನೆ. ಉಳಿದ ಮನುಷ್ಯರು ಶರೀರದಲ್ಲಿನ ಆತ್ಮವನ್ನೇ ಈಶ್ವರನೆಂದು ತಿಳಿಯದೆ, ಶರೀರದ ಹೊರಗೆ ಈಶ್ವರನು (ದೇವರು) ಇದ್ದಾನೆಂದು ಅಂದುಕೊಳ್ಳುತ್ತಿದ್ದಾರೆ. ಶರೀರದ ಹೊರಗಡೆ ಇರುವ ದೇವರನ್ನು ಕೆಲವರು ನಿರಾಕಾರನೆಂದು, ನಿರ್ಗುಣನೆಂದು ಅಂದರೇ, ಕೆಲವರು ಅಲ್ಲ ದೇವರು ಸಾಕಾರನು ಸಗುಣನು ಎಂದು ಹೇಳುತ್ತಿದ್ದಾರೆ. ಅಷ್ಟುಕ್ಕು ಆ ದೇವರ್‍ಯಾರೆಂದು ವಿಚಾರಿಸಿದರೆ ವಿಷ್ಣುವೆಂದು ವಿಶಿಷ್ಟಾದ್ವೈತರು, ದ್ವೈತರು ಅಂದರೇ, ಆಕಾರ ಇಲ್ಲದಂತೆ ದುಂಡಾಗಿ, ಲಿಂಗದಂತಿರುವ ಶಿವನೆಂದು ಅದ್ವೈತರು

ಹೇಳುತ್ತಿದ್ದಾರೆ. ಹೊರಗಡೆ ತ್ರಿಮೂರ್ತಿಗಳಾಗಿರುವ ಶಿವ, ಕೇಶವರೆನ್ನುವವರು ದೇವರೆಂದು ಹೇಳಿಕೊಳ್ಳುತ್ತಿದ್ದಾರೆ. ವಾಸ್ತವಕ್ಕೆ ಆ ದೇವತೆಗಳು ಸಹ ದೇವರಿಂದ ಸೃಷ್ಟಿಸಲ್ಪಟ್ಟಿರುವವರೇ ಆಗಿರುವುದರಿಂದ ಅವರನ್ನು ಹಾಗೆ ಪ್ರಕಟಿಸುವ ಅದ್ವೈತ, ದ್ವೈತಸಿದ್ಧಾಂತಗಳು ನಿಜವಾದ ಶಾಸ್ತ್ರಬದ್ಧ ಸಿದ್ಧಾಂತಗಳು ಅಲ್ಲವೆಂದು ತಿಳಿಯುತ್ತಿದೆ.

ಈ ವಿಧವಾಗಿ ಮೊದಲಿನಿಂದ ಇರುವ ಸಿದ್ಧಾಂತಗಳು ಸರಿಯಾದವಲ್ಲ ಆದಕಾರಣ ಆತ್ಮ ತಾನು ಸ್ವತಃವಾಗಿ **"ತ್ರೈತ ಸಿದ್ಧಾಂತ"** ವನ್ನು ಪ್ರಕಟಿಸುವುದು ನಡೆದಿದೆ. ಅದಕ್ಕುಮುನ್ನ ದ್ವೈತ, ಅದ್ವೈತ ಸಿದ್ಧಾಂತಗಳನ್ನು ತಿಳಿದ ನಾನು ಅವುಗಳನ್ನು ನಂಬಲಿಲ್ಲ. ಏಕೆಂದರೇ! ಸಿದ್ಧಾಂತಕರ್ತರೆನ್ನುವವರ ಜೀವಾತ್ಮಗಳು ಅಹಂ ಭಾವನೆಯಿಂದ ಮಾತನಾಡಿದ ಮಾತುಗಳಾಗಿ ಇರುವುದರಿಂದ ಅವುಗಳ ಮೇಲೆ ನನಗೆ ಅನೇಕ ಪ್ರಶ್ನೆಗಳು, ಅನುಮಾನಗಳು ಬರುತ್ತಿದ್ದವು. ಸುಮಾರು 37 ವರ್ಷಗಳ ಕೆಳಗೆ ತ್ರೈತ ಸಿದ್ಧಾಂತವನ್ನು ಆತ್ಮ ಸ್ವತಃವಾಗಿ ಪ್ರಕಟಿಸಿದಾಗ ನನಗೆ ಸತ್ಯ ತಿಳಿದಿದೆ. ಮೂರು ಆತ್ಮಗಳ ಜ್ಞಾನವನ್ನು ಸ್ವಲ್ಪಕ್ಕೆಸ್ವಲ್ಪ ತಿಳಿದ ಜೀವಾತ್ಮನಾಗಿ ನಾನೆಷ್ಟೋ ಸಂತೋಷಿಸಿದ್ದೇನೆ. ನನ್ನ ಕರ್ಮದಪ್ರಕಾರ ನಾನು ಅನುಭವಿಸುವ ಕಷ್ಟಗಳನ್ನು ಲೆಕ್ಕಮಾಡದೆ ನನ್ನ ದೃಷ್ಟಿಯೆಲ್ಲವೂ ಶರೀರಕ್ಕೆ ಅಧಿಪತಿಯಾದ ಆತ್ಮಮೇಲೆಯೇ ಕೇಂದ್ರೀಕರಿಸಿರುವುದರಿಂದ ನನ್ನ ಕರ್ಮಗಳಿಂದ ನಾನು ಹೊರಬೀಳುವುದೇ ಅಲ್ಲದೆ ನನಗೆ ಆತ್ಮಜ್ಞಾನ ಪೂರ್ತಿಯಾಗಿ ತಿಳಿದಿದೆ.

**ಪ್ರಶ್ನೆ :– ನೀವು ಮಾತನಾಡುವುದು ತೆಲುಗು ಭಾಷೆಯೇ ಆದರೂ, ಎಲ್ಲಾ ಪದಗಳು, ಎಲ್ಲಾ ವಾಕ್ಯಗಳು ತೆಲುಗು ಭಾಷೆಯೇಯಾದರೂ ನಾವು ಯಾವುದೊ ಹೊಸದಾಗಿ ಕೇಳಿದಂತಿದೆ. ಮಾತನಾಡುವುದು ಆತ್ಮವೇ ಎನ್ನುತ್ತೀರ ಆದರೂ ಭಾವನೆ ಜೀವಿದು ಆಗುವುದರಿಂದ ಜೀವಿಯೇ ಮಾತನಾಡುತ್ತಿದ್ದಾನೆ ಎನ್ನುತ್ತೀರ. ಮತ್ತೊಂದುಬಾರಿ ಆತ್ಮವೇ ಮಾತನಾಡುತ್ತಿದೆ ಜೀವಾತ್ಮ ಅಲ್ಲ ಎನ್ನುತ್ತೀರ. ನೀವು ಎಷ್ಟೋ ವಿವರವಾಗಿ ಹೇಳುತ್ತಿದ್ದರೂ ನಮ್ಮ ಬುದ್ಧಿ ಅದನ್ನು ಗ್ರಹಿಸಿಕೊಳ್ಳಲಾರದೆಹೋಗುತ್ತಿದೆ. ಒಟ್ಟಾರೆ ಹೊಸ ಸಿದ್ಧಾಂತ ತ್ರೈತ ಸಿದ್ಧಾಂತವೆಂದು ತಿಳಿದಿದೆ. ತ್ರೈತ ಸಿದ್ಧಾಂತವನ್ನು**

**ಪ್ರತಿಪಾದಿಸಿದವರು ಪ್ರಬೋಧಾನಂದ ಯೋಗೀಶ್ವರರೆಂದು ತಿಳಿದಿದೆ. ಪ್ರಬೋಧಾನಂದ ಯೋಗೀಶ್ವರರು ಮನುಷ್ಯನಾ? ಅಲ್ಲವಾ! ಎಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ನೀವು ಆತ್ಮನಾಗಿ ಉತ್ತರ ಹೇಳುತ್ತೀರೋ, ಜೀವಾತ್ಮನಾಗಿ ಉತ್ತರ ಹೇಳುತ್ತೀರೋ ನೀವೇ ನಿರ್ಣಯಿಸಿಕೊಂಡು ಹೇಳಿರಿ?**

**ಉತ್ತರ :–** ಸೂತ್ರದ ಪ್ರಕಾರ ನಾನು ಜೀವಾತ್ಮ ಮಾತನಾಡುತ್ತಿದ್ದೇನೆ. ನನ್ನ ಭಾವನೆ ಪ್ರಕಾರ ಪ್ರಬೋಧಾನಂದ ಯೋಗೀಶ್ವರರು ಎನ್ನುವುದು ಹೆಸರಲ್ಲ ಬಿರುದಾಗಿ ಹೇಳಬಹುದು. ಹೆಸರು ಚಿಕ್ಕಮಗು ಇರುವಾದ ಜನ್ಮಿಸಿದ ಸ್ವಲ್ಪದಿನಗಳಿಗೆ ನಾಮಕರಣ ಮಾಡುವುದು ನಡೆಯುತ್ತದೆ. ಶರೀರದೊಳಗೆ ಎಲ್ಲವೂ ಅಣುಅಣುವಿನಲ್ಲೂ ವ್ಯಾಪಿಸಿರುವವನು ಆತ್ಮವೇ. ಆದುದರಿಂದ ಶರೀರಕ್ಕೆ ಅಧಿಪತಿ ಆತ್ಮವೇ ಆಗುತ್ತದೆ. ಜೀವಿಯು ಶರೀರದಲ್ಲಿ ಒಂದುಮೂಲೆಯಲ್ಲಿ ಸಿಲುಕಿಕೊಂಡಂತೆ ಇದ್ದಾನೆ. ಶರೀರ ಯಾರದಾದರೆ ಶರೀರಕ್ಕೆ ಇಟ್ಟಿರುವ ಹೆಸರು ಅವರದೇ ಆಗುತ್ತದೆ. ಆದುದರಿಂದ ಮೊದಲು ಹುಟ್ಟಿದಾಗ ಇಟ್ಟಿರುವ ಹೆಸರು "ಪೆದ್ದನ್ನ". "ಪೆದ್ದನ್ನ" ಎಂಬ ಹೆಸರು ಶರೀರದಲ್ಲಿನ ಆತ್ಮಕ್ಕೇ ಅನ್ವಯಿಸುತ್ತದಾದ್ದರಿಂದ ಆ ಹೆಸರು ಜೀವಿದು ಅಲ್ಲವೆಂದು ಹೇಳಬಹುದು. ಶರೀರದೊಳಗಿರುವ ಜೀವಿಗೆ ಹೆಸರೇ ಇಲ್ಲ. ನಾವು ಜೀವಿಗೆ ಈ ಹೆಸರು ಇಟ್ಟಿದ್ದೇವೆಂದುಕೊಂಡರೂ ಅದು ಆತ್ಮಕ್ಕೇ ಅನ್ವಯಿಸುತ್ತದೆ. ಶರೀರದಲ್ಲಿನ ಆತ್ಮ ಸ್ವಲ್ಪಸಮಯ, ಜೀವಾತ್ಮ ಸ್ವಲ್ಪಸಮಯ ಮಾತನಾಡಿದರೂ ಹೆಸರು ಆತ್ಮದೇ.

**ಪ್ರಶ್ನೆ :– ಶರೀರ ಒಂದೇ ಆದರೂ ಅದೇ ಶರೀರದಲ್ಲಿ ಜೀವಾತ್ಮ ಮಾತನಾಡುತ್ತಿದ್ದಾನೆ. ಹಾಗೆಯೇ ಆತ್ಮ ಮಾತನಾಡುತ್ತಿದ್ದಾನೆ. ತ್ರೈತ ಸಿದ್ಧಾಂತವನ್ನು ಇಬ್ಬರು ಹೇಳಿದ್ದಾರೆ. ಸಿದ್ಧಾಂತವನ್ನು ಹೇಳುವುದು ಮುಖ್ಯವಾದ ವಿಷಯವಾದ್ದರಿಂದ ಆಗ ಸಿದ್ಧಾಂತವನ್ನು ಹೇಳಿರುವುದು ಆತ್ಮವೆಂದು ಅಂದುಕೊಳ್ಳಬೇಕಾ? ಅಥವಾ ಜೀವಾತ್ಮವೆಂದು ಅಂದುಕೊಳ್ಳಬೇಕಾ? ಹೇಳಿರಿ?**

**ಉತ್ತರ :–** ಆತ್ಮವನ್ನೇ ಅಂದುಕೊಳ್ಳಬೇಕು. ಜೀವಾತ್ಮಗೆ ಏನೂ ತಿಳಿದಿಲ್ಲ. ಆತ್ಮ ಹೇಳಿದ ನಂತರ ಜೀವಾತ್ಮಗೆ ತಿಳಿದಿದೆ. ಆದ್ದರಿಂದ ಶರೀರಕ್ಕೆ ಅಧಿಪತಿಯಾದ

ಆತ್ಮವೇ ತ್ರೈತ ಸಿದ್ಧಾಂತವನ್ನು ತಿಳಿಸಿದೆ. ಜೀವಾತ್ಮ ಎಂದಿಗೂ ಸ್ವತಃವಾಗಿ ಮಾತನಾಡಲಿಲ್ಲ. ಜೀವಾತ್ಮನ ಭಾವನೆಯ ಪ್ರಕಾರ ಆತ್ಮವೇ ಮಾತನಾಡುತ್ತಿದೆ. ಭಾವನೆ ಜೀವಾತ್ಮದು ಆಗಿರುವುದರಿಂದ ಜೀವಾತ್ಮ ಹೇಳಿದಂತಾಗುತ್ತಿದೆ. ಜೀವಾತ್ಮ ಮಾತನಾಡಿದಂತೆ ಲೆಕ್ಕಿಸುತ್ತಿದ್ದೇವೆ. ಅಷ್ಟೇ ಹೊರತು ಜೀವಿಯು ಸ್ವತಃವಾಗಿ ಎಂದಿಗೂ ಮಾತನಾಡಲಾರನು. ಶರೀರದಲ್ಲಿ ಯಾವ ಕೆಲಸ ಮಾಡಿದರೂ, ಯಾವ ಮಾತು ಮಾತನಾಡಿದರೂ ಎಲ್ಲಾ ಕಾರ್ಯಗಳನ್ನು ಆತ್ಮವೇ ಮಾಡುತ್ತಿದೆ. ತ್ರೈತಸಿದ್ಧಾಂತ ಆಧ್ಯಾತ್ಮಿಕ ಸಿದ್ಧಾಂತ ಆಗುವುದರಿಂದ ಅದು ಮುಖ್ಯವಾದ ಕಾರ್ಯ. ಸಾಧಾರಣ ಕಾರ್ಯಗಳನ್ನೇ ಮಾಡದ ಜೀವಿಯು ಮುಖ್ಯವಾದ ಕೆಲಸವನ್ನು ಮಾಡಿದ್ದಾನೆಂದು ಹೇಗೆ ಹೇಳುತ್ತೇವೆ. ಆತ್ಮವೇ ಮಾಡುವುದರಿಂದ ಆತ್ಮವೊಂದರ ಹೆಸರನ್ನೇ ಅಲ್ಲಿ ಬರೆಯುವುದು ನಡೆದಿದೆ.

**ಪ್ರಶ್ನೆ :– ಗ್ರಂಥದ ಮೇಲೆ 'ರಚಯಿತ' ಎಂದು ಬರೆದು ಹೆಸರನ್ನು ಬರೆಯುತ್ತಿದ್ದೀರ. ಅದು ಶರೀರಕ್ಕೆ ಇಟ್ಟಿರುವ ಹೆಸರಲ್ಲವೇ! ಆತ್ಮದ ಹೆಸರಲ್ಲ ಅಲ್ಲವೆ! ಈ ಮಾತಿಗೆ ನೀವೇನು ಹೇಳುತ್ತೀರಾ?**

**ಉತ್ತರ :–** ನಿಮ್ಮ ಲೆಕ್ಕದಲ್ಲಿ ಅದು ಶರೀರವೊಂದರ ಗುರುತಿಗಾಗಿ ಇಟ್ಟಿರುವ ಹೆಸರಾದರೂ, ಆ ಹೆಸರು ಆತ್ಮಕ್ಕೆ ಅನ್ವಯಿಸುತ್ತದೆ ಆದರೇ ಶರೀರಕ್ಕಾಗಲಿ, ಜೀವಾತ್ಮಕ್ಕಾಗಲಿ ಅನ್ವಯಿಸುವುದಿಲ್ಲ. ಅಲ್ಲಿ "ರಚಯಿತ ಹೆಸರು" ಎಂದು ಬರೆದ ನಂತರ **"ತ್ರಿಮತ ಏಕೈಕ ಗುರುವು"** ಎಂದು ಮೊದಲು ಬರೆದು ಅದರ ನಂತರ **ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ** ಎಂದು ಬರೆದಿರುತ್ತದೆ. ಇವೆಲ್ಲವೂ ಆ ಶರೀರದಲ್ಲಿ ಆತ್ಮ ಕೆಲಸಮಾಡಿರುವುದಕ್ಕೆ ಗುರುತಿಸುವುದಕ್ಕಾಗಿ ಆತ್ಮಕ್ಕೆ ಇಟ್ಟಿರುವ ಹೆಸರೆಂದು ತಿಳಿಯಬೇಕು.

**ಪ್ರಶ್ನೆ:– ಪ್ರಬೋಧಾನಂದ ಯೋಗೀಶ್ವರರು ಹಿಂದೂಮತದಲ್ಲಿ ಹುಟ್ಟಿದ್ದಾನೆ. ಹಿಂದೂ ಮತಕ್ಕೇ ಗುರುವಾಗಿರಬೇಕು ಆದರೇ ಮೂರು ಮತಗಳ ಗುರು ಎಂದು**

**ಬರೆಯುವುದು ಏಕೆ? ಒಂದು ಮತಕ್ಕು ಮತ್ತೊಂದು ಮತಕ್ಕು ಸ್ವಲ್ಪವೂ ಸರಿಹೋಗದೆ ಒಬ್ಬರನ್ನೊಬ್ಬರು ಅಸೂಯೆಯಿಂದ ನೋಡಿಕೊಳ್ಳುವ ಈ ಕಾಲದಲ್ಲಿ ಒಂದು ಮತದಲ್ಲಿ ಹುಟ್ಟಿದವನು ಮೂರು ಮತಗಳಿಗು ಹೇಗೆ ಹೇಳುತ್ತಾನೆ? ಇದಕ್ಕೆ ಸಮಾಧಾನ ಹೇಳಿರಿ?**

**ಉತ್ತರ :–** ಪ್ರಪಂಚದಲ್ಲಿ ಜ್ಞಾನ ಮನುಷ್ಯರಿಗು ಉಳಿದ ಎಲ್ಲಾ ಜೀವರಾಶಿಗಳಿಗು ಅಗತ್ಯವೇ ಆದರೂ ಜೀವರಾಶಿಗಳಿಗೆ ಮನುಷ್ಯರಾಗಿರುವವರು ಜ್ಞಾನವನ್ನು ತಿಳಿಸಲಾರರು. ಮನುಷ್ಯರಿಗೆ ತಿಳಿಸಬಹುದು. ಆದರೆ ಮನುಷ್ಯರಿಗೆ ಅಗತ್ಯವಾದ ಜ್ಞಾನವನ್ನು ಸೃಷ್ಠಿ ಆದಿಯಲ್ಲಿಯೇ ದೇವರು ತಿಳಿಸಿದ್ದಾನೆ. ಆದಿನ ಯಾವ ಮತವಿಲ್ಲ. ಆದ್ದರಿಂದ ದೇವರು ಹೇಳಿದ ಬೋಧನೆ ಹಿಂದೂ ಮತಕ್ಕೆಂದು ಹೇಳಲಿಲ್ಲ. ಸರ್ವಮಾನವರಿಗೂ ಅನ್ವಯಿಸುವುದಾಗಿ ಹೇಳಿದ್ದಾನೆ. ಆದುದರಿಂದ ಮನುಷ್ಯರು ಎಷ್ಟು ಮತಗಳಾಗಿ ಬದಲಾಗಿದ್ದರೂ ಎಲ್ಲಾ ಮತದಲ್ಲಿನವರು ಮನುಷ್ಯರೇ ಆಗಿರುವುದರಿಂದ ಮನುಷ್ಯರಾದವರು ಯಾವ ಮತದಲ್ಲಿದ್ದರೂ ದೇವರು ಮೊದಲು ಹೇಳಿದ ಜ್ಞಾನ ಪ್ರತಿ ಮತದಲ್ಲಿನ ಮನುಷ್ಯರೆಲ್ಲರಿಗೂ ಅನ್ವಯಿಸುತ್ತದೆ. ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಹಿಂದೂಗಳಿಗೆ ಎಷ್ಟು ಅಗತ್ಯವಾಗುತ್ತಿದೆಯೋ, ಹಾಗೆ ಮುಸ್ಲಿಮ್‌ರಿಗು ಸಹ ಅಷ್ಟೇ ಅಗತ್ಯವಾಗುತ್ತಿದೆ. ಮೂರು ಮತಗಳಲ್ಲಿ ಮೂರು ವಿಧಗಳ ಆಚಾರಗಳಿಂದ ಕೂಡಿಕೊಂಡ ಪ್ರಜೆಗಳಿದ್ದರೂ ದೇವರ ಜ್ಞಾನ ಅವರಿಗೂ ಸಹ ಅಗತ್ಯವಾಗುತ್ತಿದೆ ಅದು ಅವರಿಗೂ ಸಹ ಸಮಾನವಾಗಿ ಅನ್ವಯಿಸುತ್ತಿದೆ. ದೇವರು ಸೃಷ್ಠಿ ಆದಿಯಲ್ಲಿ ಮನುಷ್ಯರಿಗೆ ಹೇಳಿದ ಜ್ಞಾನ ಈದಿನ ಎಲ್ಲಾ ಮತದವರಿಗು ಕೆಲಸಕ್ಕೆ ಬರುವ ಜ್ಞಾನವಾಗಿಯೇ ಇದೆ. ದೇವರು ಪ್ರಪಂಚವನ್ನು ತಯಾರು ಮಾಡಿದಾಗ ಮನುಷ್ಯರನ್ನು ತಯಾರುಮಾಡಿ, ಅವರಿಗೆ ಬೇಕಾದ ಆಹಾರವನ್ನು ಸಹ ಕಾಳುಗಳ ರೂಪದಲ್ಲಿ ಮಾಡಿ ಕೊಟ್ಟಿದ್ದಾನೆ. ದೇವರು ಕೊಟ್ಟ ಆಹಾರ ಈದಿನ ಎಷ್ಟೋ ಮತಗಳಾಗಿ ಬೇರ್ಪಟ್ಟವರಿಗೂ ಸಹ ಕೆಲಸಕ್ಕೆ ಬರುತ್ತಿದೆ ಅಲ್ಲವೆ! ದೇವರು ಆದಿಯಲ್ಲಿ ಕೊಟ್ಟಿರುವ ಆಹಾರವೇ ಈ ದಿನ ಎಲ್ಲಾ ಮತದವರಿಗೂ

ಆಹಾರವಾಗಿರುವಂತೆ, ದೇವರು ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಈದಿನ ಯಾವ ಮತದಲ್ಲಿನವರಿಗಾದರೂ ಸರಿಹೋಗುತ್ತಿದೆ. ಆದ್ದರಿಂದ **"ಆತ್ಮ"** ಮೂರು ಮತಗಳ ಗುರುವಾಗಿದೆ. ಮೊದಲು ಹೇಳಿದ ಜ್ಞಾನ ಆ ದಿನಗಳಲ್ಲಿ ಭಗವದ್ಗೀತೆಯಾಗಿ ತಯಾರಾಗಿದೆ. ನಂತರ ಮನುಷ್ಯರು ಮತಗಳಾಗಿ ಸೀಳಿಹೋದರೂ ಅವರಿಗೋಸ್ಕರ ಅವರ ಮತ ಗ್ರಂಥಗಳು ತಯಾರಾದರೂ ಆ ಗ್ರಂಥಗಳಲ್ಲಿಯೂ ಸಹ ದೇವರು ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಇರುವುದು ವಿಶೇಷ.

**ಪ್ರಶ್ನೆ :– "ಪ್ರತಿ ಶರೀರದಲ್ಲಿ ಮೂರು ಆತ್ಮಗಳಿದ್ದರೇ ಅದೇ ಜ್ಞಾನವನ್ನು ದೇವರು ಮೊದಲು ತಯಾರು ಮಾಡಿದ ದೈವಗ್ರಂಥವಾದ ಭಗವದ್ಗೀತೆಯಲ್ಲಿಯೂ, ನಂತರ ತಯಾರಾದ ಎರಡು ದೈವಗ್ರಂಥಗಳಲ್ಲಿಯೂ ದೇವರು ಅಳವಡಿಸಿದ್ದಾನೆ" ಎಂದು ನೀವು ಹೇಳುತ್ತಿದ್ದೀರ. ಆದರೆ ತ್ರೈತ ಸಿದ್ಧಾಂತವನ್ನು ಉಳಿದ ಮತದವರು ಸಹ ತಿಳಿಯಬೇಕಾಗಿದೆ. ಉಳಿದ ಮತದವರ ವಿಷಯ ಪಕ್ಕಕ್ಕಿಟ್ಟು ಹಿಂದೂ ಮತದವರಿಗಾದರೂ ತ್ರೈತ ಸಿದ್ಧಾಂತ ತಿಳಿದಿದೆಯಾ?**

**ಉತ್ತರ :–** ದೇವರು ಮೂರು ಮತದವರಿಗು ಅರ್ಥವಾಗಬೇಕೆಂದು ತ್ರೈತ ಸಿದ್ಧಾಂತವನ್ನು ಸೃಷ್ಠಿ ಆದಿಯಲ್ಲಿಯೇ ಹೇಳಿದರೂ ಇಲ್ಲಿಯವರೆಗೂ ಮನುಷ್ಯರಿಗ್ಯಾರಿಗೂ ತಿಳಿದಿಲ್ಲವೆಂದೇ ಹೇಳುತ್ತಿದ್ದೇವೆ. ಮೂರು ಮತದವರಿಗೂ ತಿಳಿಯುವಂತೆ ಆತ್ಮಗಳು ಮೂರಾಗಿವೆ ಎಂಬ ವಿವರವನ್ನು ತಿಳಿಸುವ ಜ್ಞಾನವನ್ನು ಅವರವರ ಗ್ರಂಥಗಳಲ್ಲಿ ಬರೆಯಲ್ಪಟ್ಟರೂ ಯಾವ ಮತದವರು ಅದನ್ನು ಗುರುತಿಸಲಾರದೆ ಹೋಗುವುದು ದೊಡ್ಡ ವಿಚಿತ್ರವಾಗಿದೆ.

**ಪ್ರಶ್ನೆ :– ಮೂರು ದೈವಗ್ರಂಥಗಳಲ್ಲಿ ಒಂದೇ ವಿಧವಾದ ಮೂರು ಆತ್ಮಗಳ ತ್ರೈತ ಸಿದ್ಧಾಂತ ಇದೆಯೆಂದು ನೀವು ಹೇಳುತ್ತಾ ಇದ್ದರೆ ನಮಗೂ ಸಹ ಆ ಮಾತು ಹೊಸದಾಗಿ ಕಾಣಿಸುತ್ತಿದೆ. ಮೂರು ಮತ ಗ್ರಂಥಗಳಾಗಿರುವ, ಮೂರು ದೈವ ಗ್ರಂಥಗಳಲ್ಲಿ ತ್ರೈತ ಸಿದ್ಧಾಂತ ಹೇಗಿದೆಯೋ ನಮಗೆ ವಿವರಿಸುತ್ತೀರಾ?**

**ಉತ್ತರ :–** ಈದಿನ ಹಿಂದೂಗಳ ಗ್ರಂಥವಾಗಿ ಹೆಸರುವಾಸಿಯಾದ ಭಗವದ್ಗೀತೆಯಲ್ಲಿ ತ್ರೈತ ಸಿದ್ಧಾಂತವನ್ನೇ ಮುಖ್ಯವಾದ ಜ್ಞಾನವಾಗಿ ಹೇಳಲಾಗಿದೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳು ತ್ರೈತ ಸಿದ್ಧಾಂತಕ್ಕೆ ಬುನಾದಿಕಲ್ಲುಗಳಾಗಿವೆ.

**ಶ್ಲೋ॥ 16. ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ।**

**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋ ಕ್ಷರ ಉಚ್ಯತೇ ॥**

**ಭಾವಾರ್ಥ :– "ಲೋಕದಲ್ಲಿ ಎರಡು ವಿಧಗಳ ಪುರುಷರು ಇದ್ದಾರೆ. ಅದರಲ್ಲಿ ನಾಶವಾಗುವ ಜೀವಿಯು ಅನೇಕ ಜೀವರಾಶಿಗಳಾಗಿ ಇದ್ದಾನೆ. ನಾಶವಾಗದ ಪುರುಷನಾಗಿ ಸರ್ವ ಜೀವರಾಶಿಗಳಲ್ಲಿಯೇ ಅಕ್ಷರನೆನ್ನುವವನು ಇದ್ದಾನೆ."** ಒಬ್ಬನು ನಾಶವಾಗುವವನು, ಮತ್ತೊಬ್ಬನು ನಾಶವಾಗದಿರುವವನು ಎಂದು ಹೇಳುವ ಇಬ್ಬರು ಪುರುಷರು ಶರೀರದಲ್ಲಿಯೇ ಇದ್ದಾರೆ.

**ಶ್ಲೋ॥ 17. ಉತ್ತಮಃ ಪುರುಷ ಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ ।**

**ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**

**ಭಾವಾರ್ಥ :– "ಇಬ್ಬರು ಪುರುಷರಲ್ಲದೆ ಮತ್ತೊಬ್ಬ ಪುರುಷನು ಇದ್ದಾನೆ ಆತನು ಇಬ್ಬರು ಪುರುಷರಿಗಿಂತಲೂ ಉತ್ತಮನು. ಆತನನ್ನೇ ಪರಮಾತ್ಮಯೆಂದು ಹೇಳುತ್ತಾರೆ. ನಾಶವಿಲ್ಲದ ಮೂರನೆಯ ಪುರುಷನಾದ ಪರಮಾತ್ಮ ಮುಲ್ಲೋಕಗಳು ವ್ಯಾಪಿಸಿದ್ದಾನೆ".**

ಈ ವಿಧವಾಗಿ ಭಗವದ್ಗೀತೆಯಲ್ಲಿ ಎರಡು ಶ್ಲೋಕಗಳ ರೂಪದಲ್ಲಿ ತ್ರೈತ ಸಿದ್ಧಾಂತಕ್ಕೆ ದೇವರೇ ನಾಂದಿ ಹೇಳಿದ್ದಾನೆ. ದೇವರು ಹೇಳಿದ ತ್ರೈತ ಸಿದ್ಧಾಂತದಲ್ಲಿ ನಾಶವಾಗುವ ಆತ್ಮವನ್ನು ಕ್ಷರನೆಂದು, ನಾಶವಾಗದ ಆತ್ಮವನ್ನು ಅಕ್ಷರನೆಂದು ಹೇಳುವುದಾಗಿದೆ. ಆತ್ಮವನ್ನು ಪುರುಷನೆಂದು ಹೇಳುತ್ತಿದ್ದಾರೆ. ಎರಡು ವಿಧಗಳ ಪುರುಷರಿಗಿಂತ ಮೂರನೆಯ ಪುರುಷನು ಉತ್ತಮನಾದ್ದರಿಂದ ಆತನನ್ನು ಪುರುಷೋತ್ತಮನೆಂದು ಹೇಳಿದ್ದಾರೆ. ಈ ಮೂವರು ಪುರುಷರು

ಸರ್ವಜೀವಿಗಳ ಶರೀರಗಳಲ್ಲಿದ್ದಾರೆ. ಜೀವಾತ್ಮನಾಗಿರುವವನು ನಾಶವಾಗುವವನಾಗಿ ಇದ್ದಾನೆ. ಶರೀರಕ್ಕೆ ದೊಡ್ಡವನಾಗಿದ್ದವನು, ಶರೀರದಲ್ಲಿ ಸರ್ವಕಾರ್ಯಗಳು ಮಾಡುವವನಾದ ಆತ್ಮವೇ ನಾಶವಾಗದ ಅಕ್ಷರನಾಗಿದ್ದಾನೆ. ಇವರಿಬ್ಬರಲ್ಲದೆ, ಅಂದರೇ ಇಬ್ಬರು ಪುರುಷರು ಅಲ್ಲದೇ, ಮೂರನೆ ಪುರುಷನು ಇದ್ದಾನೆ. ಆತನು ಇಬ್ಬರ ಪುರುಷರಿಗಿಂತಲೂ ಉತ್ತಮನು, ದೊಡ್ಡವನು, ಆತ್ಮಗಿಂತಲೂ ಪರವಾಗಿರುವವನು ಎಂದು ಹೇಳುತ್ತಾ ಪುರುಷೋತ್ತಮನೆಂದೂ ಮತ್ತು ಪರಮಾತ್ಮಯೆಂದೂ ಕರೆಯಲ್ಪಡುತ್ತಿದ್ದಾನೆ.

ಈ ವಿಧವಾಗಿ ಭಗವದ್ಗೀತೆಯಲ್ಲಿ ತ್ರೈತ ಸಿದ್ಧಾಂತವನ್ನು ಹೇಳಿದ್ದರೂ ಇಂದಿನವರೆಗು ಭಗವದ್ಗೀತೆಯನ್ನು ಬೋಧಿಸುವ ಗುರುಗಳಾಗಲಿ, ಬೋಧಕರಾಗಲಿ ಸ್ವಾಮೀಜಿಗಳಾಗಲಿ ಗಮನಿಸದೆ ಗಾಳಿಗೆ ಬಿಟ್ಟಹಾಕಿದ್ದಾರೆ. ಆದುದರಿಂದ ಇಂದಿನವರೆಗು ತ್ರೈತ ಸಿದ್ಧಾಂತವನ್ನು ಕುರಿತು ಯಾರಿಗೂ ತಿಳಿಯದಂತೆ ಹೋಗಿದೆ. ನಾವು ಒಂದುಕಡೆ ಹೇಳುತ್ತಿದ್ದರೂ ಈಗಲಾದರೂ ತಿಳಿದುಕೊಳ್ಳೋಣವೆಂಬ ಆಸಕ್ತಿ ಸಹ ಇಲ್ಲವೆಂದು ಹೇಳಬೇಕು. ದೇವರು ಹೇಳಿರುವುದು, ಸಿದ್ಧಾಂತಗಳಲ್ಲಿ ಶಾಸ್ತ್ರಬದ್ಧವಾದ ತ್ರೈತ ಸಿದ್ಧಾಂತವನ್ನು ತಿಳಿಸಬೇಕೆಂಬ ಉದ್ದೇಶದಿಂದ ನಾವು ತ್ರೈತ ಸಿದ್ಧಾಂತವನ್ನು ಪ್ರಕಟಿಸುವುದು ನಡೆದಿದೆ. ಆದರೆ ಈಗಿನ ಹಿಂದೂಗಳು ಆರ್ಯ ಸಂಪ್ರದಾಯಗಳಲ್ಲಿ ಮುಳುಗಿಹೋದವರಾಗಿ ತಮಗೆ ತಿಳಿದಿರುವುದೇ ಜ್ಞಾನವೆಂದುಕೊಂಡು ಉಳಿದ ಯಾವುದನ್ನಾದರೂ ಅಜ್ಞಾನವೆನ್ನುತ್ತಿದ್ದಾರೆ. ನಾವು ತ್ರೈತ ಎನ್ನುತ್ತಲೇ ಇದು ಕ್ರೈಸ್ತರಿಗೆ ಸಂಬಂಧಿಸಿರುವುದೆಂದು ಹೇಳುತ್ತಿದ್ದಾರೆ. ತ್ರೈತ ಸಿದ್ಧಾಂತ ಭಗವದ್ಗೀತೆ ಎಂದರೇ ಭಗವದ್ಗೀತೆ ಮುಸುಗಿನಲ್ಲಿರುವ ಬೈಬಲ್ ಎನ್ನುತ್ತಿದ್ದಾರೆ. ಅಷ್ಟೋ ಇಷ್ಟೋ ಜ್ಞಾನ ಇರುವವರು, ನಾವು ಸ್ವಚ್ಛವಾದ ಹಿಂದೂಗಳು, ಹಿಂದೂ ಮತರಕ್ಷಣೆ ಮಾಡುತ್ತಿದ್ದೇವೆ ಎನ್ನುವವರೇ ಹಾಗೆ ಪ್ರವರ್ತಿಸುವುದರಿಂದ ಅವರು ತ್ರೈತ ಸಿದ್ಧಾಂತವನ್ನು ತಿಳಿದುಕೊಳ್ಳುತ್ತಿಲ್ಲ. ಇತರ ಹಿಂದೂಗಳನ್ನು ತಿಳಿದುಕೊಳ್ಳಲು ಬಿಡುತ್ತಿಲ್ಲ.

ಇನ್ನು ಕ್ರೈಸ್ತ ಮತ ವಿಷಯಕ್ಕೆ ಬಂದರೇ ಅವರ ಮತಕ್ಕೆ ಪ್ರಾಮಾಣಿಕ ಗ್ರಂಥವೆಂದು ಹೇಳಿಕೊಳ್ಳುವ ಬೈಬಲ್‌ನಲ್ಲಿ ಸಹ ತ್ರೈತ ಸಿದ್ಧಾಂತ ಇದೆ. ಆದರೆ ಅವರು ಅದನ್ನು 'ತ್ರಿತ್ವ' ಎನ್ನುತ್ತಿದ್ದಾರೆ. ಹಾಗೆ ಆಂಗ್ಲಭಾಷೆಯಲ್ಲಿ ಟ್ರಿನಿಟೀ ಎನ್ನುತ್ತಿದ್ದಾರೆ. ಟ್ರಿನಿಟೀ ಅಥವಾ ತ್ರಿತ್ವ ಎನ್ನುವುದು ಅವರಲ್ಲಿ ಒಂದು ವರ್ಗಕ್ಕೆ ಗುರುತಾಗಿ ಕೆಲವರು ಹೇಳಿಕೊಂಡರೆ, ತ್ರಿತ್ವ ಜ್ಞಾನವಾಕ್ಯವಾಗಿ ಹೇಳಿಕೊಳ್ಳುತ್ತಿದ್ದಾರೆ ಆದರೇ, ಟ್ರಿನಿಟೀ ಎಂದರೆ ಏನು? ತ್ರಿತ್ವ ಎಂದರೆ ಏನೋ ಅದರ ಅರ್ಥ ಮಾತ್ರ ಅವರಿಗೆ ತಿಳಿದಿಲ್ಲ. ತ್ರಿತ್ವ ಎಂದರೇ ಮೂರೆಂದು ತಿಳಿದರೂ ಮೂರು ಏನೋ ತಿಳಿದಿಲ್ಲ. ಕ್ರೈಸ್ತ ಬೋಧನೆಗಳನ್ನು ಹೇಳುವ ಒಬ್ಬ ಸೀನಿಯರ್ ಪಾಸ್ಟರ್‌ರವರ ಹತ್ತಿರಕ್ಕೆ ಹೋಗಿ ತ್ರಿತ್ವ ಎಂದರೆ ಏನೆಂದು ನಾವು ಕೇಳುವುದು ನಡೆದಿದೆ. ಆಗ ಆ ಪಾಸ್ಟರ್‌ರವರು "ತ್ರಿತ್ವ ಎಂದರೆ ಮೂರೆಂದು" ಹೇಳಿದ್ದಾರೆ. "ಮೂರು ಎಂದರೇ ಯಾವುವು?" ಎಂದು ಕೇಳಿದ್ದೇವೆ. ಆಗ ಆತನು **"ತಂದೆ, ಕುಮಾರನು, ಪರಿಶುದ್ಧಾತ್ಮ** ಎಂಬ ಮೂರು ಹೆಸರುಗಳು ಹೇಳಲಾಗಿದೆ. ಆ ಮೂರನ್ನು ನಾವು ಟ್ರಿನಿಟೀ ಎಂದೂ ತ್ರಿತ್ವ ಎಂದೂ ಹೇಳುತ್ತಿದ್ದೇವೆ" ಎಂದನು. "ತಂದೆ ಎಂದರೆ ಯಾರು?" ಎಂದು ಕೇಳಿದ್ದೇವೆ. ಆಗ ಆತನು "ತಂದೆ ಎಂದರೆ ದೇವರು ಎಂದೂ, ಕುಮಾರನು ಎಂದರೆ ದೇವರ ಕುಮಾರನು ಯೇಸು" ಎಂದೂ ಹೇಳಿದ್ದಾನೆ. "ಪರಿಶುದ್ಧಾತ್ಮ ಎಂದರೇ ಏನು?" ಎಂದು ಕೇಳಿದ್ದೇವೆ. ಆಗ ಪಾಸ್ಟರ್‌ರವರು ಸ್ವಲ್ಪವೂ ತಡವರಿಸದೆ "ಪರಿಶುದ್ಧಾತ್ಮ ಎಂದರೂ ದೇವರೇಂದೇ ಅರ್ಥ." ಎಂದನು. ತಂದೆ ಎಂದರೂ, ಪರಿಶುದ್ಧಾತ್ಮ ಎಂದರೂ ಎರಡು ಪದಗಳು ದೇವರನ್ನು ತಿಳಿಸುತ್ತಿರುವಾಗ ಕುಮಾರನು ಪ್ರತ್ಯೇಕವಾಗಿರುವಾಗ, ತಂದೆ, ಕುಮಾರನು, ಪರಿಶುದ್ಧಾತ್ಮ ಎಂದು ಮೂರು ಹೇಳಿದರೂ ಅವು ಮೂರು ಅಲ್ಲದೇ ಎರಡೇ ಆಗುತ್ತಿವೆ. ತಂದೆ, ಪರಿಶುದ್ಧಾತ್ಮ ಎರಡೂ ಒಂದಾದಾಗ, ತ್ರಿತ್ವವು ಇಲ್ಲದಂತೆಹೋಗಿ ದ್ವಿತ್ವ ಏರ್ಪಡುತ್ತಿದೆ. ಅಂದರೇ ಮೂರು ಆಲ್ಲದೆ ಎರಡಾಗುತ್ತಿವೆ. ಹಾಗೆ ತಂದೆ, ಪರಿಶುದ್ಧಾತ್ಮ ಎರಡೂ ಒಂದಾದಾಗ ತ್ರಿತ್ವ ಎನ್ನುವುದಕ್ಕೆ ಸಾಧ್ಯವಿಲ್ಲ. ಅದನ್ನು ದ್ವಿತ್ವ ಎಂದೇ ಹೇಳಬಹುದು. ಇದರಿಂದ

ಪಾಸ್ಟರ್‌ರವರು ಹೇಳಿದ ಉತ್ತರ ತಪ್ಪೆಂದು ತಿಳಿಯುತ್ತಿದೆ. ಇದರಿಂದ ತಂದೆ, ಕುಮಾರನು, ಪರಿಶುದ್ಧಾತ್ಮ ಎಂಬ ಮೂರು ಪದಗಳಿಗು ವಾಸ್ತವವಾದ ಅರ್ಥ ಪಾಸ್ಟರ್‌ಗಾಗಲಿ, ಮತ್ತೆ ಇತರ ಕ್ರೈಸ್ತರಿಗಾಗಲಿ ತಿಳಿದಿಲ್ಲವೆಂದೇ ಹೇಳಬಹುದು. ಈ ವಿಧವಾಗಿ ಬೈಬಲ್‌ನಲ್ಲಿ ಇರುವ ಮೂರು ಆತ್ಮಗಳ ಸಿದ್ಧಾಂತವಾದ ತಂದೆ, ಕುಮಾರನು, ಪರಿಶುದ್ಧಾತ್ಮವೊಂದರ ಮೂರಕ್ಕು ಅರ್ಥ ತಿಳಿದಿಲ್ಲವೆಂದೇ ಹೇಳಬಹುದು.

ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ತ್ರೈತ ಸಿದ್ಧಾಂತವಿದ್ದರೂ ಅದು ಹಿಂದೂಗಳಿಗೆ ತಿಳಿಯದಂತೆ, ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿ **"ತ್ರೈತ ಸಿದ್ಧಾಂತ"** ಹೀಗೆ ಹೇಳಿದೆ ನೋಡಿರಿ. **(ಮತ್ತಾಯ: 28–19) "ನೀವು ಹೋಗಿ ಸಮಸ್ತ ಜನರನ್ನು ಶಿಷ್ಯರನ್ನಾಗಿ ಮಾಡಿರಿ, ತಂದೆ ಯೊಂದರ, ಕುಮಾರನೊಂದರ, ಪರಿಶುದ್ಧಾತ್ಮವೊಂದರ ನಾಮದೊಳಗೆ ಅವರಿಗೆ ಬಾಪ್ತಿಸ್ಮ ಕೊಡಿ"** ಎಂದು ಹೇಳಲಾಗಿದೆ. ಆದರೆ ಈ ವಾಕ್ಯ ಆಧ್ಯಾತ್ಮಿಕ ರಂಗದಲ್ಲಿ ಮುಖ್ಯವಾದವೆಂದು, ಇದು ಮೂರು ಮತಗಳಲ್ಲಿ ಹೇಳಿದ ತ್ರೈತ ಸಿದ್ಧಾಂತವೆಂದು ಬಹಳಜನ ಕ್ರೈಸ್ತರಿಗೆ ತಿಳಿದಿಲ್ಲ. ಇದು ಬೈಬಲ್‌ನಲ್ಲಿ ಮುಖ್ಯವಾದ ಸಿದ್ಧಾಂತವೆಂದು ಸಹ ತಿಳಿದಿಲ್ಲ. ಈವಾಕ್ಯವನ್ನು ನೋಡುತ್ತಲೇ ಹಿಂದೂಗಳು ಇದು ಕ್ರೈಸ್ತರದೆಂದು ಹೇಳುತ್ತಿದ್ದಾರೆ. ಆದರೆ ತ್ರೈತ ಸಿದ್ಧಾಂತ ಸಮಸ್ತ ಮಾನವರಿಗು ಅಗತ್ಯವಾದುದೆಂದು ತಿಳಿಯದೆ ಮತದ್ವೇಷದಿಂದ ಮಾತನಾಡುತ್ತಿದ್ದಾರೆ. ಬೈಬಲ್‌ನಲ್ಲಿನ ಮತ್ತಾಯ ಸುವಾರ್ತೆ ಒಂದರ ವಾಕ್ಯದಲ್ಲಿ ಈ ವಾಕ್ಯವನ್ನು ಹೇಳಿದಾಗ **" ನೀವು ಹೋಗಿ ಸಮಸ್ತ ಜನರಿಗು"** ಎಂದು ಅಲ್ಲಿ ಹೇಳಿರುವುದಾಗಿದೆ ಕ್ರೈಸ್ತರಿಗೆ ಎಂದು ಹೇಳಲಿಲ್ಲ ಅಲ್ಲವೆ! ಸಮಸ್ತ ಜನರಲ್ಲಿ ನಾನು ಒಬ್ಬನಾಗಿದ್ದೇನೆ. ಆದ್ದರಿಂದ ಮೂರು ದೈವಗ್ರಂಥಗಳಲ್ಲಿ ಹೇಳಲಾದ ತ್ರೈತ ಸಿದ್ಧಾಂತ ನನಗೂ, ನಿನಗೂ, ಎಲ್ಲರಿಗೂ ಅಗತ್ಯವಾದುದೆಂದು, ತಪ್ಪದೆ ತಿಳಿದುಕೊಳ್ಳಬೇಕೆಂದು ದೇವರು ಹೇಳಿದಂತೆ ಮೂರು ಗ್ರಂಥಗಳಲ್ಲಿ ಇದೆ.

ಇನ್ನು ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸುರಾ 50, ಆಯತ್ 21 ರಲ್ಲಿ ಅಲ್ಲಾಹ್ ಹೇಳಿರುವುದನ್ನೇ ಜಿಬ್ರಯೇಲ್ ಹೀಗೆ ಹೇಳಿದ್ದಾನೆ. **(50–21) "ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ತೆಗೆದುಕೊಂಡುಬರುವವನು ಒಬ್ಬನು, ಸಾಕ್ಷಿಕೊಡುವವನು ಒಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ,"** ಇನ್ನೊಂದು ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ. **"ಪ್ರತಿ ಪ್ರಾಣಿ ಒಬ್ಬ ನಡೆಸುವವನೊಂದಿಗೆ, ಮತ್ತೊಬ್ಬ ಸಾಕ್ಷಿ ಕೊಡುವವನೊಂದಿಗೆ ಸಹ ಹಾಜರಾಗುತ್ತಾನೆ,"** ಈ ವಿಧವಾಗಿ ಖುರಾನ್ ಗ್ರಂಥದಲ್ಲಿ ಬರೆಯಲ್ಪಟ್ಟಿದ್ದರೂ ಇದು ಮುಖ್ಯವಾದ ದೈವಸಿದ್ಧಾಂತ ವೆಂದು ಮುಸ್ಲಿಮ್‌ರಿಗೆ ತಿಳಿದಿಲ್ಲ. ನಡೆಸುವವನು ಒಬ್ಬನು, ನಡೆಯಲ್ಪಡುವವನು ಮತ್ತೊಬ್ಬನು ಇರುವಾಗ ಇಬ್ಬರಿಗೂ ಸಾಕ್ಷಿಯಾಗಿರುವವನು ಮತ್ತೊಬ್ಬನು ಇದ್ದಾನೆ. ಹೀಗೆ ಮೂವರನ್ನು ಕುರಿತು ಗ್ರಂಥದಲ್ಲಿ ಹೇಳಿದ್ದರೂ ಆ ಮೂವರು ಯಾರೋ  ಸ್ವಲ್ಪವಾದರೂ ಮುಸ್ಲಿಮ್‌ರಿಗೆ ತಿಳಿದಿಲ್ಲ.

**ಪ್ರಶ್ನೆ :– ಕ್ರೈಸ್ತ, ಮುಸ್ಲಿಮ್‌ರ ಗ್ರಂಥಗಳಲ್ಲಿ ಇರುವುದು, ಭಗವದ್ಗೀತೆಯಲ್ಲಿನ ತ್ರೈತ ಸಿದ್ಧಾಂತವೇ ಆದಾಗ ಭಗವದ್ಗೀತೆಯಲ್ಲಿನ ಮೂರು ಆತ್ಮಗಳ ಸಿದ್ಧಾಂತವನ್ನು (ತ್ರೈತಸಿದ್ಧಾಂತವನ್ನು) ಸೃಷ್ಠಿ ಆದಿಯಲ್ಲಿಯೇ ದೇವರು ಹೇಳಿದ್ದಾನೆಂದು ಅರ್ಥವಾಗುತ್ತಿದೆ. ದ್ವೈತ, ಅದ್ವೈತ ಸಿದ್ಧಾಂತಗಳನ್ನು ಕಲಿಯುಗದಲ್ಲಿ ಹುಟ್ಟಿದ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಹೇಳಿದರೆ ತ್ರೈತ ಸಿದ್ಧಾಂತವನ್ನು ದೇವರು ಮೊದಲೇ ಸೃಷ್ಠಿ ಆದಿಯಲ್ಲಿಯೇ ಹೇಳಿದಂತೆ ಇದೆ ಅಲ್ಲವೆ! ಹಾಗಿರುವಾಗ "ತ್ರೈತ ಸಿದ್ಧಾಂತ ಕರ್ತ" ನಿಜವಾಗಲು ದೇವರಾಗುತ್ತಾನಾಗಲಿ ನೀವು ಅಲ್ಲವಲ್ಲ! ಹಾಗಿರುವಾಗ "ತ್ರೈತ ಸಿದ್ಧಾಂತ ಆದಿಕರ್ತಯೆಂದು" ನೀವು ಹೆಸರು ಹೇಳಿಕೊಳ್ಳುವುದು ತಪ್ಪಾಗುತ್ತದೆ ಅಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಆದಿಕರ್ತ ಎಂದರೇ ಮೊದಲ ಕರ್ತ ಎಂದೂ, ಮೊದಲು ಹೇಳಿದವನೆಂದೂ ಅರ್ಥ. ಒಂದುವೇಳೆ ನಾವು ತ್ರೈತ ಸಿದ್ಧಾಂತಕರ್ತನೆಂದು ಪ್ರಬೋಧಾನಂದ ಹೆಸರು ಬರೆದಿದ್ದರೆ ನೀವು ಈ ಪ್ರಶ್ನೆ ಕೇಳಿದರೂ

ಸರಿಹೋಗುತ್ತಿತ್ತು. ನೀವು ಪ್ರಶ್ನಿಸುವುದಕ್ಕೆ ಮೊದಲೇ ಆದಿಕರ್ತ ಎಂದು ಬರೆದಿರುವುದರಿಂದ ಮೊದಲು ಹೇಳಿದವನೆಂದು ಅರ್ಥವಾಗುತ್ತದೆ. ಅಂದರೇ ನಿಮ್ಮ ಪ್ರಶ್ನೆಗೆ ಮೊದಲೇ ಉತ್ತರ ಬಂದಿದೆ. ಆದರೆ ಅದು ಅರ್ಥವಾಗದೆ ಈ ವಿಧವಾಗಿ ಕೇಳಿದ್ದೀರೆಂದು ನಾವು ಅಂದುಕೊಳ್ಳುತ್ತಿದ್ದೇವೆ. ನಾನು ಜೀವಿಯಾಗಿ ಹೇಳುವುದೇನೆಂದರೇ! ತ್ರೈತ ಸಿದ್ಧಾಂತ ಸೃಷ್ಠಿ ಆದಿಯಲ್ಲಿಯೇ ಹೇಳಲಾಗಿದೆ. ಅದನ್ನೇ ಭಗವದ್ಗೀತೆಯಲ್ಲಿ ಎರಡನೆ ಬಾರಿ ಕೃಷ್ಣ ಭಗವಾನನು ಹೇಳುವುದು ನಡೆದಿದೆ. ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಹೇಳುತ್ತಿದ್ದೇನೆಂದು ಕೃಷ್ಣನು ಭಗವದ್ಗೀತೆಯನ್ನು ಹೇಳುವುದು ನಡೆದಿದೆ. ಭಗವದ್ಗೀತೆಯಲ್ಲಿ ಮುಖ್ಯವಾಗಿ ಹೇಳುವುದು ಮೂರು ಆತ್ಮಗಳ ವಿವರ. **ದೈವಜ್ಞಾನವೆಲ್ಲವೂ ಮೂರು ಆತ್ಮಗಳ ವಿವರದ ಮೇಲೆ ಆಧಾರಪಟ್ಟಿದೆ.** ಅಂದರೇ ತ್ರೈತ ಸಿದ್ಧಾಂತದ ಮೇಲೆಯೇ ದೈವಜ್ಞಾನ ಇದೆಯೆಂದು ಹೇಳಲಾಗಿದೆ. ಇದೇ ತ್ರೈತ ಸಿದ್ಧಾಂತವೇ ಉಳಿದ ಗ್ರಂಥಗಳಲ್ಲಿ ಎರಡು ವಿಧಗಳಾಗಿ ಹೇಳಿದ್ದಾರೆ. ಮೂರು ಗ್ರಂಥಗಳಲ್ಲಿನ ತ್ರೈತ ಸಿದ್ಧಾಂತ ವಾಕ್ಯಗಳನ್ನು ಓದಿದರೂ ಈ ಮೂರು ವಾಕ್ಯಗಳು ಒಂದೇ ವಿಧವಾಗಿದೆ ಇವೆಯೆಂಬ ಧ್ಯಾಸ ಸಹ ಉಂಟಾಗುತ್ತಿಲ್ಲ.

ತ್ರೈತ ಸಿದ್ಧಾಂತವನ್ನು ಮೊದಲು ಹೇಳಿದವನು ದೇವರೆಂದು ಹೇಳಿದರೂ ದೇವರು ರೂಪ, ನಾಮ, ಕ್ರಿಯಾರಹಿತನಾಗುವುದರಿಂದ ಆತನು ಯಾರೊಂದಿಗೂ ನೇರವಾಗಿ ಮಾತನಾಡುವುದಿಲ್ಲ. ಅಷ್ಟೇ ಅಲ್ಲದೆ ತ್ರೈತ ಸಿದ್ಧಾಂತ ಸೂತ್ರದ ಪ್ರಕಾರ ಆತನು (ದೇವರು) ಸಾಕ್ಷಿಯಾಗಿ ನೋಡುವವನೇ ಹೊರತು ಕ್ರಿಯೆಯಾಗಿ ಮಾಡುವವನಲ್ಲ. ಏನು ಮಾಡಿದರೂ, ಏನು ಮಾತನಾಡಿದರೂ ದೇವರ ಅಂಶವಾಗಿರುವ ಉಳಿದ ಎರಡು ಆತ್ಮಗಳಲ್ಲಿ ಅಕ್ಷರನಾಗಿರುವ ಎರಡನೆ ಆತ್ಮ ಮಾಡಬೇಕಾಗಿದ್ದೆ. ಮೂರನೆ ಆತ್ಮವಾದ ಜೀವಾತ್ಮ ಭೋಕ್ತನಾಗಿ ಅನುಭವಿ ಸುವವನಾಗಿ ಮಾತ್ರ ಇದ್ದಾನೆ. ಇದನ್ನು ಅನುಸರಿಸಿ ಮೊದಲು ದೇವರು ಏನೂ ಮಾಡುವುದಿಲ್ಲ, ಕೊನೆಯ ಜೀವಾತ್ಮ ಸಹ ಏನು ಮಾಡಲಾರದವನಾಗಿ ಕೇವಲ ಅನುಭವಿಸುವವನಾಗಿದ್ದಾನೆ. ಈ ವಿಧವಾಗಿ ಮೂರು ಆತ್ಮಗಳ

ವಿಧಾನವಿರುವಾಗ, ದೇವರು ಹೊರಗೆ ಹೇಳಬೇಕಾದ ಜ್ಞಾನದಲ್ಲಿರುವ ತ್ರೈತ ಸಿದ್ಧಾಂತವನ್ನು ಸೃಷ್ಠಿ ಆದಿಯಲ್ಲಿ ಆತ್ಮವೇ ಹೊರಗೆ ಹೇಳಬೇಕಾಗಿಬಂದಿದೆ. ಸೃಷ್ಠಿ ಆದಿಯಲ್ಲಿ ದೈವಜ್ಞಾನವನ್ನು ಆಕಾಶ ವಾಣಿಮೂಲಕ ಸೂರ್ಯನಿಗೆ ಹೇಳಿದಾಗ ನಮಗೆ ತಿಳಿಯದ ವಿಧಾನ ಏನು ನಡೆದಿದೆಯೋ ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಆಕಾಶ ಪ್ರಕೃತಿಯಲ್ಲಿನ ಒಂದು ಭಾಗ. ಪ್ರಕೃತಿಯಲ್ಲಿ ಐದು ಭಾಗಗಳು ಇವೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂಬ ಐದು ಭಾಗಗಳನ್ನು ಪಂಚ ಮಹಾ ಭೂತಗಳು ಎನ್ನುತ್ತಿದ್ದೇವೆ. ಭೂತ ಎಂದರೆ ಜೀವ ಇರುವುದೆಂದು ಅರ್ಥ. ಮಹಾ ಭೂತ ಎಂದರೆ 'ದೊಡ್ಡ ಶಕ್ತಿವಂತವಾದ ಜೀವಿ' ಎಂದು ಅರ್ಥ. ಪ್ರಕೃತಿಯಲ್ಲಿನ ಐದು ಭಾಗಗಳು ಐದು ದೊಡ್ಡ ಶಕ್ತಿಗಳಾಗಿವೆ. ಪ್ರಪಂಚದಲ್ಲಿ ಈ ಐದು ಭೂತಗಳ ನಂತರವೇ ಇತರ ಭೂತಗಳ ಶಕ್ತಿ ಇರುತ್ತದೆ. ಅಂದರೇ ವಿಶ್ವವೆಲ್ಲದಕ್ಕು ಈ ಐದು ಪ್ರಕೃತಿ ಶಕ್ತಿಗಳೇ ದೊಡ್ಡವೆಂದು, ದೇವರ ನಂತರ ಇರುವ ದೊಡ್ಡ ಶಕ್ತಿಗಳು ಈ ಐದು ಭೂತಗಳಾಗಿ ಇವೆಯೆಂದು ಹೇಳಬಹುದು. ಐದು ಭೂತಗಳಲ್ಲಿ ಉಳಿದ ನಾಲ್ಕಕ್ಕಿಂತ ದೊಡ್ಡದು, ಮೊದಲನೆಯದು ಆಕಾಶ. ದೇವರ ನಂತರ ಇರುವ ಐದು ಶಕ್ತಿಗಳಲ್ಲಿ ಮೊದಲ ಶಕ್ತಿ ಆಕಾಶ. ಆಕಾಶ ಭೂತದ ಮೂಲಕ ಸೃಷ್ಠಿ ಆದಿಯಲ್ಲಿ ದೈವಜ್ಞಾನ ಆಕಾಶದಲ್ಲಿ ತೇಲುತ್ತಿರುವ ಸೂರ್ಯನಿಗೆ ಮೊದಲು ಹೇಳಲಾಗಿದೆ. ದೇವರ ಜ್ಞಾನ ಸೃಷ್ಠಿ ಆದಿಯಲ್ಲಿಯೇ ಆಕಾಶದ ಮೂಲಕ ಸೂರ್ಯನಿಗೆ ತಿಳಿದಿದೆಯೆಂದು ಬಹಳಜನ ಜ್ಞಾನಿಗಳಿಗೆ ತಿಳಿದರೂ ಅಲ್ಲಿ ನಮಗೆ ತಿಳಿಯದಂತೆ ನಡೆದ ತತಂಗ ಯಾರಿಗೂ ತಿಳಿದಿಲ್ಲ. ಆ ತತಂಗವನ್ನು ವಿವರಿಸಿ ಹೇಳಿಕೊಂಡರೆ ಎಷ್ಟೋ ಜ್ಞಾನ ಸಹ ತಿಳಿಯಬಲ್ಲದು.

ಆಕಾಶ ಒಂದು ಭೂತವಾದಾಗ ದೇವರ ಧರ್ಮದ ಪ್ರಕಾರ ಜೀವಿಯಾಗಿರುವವನಿಗೆ (ಭೂತವಾಗಿರುವವನಿಗೆ) ಆತ್ಮ ಜೊತೆಯಾಗಿರುತ್ತದೆ. ಜೀವಿಯು ಎಲ್ಲಿ ಇರುತ್ತಾನೋ ಆತ್ಮ ಅವನಿಗೆ ಜೊತೆಯಾಗಿರಬೇಕೆಂಬುದು

ದೈವಧರ್ಮ. ದೈವ ನಿರ್ಮಿತ ಧರ್ಮದ ಪ್ರಕಾರ ಜೀವಿಯು ಅಂದರೇ ಜೀವಾತ್ಮ, ಆತ್ಮ ಎರಡೂ ಜೋಡಿ ಆತ್ಮಗಳಾಗಿ ಇರುತ್ತವೆ. ಸಜೀವವಾದ ಯಾವ ಶರೀರದಲ್ಲಾಗಲಿ, ಜೀವಿಯೊಂದಿಗೆ ಆತ್ಮ ಇರುವುದು ಸಹಜ. ಎಲ್ಲಿ ಭೂತ ವಿರುತ್ತದೋ ಅಲ್ಲಿ ಆತ್ಮ ಅದಕ್ಕೆ ಜೊತೆಯಾಗಿರುವಾಗ, ಪರಮಾತ್ಮ ಸಾಕ್ಷಿಯಾಗಿ ಇಬ್ಬರನ್ನು ನೋಡುತ್ತಿರುತ್ತಾನೆ. ಅದೇ ತ್ರೈತ ಸಿದ್ಧಾಂತವೆಂದು ಹೇಳುವುದಾಗಿದೆ. ಭೂತವಾಗಿರುವ ಅಂದರೆ ಜೀವಿಯಾಗಿರುವವನು ಶರೀರದಲ್ಲಿ ಏನುಮಾಡದವ ನಾಗಿ ಇರುತ್ತಾನೆ. ಮಾಡುವುದಕ್ಕೆ ಕೈಲಾಗದವನಾಗಿರುತ್ತಾನೆ ಜೀವಿಯು. ಮಾಡುವುದಕ್ಕೆ ಕೈಲಾದರೂ ಮಾಡದವನು ದೇವರು. ಇವರಿಬ್ಬರಿಗೂ ಮಧ್ಯದಲ್ಲಿರುವ ಆತ್ಮ ಅಗತ್ಯವಾದರೆ ಇತ್ತ ದೇವರ ಕೆಲಸವಾಗಲಿ, ಅತ್ತ ಜೀವಿಯ ಕೆಲಸವಾಗಲಿ ಮಾಡುತ್ತಿದೆ. ಅದೇ ವಿಧಾನದಿಂದ ಸೃಷ್ಠಿ ಆದಿಯಲ್ಲಿ ದೇವರ ಕೆಲಸ ಜ್ಞಾನ ತಿಳಿಸುವುದು, ಆದರೂ ದೇವರು ಮಾಡುವುದಿಲ್ಲ ಆದ್ದರಿಂದ ದೇವರ ಕೆಲಸವನ್ನು ಆಕಾಶ ಜೀವಿಗೆ ಜೊತೆಯಾಗಿರುವ ಆತ್ಮವೇ ಮಾಡಿದೆ. ಕೊನೆಗೆ ಆಕಾಶವಾಣಿ ಸೂರ್ಯನಿಗೆ ಸೃಷ್ಠಿ ಆದಿಯಲ್ಲಿ ಜ್ಞಾನ ಹೇಳಿದೆಯೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಒಂದು ಕೆಲಸ ನಡೆದರೆ ಮೇಲ್ನೋಟಕ್ಕೆ ಕಾಣಿಸುವ ಮನುಷ್ಯ ಮಾಡಿದ್ದಾನೆಂದು ಹೊರಗೆ ನೋಡುವವರೆಲ್ಲರೂ ಅಂದುಕೊಂಡಂತೆ, ಆಕಾಶವಾಣಿಯೇ ಜ್ಞಾನ ಹೇಳಿದೆಯೆಂದು ಅಂದು ಕೊಂಡಿದ್ದಾರೆ. ಆಕಾಶದ ಹಿಂದೆ ಕಾಣಿಸದಂತಿರುವ ಆತ್ಮ ಹೇಳಿದೆಯೆಂದು ಯಾರಿಗೂ ತಿಳಿದಿಲ್ಲ. ಜೀವಿಯು ದೇವರು ಇಬ್ಬರೂ ಕೆಲಸ ಮಾಡುವುದಿಲ್ಲ ಆದಕಾರಣ ಅವರಿಗೆ ಮಧ್ಯದಲ್ಲಿರುವ ಆತ್ಮವೇ ಎಲ್ಲಾ ಕೆಲಸಗಳು ಮಾಡಬೇ ಕಾಗಿದೆ. ಇದು ಆಧ್ಯಾತ್ಮಿಕ ಕಾನೂನು. ದೈವ ನಿರ್ಮಿತವಾದುದು ಧರ್ಮ. ಇದನ್ನು ಯಾರೂ ನಿರಾಕರಿಸಲಾರರು.

ಈ ಕಾನೂನಿನ ಪ್ರಕಾರ ಸೃಷ್ಠಿ ಆದಿಯಲ್ಲಿ ಜ್ಞಾನ ಹೇಳಿರುವುದು ಯಾರು? ಎಂದು ಪ್ರಶ್ನಿಸಿದರೆ ವಿಷಯವೆಲ್ಲಾ ತಿಳಿದ ನಂತರ ಆತ್ಮವೇ ಹೇಳಿದೆಯೆಂದು ಹೇಳದೆ ತಪ್ಪುವುದಿಲ್ಲ. ಅದೇ ವಿಧವಾಗಿ "ಮೊಟ್ಟಮೊದಲು

ತ್ರೈತ ಸಿದ್ಧಾಂತವನ್ನು ಹೇಳಿದವರು ಯಾರು?' ಎಂದು ಕೇಳಿದರೆ "ಆಕಾಶ ಭೂತದ ಬಳಿ ಇರುವ ಆತ್ಮವೇ" ಎಂದು ಹೇಳುತ್ತೇವೆ. ಅದೇ ವಿಷಯವನ್ನೇ **"ತ್ರೈತ ಸಿದ್ಧಾಂತ ಆದಿಕರ್ತ"** ಎಂದಾಗ ಆತ್ಮವೇ ಎಂದು ಹೇಳುವುದಕ್ಕೆ ಬದಲಾಗಿ **"ಪ್ರಬೋಧಾನಂದ ಯೋಗೀಶ್ವರರು"** ಎಂದು ಹೇಳುವುದು ನಡೆದಿದೆ. ಆತ್ಮ ಎಂದಿಗೂ ತನಗೆ ತಾನಾಗಿ ಹೊರಬೀಳುವುದಿಲ್ಲ. ಯಾರಿಗೂ ತಿಳಿಯದಂತೆ ಎಲ್ಲಾ ಕೆಲಸಗಳು ಎಲ್ಲಾ ಶರೀರಗಳಲ್ಲಿ ಮಾಡುತ್ತಿದೆ. ಪ್ರಸ್ತುತ ಒಂದು ಶರೀರವನ್ನು ಧರಿಸಿ ಆ ಶರೀರದಲ್ಲಿಂದ ಮಾತನಾಡುತ್ತಿದೆ. ಇದು ಅಪರೂಪವಾಗಿ ನಡೆಯುವ ಸಂಘಟನೆ ಅಲ್ಲ. ಪ್ರತಿ ನಿತ್ಯ ಎಲ್ಲರಲ್ಲಿ ಮಾತನಾಡುವುದು ಆತ್ಮವೇಯೆಂದು, ಆತ್ಮ ಹೊರತು ಜೀವಾತ್ಮವಾಗಲಿ, ಪರಮಾತ್ಮನಾಗಲಿ ಮಾತನಾಡುವುದಿಲ್ಲ. ನಾನು ಆತ್ಮಜ್ಞಾನವನ್ನು ತಿಳಿದ ಜೀವಿಯಾದ್ದರಿಂದ ಈಗ ತ್ರೈತ ಸಿದ್ಧಾಂತವನ್ನು ಬೋಧಿಸುವುದು ಪ್ರಬೋಧಾನಂದ ಯೋಗೀಶ್ವರರು ಎಂದರೂ ಆ ಶರೀರವಾಗಲಿ, ಆ ಶರೀರಕ್ಕಿರುವ ಹೆಸರಾಗಲಿ ಜೀವಿದು ಅಲ್ಲ. ಶರೀರಕ್ಕೆಲ್ಲಾ ದೊಡ್ಡವನಾದ, ಶರೀರವೆಲ್ಲವನ್ನು ಆಕ್ರಮಿಸಿರುವ ಆತ್ಮದೇ ಆ ಹೆಸರೆಂದು ಹೇಳುತ್ತಿದ್ದೇವೆ. ಪ್ರಬೋಧಾನಂದ ಯೋಗೀಶ್ವರರ ಶರೀರದಲ್ಲಿ ಒಂದು ಮೂಲೆಯಲ್ಲಿರುವ ಜೀವಿಯಾದ ನಾನು ಈ ಶರೀರದಲ್ಲಿ ಆತ್ಮ ಮಾಡುತ್ತಿರುವ ಕೆಲಸವನ್ನು, ಆತ್ಮ ಮಾತನಾಡುವ ಮಾತುಗಳನ್ನು ನೋಡುತ್ತಿದ್ದೇನೆ, ಕೇಳುತ್ತಿದ್ದೇನೆ. ಇದೇ ಆತ್ಮವೇ ಸೃಷ್ಠಿ ಆದಿಯಲ್ಲಿ ತ್ರೈತ ಸಿದ್ಧಾಂತವನ್ನು ಹೇಳಿದೆ ಆದ್ದರಿಂದ ಗ್ರಂಥದ ಮೇಲೆ "ತ್ರೈತ ಸಿದ್ಧಾಂತ ಆದಿಕರ್ತ" ಎಂದು ಬರೆಯುವುದು ನಡೆದಿದೆ. ಆದಿಕರ್ತ ಯೆಂದು ಪ್ರಕಟಿಸಿಕೊಂಡರೂ ಗುರುತಿಸಲಾರದೆಹೋದರೆ ನಮ್ಮ ಅಜ್ಞಾನ ಹೊರತು ಮತ್ತೇನು ಅಲ್ಲ.

ತ್ರೈತ ಸಿದ್ಧಾಂತ ಆದಿಕರ್ತ ಎಂಬ ಮಾತಿಗಿಂತ ಮೊದಲು **"ತ್ರಿಮತ ಏಕೈಕ ಗುರುವು"** ಎಂದು ಬರೆಯುವುದು ನಡೆದಿದೆ. ಪ್ರಸ್ತುತ ಕಾಲದಲ್ಲಿ ಯಾವ ಮತದಲ್ಲಿಯಾದರೂ ಅವರಿಗೆ ದೇವರು ಗ್ರಂಥದಲ್ಲಿ ಹೇಳಿದ ಜ್ಞಾನ ತಿಳಿಯದೆ ಕಳವಳ ಪಡುತ್ತಿದ್ದಾರೆ. ನಾನು ಗುರುವೆಂದು ಹೇಳಿಕೊಳ್ಳುವ ಯಾವ

ಮನುಷ್ಯನಾದರೂ ನನಗೆ ನಮ್ಮ ಗ್ರಂಥದಲ್ಲಿನ ಜ್ಞಾನ ಸಂಪೂರ್ಣವಾಗಿ ತಿಳಿದಿದೆಯೆಂದು ಗುಂಡಿಗೆ ಮೇಲೆ ಕೈಹಾಕಿಕೊಂಡು ಹೇಳಿರಿ ನೋಡೋಣ. ಯಾರಾದರೂ ಆ ಕೆಲಸವನ್ನು ಮಾಡಲಾರರು. ಎಂತಹ ಜ್ಞಾನಿಗಳಾದರೂ ಹೊರಗಿನ ಪ್ರಪಂಚದಲ್ಲಿ ದೊಡ್ಡ ಜ್ಞಾನಿಗಳೆಂದು ಹೆಸರಿರುವವರಿಗಾದರೂ ತಮ್ಮ ದೈವಗ್ರಂಥದಲ್ಲಿನ ಎಲ್ಲಾ ವಿಷಯಗಳು ತಿಳಿದಿಲ್ಲವೆಂದೇ ಒಪ್ಪಿಕೊಳ್ಳುತ್ತಾನೆ. ದೇವರು ಹೇಳಿದ ಜ್ಞಾನ ಎಂದರೇ ಆತ್ಮ ಹೇಳಿದ ಆತ್ಮಜ್ಞಾನ ಆತ್ಮಕ್ಕೆ ತಿಳಿಯದೆಯೇ ಯಾರಿಗೂ ತಿಳಿದಿಲ್ಲ. ಆದ್ದರಿಂದ ನನ್ನ ಆತ್ಮ ತಿಳಿಸೆಂದರೇ ಜೀವಿಯಾಗಿ **"ಯಾರಿಗೂ ಸಂಪೂರ್ಣವಾದ ಜ್ಞಾನ ತಿಳಿದಿಲ್ಲ"** ಎಂದು ಹೇಳುತ್ತಿದ್ದೇನೆ. ಇಲ್ಲಿ ಒಂದು ಪ್ರಶ್ನೆ ಬರಬಹುದು. ಅದೇನೆಂದರೇ! ಒಬ್ಬ ಮನುಷ್ಯ ದೈವಗ್ರಂಥವನ್ನು ಸಂಪೂರ್ಣವಾಗಿ ಓದಿ ಅದರಲ್ಲಿನ ಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಂಡಿದ್ದೇನೆಂಬ ನಂಬಿಕೆಯಿಂದ ಕೆಲವು ವರ್ಷಗಳಿಂದ ತನ್ನನ್ನು ಜ್ಞಾನಿಯಾಗಿ ತಿಳಿಯುತ್ತಿದ್ದಾನೆಂದುಕೊಳ್ಳಿ. ಆತನಿಗೆ ಜ್ಞಾನ ವಿಷಯದಲ್ಲಿ ಎಲ್ಲಿಯೂ ಯಾವ ಅನುಮಾನವೂ ಇಲ್ಲ. ಜೀವನದಲ್ಲಿ ಕಾಲವೆಲ್ಲವೂ ಜ್ಞಾನವನ್ನು ತಿಳಿಯುವುದಕ್ಕೇ ವಿನಿಯೋಗಿಸುತ್ತಿದ್ದಾನೆ, ಹಾಗಿರುವಾಗ ಆತನು ಸಂಪೂರ್ಣ ಜ್ಞಾನಿ ಅಂದುಕೊಳ್ಳುವುದರಲ್ಲಿ ತಪ್ಪಿಲ್ಲ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ.

ಯಾರಾದರೆ ಸಂಪೂರ್ಣ ಜ್ಞಾನಿಯಾಗುತ್ತಾನೋ ಅವನಿಗೆ ತ್ರೈತ ಸಿದ್ಧಾಂತ ಸಂಪೂರ್ಣವಾಗಿ ತಿಳಿದಿರುತ್ತದೆ. ಯಾರಿಗಾದರೆ ತ್ರೈತ ಸಿದ್ಧಾಂತವಾದ ಮೂರು ಆತ್ಮಗಳ ವಿವರ ತಿಳಿದಿದೆಯೋ ಅವನು ಸಂಪೂರ್ಣ ಜ್ಞಾನಿ ಎನ್ನುವುದೇ ಅಲ್ಲದೆ ಆತ್ಮಗಿರುವ ಶಕ್ತಿ ಅಂದರೆ ದೈವಶಕ್ತಿ ಆತನಲ್ಲಿ ಪ್ರಜ್ವಲಿಸುತ್ತದೆ. ಅಂದರೇ ದೈವಶಕ್ತಿ ಆತನಲ್ಲಿ ಇರುತ್ತದೆ. ಯಾರಲ್ಲಿ ದೈವಶಕ್ತಿ ಇದೆಯೋ ಆತನನ್ನು ಭೂತಗಳು ಮಹಾಭೂತಗಳು ಸಹಿತ ಗೌರವಿಸುತ್ತವೆ. ಆ ಮನುಷ್ಯನಲ್ಲಿನ ಪ್ರತ್ಯೇಕತೆ ಆ ಮನುಷ್ಯನಿಗೇ ತಿಳಿಯುವುದಕ್ಕೆ ಶುರುಮಾಡುತ್ತದೆ. ಈ ವಿಧವಾಗಿ ಸಂಪೂರ್ಣ ಜ್ಞಾನಿಯಲ್ಲಿ ಆ ಶಕ್ತಿ ಹೊರಗೆ ತಿಳಿಯುವುದರಿಂದ, ರೋಗಗಳು

ಸಹಿತವು ಆತನ ಮಾತನ್ನು ಕೇಳಿ ಆತನು ಹೇಳಿದಂತೆ ನಡೆದುಕೊಳ್ಳುತ್ತವೆ. ಆದರೆ ಮೂರು ಆತ್ಮಗಳ ಜ್ಞಾನವನ್ನು ಅನುಭವಪೂರ್ವಕವಾಗಿ ತಿಳಿದವರು ಎಲ್ಲಿಯೂ ಕಾಣಿಸುತ್ತಿಲ್ಲ. ತಮಗೆ ಆತ್ಮಜ್ಞಾನ ತಿಳಿಯದಿದ್ದರೂ ಅಹಂನಿಂದ ನಾವು ಜ್ಞಾನಿಗಳು ಎಂದುಕೊಂಡವರು ಇದ್ದಾರೆ. ಅದು ಒಳ್ಳೆಯ ಪದ್ಧತಿ ಅಲ್ಲ.

**ಪ್ರಶ್ನೆ :– ಮೊದಲು ನೀವು ಹುಟ್ಟಿದಾಗ ನಿಮ್ಮ ಶರೀರ ಗುರುತಿಗಾಗಿ ಒಂದು ಹೆಸರನ್ನು ಇಡಲಾಗಿದೆ. ಅದು ಪ್ರತ್ಯೇಕವಾದ ಅರ್ಥಕೊಡುವುದಾಗಿದೆ. "ಪೆದ್ದನ್ನ" ಎಂದು ಹೇಳುವುದರಲ್ಲಿ ಆಲೋಚಿಸಿದರೆ "ಹಿರಿಯ" ಎಂದು ತಿಳಿಯುವಂತೆ ಪ್ರತ್ಯಕ್ಷವಾಗಿ "ಪೆದ್ದನ್ನ" (ದೊಡ್ಡಣ್ಣ) ಎಂದು ಹೆಸರಿಡುವುದು ನಡೆದಿದೆ. ಹಾಗೆ ಪೆದ್ದನ್ನನಾಗಿ ಶುರುವಾದ ನಿಮ್ಮ ಜೀವನ ಪ್ರಬೋಧಾನಂದ ಯೋಗೀಶ್ವರರು ಎಂಬ ಹೆಸರಾಗಿ ಹೇಗೆ ಬದಲಾಗಿದೆ? ಪೆದ್ದನ್ನನಾಗಿರುವ ಹೆಸರನ್ನು ನೀವು ಪ್ರಬೋಧಾನಂದ ಯೋಗೀಶ್ವರರಾಗಿ ಏಕೆ ಮಾರ್ಪಡಿಸಿಕೊಂಡಿದ್ದೀರಾ. ಪೆದ್ದನ್ನ ಎಂಬ ಹೆಸರಲ್ಲಿ ಗೌರವ ಏನೂ ಇಲ್ಲವೆಂದು, ಆ ಹೆಸರನ್ನು ಸಣ್ಣ ಕುಲದವರು, ಕಾಯಕಷ್ಟ ಮಾಡುವವರು, ಹರಿಜನರು ಇಟ್ಟುಕೊಳ್ಳುತ್ತಾರೆಂದು ಅಂತಹ ಹೆಸರಿನಿಂದ ಗೌರವ ಇರುವುದಿಲ್ಲವೆಂದು ನೀವು ಪ್ರಬೋಧಾನಂದ ಎಂದು ಹೆಸರು ಬದಲಿಸಿಕೊಳ್ಳುವುದು ನಡೆದಿದೆಯೆಂದು ಕೆಲವರು ಅನ್ನುತ್ತಿರುವಾಗ ಕೇಳಿದ್ದೇವೆ. ಅದೆಷ್ಟರಮಟ್ಟಿಗೆ ನಿಜ? ಅವರು ಹೇಳುವುದು ಸತ್ಯವೇ ಎನ್ನುತ್ತೀರಾ? ಅಥವಾ ಅದಕ್ಕೇನಾದರೂ ಕಾರಣವನ್ನು ತೋರಿಸುತ್ತೀರಾ?**

**ಉತ್ತರ :–** ಯಾರು ಏನಾದರೂ ಅಂದುಕೊಳ್ಳಬಹುದು. ಆದರೆ ಅವರಿಗೆ ಸ್ವಲ್ಪವೇ ತಿಳಿದಿದೆಯೆಂದು ಹೇಳುತ್ತೇನೆ. ನನಗೆ ಮೊದಲು ತಾಯಿತಂದೆಯರು 'ಪೆದ್ದನ್ನ' ಎಂಬ ಹೆಸರನ್ನು ಇಡಲಿಲ್ಲವೆಂದು ಅವರಿಗೆ ತಿಳಿದಿಲ್ಲ. ಪೆದ್ದನ್ನ (ದೊಡ್ಡಣ್ಣ) ಎಂಬ ಹೆಸರು ಬಲವಂತವಾಗಿ ಇಟ್ಟಿರುವುದೆಂದು ಸಹ ಯಾರಿಗೂ ತಿಳಿದಿಲ್ಲ. ಹುಟ್ಟಿದ ವಾರಕ್ಕೋ, ಹತ್ತುದಿನಗಳಿಗೋ ಹೆಸರು ಇಡುವುದು ನಡೆದಿದೆ. ಸಮಾಜದಲ್ಲಿ ಎಲ್ಲರೂ ಇಟ್ಟಂತೆ ಯಾವುದೋ ಒಂದು ದೇವರ ಹೆಸರನ್ನು

ಇಡುವುದು ನಡೆದಿದೆ. ಅದು ಯಾವ ಹೆಸರೋ ನನಗೂ ಸಹ ತಿಳಿದಿಲ್ಲ. ಹೆಸರು ಇಟ್ಟಾಗಿನಿಂದ ಹೆಚ್ಚಾಗಿ ಅಳುವುದನ್ನು ಶುರುಮಾಡುವುದರಿಂದ ವೈದ್ಯರ ಹತ್ತಿರಕ್ಕೆ ತೆಗೆದುಕೊಂಡುಹೋಗಿ ತೋರಿಸುವುದು ನಡೆದಿದೆ. ಚಿಕ್ಕಮಕ್ಕಳಿಗೆ ಹೊಟ್ಟೆನೋವು ಬರುವುದರಿಂದ ಅಳುತ್ತಿರುತ್ತಾರೆಂದು ವೈದ್ಯರು ಹೊಟ್ಟೆನೋವಿಗೆ ಸಂಬಂಧಿಸಿದ ಔಷಧಿಗಳು ಕೊಟ್ಟಿದ್ದಾನೆ. ಆದರೂ ಅಳುವನ್ನು ನಿಲ್ಲಿಸದಿದ್ದಕ್ಕೆ ಏನು ಮಾಡಲಾರದ ಸ್ಥಿತಿಯಲ್ಲಿ ಗಾಬರಿಯಲ್ಲಿರುವಾಗ ಗ್ರಾಮದೇವತೆಯಾದ ಸುಂಕಲಮ್ಮ ಒಬ್ಬ ಮನುಷ್ಯನನ್ನು ಆವರಿಸಿ ಬಂದು ಊರೆಲ್ಲಾ ತಿರುಗುತ್ತಾ ನಮ್ಮ ಮನೆ ಮುಂದಕ್ಕೆ ಬಂದು "ನಿಮ್ಮ ಬಾಲಕನು ಮೂರು ದಿನಗಳಿಂದ ಆಳುವು ನಿಲ್ಲಿಸಲಿಲ್ಲ ಅಲ್ಲವೆ! ಎಂದು ಕೇಳಿದಳು. ಆಗಿನಕಾಲದಲ್ಲಿ ಗ್ರಾಮದೇವತೆಗಳಿಗೆ ಹೆಚ್ಚಾಗಿ ಗೌರವವಿರುತ್ತಿತ್ತು. ಸುಂಕಲಮ್ಮ ದೇವತೆ ಆ ಮಾತು ಹೇಳುವುದರಿಂದ ನಮ್ಮ ತಾಯಿತಂದೆಯರು ಸ್ವಲ್ಪ ಹುಮ್ಮಸ್ಸಿನಿಂದ ಏನು ಮಾಡಬೇಕೆಂದು ಆ ದೇವತೆಯನ್ನು ಕೇಳುವುದು ನಡೆದಿದೆ. ಆಗ ಆ ದೇವತೆ ಹೀಗೆ ಹೇಳಿದಳಂತೆ "ಹುಟ್ಟಿದವನು ಸಾಮಾನ್ಯನಲ್ಲ. ನನಗು ಸಹ ಆತನ ಪ್ರಕಾಶವು ಅರ್ಥವಾಗುತ್ತಿಲ್ಲ. ನಮ್ಮ ಅಕ್ಕ ದೊಡ್ಡಮ್ಮ ಬಾಲಕನಿಗೆ ಸೇವೆ ಮಾಡುತ್ತಿದ್ದಾಳೆ. ಈಗ ನೀವು ಇಟ್ಟಿದ ಹೆಸರು ಆ ಬಾಲಕನಿಗೆ ಸರಿಹೋಗಲಿಲ್ಲ. ಆದುದರಿಂದ ಅಳು ನಿಲ್ಲಿಸಲಿಲ್ಲ. ನಮ್ಮ ಅಕ್ಕ ದೊಡ್ಡಮ್ಮನ ಹೆಸರನ್ನು ಇಡಿ" ಎಂದು ಹೇಳಿ ಹೋಗಿದ್ದಾಳಂತೆ. ಹೋಗುವಾಗ ಮನೆ ಮುಂದೆ ಕೆಳಗೆ ಮಲಗಿ ನಮಸ್ಕಾರ ಮಾಡಿ ಹೋದಳಂತೆ. ಆಗ ಅಲ್ಲಿ ನಡೆದ ವಿಚಿತ್ರಕ್ಕೆ ಆಶ್ಚರ್ಯಹೋದ ನಮ್ಮ ಹಿರಿಯರು ಗಂಟೆ ವ್ಯವಧಿಯಲ್ಲಿಯೇ ದೊಡ್ಡಮ್ಮನಿಗೆ ಪೂಜೆಮಾಡಿ ತೆಂಗಿನಕಾಯಿ ಹೊಡೆದು "ಪೆದ್ದನ್ನ" ಎಂಬ ಹೆಸರನ್ನು ಇಡುವುದು ನಡೆದಿದೆ. ಆಗ ಶಿಶುವು ಅಳು ನಿಲ್ಲಿಸಿದನು ಅದು ದೇವತೆಯಾದ ಪೆದ್ದಮ್ಮ ಮಹಿಮೆಯೆಂದು ಅಂದುಕೊಳ್ಳುವುದು ನಡೆದಿದೆ. ಅಂದಿನಿಂದ ಅವರು ದೊಡ್ಡಮ್ಮನ ಹೆಸರನ್ನು ಇಟ್ಟಿದ್ದೇವೆಯೆಂದು ಹೇಳಿಕೊಂಡಿದ್ದಾರೆ. ನನಗೆ ಸ್ವಲ್ಪ ಬುದ್ಧಿ ಬಂದ ನಂತರ ಈ ವಿಷಯ ತಿಳಿದಿದೆ. ಪ್ರತಿ ವರ್ಷ ಪೆದ್ದನ್ನ ದೇವತೆಗೆ ಕೋಳಿ ಕೋಯುತ್ತಿದ್ದರು. ಕುರಿಗಳನ್ನು ಬಲಿಕೊಟ್ಟು ಪೂಜಿಸುತ್ತಿದ್ದರು.

ನನಗೆ ಸ್ವಲ್ಪ ವಯಸ್ಸು ಬಂದ ನಂತರ ಹಾಗೆ ದೊಡ್ಡಮ್ಮನಿಗೆ ಪೂಜೆಗಳು ಮಾಡುವುದು ಇಷ್ಟವಾಗಲಿಲ್ಲ. ನನಗೆ ಹದಿನಾರು ವರ್ಷಗಳ ವಯಸ್ಸಿನಲ್ಲಿಯೇ ದೇವತೆಗಳ ಪೂಜೆಗಳನ್ನು ಪೂರ್ತಿ ವಿರೋಧಿಸಿ "ನಾನು ಯಾವ ದೇವತೆಗು ಮುಗಿಯುವುದಿಲ್ಲ, ಯಾವ ದೇವತೆಯನ್ನು ಪೂಜಿಸುವುದಿಲ್ಲ." ಎಂದು ಹೇಳುವುದಾಗಿದೆ. ಅಂದಿನಿಂದ ದೇವತಾ ಪೂಜೆಗಳಿಗೆ ವಿರುದ್ಧವಾಗಿ ಬದಲಾಗಿಹೋಗುವುದು ನಡೆದಿದೆ. ನನ್ನ ಭಾವನೆಗಳನ್ನು ನೋಡಿದ ಬಹಳಜನ ನನ್ನನ್ನು ಅಜ್ಞಾನಿ, ಅಹಂಕಾರಿ ಎನ್ನುವುದು ನಡೆದಿದೆ. ಯಾರು ಏನೆಂದರೂ ನಾನು ದೇವತೆಗಳ ಪೂಜೆಗಳನ್ನು ಮಾಡುವುದಿಲ್ಲ, ನಿಮಗಿಷ್ಟವಾದರೆ ನೀವು ಮಾಡಿಕೊಳ್ಳಿಯೆಂದು ಹೇಳುತ್ತಿದ್ದೆನು. ಹೀಗೆ ಸ್ವಲ್ಪಕಾಲ ಕಳೆದು ನನ್ನ ವಯಸ್ಸು ಸುಮಾರು 25 ವರ್ಷಗಳಿರುವಾಗ ಸ್ವತಃವಾಗಿ ನಾನು ಒಂದು ಗ್ರಂಥವನ್ನು ಬರೆಯುವುದು ನಡೆದಿದೆ. ಅದೇ ನನ್ನ ಮೊದಲ ಗ್ರಂಥ, ಹೆಸರು **"ಪ್ರಬೋಧ"** ಪ್ರಬೋಧ ಗ್ರಂಥವೊಂದರ ಬರಹ ಪ್ರತಿಯನ್ನು ತೆಗೆದುಕೊಂಡುಹೋಗಿ ಅನುಭವಜ್ಞರಾದ ಹಿರಿಯರಿಗೆ ತೋರಿಸುವುದು ಒಳ್ಳೆಯದೆಂದು ತಿಳಿದು ರಮಣಾನಂದ ಭಾರತಿ ಎಂಬ ಅದ್ವೈತ ಸ್ವಾಮೀಜಿ ಹತ್ತಿರಕ್ಕೆ ತೆಗೆದುಕೊಂಡು ಹೋಗಿ ತೋರಿಸುವುದು ನಡೆದಿದೆ. ಆಗ ಆ ಸ್ವಾಮೀಜಿ ಆ ಬರಹ ಪ್ರತಿಯನ್ನು ನೋಡಿ ಸಂತೋಷಪಟ್ಟು, "ನಿನಗೆ ಗುರು ಯಾರು?" ಎಂದು ಕೇಳಿದನು. ಆಗ "ನನಗೆ ಗುರು ಯಾರೂ ಇಲ್ಲ" ಎಂದು ಹೇಳಿದೆನು. ಅದಕ್ಕೆ ಆತನು ಎಷ್ಟೋ ಜ್ಞಾನ ಇರುವ ಗ್ರಂಥ ಬರೆದ ನಂತರ ತಪ್ಪದೆ ಗುರು ಇರಬೇಕೆಂದು ಹೇಳಿದ್ದಾನೆ. ಗುರೂಪದೇಶವನ್ನು ನಾನುಕೊಡುತ್ತೇನೆ ನೀನು ನನಗೆ ಶಿಷ್ಯನು ಆಗೆಂದನು. ಅದಕ್ಕೆ ನಾನು ಒಪ್ಪಿಕೊಂಡೆನು.

ಆಗಲೇ ಅದೇ "ಪ್ರಬೋಧ" ಗ್ರಂಥದಲ್ಲಿ ಗುರೂಪದೇಶವನ್ನು ಕುರಿತು ಬರೆದಿದ್ದೇನೆ. **"ಆತ್ಮಶಕ್ತಿ ಎಂಬ ಅಗ್ನಿಯನ್ನು ಶಿಷ್ಯನಿಗೆ ದಾನ ಮಾಡುವವನೇ ಗುರು"** ಎಂದು ಹೇಳಿದ್ದೇನೆ. ಆಗ ಆ ಸ್ವಾಮಿಯವರು ಪೂಜಾ ಕಾರ್ಯಕ್ರಮವನ್ನು ಮಾಡಿ ಆ ಪೂಜೆ ಮಧ್ಯದಲ್ಲಿ ಒಂದು ಮಂತ್ರವನ್ನು ಹೇಳಿ ಇದು ನಿನಗೆ

ಗುರುಮಂತ್ರವೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ನೀನು ಗ್ರಂಥವನ್ನು ಬರೆದಿದ್ದೀಯಾ ಅಲ್ಲವೆ! ಆ ಗ್ರಂಥದ ಮೇಲೆ ನಿನ್ನ ಹೆಸರು "ಪೆದ್ದನ್ನ" ಎಂದು ಬರೆಯಬೇಡ. ಈಗ ಗುರೂಪದೇಶ ಪಡೆದ ನಂತರ ನೀನು ಹೊಸ ಜೀವನವನ್ನು ಪ್ರಾರಂಭಿಸಿದಂತಾಗಿದೆ. ಆದುದರಿಂದ ಈಗಿನಿಂದ ನೀನು ಹೊಸ ಹೆಸರಿನಿಂದ ಚಲಾವಣೆ ಆಗಬೇಕಾಗಿದೆಯೆಂದು ಹೇಳಿದ್ದಾನೆ. ಸರಿಯೆಂದು ಆ ಸ್ವಾಮಿ ಮಾತಿನ ಪ್ರಕಾರ ಒಪ್ಪಿಕೊಂಡೆನು. ಆಗಾಗಲೇ ನಾನು **"ಪ್ರಬೋಧ"** ಎಂಬ ಹೆಸರಿನಿಂದ ಗ್ರಂಥವನ್ನು ಬರೆದಿರುವುದರಿಂದ ನನ್ನ ಹೆಸರನ್ನು **"ಪ್ರಬೋಧಾನಂದ"** ನಾಗಿ ಬರೆದುಕೊಂಡು ಅದೇ ಹೆಸರನ್ನೇ ಹೊರಗೆ ಹೇಳಿಕೊ ಎಂದಿದ್ದಾನೆ. ಅಂದಿನಿಂದ ಆತನು ಹೇಳಿದಂತೆ ಹೆಸರನ್ನು ಬದಲಿಸಿಕೊಂಡು ಪ್ರತಿ ಗ್ರಂಥದ ಮೇಲೆ ರಚಯಿತನ ಹೆಸರಿನ ಹತ್ತಿರ 'ಪ್ರಬೋಧಾನಂದ' ಎಂದು ಬರೆಯುವುದು ನಡೆಯುತ್ತಾಬಂದಿದೆ. ಅದಕ್ಕೂ ಮೊದಲೇ ಗ್ರಂಥವನ್ನು ಬರೆಯದ ಮುನ್ನವೇ ಕೆಲವು ವರ್ಷಗಳಿಂದ ಅಂದರೇ ನನ್ನ ವಯಸ್ಸು 18 ವರ್ಷಗಳಿಂದ ದೆವ್ವಗಳು, ದೇವತೆಗಳು ನನ್ನೊಂದಿಗೆ ಮಾತನಾಡುವಾಗ "ಸ್ವಾಮಿ" ಎಂದು ಸಂಬೋಧಿಸಿ ಕರೆಯುತ್ತಿದ್ದರು, ನಂತರ ಒಬ್ಬ ಸ್ವಾಮಿಯ ಬಳಿ ನನ್ನ ಹೆಸರು ಪೂರ್ತಿಯಾಗಿ ಬದಲಾಗುವುದು ನಡೆದಿದೆ. ಪೆದ್ದನ್ನ ಎಂಬ ಹೆಸರು ಪೂರ್ತಿಯಾಗಿ ಕಣ್ಮರೆಯಾಗಿ ಹೋಗಿದೆ. ಪ್ರಪಂಚದಲ್ಲಿ ನನ್ನ ಹೆಸರು ಪ್ರಬೋಧಾನಂದನಾಗಿ ಹೇಳಲ್ಪಡುತ್ತಿದ್ದರೂ, ಆಧ್ಯಾತ್ಮಿಕದಲ್ಲಿ ಇನ್ನೂ ಸ್ವಲ್ಪ ಬದಲಾವಣೆಬಂದು ಪ್ರಬೋಧಾನಂದ ಯೋಗೀಶ್ವರರಾಗಿ ಬದಲಾಗಿಹೋಗಿದೆ. ಒಬ್ಬ ಸ್ವಾಮೀಜಿ ಪ್ರಬೋಧಾನಂದ ಯೆಂದು ನಾಮಕರಣ ಮಾಡಿದಾಗ, ಒಂದು ದೇವತೆ ಬಂದು "ನೀನು ಯೋಗೀಶ್ವರನು, ನಿನ್ನ ಮುಂದೆ ನಾವು ನಿಲ್ಲಲಾರೆವು." ಎಂದು ಹೇಳುವುದು ನಡೆದಿದೆ. ಒಬ್ಬ ದೇವತೆಯಿಂದ ನನ್ನ ಹೆಸರಿನ ಕೊನೆಯಲ್ಲಿ **"ಯೋಗೀಶ್ವರ"** ಎಂಬ ಪದ ಸೇರಿಹೋಗಿದೆ. ನಂತರ ದೇವತೆ ಎರಡುಬಾರಿ ನನ್ನ ಮುಂದಕ್ಕೆ ಬಂದಾಗ **"ಯೋಗೀಶ್ವರ"** ಎಂದು ಸಂಬೋಧಿಸುವುದು ನಡೆದಿದೆ. ಹೀಗೆ ನನ್ನ ಹೆಸರು ಇತರರಿಂದ ಬದಲಾಗುತ್ತಾ ಬಂದಿದೆ ಆದರೇ, ನನ್ನಿಷ್ಟಕ್ಕೆ ನಾನು ಬದಲಾಯಿಸಿಕೊಳ್ಳಲಿಲ್ಲ.

**ಪ್ರಶ್ನೆ :– ಆದಿಶಂಕರಚಾರ್ಯರು ಭಗವದ್ಗೀತೆಗೆ ಭಾಷ್ಯ ಬರೆದಿದ್ದಾರೆ. ಹಾಗೆ ರಾಮಾನುಜಾಚಾರ್ಯರು ಗೀತಾಭಾಷ್ಯವನ್ನು ಬರೆದಿದ್ದಾರೆ. ನಂತರ ಮಧ್ವಾ ಚಾರ್ಯರು ಸಹ ಭಗವದ್ಗೀತೆಗೆ ವಿವರವನ್ನು ಬರೆದಿದ್ದಾರೆ. ಮೂವರು ಸಿದ್ಧಾಂತಕರ್ತರೊಂದರ ಸಿದ್ಧಾಂತಗಳು ಬೇರೆಬೇರೆ ಇರುವುದರಿಂದ ಅವರು ಬರೆದ ಭಗವದ್ಗೀತೆಗಳಲ್ಲಿ ಬೇರೆಬೇರೆ ಭಾವಗಳಿರುತ್ತವಾ? ಭಗವದ್ಗೀತೆಯನ್ನು ಹೇಳಿದವನು ಭಗವಂತನು ಆಗಿರುವುದರಿಂದ ಆತನ ಭಾವನೆ ಪ್ರಕಾರ ಭಗವದ್ಗೀತೆಯನ್ನು ಹೇಳುವುದು ನಡೆದಿದೆ. ಅಂತಹ ಭಗವದ್ಗೀತೆಯಲ್ಲಿ ಮೂವರು ಆಚಾರ್ಯರು ಅವರ ಭಾವನೆಗಳನ್ನು ಬಿಟ್ಟು ಭಗವಂತನ ಭಾವಗಳನ್ನೇ ಬರೆದಿದ್ದಾರಾ ಅಥವಾ ಭಗವದ್ಗೀತೆಯನ್ನು ಅವರ ಸಿದ್ಧಾಂತ ಭಾವಕ್ಕೆ ಮಾರ್ಪಡಿಸಿ ಬರೆದಿದ್ದಾರಾ?**

**ಉತ್ತರ :–** ಭಗವದ್ಗೀತೆಯೊಳಗೆ ಸಿದ್ಧಾಂತಕರ್ತರ ಭಾವನೆಗಳನ್ನು ಸೇರಿಸಲಿಲ್ಲ. ಅವರ ಭಾವನೆಗಳನ್ನು ಸೇರಿಸುವುದಕ್ಕೆ ಭಗವದ್ಗೀತೆಯಲ್ಲಿ ಎಲ್ಲಿಯೂ ಅವಕಾಶ ಇಲ್ಲ. ಆದರೆ ಭಗವಂತನು ಹೇಳಿದ ಶ್ಲೋಕಗಳಿಗೆ ಭಾವವನ್ನು ಬರೆಯಬೇಕೆಂಬ ಉದ್ದೇಶದಿಂದ ಮೊದಲು ಶಂಕರರವರು ಭಗವದ್ಗೀತೆಗೆ ವಿವರವನ್ನು ಬರೆಯುವುದು ನಡೆದಿದೆ. ಶಂಕರಾಚಾರ್ಯರವರು ಒಳ್ಳೆಯ ಉದ್ದೇಶದಿಂದ ಆರಂಭ ಮಾಡಿದರೂ ಕೆಲವು ಶ್ಲೋಕಗಳಿಗೆ ವಿವರವನ್ನು ಬರೆಯುವುದರಲ್ಲಿ ದೇವರ ಭಾವನೆಯನ್ನು ಗುರುತಿಸಲಾರದೆಹೋಗಿ ದೇವರ ಭಾವಕ್ಕಿಂತ ಭಿನ್ನವಾಗಿ ಬರೆಯುವುದು ನಡೆದಿದೆ. ಆ ವಿಧವಾಗಿ ಕೆಲವು ಶ್ಲೋಕಗಳ ಭಾವನೆಗಳು ದೈವಮಾರ್ಗವನ್ನು ಬಿಟ್ಟು ಪಕ್ಕದಾರಿಗೆ ಹೋಗಿವೆ. ಉದಾಹರಣೆಗೆ ಜ್ಞಾನಯೋಗ ಎಂಬ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿ ಭಗವಂತನು **"ಚಾತುರ್ವರ್ಣ್ಯಮ್"** ಎಂದು ಹೇಳಿದಾಗ ಆ ಶ್ಲೋಕದಲ್ಲಿ ಭಗವಂತನು ಹೇಳದ ಭಾವನೆಯನ್ನು ಆದಿಶಂಕರಾ ಚಾರ್ಯರವರು ನಾಲ್ಕು ಕುಲಗಳಾಗಿ ವರ್ಣಿಸಿ ಹೇಳುವುದು ನಡೆದಿದೆ. ಆದರೆ ಭಗವದ್ಗೀತೆಯಲ್ಲಿ ದೇವರು ಎಂದಿಗೂ ಕುಲ ಪ್ರಸಕ್ತಿಯನ್ನು ತನ್ನ ಶ್ಲೋಕಗಳಲ್ಲಿ ಹೇಳಲಿಲ್ಲ. ಅಲ್ಲಿ ಶ್ಲೋಕಗಳಲ್ಲಿಲ್ಲದ ಭಾವನೆಯನ್ನು ಹೇಳಿರುವುದರಿಂದ, ಇರುವ ಭಾವನೆಯನ್ನು ಗುರುತಿಸದೆ ಇರುವುದರಿಂದ

ಭಗವದ್ಗೀತೆ ಕೆಲವು ಶ್ಲೋಕಗಳ ಹತ್ತಿರ ಅಜ್ಞಾನದಾರಿ ಹಿಡಿದಿದೆ ಆದರೇ, ಸಿದ್ಧಾಂತ ಕರ್ತರೊಂದರ ಸಿದ್ಧಾಂತಗಳ ದಾರಿ ಹಿಡಿಯಲಿಲ್ಲ.

ಮೊದಲು ಭಗವದ್ಗೀತೆ ಭಾಷ್ಯವನ್ನು ಬರೆದವರು ಶಂಕರಾಚಾರ್ಯರು. ಅದರಲ್ಲಿ ತನ್ನ ಅದ್ವೈತವನ್ನು ಸೇರಿಸಲಾಗದೆ ಹೋಗಿದ್ದಾನೆ ಆದರೇ, ಶ್ಲೋಕಗಳಿಗೆ ತಪ್ಪು ಭಾವವನ್ನು ಹೇಳಿದ್ದಾನೆ. ಆತನ ನಂತರ ಬಂದಿರುವ ಸಿದ್ಧಾಂತಕರ್ತರಾದ ರಾಮಾನುಜರವರು, ಆ ನಂತರ ಬಂದಿರುವ ಮಧ್ವಾಚಾರ್ಯರವರು ಭಗವದ್ಗೀತೆಗೆ ವಿವರವನ್ನು ಬರೆದರೂ ಸಹ ತಮ್ಮ ಸಿದ್ಧಾಂತಗಳನ್ನು ಭಗವದ್ಗೀತೆಯೊಳಗೆ ಸೇರಿಸಲಾರದೆಹೋಗಿದ್ದಾರೆ. ಅವರು ಸಹ ಶಂಕರಾಚಾರ್ಯ ರವರು ಬರೆದಂತೆಯೇ ಕೆಲವು ಶ್ಲೋಕಗಳಿಗೆ ತಪ್ಪು ಭಾವನೆಗಳನ್ನು ಬರೆದಿದ್ದಾರೆ. ಮೊದಲು ಬರೆದ ಶಂಕರಾಚಾರ್ಯರನ್ನು ಅನುಸರಿಸಿ ಉಳಿದ ಇಬ್ಬರು ಸಿದ್ಧಾಂತಕರ್ತರು ಬರೆಯುವುದಾಗಿದೆ. ಒಂದು ಶ್ಲೋಕಕ್ಕೆ ವಿವರವನ್ನು ಹೇಳುವುದರಲ್ಲಿ ಒಬ್ಬರು ಹೇಳಿರುವುದಕ್ಕಿಂತಲೂ ಇನ್ನೊಬ್ಬರು ಹೆಚ್ಚು ಹೇಳುವುದೋ, ಕಡಿಮೆ ಹೇಳುವುದೋ ಮಾಡಿದ್ದಾರೆ ಆದರೇ, ಪೂರ್ತಿ ಒಬ್ಬರಿಗೊಬ್ಬರು ವಿರುದ್ಧವಾಗಿ ಯಾರೂ ಬರೆಯಲಿಲ್ಲ. ಪುರುಷೋತ್ತಮ ಪ್ರಾಪ್ತಿ ಯೋಗ ಎಂಬ ಅಧ್ಯಾಯದೊಳಗೆ ಹೋದಾಗ ಅಲ್ಲಿರುವ "ತ್ರೈತ ಸಿದ್ಧಾಂತ" ಮೊದಲು ಶಂಕರನಿಗೆ ಅರ್ಥವಾಗಲಿಲ್ಲ. ಅಲ್ಲಿರುವ ಭಾವವನ್ನು ಪೂರ್ತಿಯಾಗಿ ಬಿಟ್ಟವನಾಗಿ ಬೇರೆ ಭಾವನೆಯಲ್ಲಿ ಅಲ್ಲಿ ವಿವರಿಸುವುದು ನಡೆದಿದೆ. ಭಗವದ್ಗೀತೆ ಯಲ್ಲಿ ಸತ್ಯವಾದ ಸಿದ್ಧಾಂತ ಇರುವಕಡೆ ಅರ್ಥವಾಗದಿರುವುದರಿಂದ ಅಲ್ಲಿ ಯಾವ ಸಂಬಂಧವಿಲ್ಲದ ಭಾವವನ್ನು ಶಂಕರಾಚಾರ್ಯರು ಮೊದಲು ಬರೆದರೆ ನಂತರ ಅದನ್ನೇ ಎಲ್ಲರೂ ಅನುಸರಿಸಿದ್ದಾರೆ. ಇಂದಿಗೂ ಮೂನ್ನೂರು ಜನರು ಭಗವದ್ಗೀತೆಗೆ ಭಾಷ್ಯವನ್ನು ಬರೆದರೆ ಎಲ್ಲರೂ ಅದೇ ದಾರಿ ಹಿಡಿದು ಮೊದಲು ಬರೆದಿರುವುದನ್ನೇ ಬರೆಯುವುದು ನಡೆದಿದೆ. ಕೊನೆಯವರೆಗು ಅದೇ ನಡೆದಾಗ ನಾವು ಬರೆದ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯಲ್ಲಿ ತಪ್ಪು ಭಾವಗಳನ್ನು ಶ್ಲೋಕಗಳೆಲ್ಲವುಗಳಿಗು ಮಾರ್ಪಡಿಸಿ ಸರಿಯಾದ ಭಾವನೆಯನ್ನು ಬರೆಯುವುದು

ನಡೆದಿದೆ. ಹಾಗೆ ಬರೆಯುವುದೇ ಅಲ್ಲದೆ ಭಗವದ್ಗೀತೆಯಲ್ಲಿ ದೇವರು ಹೇಳಿದ ತ್ರೈತ ಸಿದ್ಧಾಂತ ಭಾವವನ್ನು ಹೊರಗೆ ತಂದು ತೋರಿಸುವುದು ನಡೆದಿದೆ. ದೇವರು ಹೇಳದ ಶ್ಲೋಕಗಳನ್ನು ಗುರುತಿಸಿ ಇವುಗಳನ್ನು ದೇವರು ಹೇಳಲಿಲ್ಲವೆಂದು ಪ್ರಕಟಿಸುವುದಾಗಿದೆ.

**ಪ್ರಶ್ನೆ :– ಭಗವದ್ಗೀತೆಯಲ್ಲಿ ಭಗವಂತನು ಹೇಳದ ಶ್ಲೋಕಗಳಿವೆಯೆಂದು ನೀವು ಹೇಳಿದ್ದೀರಾ ಅಲ್ಲವೆ! ಆ ಶ್ಲೋಕಗಳನ್ನು ಸಂಸ್ಕೃತ ಪಾಂಡಿತ್ಯ ಇರುವವರೇ ಬರೆದಿರಬೇಕು. ಭಗವದ್ಗೀತೆ ಭಾಷ್ಯವನ್ನು ಬರೆದಿರುವ ಮೂವರು ಸಿದ್ಧಾಂತಕರ್ತರು ಸಂಸ್ಕೃತ ಪಾಂಡಿತ್ಯ ಇರುವವರೇ. ಸಿದ್ಧಾಂತಕರ್ತರಲ್ಲಿ ಯಾರಾದರೂ ಅವರ ಸ್ವಂತ ಶ್ಲೋಕಗಳನ್ನು ಭಗವದ್ಗೀತೆಯಲ್ಲಿ ಸೇರಿಸಿದ್ದಾರಾ? ಅಥವಾ ಇನ್ಯಾರಾದರೂ ಸೇರಿಸಿದ್ದಾರಾ?**

**ಉತ್ತರ :–** ವ್ಯಾಸನು ಬರೆದ ಭಗವದ್ಗೀತೆಯಲ್ಲಿ ಇಲ್ಲದ ಶ್ಲೋಕಗಳು ನಂತರ ಕಾಲದಲ್ಲಿ ಬರುವುದು ನಡೆದಿದೆ. ಆದಿಶಂಕರಾಚಾರ್ಯರು 'ಗೀತಾ ಭಾಷ್ಯ'ವನ್ನು ಬರೆಯದ ಮೊದಲೇ ಭಗವದ್ಗೀತೆಯೊಳಗೆ ಕಲ್ಪಿತ ಶ್ಲೋಕಗಳು ಸೇರಿಹೋಗಿವೆ. ಆ ಕಲ್ಪಿತ ಶ್ಲೋಕಗಳನ್ನು ಮೂವರು ಆಚಾರ್ಯರು ಬಹುಶಃ ಗ್ರಹಿಸದಿರಬಹುದು. ಒಂದುವೇಳೆ ಗ್ರಹಿಸಿದರೂ ಇವು ಕಲ್ಪಿತ ಶ್ಲೋಕಗಳೆಂದು ಹೊರಗೆ ಹೇಳುವ ಸಾಹಸ ಮಾಡದೆ ಇರಬಹುದು. ಭಗವದ್ಗೀತೆಯನ್ನು ಹೇಳಿ ಐದುಸಾವಿರ ವರ್ಷಗಳಾದರೆ, ಕಲ್ಪಿತ ಶ್ಲೋಕಗಳು ಬಹುಶಃ ನಾಲ್ಕು ಸಾವಿರ ವರ್ಷಗಳ ಪೂರ್ವವೇ ಭಗವದ್ಗೀತೆಯಲ್ಲಿ ಬೆರೆತುಹೋಗಿರಬಹುದು. ಅಂದಿನಿಂದ ಇಂದಿನವರೆಗೂ ಅವು ಹಾಗೆ ಕೊನೆಸಾಗುತ್ತಾ ಬಂದಿವೆ. ನಾವು ಭಗವದ್ಗೀತೆಯನ್ನು ನೋಡಿದಾಗ ಕಲ್ಪಿತ ಶ್ಲೋಕಗಳನ್ನು ಗ್ರಹಿಸಿದ್ದೇವೆ. ನಾವು ತ್ರೈತ ಸಿದ್ಧಾಂತ ಸಹಿತವಾಗಿ ಭಗವದ್ಗೀತೆಯನ್ನು ಬರೆಯಬೇಕೆಂದುಕೊಂಡಾಗ ಇವು ಕಲ್ಪಿತ ಶ್ಲೋಕಗಳೆಂದು ಅವುಗಳನ್ನು ಗುರುತಿಸಿ ತೋರಿಸುವುದಾಗಿದೆ. ನಾವು ಬರೆದ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯಲ್ಲಿ ಕಲ್ಪಿತ ಶ್ಲೋಕಗಳನ್ನು ಬೇರೆಯಾಗಿ ತೋರಿಸುವುದಲ್ಲದೆ ಅವುಗಳಿಗೆ ವಿವರವನ್ನು ಬರೆಯಲಿಲ್ಲ. ವ್ಯಾಸನು ಬರೆದಾಗ

ಇಲ್ಲದ ಶ್ಲೋಕಗಳನ್ನು ಭಗವದ್ಗೀತೆಯಲ್ಲಿ ಯಾರು ಬೆರೆಸಿದ್ದಾರೆ? ಎಂದು ಸ್ವಲ್ಪ ಯೋಚಿಸಿದರೆ ಸುಲಭವಾಗಿ ಸಮಾಧಾನ ದೊರೆಯುತ್ತದೆ. ಅಲ್ಲಿ ಯಾವ ಶ್ಲೋಕಗಳನ್ನು ಸೇರಿಸಿದ್ದಾರೋ ಆ ಶ್ಲೋಕಗಳ ಸಾರಾಂಶವೇನೊ ಗ್ರಹಿಸಿದರೆ ಆ ಶ್ಲೋಕಗಳ ಭಾವನೆಗಳಿರುವವರು, ಆ ಶ್ಲೋಕಗಳನ್ನು ಭಗವದ್ಗೀತೆಯಲ್ಲಿ ಬೆರೆಸಿದ್ದಾರೆಂದು ಸುಲಭವಾಗಿ ತಿಳಿದುಹೋಗುತ್ತದೆ.

**ಪ್ರಶ್ನ :– ಸಂಸ್ಕೃತ ಪಂಡಿತರಾದವರು ಆದಿಶಂಕರಚಾರ್ಯರು ಮೊದಲಾದ ಸಿದ್ಧಾಂತಕರ್ತರು ಎಷ್ಟೋ ಸೂಕ್ಷ್ಮಗ್ರಹಗಳು ಗ್ರಹಿಸಲಾರದ ಕಲ್ಪಿತ ಶ್ಲೋಕಗಳನ್ನು ನೀವು ಗ್ರಹಿಸಿದ್ದೀರೆಂದು ಹೇಳಿಕೊಳ್ಳುವುದರಿಂದ 'ಅವರಿಗಿಂತ ನಾನು ದೊಡ್ಡವನು' ಎನ್ನುವಂತಿದೆ. ಸಂಸ್ಕೃತ ಪಾಂಡಿತ್ಯ ಇರುವವರಿಗಿಂತಲೂ ಸಂಸ್ಕೃತ ಭಾಷೆ ಸರಿಯಾಗಿ ತಿಳಿಯದ ನೀವು ದೊಡ್ಡವರು ಅಲ್ಲವಲ್ಲ! ಮೊದಲು ಬಂದ ಸಿದ್ಧಾಂತಕರ್ತರಿಗಿಂತ ನಾನು ದೊಡ್ಡವನೆಂದು ಕಾಣಿಸುವುದಕ್ಕೆ ನೀವು ಹಾಗೆ ಹೇಳಿತ್ತಿದ್ದೀರೆಂದುಕೊಳ್ಳುತ್ತೇವೆ. ಸಿದ್ಧಾಂತಕರ್ತರಾದ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ರೊಂದಿಗೆ ಹೋಲಿಸಿದರೆ ನೀವು ಎಂಥವರೊ? ಅವರೊಂದಿಗೆ ನೀವು ಸಮಾನ ಎಂದಿಗೂ ಆಗುವುದಿಲ್ಲ ಎಂದು ಕೆಲವರನ್ನಬಹುದು. ಅದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಇದಕ್ಕೂ ಮೊದಲು ಸುಮಾರು ಆರು ತಿಂಗಳ ಕೆಳಗೆ ಹಿಂದೂ ಸಂಘದಲ್ಲಿ ಕೆಲಸಮಾಡುವ ವ್ಯಕ್ತಿ ಸಿದ್ಧಾಂತಕರ್ತರಲ್ಲಿ ಕ್ರಮವಾಗಿರುವ ಪೋಟೋಗಳಲ್ಲಿ ಮಧ್ವಾಚಾರ್ಯರ ನಂತರ ನನ್ನ ಫೋಟೋ ಇರುವುದು ನೋಡಿ ನನ್ನನ್ನು ದೂಷಣೆಯಾಗಿ ಮಾತನಾಡಿದ್ದಾನೆ. ನಮ್ಮ ಭಕ್ತರಾದವರು ಕೆಲವರು ಸಿದ್ಧಾಂತಕರ್ತರ ಫೋಟೋಗಳನ್ನು ಒಂದು ಫ್ಲೆಕ್ಸ್ ಬೋರ್ಡುಮೇಲೆ ಚಿತ್ರಿಸಲಾಗಿದೆ. ಮೊದಲು ಶಂಕರಾಚಾರ್ಯರ ಫೋಟೋವನ್ನು ಇಟ್ಟು ಅದರಕೆಳಗೆ ಆತನು ಹುಟ್ಟಿರುವ ರಾಷ್ಟ್ರ, ಹುಟ್ಟಿದ ವರ್ಷ, ಮರಣಿಸಿದ ವರ್ಷ ಬರೆದಿದ್ದಾರೆ. ಹಾಗೆ ಬರೆಯುವುದರಿಂದ ಸಿದ್ಧಾಂತಕರ್ತರು ಯಾವಾಗ ಹುಟ್ಟಿರುವುದು, ಎಲ್ಲಿ ಹುಟ್ಟಿರುವುದು ಮತ್ತು ಯಾವಾಗ ಮರಣಿಸಿರುವುದು

ವಿವರವೆಲ್ಲಾ ತಿಳಿಯುತ್ತದೆ. ಹಾಗೆ ಮೂವರು ಆಚಾರ್ಯರ ಫೋಟೋಗಳನ್ನು ಇಟ್ಟಿದ್ದಾರೆ. ಮೊದಲು ಶಂಕರಾಚಾರ್ಯರ ಫೋಟೋವನ್ನು, ನಂತರ ರಾಮಾನುಜಾಚಾರ್ಯರ ಫೋಟೋವನ್ನು, ಆ ನಂತರ ಮಧ್ವಾಚಾರ್ಯರ ಫೋಟೋ ಇದೆ. ಮೂರು ಫೋಟೋಗಳ ನಂತರ ಮಧ್ವಾಚಾರ್ಯರ ಪಕ್ಕದಲ್ಲಿ ನನ್ನ ಫೋಟೋವನ್ನು ಇಡಲಾಗಿದೆ. ನನ್ನ ಫೋಟೋದಲ್ಲಿ ಹುಟ್ಟಿದ ಸ್ಥಳವಿದೆ, ಹುಟ್ಟಿದ ವರ್ಷವಿದೆ, ಮರಣಿಸಿರುವುದು ಮಾತ್ರ ಬರೆಯದಂತೆ ಇಟ್ಟಿದ್ದಾರೆ. ಅದನ್ನು ನೋಡಿದ ಹಿಂದೂಪರಿಷತ್ತಿನಲ್ಲಿನ ವ್ಯಕ್ತಿ ಸಂತೋಷಿಸುವುದು ಬಿಟ್ಟು ನನ್ನನ್ನು ದೂಷಿಸುವುದು ಪ್ರಾರಂಭಿಸಿದ್ದಾನೆ. ಇವನು ಶಂಕರಾಚಾರ್ಯ ನಂತಹವನಾ? ಶಂಕರಾಚಾರ್ಯರ ಫೋಟೋ ವರಸೆಯಲ್ಲಿ ಫೋಟೋ ಇಟ್ಟುಕೊಳ್ಳುವುದಕ್ಕೆ ಅರ್ಹನಾ? ಎಂದು ಮೊದಲು ಮಾಡಿದ್ದಾನೆ. ಅಲ್ಲಿಯೇ ನಮ್ಮ ಭಕ್ತನಿರುವುದು ನೋಡದಂತೆ ಮಾತನಾಡಿದ್ದಾನೆ. ಆಗ ನಮ್ಮ ಭಕ್ತನು ಆತನನ್ನು ಎದುರಿಸಿ ಮಾತನಾಡುವುದು ನಡೆದಿದೆ. ಅವರಿಬ್ಬರು ಸ್ವಲ್ಪಸಮಯ ಅಲ್ಲಿಯೇ ವಾದೋಪವಾದಗಳು ಮಾಡಿದ್ದಾರೆ. ಆ ಮಾತುಗಳನ್ನು ಕ್ರಮವಾಗಿ ನೋಡಿರಿ.

**ನಮ್ಮ ಭಕ್ತನು :–** ಸುತ್ತಿಚಂದ್ರಾರೆಡ್ಡಿಯವರೆ! ನಿಮಗೆ ಏನು ತಿಳಿದಿದೆಯೆಂದು ಪ್ರಬೋಧಾನಂದ ಯೋಗೀಶ್ವರರನ್ನು ವಿಮರ್ಶಿಸುತ್ತಿದ್ದೀರ. ಡಾಕ್ಟರ್ಸ್ ವರಸೆ ಕ್ರಮದಲ್ಲಿ ಡಾಕ್ಟರ್‌ಗಳ ಹೆಸರಿರುತ್ತದೆ, ಕಾರ್ಮಿಕರ ಲಿಸ್ಟಿನಲ್ಲಿ ಕಾರ್ಮಿಕನ ಹೆಸರಿರುತ್ತದೆ. ಯಾರಿಗೆ ಸಂಬಂಧಿಸಿದವರ ಹೆಸರು ಆ ವರಸೆಯಲ್ಲಿಯೇ ಇರುತ್ತದೆ. ತಾತ M.B.B.S ಕೋರ್ಸು ಓದಿ ಡಾಕ್ಟರ್ ಕೆಲಸ ಮಾಡಿದ್ದಾನೆಂದುಕೊಳ್ಳಿ, ನಂತರ ಸ್ವಲ್ಪ ಕಾಲಕ್ಕೆ ಆತನ ಮೊಮ್ಮಗ ಸಹ ಡಾಕ್ಟರ್ ಕೋರ್ಸುಮಾಡಿ ಇಂತಹ ಡಾಕ್ಟರು ಎಂದು ಬರೆದು ಆತನ ಪಕ್ಕದಲ್ಲಿ M.B.B.S ಎಂದು ಬರೆದಿಟ್ಟಿದ್ದಾನೆಂದುಕೊಳ್ಳಿ, ಆಗ ಇವನು ತಾತನಂಥವನಾ, ತಾತ M.B.B.S ಆದರೆ ಇವನು M.B.B.S ಆಗುತ್ತಾನಾ ಎಂದು ಅಂದರೇ ಅದನ್ನು ತಿಳುವಳಿಕೆಯಿಲ್ಲದ ಮಾತು ಎನ್ನುತ್ತಾರೆ. ತಾತ ಓದಿದ ಕೋರ್ಸನ್ನು ಮೊಮ್ಮಗ

ಓದಬಾರದಾ? ಓದಿದಾಗ ತಾತಾ ಡಾಕ್ಟರೇ, ಮೊಮ್ಮಗ ಡಾಕ್ಟರೇ ಆಗುತ್ತಾನೆ ಅಲ್ಲವೆ! ತಾತ ಮೊಮ್ಮಗ ಒಂದೇ ಹಾಸ್ಪಿಟಲ್‌ನಲ್ಲಿ ಕೆಲಸ ಮಾಡುತ್ತಿದ್ದಾರೆಂದು ಕೊಳ್ಳಿ. ಆಗ ಡ್ಯೂಟಿಗಳ ಪ್ರಕಾರ ತಾತನ ಹೆಸರಿನ ಪಕ್ಕದಲ್ಲಿಯೇ ಮೊಮ್ಮಗನ ಹೆಸರು ಸಹ ಬರೆಯುವುದು ನಡೆಯುತ್ತದೆ. ಆಗ ಇವನು ತಾತನಂತಹವನಾ ಎಂದರೆ ಆ ಮಾತು ತಿಳುವಳಿಕೆ ಇಲ್ಲದ ಮಾತಾಗುತ್ತದೆ. ತಾತನಗಿರುವ ಡಿಗ್ರಿ ಮೊಮ್ಮಗನಿಗಿರುವಾಗ ಆ ವಿದ್ಯೆಯಲ್ಲಿ ಇಬ್ಬರೂ ಸಮಾನವೇ ಅಲ್ಲವೆ! ಇಬ್ಬರದು ಡಿಗ್ರಿ ಒಂದೇ ಅಲ್ಲವೆ!

**ಸು.ರೆ ;–** ಅದು ವಿದ್ಯೆ. ಇದು ಜ್ಞಾನ. ವಿದ್ಯೆಯಲ್ಲಿ ಸಮಾನವಾದ ಡಿಗ್ರಿಗಳಿರಬಹುದು. ಜ್ಞಾನದಲ್ಲಿ ದೊಡ್ಡವ ದೊಡ್ಡವನೇ, ಚಿಕ್ಕವ ಚಿಕ್ಕವನೇ.

**ನಮ್ಮ ಭಕ್ತ :–** ಈಗ ಯಾರು ದೊಡ್ಡವರೆನ್ನುತ್ತೀಯಾ ಯಾರು ಚಿಕ್ಕವರೆನ್ನುತ್ತಿಯಾ?

**ಸು.ರೆ :–** ಆದಿಶಂಕರನು ಎಲ್ಲಿ? ನಿಮ್ಮ ಸ್ವಾಮೀ ಎಲ್ಲಿ? ಆತನ ದೊಡ್ಡತನದಲ್ಲಿ ಅಣುವಷ್ಟು ಸಹ ಅರ್ಹತೆ ಇಲ್ಲದವರು ಆತನ ಫೋಟೋ ಪಕ್ಕದಲ್ಲಿ ತನ್ನ ಫೋಟೋ ಇಟ್ಟುಕೊಳ್ಳುತ್ತಾರಾ? ಒಬ್ಬ ಹಿಂದೂವಾಗಿ ನಾನು ಒಪ್ಪಿಕೊಳ್ಳುವುದಿಲ್ಲ.

**ನ.ಭ :–** ನೀನು ಹಿಂದೂವಾಗಿದ್ದು ಹಿಂದೂವಾದ ಒಬ್ಬ ಸ್ವಾಮೀಜಿಯನ್ನು ಕಡಿಮೆಮಾಡಿ ಮಾತನಾಡುವುದು ನಾವು ಸಹ ಒಪ್ಪಿಕೊಳ್ಳುವುದಿಲ್ಲ. ಶಂಕರಾಚಾರ್ಯರಿಗಿಂತಲೂ ನಮ್ಮ ಸ್ವಾಮಿ ಯಾವುದರಲ್ಲಿ ಕಡಿಮೆಯವನೋ ಹೇಳಿರಿ ನೋಡೋಣ.

**ಸು.ರೆ :–** ಶಂಕರರು ಎಷ್ಟೋ ಕಾಲ ಹಿಂದೆ ಹುಟ್ಟಿದವರು, ನಿಮ್ಮ ಸ್ವಾಮಿ ಅವರ ನಂತರ ಹುಟ್ಟಿದವನು. ಶಂಕರನೊಂದಿಗೆ ಸಮಾನ ಹೇಗಾಗುತ್ತಾನೆ?

**ನ.ಭ :–** ನಿಮ್ಮ ಮನೆಯಲ್ಲಿ ಮೊದಲು ಹುಟ್ಟಿದವನು ನೀನಿರುವಾಗ ಹಿಂದೆ ಹುಟ್ಟಿದ ನಿನ್ನ ಮಗನಿಗೆ ಮದುವೆ ಏಕೆ ಮಾಡಿದ್ದೀಯಾ? ನಾನು ಮದುವೆ ಮಾಡಿಕೊಂಡಿದ್ದೇನೆ. ಇವನು ನನಗಿಂತ ಹಿಂದೆಹುಟ್ಟಿ ನನ್ನೊಂದಿಗೆ ಸಮಾನವಾಗಿ

ಮದುವೆ ಮಾಡಿಕೊಳ್ಳುತ್ತಾನಾ ಎಂದು ದೂಷಿಸದೆ ನೀನೆ ಯಾಜಮಾನಿಕೆ ಮಾಡಿ ನಿನ್ನ ಮಗನಿಗೆ ಮದುವೆ ಮಾಡಿದ್ದೀಯಾ ಅಲ್ಲವೆ! ಈ ವಿಷಯದಲ್ಲಿ ನನ್ನ ಮಗ ನನ್ನೊಂದಿಗೆ ಸಮಾನವಾಗಿ ಮದುವೆ ಮಾಡಿಕೊಳ್ಳುತ್ತಾನಾ! ಎಂದು ಏಕೆ ಅಂದುಕೊಳ್ಳಬಾರದು? ಮನೆಯಲ್ಲಿನದು ಒಂದು ವಿಧ ಹೊರಗಿನದು ಮತ್ತೊಂದು ವಿಧವಾ?

**ಸು.ರೆ :–**ಪ್ರಪಂಚ ವಿಷಯಗಳನ್ನು ತಂದು ಜ್ಞಾನದೊಂದಿಗೆ ಮುಡಿಹಾಕಿ ಹೇಳಬೇಡ. ಶಂಕರಾಚಾರ್ಯರು ದೊಡ್ಡಜ್ಞಾನಿ, ನಿಮ್ಮ ಸ್ವಾಮಿಗೆ ಅಷ್ಟು ಜ್ಞಾನವಿದೆಯಾ?

**ನ.ಭ :–** ನಿನ್ನ ಹತ್ತಿರ ಜ್ಞಾನವನ್ನು ಅಳೆಯುವ ಮೀಟರಿದ್ದರೆ ತಂದು ಅಳತೆಮಾಡಿಕೊ, ಯಾರ ಹತ್ತಿರ ಎಷ್ಟು ಜ್ಞಾನವಿದೆಯೋ ನಿನಗೇ ತಿಳಿಯುತ್ತದೆ. ಮೊದಲು ಹುಟ್ಟಿದವನು ಜ್ಞಾನಿ, ಹಿಂದೆ ಹುಟ್ಟಿದವನು ಅಜ್ಞಾನಿ ಎಂದು ಅಂದುಕೊಂಡರೆ ಅದು ನಿನ್ನ ಅಜ್ಞಾನವೇ ಆಗುತ್ತದೆ. ನಮ್ಮ ಸ್ವಾಮಿ ಹೇಳಿದರೆ ದೇವತೆಗಳು ಸಹ ಮಾತು ಕೇಳುತ್ತಾರೆ. ರೋಗಗಳು ವಿನಯವಾಗಿ ಪ್ರವರ್ತಿಸಿ ದೂರವಾಗಿ ಹೋಗುತ್ತವೆ. ಆತನ ದೃಷ್ಟಿಯಲ್ಲಿಯೇ ಎಷ್ಟೋ ಕರ್ಮಗಳು ಹೋಗುತ್ತವೆ. ಇದೆಲ್ಲಾ ಪ್ರತ್ಯಕ್ಷವಾಗಿ ನೋಡಿದ ನಮಗೆ ತಿಳಿದಿದೆ. ಸಿದ್ಧಾಂತಕರ್ತರ ವರಸೆಯಲ್ಲಿ ಸಿದ್ಧಾಂತಕರ್ತನಾದ ಅವರ ಪೋಟೋವನ್ನು ನಾವು ಇಟ್ಟಿದ್ದೇವೆ. ಅಷ್ಟೇ ಹೊರತು ಅವರೊಂದಿಗೆ ಈತನು ಸಮಾನನೆಂಬ ಉದ್ದೇಶದಿಂದ ನಾವು ಇಡಲಿಲ್ಲ. ವಾಸ್ತವವಾಗಿ ಹೇಳಿದರೆ ನಮ್ಮ ಸ್ವಾಮಿ ಪಕ್ಕದಲ್ಲಿ ಇರುವುದಕ್ಕೆ ಅವರು ಅರ್ಹರೋ ಅಲ್ಲವೋ ಒಂದುಬಾರಿ ನೋಡಿಕೊಳ್ಳಿರಿ!

ಈ ವಿಧವಾಗಿ ಇಬ್ಬರ ಮಧ್ಯ ವಾದೋಪವಾದಗಳು ನಡೆದಿವೆ. ಈದಿನ ಪ್ರಜೆಗಳು ಕುರುಡರಂತೆ ಮಾತನಾಡುವುದು ಹೊರತು ಸ್ವಲ್ಪವೂ ಆಲೋಚಿಸುತ್ತಿಲ್ಲ. ಶರೀರದಲ್ಲಿರುವ ನನ್ನ ಆತ್ಮ ಎಷ್ಟೋ ಬೋಧನೆಗಳು ಹೇಳುತ್ತಿದ್ದರೂ, ಮೇಲ್ನೋಟಕ್ಕೆ ಕಾಣಿಸುವುದು ಮನುಷ್ಯನೇ ಆದ್ದರಿಂದ ಪ್ರಜೆಗಳು ಹೇಳನವಾಗಿ

ಮಾತನಾಡುವುದು, ಅವಮಾನಿಸುವುದು ನಡೆಯುತ್ತಿದೆ. ಜೀವಾತ್ಮ ಭಾವನೆಯಿಂದ ನಾವು ಎಷ್ಟೋ ನೋಡುತ್ತಿದ್ದೇನೆ. ಇತರರಿಂದ ಉಂಟಾಗುವ ತೊಂದರೆಗಳನ್ನು ಬಾಧೆಗಳನ್ನು ಜೀವಿಯಾಗಿರುವ ನಾನೇ ಈ ಶರೀರದಲ್ಲಿ ಅನುಭವಿಸುತ್ತಿದ್ದೇನೆ. ಜೀವಿಯಾದ ನಾನು ಬಾಧೆಯನ್ನು ಅನುಭವಿಸುವುದು ಸಹಜವೇ ಆದರೂ ಅವಮಾನಮಾಡಿದವರು ಆತ್ಮ ಆಗ್ರಹಕ್ಕೆ ಗುರಿಯಾಗುತ್ತಿದ್ದಾರೆ. ಅದರಿಂದ ಅವರು ಅನವಶ್ಯವಾಗಿ ಅನೇಕ ಕಷ್ಟಗಳನ್ನು ಕೊಂಡು ತಂದುಕೊಳ್ಳುತ್ತಿದ್ದಾರೆ. ಒಂದುಕಡೆ ಅನೇಕ ಬಾಧೆಗಳನ್ನು ಅನುಭವಿಸುತ್ತಿದ್ದರೂ ಇವು ಎಲ್ಲಿಯವೆಂದು ಆಲೋಚಿಸಲಾರದೆ ಹೋಗುತ್ತಿದ್ದಾರೆ.

ಇಲ್ಲಿಗೆ ಸುಮಾರು ಹತ್ತು ವರ್ಷಗಳ ಕೆಳಗೆ ಒಂದು ದಿನ ಮಹಾನಂದಿಯಲ್ಲಿ ನಮ್ಮ ಭಕ್ತರಮೇಲೆ ಅನವಶ್ಯವಾಗಿ ಅಲ್ಲಿನವರು ದೂಷಿಸುವುದು ದಾಳಿಮಾಡಿ ಒಬ್ಬರನ್ನು ಒಡೆಯುವುದು ನಡೆದಿದೆ. ನಾವು ಹಿಂದೂಮತದಲ್ಲಿ ಮುಖ್ಯವಾದವರೆಂದು, ಹಿಂದೂ ಧರ್ಮ ರಕ್ಷಕರೆಂದು ಹೇಳಿಕೊಳ್ಳುವವರೇ ಆ ಕೆಲಸವನ್ನು ಮಾಡಿದ್ದಾರೆ. ಅಲ್ಲಿ ದೇವರ ದರ್ಶನಕ್ಕೆ ಹೋದ ನಮ್ಮ ಭಕ್ತರನ್ನು ಪರಮತ ಪ್ರಚಾರಕರೆಂದು ಆರೋಪಣೆ ಮಾಡಿ ದಾಳಿ ಮಾಡುವುದು ನಡೆದಿದೆ. ಆಗ ಆ ವಿಷಯವಾಗಿ ಪ್ರಬೋಧಾನಂದ ಯೋಗೀಶ್ವರರಿಗೆ ಕೋಪ ಬಂದಿದೆ. ಪ್ರಬೋಧಾನಂದ ಯೋಗೀಶ್ವರರು ಎಂದರೇ ಕಾಣಿಸುತ್ತಿರುವ ಶರೀರವೆಂದು, ಈಗ ಮಾತನಾಡುತ್ತಿರುವ ಜೀವಿಯಾದ ನಾನು ಅಲ್ಲ. ಈ ಶರೀರಕ್ಕೆ ಅಧಿಪತಿಯಾದ **'ಮಧ್ವಾತ್ಮ'** ಎಂದು ಗುರುತಿಟ್ಟುಕೊಳ್ಳಬೇಕು. ಶರೀರದಲ್ಲಿ ಈಶ್ವರನಾದವನಿಗೆ ಕೋಪ ಬಂದಿರುವುದರಿಂದ, ಅಲ್ಲಿ ಮನುಷ್ಯರು ಮಾಡಿದ ತೊಡಕು, ತೊಂದರೆಗೆ ಅಲ್ಲಿ ಮಹಾನಂದಿ ಕ್ಷೇತ್ರದಲ್ಲಿ ದೇವರಾಗಿ ಹೇಳಲ್ಪಡುವ ಈಶ್ವರನ ಮೇಲೆ ಶಾಪ ಬಿದ್ದಿದೆ. ಅದರಿಂದ ಈಶ್ವರನು ಮಹಾನಂದಿ ಕ್ಷೇತ್ರ ಬಿಟ್ಟುಹೋಗಿದ್ದಾನೆ. ಹಾಗೆ ನಡೆಯುವುದರಿಂದ ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಬರೆದ ವಾಕ್ಯ ನೆರವೇರಿದೆ. ಬ್ರಹ್ಮಯ್ಯನವರ ಕಾಲಜ್ಞಾನ ವಾಕ್ಯ ಹೀಗೆ ಇದೆ. **"ಮಹಾನಂದಿಯಲ್ಲಿ ಈಶ್ವರನು**

**ಇಲ್ಲ ಎಂಬ ವಾಕ್ಯ ಹುಟ್ಟುತ್ತದೆ"** ಹಾಗೆ ಈಶ್ವರನು ಕ್ಷೇತ್ರವನ್ನು ಬಿಟ್ಟುಹೋದ ನಂತರ ನಡೆಯುವ ಕೆಲವು ಕೆಲಸಗಳನ್ನು ನೋಡಿ ಪ್ರಜೆಗಳೇ ಈಶ್ವರನು ಮಹಾನಂದಿಯಲ್ಲಿ ಇಲ್ಲ ಎಂದು ಅನ್ನುತ್ತಾರೆ. ಅದರಿಂದ ಬ್ರಹ್ಮಯ್ಯನವರ ಮಾತು ಪೂರ್ತಿಯಾಗಿ ನೆರವೇರಿದಂತಾಗುತ್ತದೆ. ಪ್ರಬೋಧಾನಂದ ಯೋಗೀಶ್ವರರು ಹುಟ್ಟುವುದಕ್ಕಿಂತ ಮೊದಲೇ ಸುಮಾರು ನಾಲ್ಕುನೂರು ವರ್ಷಗಳ ಕೆಳಗೇ ಪ್ರಬೋಧಾನಂದ ಯೋಗೀಶ್ವರರನ್ನು ಕುರಿತು ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಬರೆದಿದ್ದಾರೆ.

ಇದಕ್ಕು ಮೊದಲು ಮೂವರು ಸಿದ್ಧಾಂತಕರ್ತರು ಹುಟ್ಟಿದಾಗಾಗಲಿ, ಹುಟ್ಟುವುದಕ್ಕಿಂತ ಪೂರ್ವವಾಗಲಿ ಅವರನ್ನು ಕುರಿತಾದ ಸಮಾಚಾರವನ್ನು ಯಾರೂ ಮುಂಚೆ ಹೇಳಲಿಲ್ಲ. ಪ್ರಬೋಧಾನಂದರು ಹುಟ್ಟುವುದಕ್ಕಿಂತ ಮೊದಲೇ ಪೋತುಲೂರಿ ವೀರಬ್ರಹೇಂದ್ರ ಸ್ವಾಮಿಯವರು ಯೋಗೀಶ್ವರರನ್ನು ಕುರಿತಾದ ಸಮಾಚಾರವನ್ನು ಹೇಳುವುದಾಗಿದೆ. ಹುಟ್ಟಿದ ನಂತರ ಸಹ ಆತನಿಗೆ ತಕ್ಕ **"ಪೆದ್ದನ್ನ"** (ದೊಡ್ಡವ) ಎಂಬ ಹೆಸರನ್ನು ಇಡುವಂತೆ ದೇವತೆಗಳ ಡ್ರಾಮಾ ನಡೆದಿದೆ. ಕಾಲಜ್ಞಾನವನ್ನು ಕಲಿಯುಗದಲ್ಲಿ ಹೇಳಿದವನು ಪೋತುಲೂರಿ ವೀರಬ್ರಹೇಂದ್ರ ಸ್ವಾಮಿಯವರು ಒಬ್ಬರೇ ಎಂದು ಹೇಳಬಹುದು. ಅಷ್ಟುದೊಡ್ಡ ವ್ಯಕ್ತಿಯಾದ ವೀರಬ್ರಹ್ಮಯ್ಯನವರು ಯೋಗೀಶ್ವರರನ್ನು ಕುರಿತು ಎಷ್ಟೋ ವಿಷಯಗಳನ್ನು ಮೊದಲೇ ಹೇಳಿದ್ದಾರೆ. ಪ್ರಬೋಧಾನಂದ ಯೋಗೀಶ್ವರರು ಪ್ರಬೋಧಾಶ್ರಮವನ್ನು ಸ್ಥಾಪಿಸಿ ಅದರಮೂಲಕ ಜ್ಞಾನವನ್ನು ಪ್ರಚಾರ ಮಾಡುವುದನ್ನು ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೀಗೆ ಬರೆದಿದ್ದಾರೆ. **"ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದು"** ಈ ವಾಕ್ಯವನ್ನು ನೋಡಿದ ನಂತರ ಪ್ರಬೋಧಾನಂದ ಯೋಗೀಶ್ವರರು ಎಷ್ಟು ದೊಡ್ಡವರೋ ಅರ್ಥವಾಗುತ್ತದೆ.

**ಪ್ರಶ್ನೆ :- ಪ್ರಬೋಧಾನಂದಸ್ವಾಮಿ ಹಿಂದೂಮತಕ್ಕೆ ವಿರುದ್ಧವಾದ ಮಾತುಗಳು ಹೇಳಿದ್ದಾನೆ. ಆದುದರಿಂದ ಆತನು ಹಿಂದೂ ಅಲ್ಲವೆಂದು ನಾವು ಹೇಳುತ್ತಿದ್ದೇವೆ.**

**ಉತ್ತರ :–** ಪ್ರಬೋಧಾನಂದ ಯೋಗೀಶ್ವರರು ಸಾಧಾರಣ ಮನುಷ್ಯನಲ್ಲ. ಆ ಮನುಷ್ಯನಲ್ಲಿ ಜೀವಿಯಾಗಿರುವ ನನಗೆ ತಿಳಿಯದಂತೆ ಮಾತನಾಡುವುದು ಏನು ಇರುವುದಿಲ್ಲ ಅಲ್ಲವೆ! ಪ್ರಬೋಧಾನಂದ ತ್ರೈತ ಸಿದ್ಧಾಂತಕರ್ತನಾಗಿ ದೈವಜ್ಞಾನವನ್ನು ಹೇಳಿದ್ದರೇ ಅದು ನಿಮಗೆ ಅರ್ಥವಾಗದೆ ಆತನೇ ಹಿಂದೂಗಳಿಗೆ ವಿರೋಧಿ ಎನ್ನುತ್ತಿದ್ದೀರ. ಆತನ ಪರವಾಗಿ ನಾನು ಮಾತನಾಡುತ್ತಿದ್ದೇನೆ. ಆತನ ಮೂಲಕ ಎಷ್ಟೋ ಜನ ಇತರ ಮತದವರು ಸಹ ಹಿಂದೂ ಜ್ಞಾನವನ್ನು ತಿಳಿಯಲ್ಪಟ್ಟಿದ್ದಾರೆ. ನೀವು ಯಾರಾದರೂ ಹಿಂದೂಜ್ಞಾನವನ್ನು ಇತರ ಮತದವರು ತಿಳಿದುಕೊಳ್ಳುವ ಅವಕಾಶ ಕಲ್ಪಿಸಿದ್ದೀರಾ? ಎಂದು ಪ್ರಶ್ನಿಸುತ್ತಿದ್ದೇನೆ. ಪ್ರಬೋಧಾನಂದ ಯೋಗೀಶ್ವರರು ಹೇಳುವ ಜ್ಞಾನವನ್ನು ಕೇಳುವುದಕ್ಕೆ ನೂರಾರೂ ಮೈಲಿಗಳಿಂದ ಮುಸ್ಲಿಮ್‌ರು, ಕ್ರೈಸ್ತರು ಬರುತ್ತಿದ್ದಾರೆ. ಎಷ್ಟೋ ಜನ ಹಿಂದೂಗಳು ಜ್ಞಾನವನ್ನು ತಿಳಿದುಕೊಂಡು ಸಂಪೂರ್ಣ ಜ್ಞಾನಿಗಳಾಗಿ ಬದಲಾಗಿಹೋಗಿದ್ದಾರೆ. ಪ್ರಬೋಧಾನಂದ ಜ್ಞಾನಬೋಧನೆ ಮಾಡುವಾಗ ಒಂದೇ ವೇದಿಕೆ ಹತ್ತಿರ ಮೂರು ಮತದವರು ಶ್ರದ್ಧೆಯಿಂದ ಜ್ಞಾನವನ್ನು ಕೇಳುತ್ತಿದ್ದಾರೆ. ನೀವು ಹೇಳುವ ಮಾತುಗಳನ್ನು ಇತರ ಮತದವರು ಕೇಳುವುದಿಲ್ಲ. ಮೇಲಾಗಿ ಹಿಂದೂಗಳೇ ನಿಮ್ಮನ್ನು ಅಸಹ್ಯಿಸಿಕೊಳ್ಳುತ್ತಿದ್ದಾರೆ. ನಾವು ಹಿಂದೂಮತವನ್ನು ಕಾಪಾಡುತ್ತೇವೆಂದು ನೂರುವರ್ಷಗಳಿಂದ ಹೇಳುತ್ತಿದ್ದೀರ. ಆದರೆ ನೀವು ಎಲ್ಲಿಯಾದರೂ ಹಿಂದೂಗಳನ್ನು ಇತರ ಮತದೊಳಗೆ ಹೋಗದಂತೆ ನಿವಾರಿಸಿದ್ದೀರಾ? ಅದು ಯಾವುದೂ ಇಲ್ಲ. ನೂರು ವರ್ಷಗಳಿಂದ ಹಿಂದೂಮತ ಕ್ಷೀಣಿಸಿದೆಯೆಂದು ಹೇಳದೆ ತಪ್ಪಲಿಲ್ಲ. ಹಿಂದೂಗಳು ಇತರ ಮತದೊಳಗೆ ಹೋಗುತ್ತಿದ್ದರೆ ಹಿಂದೂರಕ್ಷಣೆ ಎಂಬ ಹೆಸರಿನಿಂದ ನೀವು ಕಾಲವನ್ನು ಕಳೆಯುತ್ತಿದ್ದೀರಾ.

**"ಮತಾಂತರಿಸುವುದು ದೈವದ್ರೋಹ"** ಎಂದು ಬೋಧನೆ ಹೇಳುವುದಲ್ಲದೆ ಒಂದು ಗ್ರಂಥವನ್ನು ಸಹ ಬರೆದು ಕೊಟ್ಟಿದ್ದೇವೆ. ಆ ಗ್ರಂಥವನ್ನು ಓದಿದವರಾಗಲಿ, ನಮ್ಮ ಬೋಧನೆ ಕೇಳಿದವರಾಗಲಿ ಯಾರಾದರೂ ಮತವನ್ನು ಬದಲಾಯಿಸಿದ್ದಾರೇನೋ ತೋರಿಸುತ್ತೀರಾ? ತೋರಿಸಲಾರರು. ಯಾವ ಮತದಲ್ಲಿ

ಹುಟ್ಟಿದವನು ಆ ಮತದಲ್ಲಿಯೇ ಇರಬೇಕೆಂದು, ದೇವರು ಎಲ್ಲಾ ತಿಳಿದು ನಿನ್ನನ್ನು ಒಂದು ಮತದಲ್ಲಿ ಹುಟ್ಟಿಸಿದರೆ ದೇವರ ಕಾರ್ಯಕ್ಕೆ ವಿರುದ್ಧವಾಗಿ ಮತವನ್ನು ಬದಲಾಯಿಸಿದರೆ ಅದು ದೈವ ವಿರುದ್ಧವಾಗುತ್ತದೆ, ಅಷ್ಟೇ ಅಲ್ಲದೆ ದೈವದ್ರೋಹವಾಗುತ್ತದೆ ಎಂದು ನಾವು (ನಾನು+ನನ್ನ ಆತ್ಮ) ಇಬ್ಬರು ಹೇಳಿದರೆ ಕೇಳಿದವರು ಯಾರು ಮತಾಂತರ ಮಾಡಲಿಲ್ಲ. ಆದರೆ ನಮ್ಮನ್ನು ಜ್ಞಾನಿಗಳು ಅಲ್ಲವೆನ್ನುವ ನಿಮ್ಮ ಮಾತನ್ನು ಯಾರಾದರೂ ಕೇಳಿದ್ದಾರಾ? ಯಾರೂ ಕೇಳಲಿಲ್ಲ. ಯಥೇಚ್ಛವಾಗಿ ಮತಾಂತರ ನಡೆದರೂ ಅವುಗಳನ್ನು ಎಷ್ಟುಮಾತ್ರ ನಿಲ್ಲಿಸಲಾರದೆ ಹೋಗಿದ್ದಾರೆ.

**ಪ್ರಶ್ನೆ :– ನೀವು ಹಿಂದೂಮತವನ್ನು ಅಲ್ಲದೆ ಕ್ರೈಸ್ತ ಮತ ಬೋಧನೆಗಳು ಸಹ ಹೇಳುತ್ತಿದ್ದೀರ ಅಲ್ಲವೆ! ಇದಕ್ಕೆ ನೀವೇನನ್ನುತ್ತೀರಾ? ಹಿಂದೂ ಕ್ರೈಸ್ತ ಬೋಧನೆಗಳನ್ನು ಹೇಳಬಹುದಾ?**

**ಉತ್ತರ :–** ಪ್ರಬೋಧಾನಂದ ಯೋಗೀಶ್ವರರು ಪ್ರಪಂಚದಲ್ಲಿಯೇ ತ್ರಿಮತ ಗುರುವು. ಪ್ರಪಂಚದಲ್ಲಿ ತ್ರಿಮತ ಗುರುವಾಗಿರುವವನು ಯೋಗೀಶ್ವರರು ಒಬ್ಬರೇ ಆಗಿರುವುದರಿಂದ ಆತನನ್ನು **"ತ್ರಿಮತ ಏಕೈಕ ಗುರು"** ಎನ್ನುತ್ತಿದ್ದಾರೆ. ಹಿಂದೂವು ಯಾರಾದರೂ ಇತರ ಮತಗಳ ಬೋಧನೆಗಳನ್ನು ಹೇಳುವ ಸಾಮರ್ಥ್ಯ ಹೊಂದಿದ್ದಾನಾ? ಎಂದು ಪ್ರಶ್ನಿಸುತ್ತಿದ್ದೇವೆ. ಒಂದು ಮತದಲ್ಲಿರುವ ಗುರುಗಳಿಗಿಂತ ಮೀರಿದ ಗುರುವಾಗಿ ಇರಬೇಕೆಂದರೆ, ಅವರಿಗೆ ತಿಳಿಯದ ರಹಸ್ಯಗಳು ತಿಳಿದಿರುವುದು ಸಾಮಾನ್ಯವಾದ ಕೆಲಸವಲ್ಲ. ಆತನು ತನ್ನನ್ನು **"ತ್ರಿಮತ ಏಕೈಕ ಗುರು"** ಎಂದು ಪ್ರತ್ಯಕ್ಷವಾಗಿ ಪ್ರಕಟಿಸಿಕೊಂಡಿದ್ದಾನೆ, ಕಳ್ಳನಂತೆ ಯಾವುದು ಹೇಳಲಿಲ್ಲ. ಇಲ್ಲಿಯವರೆಗೂ ಮುಸ್ಲಿಮ್‌ರಿಗೆ ಸಂಬಂಧಿಸಿದ ಗ್ರಂಥಗಳನ್ನು ಬರೆದಿದ್ದಾನೆ ಆದರೇ, ಕ್ರೈಸ್ತರಿಗೆ ಸಂಬಂಧಿಸಿದ ಗ್ರಂಥಗಳು ಬರೆಯಲಿಲ್ಲ. ಶೀಘ್ರದಲ್ಲಿಯೇ ಕ್ರೈಸ್ತ ಮತದಲ್ಲಿ ಕ್ರೈಸ್ತರಿಗೆ ತಿಳಿಯದ ಜ್ಞಾನವನ್ನು ಬರೆಯುತ್ತಾರೆ. ಇಲ್ಲಿಯವರೆಗೂ ಬರೆದ ಇತರ ಮತ ಗ್ರಂಥಗಳಲ್ಲಿ ಮುಸ್ಲಿಮ್ ಗ್ರಂಥವೆಂದು ಹೇಳಲಾದ ಖುರಾನ್ ಗ್ರಂಥದಲ್ಲಿನ ಕೆಲವು ವಾಕ್ಯಗಳಿಗೆ ವಿವರ ಬರೆಯುವುದು

ನಡೆದಿದೆ. ಆ ವಿವರವನ್ನು ನೋಡಿದ ಮುಸ್ಲಿಮ್ ಹಿರಿಯರು ತಮಗೆ ತಿಳಿಯದ ರಹಸ್ಯಗಳೆಲ್ಲ ತಿಳಿದಿರುವವೆಂದು ಸಂತೋಷಿಸುವುದು ನಡೆದಿದೆ. ಮೂರು ಮತ ಗ್ರಂಥಗಳಲ್ಲಿನ ಜ್ಞಾನ ವಿಷಯಗಳನ್ನು ಹೇಳುವುದರಿಂದ, ಅವರು ಮೂರು ಮತಗಳ ಜ್ಞಾನವನ್ನು ತಿಳಿಯುವುದರಿಂದ ಮತಗಳ ಮಧ್ಯ ದ್ವೇಷ ಹೋಗಿ ಸಾಮರಸ್ಯ ಏರ್ಪಟ್ಟು ಪ್ರಜೆಗಳು ಎಲ್ಲಾ ಮತದವರು ಬೆರೆತುಹೋಗಿ ಸ್ನೇಹಸಂಬಂಧವಾದ ಜೀವನವನ್ನು ಸಾಗಿಸುತ್ತಾರೆ. ದ್ವೇಷ ಸಂಬಂಧವಾದ ಜೀವನದಿಂದ ಹೊರಗೆ ಬಂದು ಒಬ್ಬರಿಗೊಬ್ಬರು ಪ್ರೀತಿಯಿಂದ ಬದುಕುತ್ತಾರೆ.

ಪ್ರಬೋಧಾನಂದ ಯೋಗೀಶ್ವರರು ತ್ರೈತ ಸಿದ್ಧಾಂತವನ್ನು ಒಬ್ಬ ಮನುಷ್ಯನಾಗಿ ಪ್ರಕಟಿಸಿದರೂ, ಅದು ಮನುಷ್ಯರ ಶರೀರದಲ್ಲಿರುವ **ಮಧ್ಯಾತ್ಮ** ಪ್ರಕಟಿಸಿದೆ. ಶರೀರದಲ್ಲಿರುವ ಜೀವಿಗು, ದೇವರಿಗು ಮಧ್ಯದಲ್ಲಿರುವ ಆತ್ಮವನ್ನು **'ಮಧ್ಯಾತ್ಮ'** ಎನ್ನುತ್ತಿದ್ದೇವೆ. ಇಲ್ಲಿಯವರೆಗೂ ಕಳೆದುಹೋದ ಯುಗಗಳಲ್ಲಾಗಲಿ, ಕಳೆದುಹೋದ ಜ್ಞಾನಿಗಳಲ್ಲಾಗಲಿ ಮಧ್ಯಾತ್ಮವನ್ನು ಕುರಿತು ಯಾರೂ ಹೇಳಲಿಲ್ಲ, ಯಾರಿಗೂ ತಿಳಿದಿಲ್ಲ. ಪ್ರಪಂಚದಲ್ಲಿ ಮಧ್ಯಾತ್ಮ ವಿಷಯವನ್ನು, ಮಧ್ಯಾತ್ಮ ಜ್ಞಾನವನ್ನು ಹೇಳಿದವರು **'ಪ್ರಬೋಧಾನಂದ ಯೋಗೀಶ್ವರ'** ಎಂದು ಹೆಸರಿರುವ ಶರೀರದಲ್ಲಿನ ಮಧ್ಯಾತ್ಮವೇಯೆಂದು ಹೇಳುತ್ತಿದ್ದೇವೆ. 'ಮಧ್ಯಾತ್ಮ' ಶರೀರದಲ್ಲಿ ಮೂರು ಆತ್ಮಗಳ ಮಧ್ಯದಲ್ಲಿದೆ. ಶರೀರದಲ್ಲಿನ ಮೂರು ಆತ್ಮಗಳ ವಿಷಯವನ್ನಾಗಲಿ, ವಿವರವನ್ನಾಗಲಿ ಇಲ್ಲಿಯವರೆಗೂ ಯಾವ ಸಿದ್ಧಾಂತಕರ್ತ ಹೇಳಲಿಲ್ಲ. ಯಾರಿಗೂ ತಿಳಿದಿಲ್ಲ. ಅದು ಪ್ರಬೋಧಾನಂದ ಯೋಗೀಶ್ವರರಿಂದಲೇ ಮಧ್ಯಾತ್ಮ ವಿಷಯ ಈದಿನ ಪ್ರಪಂಚಕ್ಕೆ ತಿಳಿಯುತ್ತಿದೆ. ಈ ವಿಷಯವನ್ನು ಸಹ ಪೋತುಲೂರಿ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೀಗೆ ಹೇಳಿದ್ದಾರೆ. **"ಮಧ್ಯಾತ್ಮ ಯೋಗ ಪುರುಷನ ಮಹತ್ತು ಮಹಾ ಪ್ರಕಾಶವಾಯಿತು"** ಪ್ರಬೋಧಾನಂದ ಯೋಗೀಶ್ವರರೊಂದರ ವಿಷಯಗಳನ್ನು ಕೆಲವನ್ನು ತನ್ನ ಕಾಲಜ್ಞಾನದಲ್ಲಿ ವೀರಬ್ರಹ್ಮಯ್ಯನವರು ಬರೆದಿರುವುದು ವಿಶೇಷವೆಂದು ಮನುಷ್ಯರಾದವರಿಗೆ ಏಕೆ ತಿಳಿದಿಲ್ಲ? ಕುರುಡರಂತೆ ಯಾವುದೋ ಒಂದು ಮಾತನಾಡುವುದಕ್ಕಿಂತ ಸ್ವಲ್ಪ ವಿಚಕ್ಷಣಾ ದೃಷ್ಟಿಯಿಂದ ನೋಡಬಹುದು ಅಲ್ಲವೆ!

**ಪ್ರಶ್ನೆ :– 'ಮಧ್ಯಾತ್ಮ' ಎಂಬ ಮಾತನ್ನು ನಾವು ಯಾವಾಗಲೂ ಕೇಳಲಿಲ್ಲ. ಅಷ್ಟೇಕೆ ಮೂರು ಆತ್ಮಗಳ ವಿಷಯವನ್ನೇ ನಾವು ಯಾವಾಗಲೂ ಕೇಳಲಿಲ್ಲ. ನೀವು ಹೇಳುವುದು ಸತ್ಯವೆಂದು ನಾವೇಕೆ ಅಂದುಕೊಳ್ಳಬೇಕು?**

**ಉತ್ತರ :–** ಹಸಿವಿಗೆ ಅನ್ನವನ್ನು ತಿನ್ನುತ್ತೇವೆ. ದಾಹಕ್ಕೆ ನೀರನ್ನು ಕುಡಿಯುತ್ತೇವೆ. ವಿಜ್ಞಾನಕ್ಕಾಗಿ ಪ್ರತಿ ವಿಷಯವನ್ನು ವಿವರವಾಗಿ ನೋಡುತ್ತೇವೆ. ಜ್ಞಾನಕ್ಕಾಗಿ ದೊಡ್ಡವರು ಹೇಳುವ ಮಾತುಗಳನ್ನು ಕೇಳುತ್ತೇವೆ. ನೀವು ಹೇಳುವುದು ನಾವೇಕೆ ಕೇಳಬೇಕು? ಅಂದರೇ ಹಸಿವಿಗೆ ಅನ್ನವನ್ನು ಏಕೆ ತಿನ್ನಬೇಕು? ಎಂದು ಕೇಳಿದಂತಿರುತ್ತದೆ. ಆತ್ಮಗಳ ವಿಷಯ ತಿಳಿಯುವುದಕ್ಕೆ ಭಗವದ್ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವ 16, 17 ಶ್ಲೋಕಗಳನ್ನು ನೋಡಬೇಕು. ಹಾಗೇ ಪ್ರಬೋಧಾನಂದ ಯೋಗೀಶ್ವರರು ಬರೆದ ತ್ರೈತ ಸಿದ್ಧಾಂತವನ್ನು ನೋಡಬೇಕು. ಪ್ರಬೋಧಾನಂದ ಯೋಗೀಶ್ವರರು ಭವಿಷ್ಯತ್ತಿನಲ್ಲಿನ ಕೆಲವು ವಿಷಯಗಳನ್ನು ಮೊದಲೇ ಬರೆದ ವೀರಬ್ರಹ್ಮಯ್ಯನವರ ಕಾಲಜ್ಞಾನದಲ್ಲಿನ ಈ ವಾಕ್ಯವನ್ನಾದರೂ ನೋಡಬೇಕು **"ಆನಂದ ಕಂದಳಿತ ಹೃದಯಾರವಿಂದರಾಗಿರುವ ಆತ್ಮತ್ರಯಗಳನ್ನು",** ಆತ್ಮತ್ರಯ ಎಂದರೆ ಮೂರು ಆತ್ಮಗಳೆಂಬ ವಿವರ ಬರುತ್ತಿದೆ. ಅದನ್ನೇ ಪ್ರಬೋಧಾನಂದ ಯೋಗೀಶ್ವರರು **ತ್ರೈತ ಸಿದ್ಧಾಂತವಾಗಿ** ಪ್ರಕಟಿಸಿದ್ದಾರೆ. ತ್ರೈತ ಸಿದ್ಧಾಂತ ಶಾಸ್ತ್ರಬದ್ಧವಾಗಿದೆ. ಉಳಿದ ಅದ್ವೈತ, ದ್ವೈತ ಸಿದ್ಧಾಂತಗಳು ಶಾಸ್ತ್ರಬದ್ಧಗಳು ಅಲ್ಲವೇಅಲ್ಲ. ಶಾಸ್ತ್ರೀಯತೆ ಇಲ್ಲದ ಸಿದ್ಧಾಂತಗಳನ್ನು ದೊಡ್ಡದಾಗಿ ಹೇಳಿಕೊಳ್ಳುವವರು, ಶಾಸ್ತ್ರೀಯತೆ ಇರುವ ಸಿದ್ಧಾಂತವನ್ನು ಏಕೆ ಪರಮತವೆಂದು ಅನ್ನುತ್ತಿದ್ದಾರೋ ಎಂದು ನೋಡಿದರು ಅದರಲ್ಲಿ ಅಸೂಯೆ ಭಾವನೆ ಹೊರತು ಏನು ಇಲ್ಲವೆಂದು ತಿಳಿಯುತ್ತಿದೆ. ಕಾಣಿಸುವ ಪ್ರಬೋಧಾನಂದ ಯೋಗೀಶ್ವರರ ಮೇಲೆ ನಂಬಿಕೆ ಇಲ್ಲದಿದ್ದರೂ, ಪೋತಲೂರಿ ವೀರಬ್ರಹ್ಮಯ್ಯನವರು ಹೇಳಿದ ಮಾತಿನ ಮೇಲಾದರೂ ನಂಬಿಕೆ ಇಟ್ಟುಕೊಂಡರೂ ಅಥವಾ ಭಗವದ್ಗೀತೆಯನ್ನು ಹೇಳಿದ ಭಗವಂತನ ಮೇಲೆ ನಂಬಿಕೆಯಿದ್ದರೂ ನಿಮಗೆ ತ್ರೈತ ಸಿದ್ಧಾಂತವು ಅದ್ವೈತ, ದ್ವೈತ ಸಿದ್ಧಾಂತಗಳಿಗಿಂತ ದೊಡ್ಡದೆಂದು ತಿಳಿಯಬಲ್ಲದು.

**ಪ್ರಶ್ನೆ :– ಪ್ರಬೋಧಾನಂದ ಯೋಗೀಶ್ವರರಿಗೆ ಒಬ್ಬ ಅದ್ವೈತ ಗುರು 'ಪ್ರಬೋಧಾನಂದ' ಎಂದು ಹೆಸರು ಇಟ್ಟಿದ್ದಾರೆಂದು ನೀವೇ ಹೇಳಿದ್ದೀರಾ. ಆಗ ರಮಣಾನಂದ ಭಾರತೀ ಸ್ವಾಮಿಯವರು ಈತನಿಗೆ ಗುರುವೇ ಅಲ್ಲವೆ! ಹಾಗಿರುವಾಗ ನನಗೆ ಗುರುವಿಲ್ಲವೆಂದು ಕೆಲವು ಸಂದರ್ಭಗಳಲ್ಲಿ ಸ್ವತಃವಾಗಿ ಯೋಗೀಶ್ವರರೇ ಹೇಳಿದಂತೆ ಇದೆ. ಗುರುಸಂಪ್ರದಾಯ ಹಿಂದೂಮತದಲ್ಲಿ ಇರುವಾಗ ಗುರುವಾಗಿರುವವನನ್ನು ಗುರುವಲ್ಲ ಎನ್ನುವುದೇನು?**

**ಉತ್ತರ:–** ಒಬ್ಬ ವ್ಯಕ್ತಿಗೆ ಮತ್ತೊಬ್ಬ ವ್ಯಕ್ತಿ ಗುರುವಾಗಿರಬಹುದು. ನಾನು ಪ್ರಬೋಧಾನಂದ ಯೋಗೀಶ್ವರರ ಶರೀರದಿಂದ ಮಾತನಾಡುತ್ತಿದ್ದೇನೆ. ಈ ಶರೀರ ನನ್ನದಲ್ಲ. ಯೋಗೀಶ್ವರರವರದು. ಅವರ ಶರೀರದಲ್ಲಿ ತಲೆಯಲ್ಲಿನ ಒಂದು ಮೂಲೆಯಲ್ಲಿ ನನ್ನ ನಿವಾಸವಿದೆ. ನನ್ನ ಭಾವನೆಗಳನ್ನು ಯೋಗೀಶ್ವರರ ಶರೀರದ ಮೂಲಕ ವ್ಯಕ್ತಪಡಿಸುತ್ತಿದ್ದೇನೆ. ಆದುದರಿಂದ ನಾನು ವ್ಯಕ್ತಿ. ಪ್ರಬೋಧಾನಂದ ಯೋಗೀಶ್ವರರು ಎಂಬಮಾತು ಶರೀರದೊಳಗೆ ಶರೀರವೆಲ್ಲಾ ವ್ಯಾಪಿಸಿರುವ ಆತ್ಮಕ್ಕೇ ಸೇರುತ್ತದೆ. ಶರೀರವನ್ನು ನಡೆಸುವ ಶಕ್ತಿಯಾಗಿರುವುದು ಆತ್ಮ. ಶರೀರವೆಲ್ಲಾ ಚೈತನ್ಯವಾಗಿರುವುದರಿಂದ ಆತ್ಮವನ್ನು ಶಕ್ತಿ ಎನ್ನುತ್ತಿದ್ದೇವೆ. ಮೇಲ್ನೋಟಕ್ಕೆ ಕಾಣಿಸುವುದು ಸಾಧಾರಣ ಶರೀರವೇ. ಆದರೆ ಒಳಗೆ ಇರುವವನು ಅಸಾಧಾರಣವಾದವನು. ಆದುದರಿಂದ ಅವನನ್ನು ವ್ಯಕ್ತಿ ಅನ್ನಬಾರದು. 'ಶಕ್ತಿ' ಎಂದು ಹೇಳಬೇಕು. ಅಸಲು ವಿಷಯಕ್ಕೆ ಬಂದರೆ ವ್ಯಕ್ತಿಗೆ ವ್ಯಕ್ತಿ ಗುರುವಾಗಿ ಇರಬಹುದಾಗಲಿ, ಶಕ್ತಿಗೆ ವ್ಯಕ್ತಿ ಗುರುವಾಗಿ ಇರುವುದಿಲ್ಲ. ವ್ಯಕ್ತಿಗೆ ಕೆಲವುಕಡೆ ಶಕ್ತಿಯಾದ ಆತ್ಮಸಹ ಗುರುವಾಗಿ ಇರಬಹುದು. ಒಬ್ಬ ಮನುಷ್ಯನಿಗೆ ಇನ್ನೊಬ್ಬ ಮನುಷ್ಯ ಗುರುವಾಗಿದ್ದರೂ ಆ ವ್ಯಕ್ತಿಗೆ ಶಕ್ತಿಯಾದ ಆತ್ಮ ಗುರುವಾಗಿ ಇರಬಹುದು. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ಗುರುವಾಗಿದ್ದರೂ ಅದು ಒಂದು ಜನ್ಮ ಲೆಕ್ಕಚಾರವೇ ಆಗುತ್ತದೆ. ಹಾಗಲ್ಲದೆ ಎಲ್ಲಾ ಜನ್ಮಗಳಿಗು ಗುರುವಾಗಿರುವವನು ಆತ್ಮ ಇದೆಯೆಂದು ಹೇಳಬಹುದು. ಪ್ರಬೋಧಾನಂದ ಯೋಗೀಶ್ವರರನ್ನು ಮನುಷ್ಯರಾದವರು ಯಾರಾದರೂ ಗುರುವಾಗಿ ಹೇಳಿಕೊಳ್ಳಬಹುದು. ಏಕೆಂದರೇ! ಯೋಗೀಶ್ವರರು ಮಧ್ಯಾತ್ಮಯೆಂದು ಅದೇ ಶರೀರದಲ್ಲಿರುವ ನಾನು ಹೇಳುತ್ತಿದ್ದೇನೆ ಅಲ್ಲವೆ!

ಪ್ರಬೋಧಾನಂದ ಯೋಗೀಶ್ವರರು ಮನುಷ್ಯರೆಲ್ಲರಿಗೂ ಗುರುವಾಗಿರ ಬಹುದಾಗಲಿ, ಯಾವ ಮನುಷ್ಯನು ಆತನಿಗೆ ಗುರುವಾಗಿ ಇರುವುದಿಲ್ಲ. ಒಬ್ಬ ಅದ್ವೈತ ಗುರು ಆತನಿಗೆ 'ಪೆದ್ದನ್ನ' ಎಂಬ ಹೆಸರನ್ನು ತೆಗೆದು ಪ್ರಬೋಧಾನಂದ ಎಂದು ಹೆಸರು ಇಟ್ಟಿದ್ದಾನೆ ಅಲ್ಲವೆ! ಎಂದು ನೀವು ಹೇಳುತ್ತಿದ್ದೀರಾ. ಆ ಮಾತು ನಿಜವೇ ಆದರೂ ಆ ಹೆಸರನ್ನು ತೆಗೆದಿರುವುದು ಮತ್ತೊಂದು ಹೆಸರನ್ನು ಇಟ್ಟಿರುವುದು ಆ ಶರೀರದಲ್ಲಿ ಆತ್ಮವಾಗಿರುವವನೇಯೆಂದು, ಜೀವಿಯು ಏನು ಮಾಡುವವನು ಅಲ್ಲವೆಂದು ನೀವು ತಿಳಿಯಬಹುದು ಅಲ್ಲವೆ! ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ ಗುರುವಾಗಿರಬಹುದೆಂಬ ಸೂತ್ರವನ್ನು ಮರೆಯಬಾರದು. ಹಾಗೇ ವ್ಯಕ್ತಿಯಾದವನು ಶಕ್ತಿಯಾದವನಿಗೆ ಗುರು ಆಗಲಾರನು. ಶಕ್ತಿ ಆದವನು ಮನುಷ್ಯರೆಲ್ಲರಿಗೂ ಗುರು ಆಗಬಹುದು. ಅದೇ ಮಾತನ್ನೇ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿಯೇ ಒಂದು ವಾಕ್ಯದಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ. **"ಆನಂದಾಶ್ರಯುರು ಆದಿ ಎಂದಿದ್ದಾನೆ ಆದಕಾರಣ ನಿಮಗು ನಮಗು ಆನಂದಾಶ್ರಯರೇ ಗುರುಗಳು"** ಇಲ್ಲಿ ವೀರಬ್ರಹ್ಮಯ್ಯನವರು ಸಹ ಆನಂದಾಶ್ರಮ ವನ್ನು ನಡೆಸುವ ಯೋಗೀಶ್ವರರೇ ನಮ್ಮೆಲ್ಲರಿಗೂ ನಿಮಗು ನಮಗು ಗುರುವೆಂದು ಹೇಳುವುದು ಗಮನಾರ್ಹ. ಎಲ್ಲರಿಗೂ ಗುರುವಾದವನಿಗೆ ಮನುಷ್ಯನಾದವನು ಯಾರೂ ಗುರುವಾಗಿರುವುದಿಲ್ಲ. ಆದುದರಿಂದ ಪ್ರಬೋಧಾನಂದ ಯೋಗೀಶ್ವರರು ತನಗೆ ಯಾರೂ ಗುರು ಇಲ್ಲವೆಂದು ಹೇಳಿದ್ದಾನೆ. ಆ ಮಾತು ನಿಜವೇ ಅಲ್ಲವೆ!

**ಪ್ರಶ್ನೆ :– ಪ್ರಬೋಧಾನಂದ ಯೋಗೀಶ್ವರರು ವ್ಯಕ್ತಿಯಲ್ಲ ಶಕ್ತಿಯೇ ಅಂದುಕೊಳ್ಳೋಣ. ಆತನ ಆಶ್ರಮದ ಹೆಸರು 'ಪ್ರಬೋಧಾಶ್ರಮ' ಎಂದು ಕರೆಯುತ್ತಾರೆ. ಮತ್ತೆ ಕೆಲವರು ಪ್ರಬೋಧಾನಂದಾಶ್ರಮವೆಂದು ಕರೆಯುತ್ತಾರೆ. ಬ್ರಹ್ಮಯ್ಯನವರು ಹೇಳಿದ ವಾಕ್ಯದಲ್ಲಿ 'ಆನಂದಾಶ್ರಮದವರು' ಎಂದು ಹೇಳಿದ್ದಾರೆ ಅಲ್ಲವೆ! ಬ್ರಹ್ಮಯ್ಯನವರು ಹೇಳಿರುವುದು ಪ್ರಬೋಧಾನಂದಾಶ್ರಮವೇನಾ! ಎಂದು ಸಂಶಯ ಇದೆ. ಅದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಪ್ರಬೋಧಾನಂದ ಯೋಗೀಶ್ವರರು ಪ್ರಬೋಧಾಶ್ರಮವನ್ನು ಕ್ರಿ॥ಶ॥

1977 ರಲ್ಲಿಯೇ ಸ್ಥಾಪಿಸುವುದು ನಡೆದಿದೆ. ತ್ರೈತ ಸಿದ್ಧಾಂತವನ್ನು 1979 ರಲ್ಲಿಯೇ ಪ್ರಕಟಿಸುವುದು ನಡೆದಿದೆ. **ಪ್ರಬೋಧ"** ಗ್ರಂಥವನ್ನು ಬರೆಯುವುದು ಸಹ ನಡೆದಿದೆ. ಪ್ರಬೋಧಾಶ್ರಮವನ್ನು ಕುರಿತು ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಬರೆದ ವಿಷಯ 2006ನೇ ವರ್ಷದಲ್ಲಿ ತಿಳಿದಿದೆ. ನಂತರ ಸ್ವಲ್ಪ ಕಾಲಕ್ಕೆ ತಿರುಪತಿ ಓರಿಯಂಟಲ್ ಕಾಲೇಜಿನಲ್ಲಿ ಬರೆದು ಇಡಲಾದ ಬ್ರಹ್ಮಯ್ಯನವರ ಏಷ್ಯ ಕಾಲಜ್ಞಾನವನ್ನು ನಾವು ನೋಡುವುದು ನಡೆದಿದೆ. ಆಗ ಇನ್ನೂ ಕೆಲವು ವಿಷಯಗಳು ತಿಳಿದಿವೆ. ಪ್ರಬೋಧಾಶ್ರಮವನ್ನೇ ಆನಂದಾಶ್ರಮವಾಗಿ ಹೇಳುವುದಾಗಿದೆಯೆಂದು ತಿಳಿದಿದೆ. ಇನ್ನೂ ಪ್ರಬೋಧಾನಂದ ಯೋಗೀಶ್ವರರನ್ನು ಆನಂದ ಗುರುಗಳೆಂದು ಹೇಳುವುದಾಗಿದೆಯೆಂದು ತಿಳಿದಿದೆ. ಪ್ರಬೋಧಾನಂದಾ ಶ್ರಮವನ್ನು, ಪ್ರಬೋಧಾನಂದನೆಂಬ ಹೆಸರು ಬದಲಿಸಿ ಆನಂದ ಗುರುವೆಂದು, ಆನಂದಾಶ್ರಮವೆಂದು ಹೇಳಿದಂತೆ ತಿಳಿದಿದೆ. ಅದರಿಂದ ಏಷ್ಯ ಕಾಲಜ್ಞಾನವನ್ನು ಪೂರ್ತಿಯಾಗಿ ಓದಿದಾಗ, ಅದರೊಳಗಿಂದ ಬಹಳ ವಿಷಯಗಳು ತಿಳಿದಿವೆ. ನಮಗೆ ತಿಳಿದಿರುವವುಗಳನ್ನು ಸಂದರ್ಭವನ್ನು ಅನುಸರಿಸಿ ಅಲ್ಲಲ್ಲಿ ವಿವರಿಸುತ್ತಾ ಬರುತ್ತಿದ್ದೇವೆ.

**ಪ್ರಶ್ನೆ :– ಆನಂದ ಗುರುಗಳೆಂದು, ಆನಂದಾಶ್ರಯರೆಂದು ಇತರರನ್ನು ಕುರಿತು ಹೇಳಿರಬಹುದು ಅಲ್ಲವೆ! ಆ ಹೆಸರುಗಳು ನಿಮ್ಮವೇಯೆಂದು ಏಕೆ ಅಂದುಕೊಳ್ಳಬೇಕು?**

**ಉತ್ತರ :–** ಇದು ಕೇಳಬೇಕಾದ ಪ್ರಶ್ನೆ! ಇದಕ್ಕೆ ಉತ್ತರವನ್ನು ತಿಳಿದುಕೊಂಡರೆ ಸಂಶಯ ಇಲ್ಲದಂತೆ ಹೋಗುತ್ತದೆ. ಆದ್ದರಿಂದ ಈಗ ಒಂದೊಂದನ್ನು ವಿವರವಾಗಿ ತಿಳಿದುಕೊಳ್ಳೋಣ. ಮೊದಲು **"ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದು"** ಎಂಬ ಬ್ರಹ್ಮಯ್ಯನವರ ವಾಕ್ಯವನ್ನು ನೋಡಿದ್ದೇವೆ. ನಂತರ ಎರಡನೆ ವಾಕ್ಯವನ್ನು **"ಪ್ರಬೋಧ ಆಶ್ರಮದವರ ಆದಿ ಗುಣವೆಲ್ಲ ಶಯನಾಧಿಪತಿಗೆ ಇದೆ"** ಈ ವಾಕ್ಯದಲ್ಲಿ ಪ್ರಬೋಧ ಆಶ್ರಮದವರಿಗೆ ಎಂದರೆ ಪ್ರಬೋಧಾನಂದ ಯೋಗೀಶ್ವರರಿಗೆ, ಆದಿ ಎಂದರೆ 'ಸೃಷ್ಟಿ' ಎಂದು ಅರ್ಥ ಬರುತ್ತದೆ. ಆದಿಗುಣಗಳೆಲ್ಲ ಎಂದರೇ 'ಸೃಷ್ಟಿ

ಗುಣ ಎಲ್ಲಾ' ಎಂದು ಅರ್ಥ. ಶಯನಾಧಿಪತಿಗೆ ಎಂದರೇ 'ಯಾವಾಗಲೂ ಹಾವಿನ ಮೇಲೆ ಶಯನಿಸಿರುವವನು ವಿಷ್ಣು' ಎಂದು ಹೇಳಬಹುದು ಅಥವಾ 'ಯೋಗದಲ್ಲಿ ದೊಡ್ಡವನು ಯೋಗೀಶ್ವರನು' ಎಂದು ಹೇಳಬಹುದು. ಈ ವಾಕ್ಯದ ಪ್ರಕಾರ 'ಪ್ರಬೋಧಾಶ್ರಮದವರಾದ ಪ್ರಬೋಧಾನಂದ ಯೋಗೀಶ್ವರರ ಶಕ್ತಿಯೆಲ್ಲವೂ ಪ್ರಬೋಧಾಶ್ರಮದಲ್ಲಿ ಇದೆಯೆಂದು' ಅರ್ಥ. ನಂತರ ಮತ್ತೊಂದುಕಡೆ ಕಾಲಜ್ಞಾನದಲ್ಲಿ ಮತ್ತೊಂದು ವಾಕ್ಯ ಹೀಗೆ ಇದೆ. **"ಶಾಂತಾಕಾರವಾದ ಚೋದ್ಯವೇದ್ಯಗಳು ನಾಳೆಯೇ ಕಾಣಿಸುತ್ತದೆ. ಶಯನಾಧಿಪತಿಗೆ ಮೇಲು, ಮೇಲು ಎಂಬ ವಾರ್ತೆ ನಾಳೆಯೇ ಕಾಣಿಸುತ್ತದೆ."** ಈ ವಾಕ್ಯದ ನಂತರ ಮತ್ತೊಂದು ಕಡೆ ಏಷ್ಯ ಕಾಲಜ್ಞಾನದಲ್ಲಿ ಶಯನಾಧಿಪತಿ ಎಂಬ ಹೆಸರಿನಿಂದ ಇದೆ. ಪ್ರಬೋಧಾಶ್ರಮದವರಾದ 'ಯೋಗೀಶ್ವರರೂ' 'ಶಯನಾಧಿಪತಿ' ಒಂದೇಯೆಂದು ತಿಳಿದುಹೋಗಿದೆ.

**"ಶಯನಾಧಿಪತಿಗೆ ಸರ್ವದಾ ಆನಂದಂ, ಬ್ರಹ್ಮಾದಿಗಳೆಲ್ಲಾ ಆಶೀರ್ವದಿಸುವರು, ಜಾರುವಾಕ್ಯಗಳು ಆಡಿದವರೆಲ್ಲಾ ನಾಶವಾಗಿ ಹೋಗುವರು. ಕೀಡು ಭಯಸಿದವರೆಲ್ಲಾ ಧೂಳಿಯಾಗಿ ಹೋಗುವರು."** ಎಂದು ಬರೆಯಲಾಗಿದೆ. ಈ ವಾಕ್ಯದಲ್ಲಿ ಶಯನಾಧಿಪತಿಯೆಂದು ಮತ್ತೊಂದು ಬಾರಿ ಯೋಗೀಶ್ವರರನ್ನು ಕುರಿತು ಹೇಳಲಾಗಿದೆ. ಇದರಲ್ಲಿ 'ಶಯನಾಧಿಪತಿಯೇ ಸರ್ವದಾ ಆನಂದಂ' ಎಂದು ಹೇಳುವುದರಿಂದ ಯೋಗೀಶ್ವರರನ್ನೇ ಆನಂದ ಗುರುವೆಂದು ಮತ್ತೊಂದುಕಡೆ ಹೇಳಲಾಗಿದೆ. ಪ್ರಬೋಧಾನಂದ ಆಶ್ರಮವನ್ನು ಆನಂದ ಆಶ್ರಮವೆಂದೂ, ಪ್ರಬೋಧಾನಂದ ಯೋಗೀಶ್ವರರನ್ನು ಆನಂದ ಗುರುವೆಂದು ಏಷ್ಯಕಾಲಜ್ಞಾನದಲ್ಲಿ ಬಹಳಕಡೆ ಹೇಳಿದ್ದಾರೆ. ಆದ್ದರಿಂದ ವೀರಬ್ರಹ್ಮಯ್ಯನವರು ಹೇಳಿದ ಕಾಲಜ್ಞಾನ ವಾಕ್ಯಗಳನ್ನು ಸಾಧಾರಣ ವಾಕ್ಯಗಳಾಗಿ ನೋಡದೆ, ಬಹಳ ವಿಶೇಷತೆ ಇರುವ ಜ್ಞಾನವಾಕ್ಯಗಳಾಗಿ ನೋಡಬೇಕು.

**ಪ್ರಶ್ನೆ :– ಇದಕ್ಕು ಮುಂಚೆ ಹಿಂದೂಮತದಲ್ಲಿ ಮೂವರು ಸಿದ್ಧಾಂತಕರ್ತರು ಬಂದುಹೋಗಿದ್ದಾರೆ. ಈದಿನ ಅದ್ವೈತ ಸಿದ್ಧಾಂತ ಉಳಿದ ಎರಡು ಸಿದ್ಧಾಂತಗಳಿಗಿಂತ**

**ಹೆಚ್ಚಾಗಿ ಪ್ರಚಾರವಾಗಿದೆ. ಈದಿನ ಹೆಚ್ಚಾಗಿರುವುದು ಸಹ ಅದ್ವೈತವೇ. ದ್ವೈತ, ವಿಶಿಷ್ಟಾದ್ವೈತ ಎರಡೂ ಸೇರಿ ಅದ್ವೈತಕ್ಕೆ ಸಮಾನವಾಗಿ ಸಹ ಇಲ್ಲ. ಅದರಲ್ಲಿ ವಿಶಿಷ್ಟಾದ್ವೈತ ಅದ್ವೈತದ ನಂತರ ಸ್ಥಾನದಲ್ಲಿರುವಾಗ, ದ್ವೈತ ವಿಶಿಷ್ಟಾದ್ವೈತಕ್ಕಿಂತ ಕಡಿಮೆಯಾಗಿದೆ. ಮೊದಲ ಸ್ಥಾನದಲ್ಲಿ ಅದ್ವೈತ ಇರುವಾಗ, ಎರಡು, ಮೂರು ಸ್ಥಾನಗಳಲ್ಲಿ ವಿಶಿಷ್ಟಾದ್ವೈತ, ದ್ವೈತಗಳು ಇವೆ. ನೀವು ಹೇಳುತ್ತಿರುವ ತ್ರೈತ ಸಿದ್ಧಾಂತ ಎಷ್ಟೋ ಶ್ರೇಷ್ಠವಾದುದೆಂದು ಹೇಳಿದರೂ, ಮೂರು ಸಿದ್ಧಾಂತಗಳಿಗಿಂತ ಶ್ರೇಷ್ಠವಾದುದೆಂದು ಹೇಳಿದರೂ ಅದು ಎಲ್ಲಿಯೂ ಕಾಣಿಸುತ್ತಿಲ್ಲ. ದ್ವೈತರಿಗಿಂತ ಮತ್ತಷ್ಟು ಕಡಿಮೆಯಾಗಿ ತ್ರೈತವಿರುವಂತೆ ಅರ್ಥವಾಗುತ್ತಿದೆ. ನಿಮ್ಮ ಸಿದ್ಧಾಂತ ದೊಡ್ಡದಾದಾಗ ಮನುಷ್ಯರಲ್ಲಿ ಎಲ್ಲಿಯೂ ಕಾಣಿಸುತ್ತಿಲ್ಲ ಅಲ್ಲವೆ! ದ್ವೈತರು ಮೂರನೆ ಸ್ಥಾನದಲ್ಲಿ ಇರುವಾಗ, ತ್ರೈತರು ನಾಲ್ಕನೆ ಸ್ಥಾನದಲ್ಲಿ ಸಹ ಕಾಣಿಸಲಿಲ್ಲವೇ ಎಂದು ನಾವು ಕೇಳಬಹುದು ಅಲ್ಲವೆ!**

**ಉತ್ತರ :–** 60, 70 ವರ್ಷಗಳ ಮುಂಚೆ ಹುಟ್ಟಿದವನಿಗೆ ದೊಡ್ಡ ಮೀಸೆಗಳು ಇರಬಹುದು. ಆದರೆ ಹುಟ್ಟಿದ ಐದು ವರ್ಷಗಳ ಮಗುವನ್ನು ಹಿಡಿದುಕೊಂಡು ಇವನ ಜಾತಕ ಮುಂಚೆ ಹುಟ್ಟಿದವರಿಗಿಂತ ಚೆನ್ನಾಗಿದ್ದರೆ ಅವರಿಗಿರುವಂತೆ ಈತನಿಗೆ ಮೀಸೆಗಳೇಕೆ ಇಲ್ಲ? ಕನಿಷ್ಟ ಸ್ವಲ್ಪವಾದರೂ ಇಲ್ಲವೆ! ಎಂದರೇ ಅದು ಸಮಂಜಸವಾದ ಮಾತು ಅಲ್ಲವೆಂದು, ನಿಜಕ್ಕೆ ಅದು ಪ್ರಶ್ನೆಯೇ ಅಲ್ಲವೆಂದು ಹೇಳಬಹುದು. ಅದ್ವೈತ ಸಿದ್ಧಾಂತ ಸುಮಾರು 2500 ವರ್ಷಗಳ ಪೂರ್ವದಲ್ಲಿ ಹುಟ್ಟಿದೆ. ನಂತರ ಸುಮಾರು 1500 ವರ್ಷಗಳ ಪೂರ್ವದಲ್ಲಿ ಹುಟ್ಟಿರುವುದು ವಿಶಿಷ್ಟಾದ್ವೈತ. ಆ ನಂತರ ಸ್ವಲ್ಪಕಾಲಕ್ಕೆ ಹುಟ್ಟಿರುವುದು ದ್ವೈತ. ಅದ್ವೈತಕ್ಕೆ ಆರ್ಯರು ಬುನಾದಿಯಂತವರಾಗಿ ಇರುವುದರಿಂದ ಅದ್ವೈತ ಚೆನ್ನಾಗಿ ಪ್ರಚಾರವಾಗಿದೆ. ಏನು ತಿಳಿಯದ ಕಾಲದಲ್ಲಿ ಎಲ್ಲರನ್ನು ಅದ್ವೈತರನ್ನಾಗಿ ಮರಳಿಸಿಕೊಂಡಿದ್ದಾರೆ. ಆದುದರಿಂದ ಮೊದಲು ಬಂದಿರುವ ಅದ್ವೈತ ಭಾರತದೇಶದಲ್ಲಿ ಹೆಚ್ಚಿನ ಶಾತ ಇದೆ. ನಂತರ ಬಂದಿರುವ ವಿಶಿಷ್ಟಾದ್ವೈತವನ್ನು ಮುಂಚೆ ಹುಟ್ಟಿದ ಅದ್ವೈತಕ್ಕೆ ವಿರುದ್ಧವಾಗಿ ಇರುವುದರಿಂದ ವಿಶಿಷ್ಟಾದ್ವೈತ

ಹೆಚ್ಚಾಗಿ ಪ್ರಚಾರ ಆಗಲಾರದೆಹೋಗಿದೆ. ಆ ದಿನಗಳಲ್ಲಿ ಅದ್ವೈತರು ರಾಜರ ಹತ್ತಿರ ಒಳ್ಳೆಯ ಗೌರವವನ್ನು ಇಟ್ಟುಕೊಂಡು ಸೈನಿಕರಿಂದ ವಿಶಿಷ್ಟಾದ್ವೈತರನ್ನು ಸಾಯಿಸಿದ ಸಂದರ್ಭಗಳು ಸಹ ಇವೆ. ಆದುದರಿಂದ ರಾಮಾನುಜಾಚಾರ್ಯರು ಸಹ ಆಗಾಗ ಅಜ್ಞಾತ ಜೀವನವನ್ನು ಕಳೆಯಬೇಕಾಗಿ ಬಂದಿದೆ. ಆದಕಾರಣ ವಿಶಿಷ್ಟಾದ್ವೈತ ಹೆಚ್ಚಾಗಿ ಪ್ರಚಾರ ಆಗಲಿಲ್ಲವೆಂದೇ ಹೇಳಬೇಕು. ದ್ವೈತ ಹುಟ್ಟುವುದೇ ಬಲಹೀನವಾಗಿ ಹುಟ್ಟಿದೆ. ಮಧ್ವಾಚಾರ್ಯರ ಜೀವನದಲ್ಲಿ ಉಡುಪಿ ಪ್ರಾಂತವನ್ನು ದಾಟಿ ಪ್ರಚಾರ ಆಗಲಿಲ್ಲ. ದ್ವೈತವು ಪ್ರಚಾರ ಆಗುವುದೇ ಕಡಿಮೆ ಆಗಿರುವುದರಿಂದ ಪ್ರಜೆಗಳಲ್ಲಿ ದ್ವೈತವೆಂದರೇ ಏನೋ ತಿಳಿದಿಲ್ಲ. ಅದ್ವೈತ, ವಿಶಿಷ್ಟಾದ್ವೈತ ಪ್ರಜೆಗಳಲ್ಲಿ ಸ್ವಲ್ಪ ಇರುವಾಗ, ದ್ವೈತ ಬಹಳ ಕಡಿಮೆ ಜನರಲ್ಲಿ ಮಾತ್ರ ಇದೆ. ಅದ್ವೈತ, ವಿಶಿಷ್ಟಾದ್ವೈತ ಪ್ರಜೆಗಳಲ್ಲಿ ಹರಡಿರುವಾಗ, ದ್ವೈತ ಮಾತ್ರ ಬ್ರಾಹ್ಮಣರಲ್ಲಿ ಮಾತ್ರ ಇದೆ.

ಈ ಮೂರು ಸಿದ್ಧಾಂತಗಳು ಹುಟ್ಟಿದ ನಂತರ ಸುಮಾರು ಏಳುನೂರು ವರ್ಷಗಳಿಗೆ 'ತ್ರೈತ ಸಿದ್ಧಾಂತ' ಹುಟ್ಟಿದೆ. ತ್ರೈತ ಸಿದ್ಧಾಂತ ಸೃಷ್ಠಿ ಆದಿಯಲ್ಲಿ ಹುಟ್ಟಿದರೂ ಅದು ಈಗ ತಿಳಿಯುವುದರಿಂದ ಈಗಲೇ ಹುಟ್ಟಿದೆಯೆಂದು ಹೇಳಬೇಕಾಗಿ ಬಂದಿದೆ. ತ್ರೈತ ಸಿದ್ಧಾಂತ ಈಗೀಗಲೇ ಹುಟ್ಟಿದರೂ ಅದು ಅತಿವೇಗವಾಗಿ ಪ್ರಜೆಗಳೊಳಗೆ ವ್ಯಾಪಿಸಿಕೊಂಡಿದೆ. ನಮಗೆ ತಿಳಿದಷ್ಟರಲ್ಲಿ ಅದ್ವೈತಕ್ಕಿಂತ ಹೆಚ್ಚು ವೇಗವಾಗಿ ಕಡಿಮೆ ಕಾಲದಲ್ಲಿಯೇ ಪ್ರಚಾರವಾಗಿದೆಯೆಂದು ತಿಳಿಯುತ್ತಿದ್ದೇವೆ. ಇಲ್ಲಿಗೆ ಸುಮಾರು 40 ವರ್ಷಗಳ ಕೆಳಗೆ ತ್ರೈತ ಸಿದ್ಧಾಂತ ಹುಟ್ಟಿದರೂ 37 ವರ್ಷಗಳಿರುವಾಗ ಅದರ ಹೆಸರನ್ನು ಇಡಲಾಗಿದೆ. ನಂತರ ಹತ್ತು ವರ್ಷಗಳಿಂದ ಹೊರಗಡೆ ಪ್ರಚಾರ ಮಾಡುವುದು ನಡೆದಿದೆ. ಹತ್ತು ವರ್ಷಗಳಲ್ಲಿಯೇ ನಮಗೆ ತಿಳಿದಮಟ್ಟಿಗೆ ಬಹಳ ವೇಗವಾಗಿ ಪ್ರಚಾರವಾಗಿದೆ. ನೀವು ಕಾಣಿಸಲಿಲ್ಲವೆಂದು ಹೇಳಿದರೂ ತ್ರೈತ ಸಿದ್ಧಾಂತ ನಮಗೆ ಚೆನ್ನಾಗಿಯೇ ಕಾಣಿಸುತ್ತದೆ. ನಮ್ಮ ಗ್ರಂಥಗಳು ಓದಿದವರು ಯಾರಾದರೂ ತ್ರೈತರಾಗಿ ಬದಲಾಗಿ ತ್ರೈತ ಸಿದ್ಧಾಂತವನ್ನು ಪ್ರಚಾರ ಮಾಡುತ್ತಿದ್ದಾರೆ. ಒಂದು ಗ್ರಂಥವನ್ನು ಓದಿದವರು

ಸಹ ತ್ರೈತ ಸಿದ್ಧಾಂತವನ್ನು ಅನುಸರಿಸುತ್ತಿದ್ದಾರೆ. ಅವರೇ ಸ್ವಚ್ಛಂಧವಾಗಿ ಪ್ರಚಾರ ಮಾಡುತ್ತಿದ್ದಾರೆ.

ತ್ರೈತ ಸಿದ್ಧಾಂತ ಒಂದು ಭಗವದ್ಗೀತೆಯಲ್ಲಿಯೇ ಅಲ್ಲದೆ, ಕ್ರೈಸ್ತರ ಬೈಬಲ್ ಗ್ರಂಥದಲ್ಲಿಯೂ, ಮುಸ್ಲಿಮ್‌ರ ಖುರಾನ್ ಗ್ರಂಥದಲ್ಲಿಯೂ ಹೇಳಿರುವುದರಿಂದ ಮುಸ್ಲಿಮ್‌ರು, ಕ್ರೈಸ್ತರು ಮೂರು ಆತ್ಮಗಳ ವಿವರವನ್ನು ತಿಳಿದುಕೊಳ್ಳುತ್ತಿದ್ದಾರೆ. ಅವರ ಗ್ರಂಥಗಳಲ್ಲಿನ ತ್ರೈತ ಸಿದ್ಧಾಂತವನ್ನು ಕ್ರೈಸ್ತರು, ಮುಸ್ಲಿಮ್‌ರು ಪ್ರಚಾರ ಮಾಡುವುದರಿಂದ, ದೇಶದಲ್ಲಿ ತ್ರೈತ ಸಿದ್ಧಾಂತ ಮೂರು ಮತಗಳಲ್ಲಿ ಪ್ರಚಾರ ಆಗುವುದರಿಂದ ಈ ಸಿದ್ಧಾಂತ ಅತಿವೇಗವಾಗಿ ಪ್ರಚಾರವಾಗುತ್ತಿದೆ. ಅದ್ವೈತ ವಿಶಿಷ್ಟಾದ್ವೈತ ಹಿಂದೂಗಳಲ್ಲಿ ಮಾತ್ರ ಇದೆ. ಹಾಗೆ ದ್ವೈತ ಬ್ರಾಹ್ಮಣರಲ್ಲಿ ಮಾತ್ರ ಇದೆ. ಆದರೆ ತ್ರೈತ ಸಿದ್ಧಾಂತ ಒಂದು ಕುಲಕ್ಕಾಗಲಿ, ಒಂದು ಮತಕ್ಕಾಗಲಿ ಪರಿಮಿತಿ ಆಗದಂತೆ ಎಲ್ಲಾ ಮತಗಳಲ್ಲಿಯೂ, ಎಲ್ಲಾ ಕುಲಗಳಲ್ಲಿಯೂ ವ್ಯಾಪಿಸಿರುವುದರಿಂದ ತ್ರೈತ ಸಿದ್ಧಾಂತ ವೇಗವಾಗಿ ಹರಡುತ್ತಿದೆ ಯೆಂದೇ ಹೇಳುತ್ತಿದ್ದೇವೆ. ಇನ್ನೂ ಸ್ವಲ್ಪ ಕಾಲಕ್ಕೆ ಭಾರತ ದೇಶಕ್ಕೇ ಪರಿಮಿತಿ ಆಗದಂತೆ ಎಲ್ಲಾ ದೇಶಗಳಲ್ಲಿ, ಎಲ್ಲಾ ಜಾತಿಗಳಲ್ಲಿ ವ್ಯಾಪಿಸಬಲ್ಲದು ಎಂದು ಹೇಳುತ್ತಿದ್ದೇವೆ.

**ಪ್ರಶ್ನೆ :- ಅದ್ವೈತ ದ್ರಾವಿಡ ಬ್ರಾಹ್ಮಣನಾದ ಶಂಕರಾಚಾರ್ಯರೊಂದಿಗೆ ಪ್ರಾರಂಭವಾದರೂ ಕಾಣಿಸದೆ ತ್ರೇತಾಯುಗದಿಂದ ಆರ್ಯರಲ್ಲಿ ಇತ್ತು. ಮೊದಲು ಬ್ರಾಹ್ಮಣ ಕುಲದಲ್ಲಿ ಆರಂಭವಾದ ಅದ್ವೈತ ನಂತರ ಕಾಲದಲ್ಲಿ ಉಳಿದ ಕುಲಗಳಲ್ಲಿ ಸಹ ವ್ಯಾಪಿಸಿದೆ. ನಂತರ ಬಂದಿರುವ ವಿಶಿಷ್ಟಾದ್ವೈತ ಸಹ ದ್ರಾವಿಡ ಬ್ರಾಹ್ಮಣರಿಂದ ಆರಂಭವಾದರೂ ಅದು ದಕ್ಷಿಣ ದೇಶಕ್ಕೇ ಪರಿಮಿತಿಯಾಗಿ ಹೋಗಿದೆ. ಆದರೂ ಉಳಿದ ಕುಲಗಳಿಗು ಸಹ ವಿಶಿಷ್ಟಾದ್ವೈತ ಸ್ವಲ್ಪ ವ್ಯಾಪಿಸಿದೆಯೆಂದೇ ಹೇಳಬೇಕು. ನಂತರ ಬಂದಿರುವ ದ್ವೈತ ದಕ್ಷಿಣ ದೇಶದಲ್ಲಿ ಕರ್ನಾಟಕ ರಾಷ್ಟ್ರದಲ್ಲಿ ಹುಟ್ಟಿದರೂ ಅದು ಬ್ರಾಹ್ಮಣರಿಗೇ ಪರಿಮಿತವಾಗಿ, ಉಳಿದ ಕುಲಗಳಲ್ಲಿ ವ್ಯಾಪಿಸಲಾರದೆಹೋಗಿದೆ. ಆದ್ದರಿಂದ ದ್ವೈತ ದೇಶದಲ್ಲಿ ಎಲ್ಲಿಯೂ ವ್ಯಾಪಿಸಲಿಲ್ಲವೆಂದೇ ಹೇಳಬೇಕು. ದ್ವೈತ**

**ಸಿದ್ಧಾಂತವನ್ನು ಅನುಸರಿಸುವ ಬ್ರಾಹ್ಮಣರು ಮಂತ್ರಾಲಯದ ರಾಘವೇಂದ್ರ ಸ್ವಾಮಿ ಆಲಯದಲ್ಲಿಯೂ, ತಿರುಪತಿ ವೆಂಕಟೇಶ್ವರಸ್ವಾಮಿ ಆಲಯದಲ್ಲಿಯೂ ಪೂಜಾರಿಗಳಾಗಿ ಕಾಣಿಸುತ್ತಿರುತ್ತಾರೆ. ಇಲ್ಲಿಯವರೆಗೂ ಮೂವರು ಸಿದ್ಧಾಂತಕರ್ತರು ದ್ರಾವಿಡ ಬ್ರಾಹ್ಮಣರೇ ಆದರೂ ಅದ್ವೈತದ ಬುನಾದಿ ಆರ್ಯರದಾಗಿದೆ ಆದಕಾರಣ ಉತ್ತರ ಭಾರತ ದೇಶದಲ್ಲಿ ಸಹ ಅದ್ವೈತರು ಇದ್ದಾರೆ. ವಿಶಿಷ್ಟಾದ್ವೈತ ದೇಶದಲ್ಲಿ ಎಲ್ಲಿಯಾದರೂ ಅಪರೂಪವಾಗಿ ಕಾಣಿಸಿದರೂ ಅದು ದಕ್ಷಿಣ ದೇಶಕ್ಕೆ ಪರಿಮಿತಿಯಾಗಿದೆಯೆಂದು, ದ್ರಾವಿಡರಲ್ಲಿಯೇ ವಿಶಿಷ್ಟಾದ್ವೈತ ಇದೆಯೆಂದು ಹೇಳಬಹುದು. ಮೂರನೆ ದ್ವೈತ ಸಿದ್ಧಾಂತಕರ್ತ ದ್ರಾವಿಡ ಬ್ರಾಹ್ಮಣನೇ ಆಗಿರುವುದರಿಂದ ದ್ವೈತ ದಕ್ಷಿಣ ದೇಶದಲ್ಲಿ ಮಾತ್ರ ಪರಿಮಿತಿಯಾಗಿ ಕಾಣಿಸುತ್ತಿದೆ.**

**ಇನ್ನು ತ್ರೈತ ಸಿದ್ಧಾಂತ ಸಹ ದಕ್ಷಿಣ ದೇಶದಲ್ಲಿಯೇ ಆಂಧ್ರ ರಾಷ್ಟ್ರದಲ್ಲಿ, ರಾಯಲಸೀಮ ಪ್ರಾಂತದಲ್ಲಿ ಹುಟ್ಟಿದೆ. ತ್ರೈತ ಸಿದ್ಧಾಂತ ಕರ್ತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು. ಈತನು ಹಿಂದೂಮತದಲ್ಲಿ ನಾಲ್ಕನೆ ಸಿದ್ಧಾಂತಕರ್ತ. ಇಲ್ಲಿಯವರೆಗೂ ಮೂರು ಸಿದ್ಧಾಂತಗಳು ದ್ರಾವಿಡ ಬ್ರಾಹ್ಮಣರಿಗೇ ಪರಿಮಿತವಾಗಿವೆ. ನಾಲ್ಕನೆ ಸಿದ್ಧಾಂತವನ್ನು ಹೇಳಿದ ತ್ರೈತ ಸಿದ್ಧಾಂತಕರ್ತನಾದ ಪ್ರಬೋಧಾನಂದ ಯೋಗೀಶ್ವರರದು ಯಾವ ಕುಲವೋ ನಮಗೆ ತಿಳಿದಿಲ್ಲ. ಜ್ಞಾನಕ್ಕೆ ಕುಲ ಮುಖ್ಯವಲ್ಲದಿದ್ದರೂ, ಸಿದ್ಧಾಂತಕ್ಕೆ ಕುಲದೊಂದಿಗೆ ಯಾವ ಸಂಬಂಧ ಇಲ್ಲದಿದ್ದರೂ ಯಾರಾದರೂ ಕೇಳಿದರೆ ನಾವು ಏನೆಂದು ಹೇಳಬೇಕು? ಆದುದರಿಂದ ನಾವು ಇತರರಿಗೆ ಹೇಳುವುದಕ್ಕೆ ನಿಮ್ಮನ್ನು ಕುಲವನ್ನು ಕುರಿತು ಕೇಳುತ್ತಿದ್ದೇವೆ?**

**ಉತ್ತರ :–** ಪ್ರಬೋಧಾನಂದ ಯೋಗೀಶ್ವರರ ಶರೀರವು ಶರೀರದಲ್ಲಿರುವ ಮಧ್ಯಾತ್ಮದ್ದೇ ಆದರೂ ಜೀವಿಯಭಾವನೆಯಿಂದ ಜೀವಿಯಾದ ನಾನೇ ಮಾತನಾಡುತ್ತಿದ್ದೇನೆ. ಇಲ್ಲಿಯವರೆಗೂ ಯಾವ ಗ್ರಂಥ ರಚನೆಯಲ್ಲಿಯೂ ಸ್ವತಃವಾಗಿ **ಮಧ್ಯಾತ್ಮ** ಯಾವಾಗಲೂ ಮಾತನಾಡಲಿಲ್ಲ. ಅದರೂ ಈ ಗ್ರಂಥದಲ್ಲಿ ಕೆಲವು ಮಾತುಗಳನ್ನು ತಾನೇ ಮಾತನಾಡಿ ಹೇಳುವುದಾಗಿದೆ. ನಂತರ ಏನು ಮಾತನಾಡಲಿಲ್ಲ. ಶರೀರದಲ್ಲಿನ ಜೀವಿಯಾದ ನನ್ನ ಭಾವನೆಯನ್ನೇ ಆತ್ಮ

ಹೊರಗೆ ಹೇಳುತ್ತಿದೆ. ಬಾಯಿಂದ ಹೇಳುವ ಕೆಲಸ ಮಾಡಿದರೂ, ಭಾವನೆ ಜೀವಿಯಾದ ನನ್ನದಾಗುವುದರಿಂದ ನಾನು ಮಾತನಾಡಿದಂತೆಯೇ ಹೊರತು, ಆತ್ಮ ಮಾತನಾಡಿದಂತೆ ಅಲ್ಲ.

ಈಗ ನಾನೇನು ಹೇಳುತ್ತಿದ್ದೇನೆಂದರೇ! ಶರೀರದೊಳಗಿರುವ ನಾನು ಜೀವಿ ಆಗಿರುವುದರಿಂದ ಗುತ್ರ (ಗೋತ್ರ) ಹೊಂದಿರುವವನೇ ಆಗಲಿ ಕುಲ ಇಲ್ಲದವನು. ಇನ್ನೂ ಏನೆಂದರೇ ಶರೀರವೆಲ್ಲಾ ವ್ಯಾಪಿಸಿ ಶರೀರಕ್ಕೆ ಅಧಿಪತಿಯಾಗಿರುವ ಆತ್ಮಕ್ಕೆ ಗುತ್ರ ಸಹ ಇಲ್ಲ, ಕುಲ ಅಷ್ಟಕ್ಕೂ ಇಲ್ಲ. ಹೊರಗೆ ಕಾಣಿಸುವ ಶರೀರಕ್ಕೆ ಮಾತ್ರ ತಾಯಿತಂದೆಯರನ್ನನುಸರಿಸಿ ಇಂತಹ ಕುಲ ಎಂದು ಹೇಳುತ್ತಿದ್ದಾರೆ. ಹಾಗೆ ಹೇಳಿದರೂ ಅದು ಆತ್ಮಕ್ಕಾಗಲಿ, ಜೀವಾತ್ಮಕ್ಕಾಗಲಿ ಅಲ್ಲದೆ ಸ್ತ್ರೀತತ್ತ್ವ ಇರುವ ಶರೀರದ್ದೇಯೆಂದು ಹೇಳುತ್ತಿದ್ದೇನೆ. ಹೊರಗಿನ ಮನುಷ್ಯರು ಪ್ರಕೃತಿ ಭಾವನೆಯಲ್ಲಿಯೇ ಇರುತ್ತಾರೆ. ಆದ್ದರಿಂದ ಅವರಿಗೆ ಕುಲದ ಹೆಸರು ತಪ್ಪದೆ ಹೇಳಬೇಕಾಗಿದ್ದೆ. ಆದುದರಿಂದ ಪ್ರಬೋಧಾನಂದ ಯೋಗೀಶ್ವರರ ಶರೀರ ಹುಟ್ಟಿರುವುದು ಕಮ್ಮಕುಲದಲ್ಲಿ. ಪ್ರಬೋಧಾನಂದ ಯೋಗೀಶ್ವರರು ಕಮ್ಮ (ಚೌದರಿ) ಕುಲದಲ್ಲಿ ಹುಟ್ಟುತ್ತಾನೆಂದು ಪೋತುಲೂರಿ ವೀರಬ್ರಹ್ಮಯ್ಯನವರು ತನ್ನ ಏಷ್ಯಕಾಲಜ್ಞಾನದಲ್ಲಿ ಮೊದಲೇ ಹೇಳಿದ್ದಾನೆ. ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಏನು ಹೇಳಿದ್ದಾನೋ ಇಲ್ಲಿ ಸ್ವಲ್ಪ ನೋಡೋಣ.

**"ಕಮ್ಮ (ಚೌದರಿ) ಕುಲದವರು ತಾಟಿಪತ್ರಿಗೆ ಹೋಗಿ ಏಕವಚನದ ಮೇಲೆ ಈ ಭೂಮಿಯಲ್ಲಿ ಜನರ ಹೆಸರಿನಲ್ಲಿ ಕಮ್ಮ (ಚೌದರಿ) ಜಾತಿಗೆ ಜಾತಿಗಳಿಗೆಲ್ಲ ಸಂಶಯವಿಲ್ಲದೆ ಶೀಘ್ರವಾಗಿ ಬನ್ನಿರೆಂದು ಬರೆದಿಟ್ಟಂತೆ ಆ ಚೌದರಿಗಳ ಮೇಲೆ ಗುಸಗುಸ ಮಾತನಾಡಿದರು ಪ್ರಜೆಗಳು"** ಈ ವಾಕ್ಯದಲ್ಲಿ ಯೋಗೀಶ್ವರರೊಂದರ ಕುಲದ ಹೆಸರನ್ನು ಪ್ರಸ್ತಾವಿಸುವುದಲ್ಲದೆ, ಆತನ ತ್ರೈತ ಸಿದ್ಧಾಂತವನ್ನು ಪ್ರಚಾರ ಮಾಡಿದ ಊರು ಹೆಸರು ಸಹ ಹೇಳುವುದು ವಿಶೇಷ. ಪ್ರಬೋಧಾನಂದ ಯೋಗೀಶ್ವರರ ಮೇಲೆ ಪ್ರಜೆಗಳು ಅನೇಕ ವಿಧಗಳಾಗಿ ಮಾತನಾಡಿಕೊಳ್ಳುವುದನ್ನು ಆ ಚೌದರಿಗಳ ಮೇಲೆ ಪ್ರಜೆಗಳು ಗುಸಗುಸ ಮಾತನಾಡಿದರೆಂದು ಬರೆದಿದ್ದಾರೆ.

ಇಲ್ಲಿ ಹೇಳಬೇಕಾಗಿರುವುದು ಈ ವಾಕ್ಯದಲ್ಲಿ **"ತಾಟಿಪತ್ರಿ"** ಎಂಬ ಊರ ಹೆಸರಿದೆ ಇದೆ. ತಾಡಿಪತ್ರಿ ರೈಲ್ವೇಸ್ಟೇಷನ್‌ನಲ್ಲಿ ರೈಲ್ವೇಸ್ಟೇಷನ್ ಮೊದಲಿನಲ್ಲಿಯೇ ಊರಿನ ಹೆಸರಿರುವ ದೊಡ್ಡ ಬೋರ್ಡು ಪ್ರತಿ ಸ್ಟೇಷನ್‌ಗು ಎರಡುಕಡೆ ಇರುತ್ತದೆ. ನಾನು ನೋಡಿದಾಗ ಬಹುಶಾ 1972 ರಲ್ಲಿ "ತಾಟಿಪತ್ರಿ" ಎಂಬ ಹೆಸರಿನಿಂದ ಇತ್ತು. ಆ ಬೊರ್ಡು ಸಿಮೆಂಟಿನಿಂದ ತಯಾರು ಮಾಡಿರುವುದು. ಆ ಬೋರ್ಡಿನ ಮೇಲೆ ಸುಮಾರು ಒಂದುವರೆ ಅಡಿ ವಿಶ್ತೀರ್ಣದಿಂದ "ತಾಟಿಪತ್ರಿ" ಎಂಬ ನಾಲ್ಕು ಅಕ್ಷರಗಳು ಇದ್ದವು. ಅದು ಸಹ ದಪ್ಪವಾಗಿರುವ ಸಿಮೆಂಟು ಬೋರ್ಡಿನಮೇಲೆ ನಾಲ್ಕು ಅಕ್ಷರಗಳ ಗುಣಿಗಳು ಇದ್ದವು. ಸಿಮೆಂಟು ಬೋರ್ಡಿನಮೇಲೆ ಅಕ್ಷರಗಳಿರುವಂತೆ ತಗ್ಗಾಗಿ ಸಿಮೆಂಟನ್ನು ತೆಗೆದುಹಾಕಿ ಗುಣಿಯಲ್ಲಿ ಅಕ್ಷರವೊಂದರ ಆಕಾರವನ್ನು ಕಾಣಿಸುವಂತೆ ಮಾಡಿದ್ದರು. ಅದನ್ನು ನಾನು ಚೆನ್ನಾಗಿ ಗಮನಿಸಿದ್ದೇನೆ. ನಂತರ ಹೊಸದಾಗಿ ಬೋರ್ಡಿಗೆ ಬಣ್ಣವನ್ನು ಹಾಕುವಾಗ ಹಳದಿ ಬಣ್ಣ ಬೊರ್ಡೆಲ್ಲವೂ ಬಳಿದು ಅಕ್ಷರಗಳ ತಗ್ಗಿನಲ್ಲಿ ಕಪ್ಪುಬಣ್ಣ ಬರೆದಿದ್ದಾರೆ. ಆದರೆ ಬೋರ್ಡಿನಲ್ಲಿರುವ "ಟಿ" ಯನ್ನು ಕಪ್ಪುಬಣ್ಣದಿಂದ ಬರೆಯದೆ ಅದರಮೇಲೆ "ಡಿ" ಯನ್ನು ಬರೆಯುವುದು ನಡೆದಿದೆ. ಹಾಗೆ ನಾವು ನೋಡಿದಂತೆ 'ತಾಟಿಪತ್ರಿ' ಎಂಬ ಹೆಸರು ಸ್ವಲ್ಪ 'ತಾಡಿಪತ್ರಿ'ಯಾಗಿ ಬದಲಾಗಿದೆ. 'ಟಿ' ಮೇಲೆ 'ಡಿ' ಎಂದು ಬರೆದರೂ 'ಟಿ' ಆಕಾರ ತಗ್ಗಾಗಿ ಇರುವುದಾದ್ದರಿಂದ ಚೆನ್ನಾಗಿ ನೋಡಿದರೆ 'ಡಿ' ಕೆಳಗೆ 'ಟಿ' ಕಾಣಿಸುತ್ತಿತ್ತು. ಅಷ್ಟೇ ಅಲ್ಲದೆ ತ್ರೇತಾಯುಗದಲ್ಲಿ ಶ್ರೀರಾಮನು ಸೀತೆಗೋಸ್ಕರ ದಕ್ಷಿಣ ದೇಶಕ್ಕೆ ಬಂದಾಗ ಈ  ಪ್ರಾಂತದಲ್ಲಿಯೇ ತಾಟಕಿಯನ್ನು ಸಂಹರಿಸಿದ್ದಾನೆಂದು, ಆದ್ದರಿಂದ ಈ ಊರಿಗೆ 'ತಾಟಿಪತ್ರಿ' ಎಂಬ ಹೆಸರು ಬಂದಿದೆಯೆಂದು ಕೆಲವರು ಹಿರಿಯರು ಹೇಳಿದರೇ ಕೇಳಿದ್ದೇವೆ. ಸುಮಾರು 40 ವರ್ಷಗಳಿರುವಾಗ 'ತಾಟಿಪತ್ರಿ' ಎಂಬ ಹೆಸರು ಬದಲಾಗಿಹೋಗಿ 'ತಾಡಿಪತ್ರಿ'ಯಾಗಿ ರೂಪೊಂದಿದೆ.  ಮೂರು ವರ್ಷಗಳ ಕೆಳಗಿನವರೆಗು ಅದೇ ಬೋರ್ಡು ಇತ್ತು. ಈಗ ರೈಲ್ವೇಸ್ಟೇಷನ್ ದೊಡ್ಡದಾಗಿರುವುದರಿಂದ ಹಳೆಬೊರ್ಡುಗಳು ತೆಗೆದು ಪೂರ್ತಿಯಾಗಿ ಹೊಸಬೋರ್ಡುಗಳನ್ನು ಇಡುವುದು, ಅವುಗಳ ಮೇಲೆ 'ತಾಡಿಪತ್ರಿ' ಎಂದು

ಬರೆಯುವುದು ನಡೆದಿದೆ. ಇದೆಲ್ಲವೂ ಏಕೆ ಹೇಳುತ್ತಿದ್ದೇವೆಂದರೇ! ಬ್ರಹ್ಮಯ್ಯನವರು ಬರೆದಿರುವುದು ನಾವಿರುವ ತಾಟಿಪತ್ರಿಯೇ ಎಂದು ತಿಳಿಯುವುದಕ್ಕಾಗಿಯೇ.

ಪೋತುಲೂರಿ ವೀರಬ್ರಹ್ಮಯ್ಯನವರು ಪ್ರಬೋಧಾನಂದ ಯೋಗೀಶ್ವರರು ಹುಟ್ಟಿರುವುದು ಚೌದರಿ ಕುಲವೆಂದು ತಿಳಿಸುವುದಕ್ಕೆ ಈ ವಾಕ್ಯದಲ್ಲಿ "ಕಮ್ಮರು (ಚೌದರಿಸ್) ತಾಟಿಪತ್ರಿಗೆ ಹೋಗಿ" ಎಂದು ಹೇಳಿದ್ದಾನೆ. ಬ್ರಹ್ಮಯ್ಯನವರು ಹೇಳಿದಂತೆ ಪ್ರಬೋಧಾನಂದ ಯೋಗೀಶ್ವರರು ಬಾಲ್ಯದಲ್ಲಿ ತಾಟಿಪತ್ರಿಯಲ್ಲಿದ್ದರೂ ಎಂಟು ವರ್ಷಗಳ ವಯಸ್ಸಿನಲ್ಲಿ ಅಲ್ಲಿಂದ ಬೇರೆ ಊರಿಗೆ ಹೋಗುವುದು ನಡೆದಿದೆ. ಆತನು ಕೆಲವು ಊರುಗಳು ಬದಲಾದ ನಂತರ ಪುನಃ ತಾಟಿಪತ್ರಿಗೆ ಬರುವುದು ನಡೆದಿದೆ. ನಂತರ ಪ್ರಬೋಧಾಶ್ರಮ ಸ್ಥಾಪಿಸಲಾಗಿದೆ. ತಾಟಿಪತ್ರಿಗೆ ಬಂದು ಪ್ರಬೋಧಾಶ್ರಮವನ್ನು ನಿರ್ಮಿಸುವುದರಿಂದ "ಕಮ್ಮರು ತಾಟಿಪತ್ರಿ ಹೋಗಿ" ಎಂದು ಹೇಳಿದ್ದಾರೆ. ಪ್ರಬೋಧಾನಂದ ಯೋಗೀಶ್ವರರನ್ನು ನೋಡಿ ಸರಿಹೋಗದವರು ಆತನ ಎದುರುಗಡೆ ಅಲ್ಲದೆ ಮರೆಯಲ್ಲಿ ಆತನನ್ನು ಕುರಿತು ಮಾತನಾಡಿಕೊಳ್ಳುವುದು ನಡೆಯುತ್ತಿತ್ತು. ಆದುದರಿಂದ "ಆ ಕಮ್ಮರ(ಚೌದರಿ) ಮೇಲೆ ಗುಸಗುಸ ಮಾತನಾಡಿದರು ಪ್ರಜೆಗಳು" ಎಂದು ಬರೆದಿದ್ದಾರೆ. ಈಗ ನೀವು ಕೇಳಿದ ಪ್ರಶ್ನೆಗೆ ನಾವು ಹೇಳದೆಯೇ ಬ್ರಹ್ಮಯ್ಯನವರ ವಾಕ್ಯದಿಂದ ಉತ್ತರ ದೊರೆತಿದೆ ಅಲ್ಲವೆ! ಪ್ರಬೋಧಾನಂದ ಯೋಗೀಶ್ವರರು ಬರೆದ ಜ್ಞಾನ ಹೊಚ್ಚಹೊಸದಾಗಿರುತ್ತದೆ. ಆತನು **'ಬಿಡಿಸಿಬರೆಯದ'** ಬ್ರಹ್ಮಯ್ಯನವರ ತತ್ತ್ವಗಳಿಗೆ ಅರ್ಥಗಳನ್ನು ಹೇಳಿದ್ದಾನೆ. **'ಮುಡಿಬಿಚ್ಚಲಾರದ'** ವೇಮನ ಪದ್ಯಗಳಿಗೆ ವಿವರಗಳು ಹೇಳಿದ್ದಾನೆ. ಮಿಸ್ಟರಿಯಾಗಿ ಉಳಿದುಹೋದ **'ಬೆರ್ಮುಡಾ ಟ್ರಯಾಂಗಿಲ್'** ರಹಸ್ಯಗಳನ್ನು ಛೇದಿಸಿ ಹೇಳಿದ್ದಾನೆ. ಮರಣ ರಹಸ್ಯಗಳನ್ನು, ಜನ್ಮ ವಿವರಗಳನ್ನು ಇದು ಅದು ಎನ್ನದಂತೆ ಎಷ್ಟೋ ಹೊಸ ವಿಷಯಗಳನ್ನು ಹೇಳುವುದರಿಂದ ಭಕ್ತಿ ಹೊಂದಿದವರು ಕೇಳಿದ್ದಾರೆ. ಭಕ್ತಿಯಿಲ್ಲದವರು ಯೋಗೀಶ್ವರರನ್ನು ವಿಮರ್ಶಿಸುವುದಕ್ಕೆ ಮೊದಲುಮಾಡಿದ್ದಾರೆ. ಆ ವಿಮರ್ಶೆಗಳನ್ನು ಎದುರುಗಡೆ ಅಲ್ಲದೆ ಮರೆಯಲ್ಲಿ ಗುಸುಗುಸುಗಳ ರೂಪದಲ್ಲಿ ಮಾತನಾಡಿಕೊಳ್ಳುತ್ತಿದ್ದಾರೆ.

**ಪ್ರಶ್ನೆ :– ನಾವು ಸಹ ಕೆಲವರು ಅಂದುಕೊಂಡಾಗ ಕೇಳಿದ್ದೇವೆ. ಪ್ರಬೋಧಾನಂದ ಯೋಗೀಶ್ವರರು ಹೇಳುವ ಬೋಧನೆಗಳು ಪ್ರತ್ಯೇಕವಾಗಿ ಇರುತ್ತವೆಯೆಂದು, ಇಲ್ಲಿಯವರೆಗೂ ಯಾರೂ ಹೇಳದ ಬೋಧನೆಗಳನ್ನು ಹೇಳುತ್ತಾನೆಂದು, ಹಾಗೇ ಇಲ್ಲಿಯವರೆಗೂ ಯಾರೂ ಬರೆಯದ ಬೋಧನೆಗಳನ್ನೇ ಗ್ರಂಥಗಳಲ್ಲಿ ಬರೆಯುತ್ತಾನೆಂದು ಹೇಳಿಕೊಳ್ಳುವುದು ಕೇಳಿದ್ದೇವೆ. ಅದು ಎಷ್ಟರಮಟ್ಟಿಗೆ ವಾಸ್ತವ?**

**ಉತ್ತರ :–** ಈ ವಿಷಯವನ್ನು ಕುರಿತು ನಾವು ಹೇಳಿದರೆ ನಮ್ಮ ಘನತೆಯನ್ನು (ದೊಡ್ಡತನವನ್ನು) ಕುರಿತು ನಾವೇ ಹೇಳಿಕೊಂಡಂತಾಗುತ್ತದೆ. ನಾವು ಹೇಳುವುದಕ್ಕಿಂತ ನೀವೇ ಸ್ವತಃವಾಗಿ ಓದಿಕೊಳ್ಳುವುದು ಒಳ್ಳೆಯದು. ಇತರರು ಕೇಳಿಯಾಗಲಿ, ಓದಿಯಾಗಲಿ ನಮ್ಮ ಬೋಧನೆಯಲ್ಲಿನ ಪ್ರತ್ಯೇಕತೆಯನ್ನು ತಿಳಿದುಕೊಳ್ಳುವುದು ಒಳ್ಳೆಯದು. ಯೋಗೀಶ್ವರರು ಯಾರಿಗೂ ತಿಳಿಯದ ಆಧ್ಯಾತ್ಮಿಕ ರಹಸ್ಯಗಳು ಹೇಳುತ್ತಾನೆಂಬುದಕ್ಕೆ ಸಾಕ್ಷಿಯಾಗಿ ವೀರಬ್ರಹೇಂದ್ರ ಸ್ವಾಮಿಗಳು ತನ್ನ ಕಾಲಜ್ಞಾನದಲ್ಲಿ ಹೇಳಿದ ಒಂದು ವಾಕ್ಯವನ್ನು ಗುರುತಾಗಿ ನೋಡೋಣ. **"ಆನಂದಾಶ್ರಯರ ಕೈಯಿಂದ ಚಿಣಕೆ ಬೆಣಕ, ದೇದಿಪ್ಯಮಾನ ತೇಜಸ್ಸು ಕೊಟ್ಟೆವು. ಸರ್ವವು ಇದರೊಳಗಿನವೇ ಇದು ಸಾಂಗೋಪಾಂಗವಾದ, ಅತಿ ಸೂಕ್ಷ್ಮವಾದ, ಅತಿ ರಹಸ್ಯವಾದ ಪಂತ ವಾಕ್ಯ."** ಇದರಿಂದ ಯೋಗೀಶ್ವರರು ಹೇಳುವ ಜ್ಞಾನವೆಲ್ಲವೂ ರಹಸ್ಯಗಳಿಂದ ಕೂಡಿರುವುದೆಯೆಂದು ತಿಳಿಯುತ್ತಿದೆ.

**ಪ್ರಶ್ನೆ :– ಪ್ರಬೋಧಾನಂದ ಯೋಗೀಶ್ವರರು ಬರೆದ ಗ್ರಂಥಗಳ ನಾಲ್ಕನ್ನು ಓದಿದ್ದೇವೆ. ನೀವು ಹೇಳಿದಂತೆ ಆ ಗ್ರಂಥಗಳಲ್ಲಿನ ಜ್ಞಾನ ಪ್ರತ್ಯೇಕವಾದುದೆಂದು ಅರ್ಥವಾಗುತ್ತಿದೆ. ಆತನು ಬರೆದ ವಿಷಯಗಳು ಯಾರೂ ಹೇಳದ ವಿಷಯಗಳೇ. ಅವುಗಳನ್ನು ಇಲ್ಲಿಯವರೆಗೂ ಯಾರೂ ಹೇಳಲಿಲ್ಲ, ಯಾರೂ ಬರೆಯಲಿಲ್ಲ. ಆದರೆ ಆತನು ಹೇಳಿದ ಕೆಲವು ಉಪನ್ಯಾಸಗಳನ್ನು ನಾವು ಕೇಳಿದ್ದೇವೆ. ಆ ಮಾತುಗಳಲ್ಲಿ ಒಂದು ಹೊಸ ವಿಷಯ ನಮಗೆ ತಿಳಿದಿದೆ. ಒಂದು ಮೀಟಿಂಗ್‌ನಲ್ಲಿ "ಇಲ್ಲಿಗೆ ಬಂದವರು ಒಳ್ಳೆಯ ಉದ್ದೇಶದಿಂದ ಜ್ಞಾನ ತಿಳಿಯಬೇಕೆಂಬ ಭಾವದಿಂದಲೇ ಇರಿ. ನನ್ನನ್ನು ವಿಮರ್ಶಿಸುವ ದೋರಣೆಯಲ್ಲಾಗಲಿ, ಅಸೂಯೆಯಿಂದ ನೋಡುವುದಾಗಲಿ**

**ಇರಬಾರದೆಂದು ತಿಳಿಸುತ್ತಿದ್ದೇವೆ. ಹಾಗಿರುವುದರಿಂದ ನನಗೆ ನಷ್ಟವಾಗಲಿ, ಕಷ್ಟವಾಗಲಿ ಇರುವುದಿಲ್ಲ. ಆದರೆ ಅದು ನಿಮಗೆ ಒಳ್ಳೆಯದಲ್ಲ ಅದರಿಂದ ನಿಮಗೆ ನಷ್ಟ ಕಷ್ಟ ಏರ್ಪಡುತ್ತದೆ. ಏಕೆಂದರೇ! ಇಲ್ಲಿ ನಿಮಗೆ ಕಾಣಿಸದ ದೇವತೆಗಳು, ಆಕಾಶದಿಂದ ಇಳಿದುಬಂದ ಗ್ರಹಗಳು, ಎಷ್ಟೋ ಜನ ದೊಡ್ಡವರು ನಿಮ್ಮೊಂದಿಗೆ ಬಂದಿದ್ದಾರೆ. ಅವರಿಗೆ ನಿಮ್ಮ ಭಾವನೆಗಳು ಕಾಣಿಸಿದರೆ ಅವರಿಗೆ ನಮ್ಮ ಮೇಲಿರುವ ಅಭಿಮಾನದಿಂದ ನಿಮಗೆ ಕೆಟ್ಟದು ಮಾಡಬಹುದು. ನೀವು ನನ್ನನ್ನು ಕೆಟ್ಟದಾಗಿ ಅಂದುಕೊಂಡರೂ ನಾನೇನು ಮಾಡುವವನಲ್ಲ. ಆದರೆ ನನ್ನ ಮೇಲೆ ಗೌರವ ಇರುವ ದೇವತೆಗಳಿಗು, ಗ್ರಹಗಳಿಗು ನಿಮ್ಮ ಮೇಲೆ ಕೋಪ ಬರುತ್ತದೆ. ಆದ್ದರಿಂದ ಅವರು ಏನಾದರೂ ಮಾಡಬಹುದು" ಎಂದು ಹೇಳಿದ್ದಾರೆ. ಆತನ ಬೋಧನೆಗಳನ್ನು ಕೇಳುವುದಕ್ಕೆ ಮನುಷ್ಯರು ಬರುವುದು ನಿಜವೇ. ಆದರೆ ದೇವತೆಗಳು, ಗ್ರಹಗಳು ಬರುವುದು ವಾಸ್ತವವಾ?**

**ಉತ್ತರ :–** ಪ್ರಬೋಧಾನಂದ ಯೋಗೀಶ್ವರರು ಮನುಷ್ಯನಾಗಿ ಕಾಣಿಸುತ್ತಿದ್ದರೂ ಆತನು ನಿಜಕ್ಕೆ ಆತ್ಮತ್ರಯದಲ್ಲಿ **ಮಧ್ಯಾತ್ಮನಾಗಿ** ಇದ್ದಾನೆ. ನಾನು ಅದೇ ಶರೀರದಲ್ಲಿ ಒಂದುಕಡೆ, ಒಂದುಮೂಲೆಯಲ್ಲಿರುವ ಜೀವಿಯು ನನ್ನ ಭಾವನೆಗಳನ್ನು ನಾನು ವ್ಯಕ್ತ ಮಾಡುತ್ತಿದ್ದೇನೆ. ಶರೀರ ಯೋಗೀಶ್ವರರದೇ ಆದರೂ ಅದರಲ್ಲಿನ ಅನುಭೂತಿಗಳೆಲ್ಲವೂ ನೇರವಾಗಿ ಜೀವಿಯಾದ ನನ್ನನ್ನು ಸೇರುತ್ತಿರುತ್ತವೆ. ಶರೀರದಲ್ಲಿನ ಬುದ್ಧಿಗೆ ಪಕ್ಕದಲ್ಲಿರುವ ನನಗು ಬುದ್ದಿಗು ಸೇರಿದ ವಿಷಯಗಳೆಲ್ಲವೂ ತಿಳಿಯುತ್ತಿರುತ್ತವೆ. ನಿಮಗೆ ಉಂಟಾದ ಅನುಮಾನ ತೀರುವುದಕ್ಕೆ ನನಗೆ ತಿಳಿದ ಸತ್ಯಗಳಲ್ಲಿ ಕೆಲವನ್ನು ತಿಳಿಸುತ್ತೇನೆ. ಆಗ ನೀವು ಒಂದು ನಿರ್ಣಯಕ್ಕೆ ಬರಬಹುದು. ಈ ದಿನ ಶನಿವಾರ 9. 1. 2016ನೇ ತಾರೀಖು. ಸಮಯ ಸಾಯಂಕಾಲ 6. 15 ನಿಮಿಷಗಳು. ಕಳೆದ ರಾತ್ರಿ 11.00 ಗಂಟೆಗಳ ಸಮಯದಲ್ಲಿ ಯೋಗೀಶ್ವರರು ಮಂಚದಮೇಲೆ ಮಲಗಿದ್ದಾರೆ. ಹೊರಗಿನ ಅನುಭವಗಳು ಒಳಗಿರುವ ನನಗೆ ತಿಳಿಯುತ್ತಿರುತ್ತದೆ ಅಲ್ಲವೆ! ನನ್ನ ಪತ್ನಿಯಾಗಿರುವವರು ಲೈಟ್‌ಗಳು ಆರಿಸಿ ಮಲಗುವ ಸಮಯ. ಆಕೆ ಯೋಗೀಶ್ವರರ ಮಲಗುವ ಕೋಣೆಯಲ್ಲಿ ಲೈಟ್‌ಗಳನ್ನು

ಆರಿಸಿ ನೀರು ಕುಡಿದು ಬರುವುದಕ್ಕೆ ಅಡುಗೆಮನೆಗೆ ಹೋಗಿದ್ದಾಳೆ. ಆ ವಿಷಯ ಆತನಿಗೆ ತಿಳಿದಿಲ್ಲ. ಲೈಟ್‌ಗಳು ಆರಿಸಿದ ನಂತರ ಆತನ ಎರಡು ಕಾಲುಗಳಲ್ಲಿ ಬಲಗಾಲನ್ನು ಹಿಡಿದುಕೊಂಡು ತಲೆ ಆನಿಸಿ ನಮಸ್ಕಾರ ಮಾಡಿಕೊಂಡಂತೆ ಸ್ಪರ್ಶ ಬುದ್ಧಿಗೆ ತಿಳಿದಿದೆ. ಅದು ನನಗೂ ಸಹ ತಿಳಿದಿರುತ್ತದೆ ಅಲ್ಲವೆ! ಅಲ್ಲಿ ಮುಗಿದಿರುವುದು ಯಾರಾಗಿರುವುದು ತಿಳಿಯದೆ "ಯಾರು ಕಾಲಿಗೆ ಮುಗಿದಿರುವುದು?" ಎಂದು ಕೇಳಿದ್ದೇವೆ. ಆಗಾಗ ಕೆಲವರು ಭಕ್ತರು ಮುಗಿದುಹೋಗುವುದು ನಡೆಯುತ್ತಿತ್ತು. ಅದರಿಂದ ಇಲ್ಲಿಯವರೆಗೂ ಇಲ್ಲಿ ಯಾರಿದ್ದಾರೆಂದು ಕೇಳುವುದಾಗಿದೆ. ಆಗ ನನ್ನ ಹೆಂಡತಿ ಅಡುಗೆಮನೆಯಿಂದ ಬಂದು "ಏನು ಕೇಳುತ್ತಿದ್ದೀರ!" ಎಂದಳು. ಆಗ ಆ ವಿಷಯ ಆಕೆಗೆ ತಿಳಿದಿಲ್ಲಯೆಂದು, ಮುಗಿದಿರುವವರು ಮನುಷ್ಯರು ಅಲ್ಲವೆಂದು, ಕಾಣಿಸದವರು ಎಷ್ಟೋ ಜನ ಮುಗಿದಿರುತ್ತಾರೆಂದು ಅಂದುಕೊಂಡೆವು. ಇಂತಹ ಅನುಭವಗಳು ಎಷ್ಟೋ ನನಗೂ ಸಹ ತಿಳಿಯುತ್ತಿರುತ್ತವೆ. ಆಗ ಅಲ್ಲಿ ಮುಗಿದಿರುವವರು ಯೋಗೀಶ್ವರರಿಗೆ ಮುಗಿದಿದ್ದಾರೆ. ಯಾರು ಮುಗಿದಿರುವುದು ಆತನಿಗೆ ಗೊತ್ತು. ನನಗೆ ಯಾವುದೂ ತಿಳಿದಿಲ್ಲ. ಮಲಗಿರುವಾಗ ಕಾಲುಗಳು ಹಿಡಿದುಕೊಂಡಿರು ವಂತೆ ಸ್ಪರ್ಶದಮೂಲಕ ತಿಳಿಯುತ್ತಿರುತ್ತದೆ. ಆ ವಿಷಯವೆಲ್ಲವೂ ನನಗೂ ಸಹ ಸ್ವಲ್ಪ ಅರ್ಥವಾಗುತ್ತಿದೆ. ಸ್ವಲ್ಪ ಕಾಲು ಕದಲಿಸಿದರೆ ಆ ಸ್ಪರ್ಶ ತೇಲಿಹೋದಂತೆ ನಿಧಾನವಾಗಿ ಇಲ್ಲದಂತೆಹೋಗುತ್ತದೆ. ಮಡಚಿಕೊಂಡ ಕಾಲನ್ನು ಚಾಚಿ ಇಟ್ಟಂತೆ ಒಂದುಬಾರಿ ತಿಳಿದಿದೆ. ಇತರರಾದರೆ ಈ ವಿಷಯದಲ್ಲಿ ಭಯಪಟ್ಟು ಹೋಗುತ್ತಾರೆ. ನನಗೆ ಅನೇಕ ಅನುಭವಗಳಿರುವುದರಿಂದ ಅಲ್ಲಿ ಏನು ನಡೆಯುತ್ತಿದೆಯೋ ಅರ್ಥವಾಗುತ್ತಿದೆ. ಈ ವಿಷಯಗಳು ಅರ್ಥವಾಗಬೇಕೆಂದರೆ ಎಷ್ಟೋ ವಿಚಕ್ಷಣೆ ಅಗತ್ಯವೆಂದು ಹೇಳುತ್ತಿದ್ದೇನೆ.

ಇಂತಹ ಅನುಭವಗಳನ್ನು ನೋಡಿದ ನಂತರ ಯಾರೋ ನಮಗೆ ತಿಳಿಯದವರು, ನಮಗೆ ಕಾಣಿಸದವರು ಯೋಗೀಶ್ವರರ ಹತ್ತಿರಕ್ಕೆ ಬಂದು ಸೇವೆ ಮಾಡುತ್ತಿದ್ದಾರೆಂದು ಅರ್ಥವಾಗಿದೆ. ಈ ವಿಷಯಗಳೆಲ್ಲವೂ ಹೇಳಬೇಕಾದ

ಅಗತ್ಯವಿಲ್ಲ. ಆದರೂ ತಪ್ಪದೆ ಹೇಳಬೇಕಾಗಿ ಬಂದಿದೆ. ಏಕೆಂದರೇ! ಏನೂ ತಿಳಿಯದ ಸುತ್ತಿಚಂದ್ರಾರೆಡ್ಡಿಯಂತವರು ಶಂಕರಾಚಾರ್ಯರ ಪಕ್ಕದಲ್ಲಿ, ಸಿದ್ಧಾಂತಕರ್ತರ ಪಕ್ಕದಲ್ಲಿ ಫೋಟೋ ಇಟ್ಟುಕೊಂಡಿದ್ದಾನೆ. ಅವರ ಪಕ್ಕದಲ್ಲಿ ಇರುವುದಕ್ಕೆ ಈತನು ಆರ್ಹನಾ? ಎಂದಿದ್ದಾರೆ ಅಲ್ಲವೆ! ಅವರ ಪಕ್ಕದಲ್ಲಿ ಈತನು ಇರಬಹುದೋ ಇಲ್ಲವೋ, ಈತನ ಪಕ್ಕದಲ್ಲಿ ಅವರು ಇರಬಹುದೋ ಇಲ್ಲವೋ ಯಾರು ಅರ್ಹರೋ, ಯಾರು ಅರ್ಹರು ಅಲ್ಲವೋ ನೀವೇ ನಿರ್ಣಯಿಸಿಕೊಳ್ಳುವುದಕ್ಕೆ ಈ ವಿಷಯಗಳನ್ನು ಹೇಳುತ್ತಿದ್ದೇನೆ. ನಾನು ಹೇಳುವುದು ಸತ್ಯವಾಗಬಹುದು, ಅಸತ್ಯವಾಗಬಹುದು. ನನ್ನ ಮಾತುಗಳನ್ನು ಪಕ್ಕಕ್ಕಿಟ್ಟು ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಬರೆದ ಬರಹವನ್ನು ಈಗ ನೋಡೋಣ. **"ಮಹಾ ದೇವತೆಗಳೆಲ್ಲರೂ ಆನಂದಾಶ್ರಮದ ಹತ್ತಿರವೇ ಇದ್ದಾರೆ"** ಸ್ವತಃ ವೀರಬ್ರಹ್ಮಯ್ಯನವರು ಹೇಳಿದಮಾತನ್ನು ಅಲ್ಲ ಎನ್ನಲಾರೆವು ಅಲ್ಲವೆ! ದೇವತೆಗಳು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಮಹಾದೇವತೆಗಳೆಂದರೆ ದೇವತೆಗಳಿಗಿಂತ ದೊಡ್ಡ ದೇವತೆಗಳೆಂದು ಅರ್ಥ ಅಲ್ಲವೆ! ಹಾಗಿರುವಾಗ ಈ ಮಾತನ್ನನುಸರಿಸಿ ಯೋಗೀಶ್ವರರು ಮೊದಲು ಬಂದಿರುವ ಸಿದ್ಧಾಂತಕರ್ತರಿಗಿಂತ ದೊಡ್ಡವನೋ ಸಣ್ಣವನೋ ನೀವೇ ಯೋಚಿಸಿಕೊಳ್ಳಿರಿ.

ಬ್ರಹ್ಮಯ್ಯನವರು ಕಾಲಜ್ಞಾನ ವಾಕ್ಯಗಳಲ್ಲಿ **"ಬ್ರಹ್ಮಾದಿ ದೇವತೆಗಳಲ್ಲಿಯೂ ಆನಂದಾಶ್ರಯರು ಆದಿಮೂರ್ತಿ. ಶಾಸ್ತ್ರ ನಿಮಗೆ ವಿವರವಾಗಿ ಆಜ್ಞಾಪಿಸಿದ್ದಾರೆ ಆತನಿಂದಲೇ ನಾವು ಶಾಸ್ತ್ರ ಕೇಳಿದ್ದೇವೆ."** ಈ ವಾಕ್ಯವನ್ನನುಸರಿಸಿ ದೇವತೆಗಳೆಲ್ಲರಲ್ಲಿಯೂ ದೊಡ್ಡವನಾದ ಆದಿಮೂರ್ತಿಯೆಂದು ಯೋಗೀಶ್ವರರನ್ನು ಆನಂದಾಶ್ರಯರೆನ್ನುತ್ತಾ ಹೇಳಿದ್ದಾರೆ. ಅಷ್ಟೇ ಅಲ್ಲದೆ **"ಪ್ರಬೋಧಾಶ್ರಮದವರ ಆದಿಗುಣವೆಲ್ಲ ಶಯನಾಧಿಪತಿಗೆ ಇದೆ.** ಎಂಬ ಈ ಕಾಲಜ್ಞಾನ ವಾಕ್ಯದಲ್ಲಿ ಸಹ ಪ್ರಬೋಧಾನಂದ ಯೋಗೀಶ್ವರರು ವಿಷ್ಣುವಾಂಶ ಇರುವವನೆಂದು, ಆದುದ ರಿಂದಲೇ ಆದಿಮೂರ್ತಿಯೆಂದು ಹೇಳಿದ್ದಾರೆಂದು ತಿಳಿಯುತ್ತಿದೆ. ಇವೆಲ್ಲವನ್ನು ನೋಡಿದ ನಂತರ ಯೋಗೀಶ್ವರರ ಹತ್ತಿರಕ್ಕೆ ದೇವತೆಗಳು ಬರುವುದಿಲ್ಲವೆಂದು

ಹೇಗೆ ಹೇಳುತ್ತೇವೆ? ಈ ವಿಷಯಗಳೆಲ್ಲವೂ ದೈವ ರಹಸ್ಯಗಳು. ದೀರ್ಘವಾಗಿ ಆಲೋಚಿಸಬೇಕಾಗಿದೆ. ಆತುರದ ನಿರ್ಣಯಗಳು ಕೆಲಸಕ್ಕೆ ಬರುವುದಿಲ್ಲ. ಆದುದರಿಂದ ಚೆನ್ನಾಗಿ ಆಲೋಚಿಸಿರೆಂದು ತಿಳಿಸುತ್ತಿದ್ದೇವೆ.

ಇದೆಲ್ಲವೂ ನೋಡಿದ ನಂತರ ಬ್ರಹ್ಮಯ್ಯನವರ ಕಾಲಜ್ಞಾನದಲ್ಲಿ ಮತ್ತೊಂದು ವಿಚಿತ್ರವಾದ ವಾಕ್ಯ ಹೊರಬಿದ್ದಿದೆ. ಅದರಲ್ಲಿ ಭೂಮಿಮೇಲೆ ದೇವತೆಗಳು ಬಂದು ಹುಟ್ಟಿದ್ದರೂ ಅವರು ಯಾರಾಗಿರುವುದು ಅವರಿಗೆ ಜ್ಞಾಪಕ ಬರದಂತೆ ದೇವರೆ ಮಾಯೆ ಮಾಡಿದಂತೆ ಇದೆ. ನೋಡಿರಿ. **"ಕಾರಣಾರ್ಥಕ್ಕಾಗಿ ನಾವು ಅವತರಿಸಿದ್ದೇವೆ. ನಮ್ಮ ಸಹವಾಸಿಗಳಾದ ಪುರುಷರು ಅವತರಿಸಿದ್ದಾರೆ. ಎಲ್ಲರೂ ಈ ಭೂಲೋಕದಲ್ಲಿಯೇ ಇದ್ದೇವೆ. ಆದರೂ ಅವರವರ ಸ್ವರೂಪಗಳು ಅವರಿಗೆ ತಿಳಿಯದಂತೆ ಮಾಯ ಮಾಡಿದ್ದೇವೆ. ಮರ್ಮವಾಗಿರುವಂತೆ ಮಾಡಿದ್ದೇವೆ."** ಈ ವಾಕ್ಯದಲ್ಲಿ ಮಾಯವಾಗಿ ಮರ್ಮವಾಗಿ ನಮಗೆ ತಿಳಿಯದಂತೆ ಕೆಲವರು ದೇವತೆಗಳು ಮಾನವ ಶರೀರದಲ್ಲಿ ಇದ್ದಾರೆಂದು ತಿಳಿಯುತ್ತಿದೆ. ನಮಗೆ ತಿಳಿಯದಂತೆ ಇರುವುದಲ್ಲದೆ ಆ ವಿಷಯ ಅವರಿಗೂ ಸಹ ತಿಳಿಯದೆಂದೇ ಹೇಳಿದ್ದಾರೆ. ಅವರಿಗೆ ಒಪ್ಪಿಸಿದ ಕೆಲಸವನ್ನು ಮಾತ್ರ ಅವರು ಮಾಡುವಂತೆ ದೇವತೆಗಳನ್ನು ಸಹಿತ ನಿಯಮಿಸಿದವರು ಇನ್ನೊಬ್ಬರಿದ್ದಾರೆಂದು ತಿಳಿಯುತ್ತಿದೆ. ಅವರು ಯಾರು? ಎಂದು ಆಲೋಚಿಸಿದರೆ "ಕಾರಣಾರ್ಥ ನಾವು ಅವತರಿಸಿದ್ದೇವೆ" ಎಂದು ಹೇಳುವುದರಲ್ಲಿ ಏನು ಕಾರಣವಿರುತ್ತದೆಯೆಂದು ಆಲೋಚಿಸಿದರೆ ಜ್ಞಾನವನ್ನು ಹೊರಗಿನ ಪ್ರಜೆಗಳಿಗೆ ತಿಳಿಸುವುದೇ ಮುಖ್ಯ ಕಾರಣವಾಗಿ ಕಾಣಿಸುತ್ತಿದೆ.

ಬ್ರಹ್ಮವಿದ್ಯೆಯಾದ ನಿಜವಾದ ಜ್ಞಾನವನ್ನು ತಿಳಿಸುವುದೇ ಮುಖ್ಯ ಕಾರಣವಾಗಿ ಇರುವುದರಿಂದ **ಮಧ್ಯಾತ್ಮ** ಶರೀರವನ್ನು ಧರಿಸಿ ಕಾಣಿಸದೆ ಜ್ಞಾನವನ್ನು ಬೋಧಿಸುತ್ತಿದೆಯೆಂದು ಅರ್ಥವಾಗುತ್ತಿದೆ. ಮೂವರು ಸಿದ್ಧಾಂತಕರ್ತರು ಬಂದು ಬೋಧಿಸಿದ ಬೋಧನೆಗಳಲ್ಲಿ ಶಾಸ್ತ್ರಬೋಧನೆಗಳು ಇಲ್ಲದಿರುವುದರಿಂದ ಸೃಷ್ಟಿ ಆದಿಯಿಂದ ಹೇಳಿರುವ ಬೋಧನೆಗೆ ಸಿದ್ಧಾಂತಕರ್ತರಿಂದ ಆತಂಕ ಏರ್ಪಡುವು

ದರಿಂದ, ತಾನು ಬೇಡವೆಂದು, ಮಾಯೆಯೆಂದು ಹೇಳಿದ ವೇದಗಳನ್ನು ಸಿದ್ಧಾಂತಕರ್ತರು ಮೂವರು ಮುಖ್ಯವಾಗಿ ಹೇಳುವುದರಿಂದ ನಿಜವಾದ ಆದಿಮೂರ್ತಿ ಮಾನವ ಶರೀರದಲ್ಲಿ ಆತ್ಮನಾಗಿದ್ದು ಮಾತನಾಡಿ ಹೇಳಿದ ಮಾತುಗಳು ಹೇಳಬೇಕಾಗಿ ಬಂದಿದೆ. ಹಾಗೆ ಹೇಳಿರುವುದೇ ತ್ರೈತ ಸಿದ್ಧಾಂತವೆಂದು ಹೇಳಿಕೊಂಡಿದ್ದೇವೆ. ತ್ರೈತ ಸಿದ್ಧಾಂತ ಆದಿಯಲ್ಲಿ ಹೇಳಿರುವ ಸಿದ್ಧಾಂತವಾದರೂ ಆದು ಕಲಿಯುಗದಲ್ಲಿ ಇಷ್ಟುಕಾಲ ತಿಳಿಯದಿರುವುದರಿಂದ, ತ್ರೈತ ಸಿದ್ಧಾಂತವಲ್ಲದ ಅದ್ವೈತ, ದ್ವೈತ, ವಿಶಿಷ್ಟಾದ್ವೈತವೆಂಬ ಸಿದ್ಧಾಂತಗಳು ಹೊರಗೆ ಬರುವುದರಿಂದ ಅವು ನಿಜವಾದ ಸಿದ್ಧಾಂತಗಳು ಅಲ್ಲ. ಇದೇ ನಿಜವಾದ ಸಿದ್ಧಾಂತವೆಂದು ತಿಳಿಹೇಳುವುದಕ್ಕೆ ಬರುವುದೇ ಮುಖ್ಯಕಾರಣಾರ್ಥ ಎಂದು ಹೇಳಬಹುದು. ಹಾಗೆ ಬಂದವನಿಗೆ ನಾನು ಇಂತಹವನು ಎಂದು ತಿಳಿದರೂ, ಆತನ ಹಿಂದೆ ಆತನ ಕಾರ್ಯಗಳಲ್ಲಿ ಸಹಕರಿಸುವುದಕ್ಕೆ ಬಂದಿರುವ ಸಹಚರರಿಗೆ ಮಾತ್ರ ತಾವು ಯಾರಾಗಿರುವುದು ತಿಳಿಯದಂತೆ ಮಾಡಲ್ಪಟ್ಟಿದೆ. ಬಂದವರು ಯಾರೋ ಅವರಿಗೇ ತಿಳಿಯದಂತೆ ಮಾಯೆ ಇರುವಾಗ ಸಾಮಾನ್ಯ ಮನುಷ್ಯರಾದ ನಾವು ಯಾರನ್ನು ಗುರುತಿಸುತ್ತೇವೆ, ಗುರುತಿಸಲಾರೆವು.

**ಪ್ರಶ್ನೆ :– ಎರಡು ಪ್ರಶ್ನೆಗಳ ಹಿಂದೆ ಪ್ರಬೋಧಾನಂದಯೋಗೀಶ್ವರರ ಕುಲವನ್ನು ಕುರಿತು ಕೇಳಿದ ಪ್ರಶ್ನೆ ಬಂದಿದೆ. ಆಗ ನೀವು ಹೇಳಿದ ಉತ್ತರದಲ್ಲಿ ನನಗೆ 'ಗುತ್ರ' ಇದೆ ಆದರೆ, ಕುಲ ಇಲ್ಲ. ಆತ್ಮನಾಗಿರುವ ಯೋಗೀಶ್ವರರಿಗೆ 'ಗುತ್ರ ಇಲ್ಲ, ಕುಲ ಅಷ್ಟಕ್ಕೂ ಇಲ್ಲ' ಎಂದು ಹೇಳಿದ್ದೀರ. ಅಲ್ಲಿ ನಿಮಗೆ ಕುಲ ಇಲ್ಲವೆಂದು ಹೇಳುವುದು ಅರ್ಥವಾಗಿದೆ ಆದರೆ, ಗುತ್ರ ಇದೆಯೆಂದು ಹೇಳಿದ್ದೀರ. ಹಾಗೇ ಯೋಗೀಶ್ವರರಿಗೆ ಗುತ್ರ ಸಹ ಇಲ್ಲವೆಂದು ಹೇಳಿದ್ದೀರ. ಜೀವಿಯಾದರೂ ನಿಮಗಿರುವುದು, ಯೋಗೀಶ್ವರರಿಗೆ ಇಲ್ಲದಿರುವುದಾದ "ಗುತ್ರ" ಎಂದರೇ ಏನೋ ತಿಳಿಸಬೇಕೆಂದು ಕೋರುತ್ತಿದ್ದೇವೆ?**

**ಉತ್ತರ :–** "ಗು" ಎಂದರೆ ಗುಣಗಳೆಂದು, "ತ್ರ" ಎಂದರೆ ಮೂರು ಎಂದು ಅರ್ಥ. ಜೀವಿಯಾಗಿರುವ ನಾನು ಗುಣಚಕ್ರದಲ್ಲಿಯೇ ಇದ್ದೇನೆ. ಗುಣಚಕ್ರದಲ್ಲಿ

ತಾಮಸ, ರಾಜಸ, ಸಾತ್ತ್ವಿಕ ಎಂಬ ಮೂರು ಗುಣ ಭಾಗಗಳು ಇವೆ. ನಾನು ಮೂರು ಗುಣಭಾಗಗಳಲ್ಲಿ ಇರುವುದರಿಂದ ಗುತ್ರದಲ್ಲಿ ಇದ್ದೇನೆಂದು ಹೇಳಿದ್ದೇನೆ. ಸಹಜವಾಗಿ ಪ್ರತಿ ಶರೀರದಲ್ಲಿನ ಜೀವಿಯು ಮೂರು ಗುಣಗಳಲ್ಲಿಯೇ ಇರುತ್ತಾನೆ. ಇನ್ನು ಶರೀರಕ್ಕೆ ಅಧಿಪತಿಯಾದ ಆತ್ಮ ಗುಣಗಳ ಹೊರಗೆ ಇರುತ್ತಾನೆ. ಗುಣಗಳ ಹೊರಗೆ ಗುಣಗಳಿಗೆ ಆಧಾರವಾಗಿರುವ ಬ್ರಹ್ಮನಾಡಿಯಲ್ಲಿ **ಮಧ್ಯಾತ್ಮ** ನಿವಾಸವೆಂದು ಹೇಳಬಹುದು. ಆತ್ಮ ಆದವನಿಗೆ ಗುಣಗಳು ಇಲ್ಲವಾದ್ದರಿಂದ ಆತನಿಗೆ 'ಗುತ್ರ ಇಲ್ಲ' ಎಂದು ಹೇಳಿದ್ದೇವೆ. ನನಗೆ ಗುಣಗಳಿವೆಯಾದ್ದರಿಂದ 'ಗುತ್ರ ಇದೆಯೆಂದು' ಹೇಳಿದ್ದೇನೆ. ಗುಣ ಇದ್ದರೆ ಕುಲ ತಪ್ಪದೆ ಇರುತ್ತದೆಯೆಂದು ಹೇಳಲಾರೆವು. ಗುಣವಿಲ್ಲದವನಿಗೆ ಹೊರಗೆ ಕುಲವೂ ಸಹ ಇರುವುದಿಲ್ಲ. ಕುಲ ಹೊರಗಿನ ಪ್ರಜೆಗಳ ಲೆಕ್ಕದೊಳಗಿನದು. ಜ್ಞಾನ ತಿಳಿಯದ ಜೀವಿಗೆ ಹೊರಗೆ ಕುಲ ಇರುತ್ತದೆ. ಜ್ಞಾನ ಇರುವವನಿಗೆ ಹೊರಗೆ ಕುಲ ಸಹ ಇರುವುದಿಲ್ಲ. ನನಗೆ ಸ್ವಲ್ಪಮಟ್ಟಿಗೆ ಜ್ಞಾನ ತಿಳಿದಿರುವುದರಿಂದ 'ಗುಣಗಳಿವೆ ಆದರೇ, ಕುಲ ಇಲ್ಲವೆಂದು' ಹೇಳಿದ್ದೇನೆ. ಅದನ್ನೇ 'ಗುತ್ರ ಇದೆ ಆದರೆ ಕುಲ ಇಲ್ಲ' ಎಂದು ಹೇಳಿದ್ದೇನೆ. ಶರೀರದಲ್ಲಿ ಮಧ್ಯಾತ್ಮ ಆದವನು ಗುಣಗಳಲ್ಲಿ ಇರದೆ ಗುಣಗಳ ಹೊರಗೆ ನಿವಾಸ ಇರುವುದರಿಂದ ಆತನಿಗೆ ಗುತ್ರ ಸಹ ಇಲ್ಲವೆಂದು, ಕುಲ ಅಷ್ಟಕ್ಕೂ ಇಲ್ಲವೆಂದು ಹೇಳಿದ್ದೇವೆ.

ಸಾಧಾರಣ ಮನುಷ್ಯನಾದವನ ಶರೀರದಲ್ಲಿ ಜೀವಿ ಆದವನು ಪ್ರತಿಯೊಬ್ಬನು ಗುಣಚಕ್ರದಲ್ಲಿ ನಿವಾಸ ಇರುವುದರಿಂದ ಗತದಲ್ಲಿ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಕರ್ತರಾದ ಆದಿಶಂಕರಾಚಾರ್ಯರು, ಮಧ್ವಾಚಾರ್ಯರು, ರಾಮಾನುಜಾಚಾರ್ಯರು ಮೂವರು ಗುಣಗಳಲ್ಲಿರುವವರೇ ಎಂದು ಹೇಳಬಹುದು. ಗುಣಚಕ್ರದಲ್ಲಿನ ಜೀವಿಯ ಚಿತ್ರವನ್ನು ಕೆಳಗೆ ನೋಡಬಹುದು.




ಮೇಲಿನ ಚಿತ್ರದಲ್ಲಿರುವಂತೆ ಎಲ್ಲಾರ ಗುಣಚಕ್ರದಲ್ಲಿ ಮೂರು ಗುಣ ಭಾಗಗಳಿರುವಾಗ, ಆ ಮೂರು ಭಾಗಗಳಲ್ಲಿ ಯಾವುದೋ ಒಂದು ಗುಣಭಾಗದಲ್ಲಿ ಜೀವಿಯು ಇರುವುದು ಪ್ರತಿ ಶರೀರದಲ್ಲಿ ನಡೆಯುತ್ತಿದೆ. ಕೆಲವರು ಜೀವಿಗಳು ಸಾತ್ವಿಕ ಭಾಗದಲ್ಲಿ ಇರುವಾಗ, ಕೆಲವರು ರಾಜಸದಲ್ಲಿ, ಕೆಲವರು ತಾಮಸದಲ್ಲಿ ಇರುವುದು ನಡೆಯುತ್ತಿದೆ. ಮೂರು ಗುಣ ಭಾಗಗಳಿಗು ಮಧ್ಯದಲ್ಲಿ ಬ್ರಹ್ಮನಾಡಿ ಇದೆ. ಬ್ರಹ್ಮನಾಡಿಯಲ್ಲಿ ಮಧ್ಯಾತ್ಮ ನಿವಾಸವಿರುತ್ತದೆ. ಜೀವಾತ್ಮ ಗುಣಚಕ್ರದಲ್ಲಿ ಇರುವಾಗ, ಮಧ್ಯಾತ್ಮ ಬ್ರಹ್ಮನಾಡಿಯಲ್ಲಿದ್ದು ಶರೀರವೆಲ್ಲಾ ವ್ಯಾಪಿಸಿರುವಾಗ, ಪರಮಾತ್ಮಯೆಂಬ ದೇವರು (ಯೆಹೋವಾ, ಅಥವಾ ಅಲ್ಲಾಹ್) ಶರೀರವೆಲ್ಲಾ, ಒಳಗು ಹೊರಗು ಅಣುಅಣುವಿನಲ್ಲೂ ವ್ಯಾಪಿಸಿರುತ್ತಾನೆ.

ಈಗ ವಾಸ್ತವ ವಿಷಯಕ್ಕೆ ಬರೋಣ. ಪೂರ್ವದಲ್ಲಿ ಮೂರು ಗುಣಗಳನ್ನು ಸೇರಿಸಿ 'ಗುಣತ್ರಯ' ಎಂದು ಹೇಳುತ್ತಿದ್ದರು. ಅದೇ ಪದವನ್ನೇ ಗುಣಕ್ಕೆ ಬದಲಾಗಿ "ಗು" ಅನ್ನು ತ್ರಯಕ್ಕೆ ಬದಲು "ತ್ರ" ಎಂಬ ಎರಡು ಅಕ್ಷರಗಳನ್ನು 'ಗುತ್ರ' ಎಂದು ಹೇಳುತ್ತಿದ್ದರು. ಗುಣತ್ರಯದಲ್ಲಿನ ಮೊದಲ ಎರಡು ಅಕ್ಷರಗಳನ್ನು ತೆಗೆದುಕೊಂಡು, 'ಗುತ್ರ' ಎಂದು ಹೇಳುವುದರಿಂದ ಮೂರು ಗುಣಗಳೆಂದು ಪೂರ್ತಿ ತಿಳಿದುಹೋಗುತ್ತದೆ. ಗುತ್ರ ಎನ್ನುವ ಎರಡು ಕ್ರಮಬದ್ಧ ಅಕ್ಷರಗಳಲ್ಲಿ ಮೂರು ಗುಣಗಳೆಂದು ತಿಳಿದುಹೋಗುತ್ತಿತ್ತು. ಇದಕ್ಕುಮೊದಲು ನಾವು ಹೇಳಿಕೊಂಡಂತೆ ತಾಟಿಪತ್ರಿ ಹೋಗಿ ತಾಡಿಪತ್ರಿಯಾಗಿ ಹೇಗೆ ಬದಲಾಗಿ ಹೋಗಿದೆಯೋ ಹಾಗೆಯೇ ಕಾಲಕ್ರಮವಾಗಿ "ಗುತ್ರ" ಎಂಬ ಪದ ಹೋಗಿ "ಗೋತ್ರ" ಎಂಬ ಪದವಾಗಿ ಬದಲಾಗಿಹೋಗಿದೆ. ಪೂರ್ವದಲ್ಲಿ

'ಗುತ್ರ' ಎಂಬಮಾತನ್ನು ಪ್ರಜೆಗಳು ಈದಿನ 'ಗೋತ್ರ' ಎಂಬ ಮಾತನ್ನಾಗಿ ಬದಲಿಸಿ ಹೇಳುತ್ತಿದ್ದಾರೆ. ಪ್ರತಿ ಮನುಷ್ಯನಿಗು ಹೊರಗೆ ಕುಲಗಳಿರುವಂತೆ ಒಳಗೆ ಗುಣ ಇರುತ್ತದೆ. ಶರೀರದಲ್ಲಿ ಜೀವಿಯು ಗುಣಚಕ್ರದಲ್ಲಿ ಇರುವ ಭಾಗವನ್ನು ಅನುಸರಿಸಿ ಅವನಿಗೆ ಆ ಹೆಸರು ಆಧ್ಯಾತ್ಮಿಕದಲ್ಲಿ ಹೇಳಲ್ಪಡುತ್ತಿತ್ತು. ತಾಮಸ ಭಾಗದಲ್ಲಿರುವವನನ್ನು ತಾಮಸನೆಂದು ಹೇಳುತ್ತಿದ್ದರು. ರಾಜಸ ಭಾಗದಲ್ಲಿ ಇರುವವನನ್ನು ರಾಜಸನು ಎಂದು ಅನ್ನುತ್ತಿದ್ದರು. ಹಾಗೆ ಸಾತ್ತ್ವಿಕದಲ್ಲಿ ಇರುವವನನ್ನು ಸಾತ್ತ್ವಿಕನು ಎಂದು ಅನ್ನುತ್ತಿದ್ದರು.

ಪೂರ್ವದಲ್ಲಿ ಒಂದು ದೇವಾಲಯದ ಹತ್ತಿರಕ್ಕೆ ಹೋಗಿ ಗುಡಿಯಲ್ಲಿನ ದೇವರ ಮುಂದೆ ಪೂಜೆ ಮಾಡಿಸಿಕೊಳ್ಳುವಾಗ ಪೂಜೆ ಮಾಡುವವನು ಇಂಥವನು ಎಂದು ಹೇಳಿ ಪೂಜೆ ಮಾಡುವುದು ಅರ್ಚಕರಿಗೆ ಅಭ್ಯಾಸವಾಗಿದೆ. ಆ ವಿಧವಾಗಿ ಪೂಜೆಮಾಡುವಾಗ ಪೂಜೆಮಾಡುವವನ ಹೆಸರು ಕುಲ, ಗೋತ್ರ ಕೇಳಿ ಪೂಜೆ ಮಾಡುವುದು ನೋಡುತ್ತಿದ್ದೇವೆ. ಪೂರ್ವದಲ್ಲಿ ಈಗ ಹೇಳುವ ಗೋತ್ರವನ್ನು ಆಗ ಗುತ್ರವಾಗಿ ಹೇಳುತ್ತಿದ್ದರೆಂದು ತಿಳಿದುಕೊಂಡಿದ್ದೇವೆ ಅಲ್ಲವೆ! ಅದರಪ್ರಕಾರ ಪೂಜೆ ಸಮಯದಲ್ಲಿ ಪೂಜೆ ಮಾಡುವವನ ಗುರುತಿಗಾಗಿ ಪೂರ್ವದಲ್ಲಿ ಪೂಜೆಯಲ್ಲಿ ಪೂಜೆ ಮಾಡುವವನ ಹೊರಗಿನ ಕುಲ, ಹೊರಗಿನ ಹೆಸರು ಹೇಳಿ ಶರೀರದೊಳಗೆ ಗುಣದ ಹೆಸರು ಹೇಳುತ್ತಿದ್ದರು. ಆಗ ರಾಜಸದಲ್ಲಿರುವ ವನನ್ನು ರಾಜಸ ಗೋತ್ರಸ್ಯ ಎಂದು ಉಳಿದ ಗುಣಗಳಲ್ಲಿರುವ ವನನ್ನು ಸಾತ್ತ್ವಿಕ ಗೋತ್ರಸ್ಯ, ತಾಮಸ ಗೋತ್ರಸ್ಯ ಎಂದು ಹೇಳುತ್ತಿದ್ದರು. ಹಾಗೆ ಮನುಷ್ಯರಿಗೆ ಮೂರೇ ಗೋತ್ರಗಳಿರುತ್ತಿದ್ದವು. ಈ ಕಾಲದಲ್ಲಿ ಗುತ್ರ ಗೋತ್ರವಾಗಿರುವುದಲ್ಲದೆ, ಮನುಷ್ಯ ಅಜ್ಞಾನಿಯಾಗಿ ಬದಲಾಗಿ ಜ್ಞಾನವನ್ನು ಅನುಸರಿಸಿ ಹೇಳಿದ ಗೋತ್ರ (ಗುತ್ರ) ಅನೇಕ ವಿಧಗಳಾಗಿ ಬದಲಾಗಿಹೋಗಿದೆ. ಅಜ್ಞಾನವನ್ನು ಅಭಿವೃದ್ಧಿ ಮಾಡುವುದಕ್ಕಾಗಿ ಮನುಷ್ಯ ಮೂರು (3) ಗೋತ್ರಗಳನ್ನು ಬಿಟ್ಟು ಸುಮಾರು 108 ಗೋತ್ರಗಳ ಹೆಸರುಗಳು ಹೇಳಿಕೊಳ್ಳುವುದು ನಡೆಯುತ್ತಿದೆ. ಪೂರ್ವದಲ್ಲಿ ನಮ್ಮ ಸಂಸ್ಕೃತಿ ಏನು? ನಾವು ಎಂತಹ ಜ್ಞಾನವನ್ನು ಹೊಂದಿದ್ದೇವೆಂಬ

ಮಾತನ್ನು ಪೂರ್ತಿಯಾಗಿ ಮರೆತುಹೋಗಿದ್ದಾರೆ. ಜ್ಞಾನದಿಂದ ಮನುಷ್ಯ ಅಜ್ಞಾನವಾಗಿ ಬದಲಾದಂತೆ ಮನುಷ್ಯ ಗುತ್ರದಿಂದ ಗೋತ್ರದೊಳಗೆ ಬದಲಾಗಿಹೋಗಿದ್ದಾನೆ.

ಆಧ್ಯಾತ್ಮಿಕ ಜ್ಞಾನದ ಪ್ರಕಾರ ಮೂರು ಗುಣಗಳಿಗೆ ಆಧಾರ ಬ್ರಹ್ಮನಾಡಿ. ಬ್ರಹ್ಮನಾಡಿಯನ್ನು ಅನುಸರಿಸಿ ಗುಣಗಳಿರುತ್ತವೆ. ಬ್ರಹ್ಮನಾಡಿಯಲ್ಲಿನ ಆತ್ಮವನ್ನು ಅನುಸರಿಸಿ ಗುಣಗಳಿರುತ್ತವೆ. ಆತ್ಮ ಗುಣಗಳ ಹೊರಗಿದ್ದು ಗುಣಗಳಿಂದ ಗುಣಗಳ ಮಧ್ಯದಲ್ಲಿರುವ ಜೀವಿಯ ಕರ್ಮ ಪ್ರಕಾರ ಕೆಲಸ ಮಾಡಿಸುತ್ತಿರುತ್ತದೆ. ಆಧ್ಯಾತ್ಮಿಕ ಪರಿಭಾಷೆಯಲ್ಲಿ ಗುಣಗಳನ್ನು **'ವೇದಗಳು'** ಎಂದು ಹೇಳುವುದು ನಡೆಯುತ್ತಿದೆ. ಬ್ರಹ್ಮವಿದ್ಯೆಯಲ್ಲಿ ಶಾಸ್ತ್ರವಾದ ಭಗವದ್ಗೀತೆಯಲ್ಲಿ **"ತ್ರೈಗುಣ್ಯ ವಿಷಯಾವೇದಾ"** ಎಂದು ಹೇಳುವುದಾಗಿದೆ. ಇದರ ಭಾವನೆ ಪ್ರಕಾರ ಮೂರು ಗುಣ ವಿಷಯಗಳೆ, ಅಥವಾ ಮೂರು ಗುಣ ಭಾವಗಳೇ ವೇದಗಳೆಂದು ಹೇಳಲಾಗಿದೆ. ಆತ್ಮ ಶರೀರದೊಳಗೆ ಮಧ್ಯ ಬ್ರಹ್ಮನಾಡಿಯಲ್ಲಿದ್ದು ಮರಣದಲ್ಲಿ ಶರೀರವನ್ನು ಬಿಟ್ಟು ಜನನದಲ್ಲಿ ಬೇರೆ ಶರೀರವನ್ನು ಸೇರುವಾಗ ಆತ್ಮ ಹಿಂದೆಯೇ ಗುಣಚಕ್ರವೂ ಅದರೊಂದಿಗೆ ಗುಣಗಳೆಲ್ಲವೂ ಹೋಗುತ್ತಿರುತ್ತವೆ. ಆತ್ಮ ಎಲ್ಲಿಗೆ ಹೋದರೆ ಆತ್ಮ ಹಿಂದೆಯೇ ಹೋಗುವ ಗುಣಗಳನ್ನು ವೇದಗಳೆಂದಿದ್ದೇವೆ. ವೇದಗಳನ್ನು ಸೃಷ್ಠಿ ಆದಿಯಲ್ಲಿ ಮನುಷ್ಯನೊಂದಿಗೆ ಸೃಷ್ಟಿಸಲ್ಪಟ್ಟಿವೆ. ಆದುದರಿಂದ ಅವುಗಳನ್ನು ಆದಿ ವೇದಗಳು ಎನ್ನಲಾಗಿದೆ. ಈ ಗುಣಗಳ ವಿಷಯವನ್ನು, ಆತ್ಮಹಿಂದೆ ಗುಣಗಳು ಹೋಗುವ ವಿಷಯವನ್ನು, ಮನುಷ್ಯರು ಎಲ್ಲರೂ ಗುಣಗಳಲ್ಲಿ ಇರುವ ವಿಷಯವನ್ನು ಏಷ್ಯ ಕಾಲಜ್ಞಾನದಲ್ಲಿ ಮುಂದೆ ಈ ವಿಧವಾಗಿ ಪ್ರಸ್ತಾವಿಸುವುದು ನಡೆದಿದೆ. ಆ ವಾಕ್ಯಗಳನ್ನು ಇಲ್ಲಿ ನೋಡೋಣ.

**"ಆದಿ ವೇದಗಳೆಲ್ಲವೂ ಆನಂದಾಶ್ರಮ ಹಿಂದೆಯೇ ಬರುತ್ತದೆ. ನಿಮಗು ನಮಗು ಅದೇ ಗೋತ್ರ"** ಎಂದು ಹೇಳಿದ್ದಾನೆ. ಬ್ರಹ್ಮಯ್ಯನವರು ಈ ಮಾತಿನಲ್ಲಿ ಸೃಷ್ಠಿ ಆದಿಯಿಂದ ಇರುವ ಗುಣಗಳನ್ನು ಆದಿವೇದಗಳೆಂದು ಹೇಳಿದ್ದಾನೆ. ಮಧ್ಯಾತ್ಮ ಎಲ್ಲಿಗೆಹೋದರೆ ಅಲ್ಲಿಗೆ ಹೋಗುವ ಗುಣಗಳನ್ನು **"ಆದಿ ವೇದಗಳೆಲ್ಲವೂ**

ಆನಂದಾಶ್ರಮದ ಹಿಂದೆ ಬರುತ್ತದೆ. ಎಂದು ಹೇಳಿದ್ದಾರೆ. ಮನುಷ್ಯರೆಲ್ಲರೂ ಗುಣಗಳಲ್ಲಿಯೇ ಇದ್ದಾರೆ. ಆದ್ದರಿಂದ ನಮಗು ನಿಮಗು ಅದೇ ಗೋತ್ರ ಎಂದು ಹೇಳಿದ್ದಾರೆ. ಈ ವಿಧವಾಗಿ ಶರೀರದಲ್ಲಿನ ಆತ್ಮಜ್ಞಾನವನ್ನು ಬ್ರಹ್ಮಯ್ಯನವರು ಹೊರಗಿಟ್ಟಿದ್ದಾರೆ.

**ಪ್ರಶ್ನೆ:– ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳನ್ನು ಪ್ರಕಟಿಸಿದ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯರು ಅವರನ್ನು ಕುರಿತು ಮುಂಬರುವ ಭವಿಷ್ಯತ್ತನ್ನು ಯಾರೂ ಹೇಳಲಿಲ್ಲ. ಹಾಗೆ ಮುಂಬರುವಂತಹವನನ್ನು ಕುರಿತು ಹೇಳಿರುವವರು ಮೂವರೇ ಇದ್ದಾರೆ. ಆ ಮೂವರಲ್ಲಿ ಒಬ್ಬನು ಶ್ರೀಕೃಷ್ಣನು, ಎರಡನೆಯವನು ಯೇಸು, ಮೂರನೆಯವರು ಪ್ರಬೋಧಾನಂದ ಯೋಗೀಶ್ವರರು. ಆದರೆ ಚರಿತ್ರೆಯಲ್ಲಿ ಮೊದಲೆ ಬರೆದಿಟ್ಟಿರುವವರು ಇಬ್ಬರಾಗಿದ್ದು ಒಬ್ಬನು ಕೃಷ್ಣನು ಮಾತ್ರ ಧರ್ಮಸಂಸ್ಥಾಪನೆಗಾಗಿ ಬರುತ್ತಾನೆಂದು ಬಾಯಿಮಾತಾಗಿ ಹೇಳಿದ್ದಾನೆ. ಆ ಮಾತು ಎಲ್ಲಿಯೂ ಬರೆಯಲ್ಪಡಲಿಲ್ಲ ಆದ್ದರಿಂದ ಕೃಷ್ಣನನ್ನು ಕುರಿತು ಮುಂಚಿತವಾಗಿ ಹೇಳಿದ ವಿಷಯ ಯಾರಿಗೂ ತಿಳಿದಿಲ್ಲ. ಯೇಸು ಬರುವಿಕೆಯನ್ನು ಕುರಿತು, ಆತನ ಜೀವನದಲ್ಲಿ ನಡೆಯುವ ಕೆಲವು ಸಂಘಟನೆಗಳನ್ನು ಕುರಿತು ಕೆಲವು ನೂರಾರು ವರ್ಷಗಳ ಪೂರ್ವದಲ್ಲಿಯೇ 'ಯೆಷಯಾ' ಎಂಬ ಪ್ರವಕ್ತ, ವೀರಬ್ರಯ್ಯನವರು ಪ್ರಬೋಧಾಶ್ರಮವನ್ನು ಕುರಿತು, ಪ್ರಬೋಧಾನಂದ ಯೋಗೀಶ್ವರರನ್ನು ಕುರಿತು ಸುಮಾರು ನಾಲ್ಕು ನೂರು ವರ್ಷಗಳ ಪೂರ್ವದಲ್ಲಿಯೇ ಭವಿಷ್ಯವಾಣಿ ಬರೆದಂತೆ ಬರೆದಿಟ್ಟಿದ್ದಾರೆ. ಯೆಷಯಾ ಕೆಲವು ನೂರಾರು ವರ್ಷಗಳ ಪೂರ್ವದಲ್ಲಿ ಯೇಸುನನ್ನು ಕುರಿತು ಮೊದಲೇ ಬರೆದಿದ್ದರೆ. ಅದೇ ವಿಧಾನದ ಪ್ರಕಾರ ಯೋಗೀಶ್ವರರನ್ನು ಕುರಿತು ಬರೆದಿದ್ದಾರೆ. ಅವರು ಬರೆದಂತೆಯೆ ಎಲ್ಲಾ ವಿಷಯಗಳು ನಡೆಯುತ್ತಾ ಬಂದಿವೆ.**

ಯೇಸು ಜೀವನದಲ್ಲಿನ ಮುಖ್ಯವಾದ ಸಂಘಟನೆಗಳು ಯೆಷಯಾ ಪ್ರವಕ್ತನ ಮೂಲಕ ಬರೆದಿಟ್ಟಿದ್ದರೆ ಹಾಗೆಯೇ ನಡೆಯುವುದು ಎಲ್ಲರಿಗೂ ತಿಳಿದ ವಿಷಯವೇ. ಯೇಸು ಬೋಧನೆಗಳಿಂದ ಈದಿನ ಪ್ರಪಂಚದಲ್ಲಿಯೇ ಅತಿಹೆಚ್ಚು ಜನಸಂಖ್ಯೆ

**ಆತನ ಜ್ಞಾನವನ್ನೇ ಅನುಸರಿಸುತ್ತಿವೆ. ಅದು ಆತನ ಜೀವನದ ಪ್ರತ್ಯೇಕತೆ ಅಂದುಕೊಳ್ಳೋಣ. ಆದರೆ ಪ್ರಬೋಧಾನಂದ ಯೋಗೀಶ್ವರರ ಜೀವನದಲ್ಲಿ ಏನಾದರೂ ಪ್ರತ್ಯೇಕತೆ ಇದೆಯಾ? ಇದ್ದರೆ ಅದು ಏನೊ ಹೇಳಿರೆಂದು ಕೇಳುತ್ತಿದ್ದೇವೆ?**

**ಉತ್ತರ :–** ಪ್ರಬೋಧಾನಂದ ಯೋಗೀಶ್ವರರ ಜೀವನದಲ್ಲಿ ಮುಂಚಿತವಾಗಿ ಬರೆದಿರುವುದು ಆತನ ಜ್ಞಾನವನ್ನು ಕುರಿತಾಗಿಯೇ ಇದೆ. ಯೋಗೀಶ್ವರರು ಹೇಳುವ ಬೋಧನೆಗಳು ಎಲ್ಲವೂ ಪ್ರತ್ಯೇಕವಾಗಿ ಇರುತ್ತವೆ. ಇದಕ್ಕುಮುನ್ನ ಯಾರಾದರೂ ಹೇಳಿದ ಬೋಧನೆಗಳಾಗಲಿ, ಬರೆದ ಜ್ಞಾನವನ್ನಾಗಲಿ ಪ್ರಬೋಧಾನಂದ ಯೋಗೀಶ್ವರರು ಹೇಳುವುದಾಗಲಿ, ಬರೆಯುವುದಾಗಲಿ ನಡೆಯಲಿಲ್ಲ. ಆತನು ಹೇಳುವ ಜ್ಞಾನವೆಲ್ಲವೂ ಹೊಚ್ಚಹೊಸದಾಗಿರುತ್ತದೆ. ಮುಖ್ಯವಾಗಿ ಗತದಲ್ಲಿ ಬಂದಿರುವ ಮೂವರು ಸಿದ್ಧಾಂತಕರ್ತರು ವೇದಗಳನ್ನು ಅಭ್ಯಸಿಸಿ ವೈದಿಕ ಜ್ಞಾನವನ್ನು ಹೊರಗೆ ಹೇಳಿದಾಗ, ಯೋಗೀಶ್ವರರು ವೇದಗಳನ್ನು ವಿಸರ್ಜಿಸೆಂದು, ಅವುಗಳಿಂದ ದೈವಜ್ಞಾನ ತಿಳಿಯುವುದಿಲ್ಲವೆಂದು ಹೇಳಿದ್ದಾನೆ. ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನಯೋಗವೆಂಬ ಅಧ್ಯಾಯದಲ್ಲಿ ಭಗವಂತನು ಹೇಳಿದ ಎರಡು ಶ್ಲೋಕಗಳಿಂದ ಧರ್ಮಗಳನ್ನು, ಅಧರ್ಮಗಳನ್ನು ನಿರ್ಣಯಿಸಿ ಹೇಳಿದ್ದಾನೆ. ಅಲ್ಲಿ ಬರೆದ **"ಯಜ್ಞಗಳಿಂದ, ದಾನಗಳಿಂದ, ವೇದಪಠನಗಳಿಂದ, ತಪಸ್ಸುಗಳು ಮಾಡುವುದರಿಂದ ದೇವರು ತಿಳಿಯುವುದಿಲ್ಲ"** ಎಂದು ಹೇಳುತ್ತಿರುತ್ತಾನೆ. ಈ ನಾಲ್ಕು ಕಾರ್ಯಗಳು ನಾಲ್ಕು ಅಧರ್ಮಗಳೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಬ್ರಹ್ಮ, ಕರ್ಮ, ಭಕ್ತಿ ಯೋಗಗಳು ಮೂರು ಧರ್ಮಗಳೆಂದು ಹೇಳುತ್ತಿರುತ್ತಾನೆ. ಎಲ್ಲರೂ ಮಾಡುವ ಸಾಧನೆಗಳನ್ನು ವಿಸರ್ಜಿಸಿ ಜ್ಞಾನ ಸಮುಪಾರ್ಜನೆ ಮನುಷ್ಯನಿಗೆ ಮುಖ್ಯವೆಂದು ಹೇಳಿ ಸಾಧನೆಗಳೆಲ್ಲವನ್ನು ಬಿಡಲು ಹೇಳುತ್ತಿರುತ್ತಾನೆ. ಈ ವಿಧವಾಗಿ ಯೋಗೀಶ್ವರರು ತನ್ನ ಬೋಧನೆಯಲ್ಲಿ ಎಷ್ಟೋ ಪ್ರತ್ಯೇಕತೆಯನ್ನು ತೋರಿಸುವುದಲ್ಲದೆ, ಜ್ಞಾನವೆಲ್ಲವನ್ನು ಹೊಸ ಪಂಥದಲ್ಲಿ ಹೇಳುವುದಲ್ಲದೆ ಹಾಗೆ ಆಚರಿಸುವುದರಿಂದಲೇ ಮುಕ್ತಿ ಲಭಿಸುತ್ತದೆಂದು ಹೇಳುತ್ತಾನೆ. **ದೈವಜ್ಞಾನವೆಲ್ಲವೂ ಶರೀರದೊಳಗೇ ಇದೆಯೆಂದು, ಶರೀರದ ಹೊರಗೆ**

**ಎಷ್ಟು ಪ್ರಯತ್ನಿಸಿದರೂ, ಶರೀರ ಹೊರಗೆ ಜ್ಞಾನವನ್ನು ಎಷ್ಟು ಆಚರಿಸಿದರೂ ಪ್ರಯೋಜನೆಯಿಲ್ಲವೆಂದು ಶರೀರದಲ್ಲಿಯೇ ಜ್ಞಾನವನ್ನು ಸಾಧಿಸಬೇಕೆಂದು ಹೇಳುತ್ತಿರುತ್ತಾನೆ.** ತನ್ನ ಜ್ಞಾನ ಪ್ರತ್ಯೇಕವಾದುದೆಂದು, ವೇದಗಳನ್ನು ಅಲ್ಲವೆಂದು ಬೋಧಿಸುವುದರಿಂದ ಆತನದು ಪ್ರತ್ಯೇಕ ಜ್ಞಾನವಾಗಿದೆ.

ಪ್ರಬೋಧಾನಂದ ಯೋಗೀಶ್ವರರ ಬೋಧನೆಯಲ್ಲಿ ಗತದಲ್ಲಿ ಮೂವರು ಸಿದ್ಧಾಂತಕರ್ತರು ಹೇಳಿದಂತೆ ವೇದಗಳ ಪ್ರಸ್ತಾವನೆ ಯಾವುದೂ ಇರುವುದಿಲ್ಲ. ವೇದಗಳನ್ನು ವ್ಯಾಸನು ಬರೆದಿರುವುದರಿಂದ ವೇದಗಳಿಗೆ ಪ್ರಜೆಗಳಲ್ಲಿ ಗೌರವ ಏರ್ಪಟ್ಟಿದೆ. ಪ್ರಜೆಗಳಲ್ಲಿ ಎಂದರೆ ಪ್ರಜೆಗಳೆಲ್ಲರಿಗೂ ಅಲ್ಲ ಸಾಧಾರಣ ಪ್ರಜೆಗಳಿಗೆ ವ್ಯಾಸನು ಎಂದರೆ ಯಾರಾಗಿರುವುದೂ ಸಹ ತಿಳಿದಿಲ್ಲ. ಭಾರತದೇಶದಲ್ಲಿ ಎರಡುನೂರು ವರ್ಷಗಳ ಕೆಳಗಿನವರೆಗು ಪ್ರಜೆಗಳಲ್ಲಿ ಕೇವಲ ಶೇ. ಹತ್ತರಷ್ಟು ಮಾತ್ರವೇ ವಿದ್ಯೆ ಬಂದವರಿರುತ್ತಿದ್ದರು. ಇಂದಿನಂತೆ ಸರ್ಕಾರಿ ಪಾಠಶಾಲೆಗಳಾಗಲಿ, ಪ್ರವೇಟು ಪಾಠಶಾಲೆಗಳಾಗಲಿ ಇರುತ್ತಿರಲಿಲ್ಲ. ನಾನು ಚಿಕ್ಕವನಿರುವಾಗ ನಾಲ್ಕು ಊರುಗಳಿಗು ಸೇರಿಸಿ ಒಂದು ಪ್ರಾಥಮಿಕ ಪಾಠಶಾಲೆ ಸಹ ಇರುತ್ತಿರಲಿಲ್ಲ. ಹೈಸ್ಕೂಲ್ ದೊಡ್ಡ ಊರುಗಳಲ್ಲಿ ಮಾತ್ರ ಇರುತ್ತಿತ್ತು. ಚಿಕ್ಕಚಿಕ್ಕ ಹಳ್ಳಿಗಳಲ್ಲಿ ಯಾವುದೇ ಪ್ರಾಥಮಿಕ ಪಾಠಶಾಲೆಗಳು ಇರುತ್ತಿರಲಿಲ್ಲ. ವಿದ್ಯೆ ಕಲಿತವರು ಅಪರೂಪವಾಗಿ ಕಾಣಿಸುತ್ತಿದ್ದರು. ಚಿಕ್ಕಚಿಕ್ಕ ಹಳ್ಳಿಗಳಲ್ಲಿರುವವರು ಊರೆಲ್ಲ ಸೇರಿ ಒಬ್ಬ ಟೀಚರ್‌ನ್ನು ತಮ್ಮ ಮಕ್ಕಳಿಗೆ ಓದು ಹೇಳುವುದಕ್ಕೆ ಹಣ ಕೊಟ್ಟು ಏರ್ಪಾಟು ಮಾಡಿಕೊಳ್ಳುತ್ತಿದ್ದರು. ಟೀಚರ್‌ಗಳೆಂದರೇ ಎಷ್ಟೋ ಭಯವಾಗಿದ್ದು ವಿದ್ಯೆಯನ್ನು ಹೇಳಿಸಿಕೊಳ್ಳುತ್ತಿದ್ದರು. ಈ ವಿಧವಾಗಿ ತೆಲುಗು ವಿದ್ಯೆಯೇ ಸರಿಯಾಗಿ ಬಾರದ ಆ ಕಾಲದಲ್ಲಿ, ಸಂಸ್ಕೃತವನ್ನು ಬ್ರಾಹ್ಮಣರು ಹೊರತು ಇತರರು ಕಲಿಯುತ್ತಿರಲಿಲ್ಲ. ಅಷ್ಟೋ ಇಷ್ಟೋ ವಿದ್ಯೆ ಸಹ ಬ್ರಾಹ್ಮಣರಿಗೇ ಪ್ರಾಪ್ತವಾಗುತ್ತಿತ್ತು. ವಿದ್ಯೆ ಬಂದವರು ಬೇಕೆಂದರೆ ಆ ಊರಿನಲ್ಲಿ ಬ್ರಾಹ್ಮಣರ ಹತ್ತಿರಕ್ಕೇ ಹೋಗಬೇಕು. ಓದು ಬಂದವರು ಬೇಕೆಂದರೆ ಆ ಊರಿನಲ್ಲಿ ಬ್ರಾಹ್ಮಣರ ಹತ್ತರಕ್ಕೇ ಹೋಗಬೇಕು. ಆಗ ಹಳ್ಳಿಗಳಲ್ಲಿ ಪ್ರಾಮಿಸರಿ ನೋಟುಗಳು ಬರೆಯಿಸಿಕೊಳ್ಳುವುದಕ್ಕೆ ಪುರಾಣಗಳನ್ನು

ಹೇಳಿಸಿಕೊಳ್ಳುವುದಕ್ಕೆ ಊರಿನವರೆಲ್ಲರೂ ಆ ಊರಿನ ಬ್ರಾಹ್ಮಣರನ್ನು ಆಶ್ರಯಿಸುತ್ತಿದ್ದರು. ಎರಡು ನೂರು ವರ್ಷಗಳ ಕೆಳಗೆ ಕೇವಲ ಹತ್ತುಜನ ವಿದ್ಯೆ ಬಂದವರಿದ್ದರೆ, ವಿದ್ಯೆ ಬರದವರು ತೊಂಭತ್ತುಜನರು ಇರುತ್ತಿದ್ದರು.

ಕಾಲ ಕಳೆದಂತೆಲ್ಲ, ಅಭಿವೃದ್ಧಿಯಾಗುತ್ತಾ ಬಂದು ನಾವು ಚಿಕ್ಕ ವಯಸ್ಸಿನಲ್ಲಿರುವಾಗ ಅಲ್ಲಲ್ಲಿ ಅಪರೂಪವಾಗಿ ಪಾಠಶಾಲೆಗಳು ಇದ್ದವು. ಆಗಿನಿಂದ ಅಭಿವೃದ್ಧಿಯಾಗುತ್ತಾ ಇಂದು ಶೇ.90ರಷ್ಟು ಮೀರಿ ವಿದ್ಯೆ ಬಂದವರು ತಯಾರಾಗಿದ್ದಾರೆ. ಪೂರ್ವದಲ್ಲಿ ಬ್ರಾಹ್ಮಣರಿಗೆ ಹೊರತು ವ್ಯಾಸನು ಎಂದರೆ ಯಾರೋ ತಿಳಿದಿಲ್ಲ. ಈಗಿನ ಕಾಲದಲ್ಲಿ ಸಹ ಬಹಳ ಜನ ಪ್ರಜೆಗಳಿಗೆ ವ್ಯಾಸನೆಂದರೆ ಯಾರೋ ತಿಳಿದಿಲ್ಲ. ಬ್ರಾಹ್ಮಣರಿಗೆ ವ್ಯಾಸನ ವಿಷಯ ತಿಳಿದಿದೆ. ಈ ಮಧ್ಯೆ ವೇದ ಪಾಠಶಾಲೆಗಳು ಸಹ ತಯಾರಾಗಿ ಇತರರು ಸಂಸ್ಕೃತದಲ್ಲಿ ವೇದಗಳನ್ನು ಓದುತ್ತಿದ್ದಾರೆ. ಆದರೂ ವೇದವಿದ್ಯೆಗಳು ಬ್ರಾಹ್ಮಣರಿಗೇ ಪರಿಮಿತವಾಗಿಹೋಗಿವೆ. ದ್ವಾಪರ ಯುಗದಲ್ಲಿ ವ್ಯಾಸನು ವೇದಗಳನ್ನು ಗ್ರಂಥಗಳಾಗಿ ಸಂಸ್ಕೃತ ಭಾಷೆಯಲ್ಲಿ ಬರೆಯುವುದಾಗಿದೆ. ಅಲ್ಲಿಯವರೆಗೂ ವೇದಗಳು ಗ್ರಂಥಗಳಾಗಿ ಇಲ್ಲವೆಂದು ಬಹಳ ಜನರಿಗೆ ತಿಳಿದಿಲ್ಲ. ಸಂಸ್ಕೃತ ಲಿಪಿಯಿಲ್ಲದ ಭಾಷೆಗಳಲ್ಲಿ ಒಂದಾಗಿರುತ್ತಿತ್ತು. ಬಹಳ ಜನರಿಗೆ ಓದುಬಾರದ ಆ ಕಾಲದಲ್ಲಿ ಲಿಪಿ ಇರುವ ಭಾಷೆಗಳಿಗಿಂತ ಲಿಪಿ ಇಲ್ಲದ ಭಾಷೆಗಳಿಗೆ ಆದರಣೆ ಹೆಚ್ಚಾಗಿರುತ್ತಿತ್ತು. ಏನಾದರೂ ಬರೆಯಬೇಕಾಗಿ ಬಂದರೆ ಹಿಂದೀ ಭಾಷೆಯಲ್ಲಿನ ಲಿಪಿಯನ್ನು ಬಳಸಿಕೊಂಡು ಸಂಸ್ಕೃತ ಭಾಷೆಯನ್ನು ಬರೆಯುತ್ತಿದ್ದರು.

ಒಂದು ಗ್ರಂಥ ಬರೆಯಬೇಕೆಂದರೂ ಅಥವಾ ಏನಾದರೂ ವಿಷಯ ಬರೆಯಬೇಕೆಂದರೂ ಮನುಷ್ಯನಿಗೆ ಎರಡು ಭಾಷೆಗಳು ಬಂದಿರಬೇಕು. ಒಂದು ಲಿಪಿಯಿರುವ ಹಿಂದಿ ವಿದ್ಯೆ ಬಂದು, ಬರೆಯುವ ಸಾಮರ್ಥ್ಯ ಇರಬೇಕು. ಮತ್ತೊಂದು ಏನು ಬರೆದರೂ ಸಂಸ್ಕೃತದಲ್ಲಿಯೇ ಬರೆಯಬೇಕೆಂಬ ನಿಯಮ ಇರುವುದರಿಂದ ಪ್ರತಿ ಗ್ರಂಥ ಸಂಸ್ಕೃತದಲ್ಲಿಯೇ ಬರೆಯಲ್ಪಡುತ್ತಿತ್ತು. ಯಾವ ಗ್ರಂಥವಾದರೂ ಸಂಸ್ಕೃತ ಭಾಷೆಯಲ್ಲಿ ಬರೆಯಬೇಕೆಂಬ ನಿಯಮವನ್ನನುಸರಿಸಿ

ಸಂಸ್ಕೃತ ಬರದವರಾಗಲಿ, ಹಿಂದೀ ಲಿಪಿ ಬರದವರಾಗಲಿ ಬರೆಯುವುದಕ್ಕೆ ಸಾಧ್ಯವಿಲ್ಲದಂತೆ ಅಂದಿನ ಬ್ರಾಹ್ಮಣರು ಆ ನಿಮಯವನ್ನಿಟ್ಟಿದ್ದರು. ಸಂಸ್ಕೃತ ಬಂದರೂ ತಾವು ಹೊರತು ಇತರರು ಗ್ರಂಥಗಳನ್ನು ಬರೆಯದಂತಿರುವುದಕ್ಕೆ ಆ ನಿಯಮವನ್ನು ದುರುದ್ದೇಶದಿಂದಲೇ ಇಡಲಾಗಿದೆ. ಹಾಗಿರುವುದರಿಂದ ಹಿಂದೀ ವಿದ್ಯೆಯನ್ನು ಕಲಿತುಕೊಂಡವರೇ ಶೇಕಡ ಹತ್ತರಷ್ಟು ಸಹ ಇಲ್ಲದ ಕಾಲದಲ್ಲಿ ಯಾರಿಗಾದರೂ ಹಿಂದೀಭಾಷೆ ಬರೆಯುವುದಕ್ಕೆ ಬಂದರೂ ಸಂಸ್ಕೃತ ಬರದ ಕಾರಣದಿಂದ ಎರಡು ಭಾಷೆಗಳು ಬರುವ ಬ್ರಾಹ್ಮಣರು ಹೊರತು ಇತರರು ಗ್ರಂಥಗಳು ಬರೆಯುತ್ತಿರಲಿಲ್ಲ.

ದ್ವಾಪರಯುಗದಲ್ಲಿ ವ್ಯಾಸನು ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಹೊಂದಿದ ಏಕೈಕ ವ್ಯಕ್ತಿಯಾಗಿದ್ದನು. ಆದುದರಿಂದ ರಾಜರು ಸಹಿತವು ಆತನನ್ನು ಗೌರವಿಸುತ್ತಿದ್ದರು. ವ್ಯಾಸನು ನಾಲ್ಕು ವೇದಗಳನ್ನು, ಹದಿನೆಂಟು ಪುರಾಣಗಳನ್ನು ಸಂಸ್ಕೃತ ಭಾಷೆಯಲ್ಲಿ ಹಿಂದೀಲಿಪಿಯಲ್ಲಿ ಬರೆದಿದ್ದಾನೆ. ನಂತರ ಮಹಾ ಭಾರತವನ್ನು ಬರೆಯುವ ಸಂದರ್ಭದಲ್ಲಿ ಯುದ್ಧ ಪ್ರಾರಂಭ ಸಮಯದಲ್ಲಿ ಐದು ನಿಮಿಷಗಳು ಸೈನ್ಯಗಳಿರುವ ಮಧ್ಯದಲ್ಲಿ ಅರ್ಜುನನು ಕೃಷ್ಣನು ಮಾತನಾಡಿದ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಯುದ್ಧ ಮುಗಿದುಹೋದ ನಂತರ ಅರ್ಜುನನ್ನು ಕರೆದು ಆಗ ಏನು ಮಾತನಾಡಿದ್ದೀರೆಂದು ಕೇಳಿದ್ದಾನೆ. ಅರ್ಜುನನು ಎರಡು ನಿಮಿಷಗಳಿಂದ ಐದಾರು ನಿಮಿಷಗಳವರೆಗು ಮಾತನಾಡಿದ ಮಾತುಗಳನ್ನು ವ್ಯಾಸನಿಗೆ ತಿಳಿಸಿದನು. ಆಗ ವ್ಯಾಸನು ಆ ಮಾತುಗಳಲ್ಲಿನ ಸಾರಾಂಶವನ್ನು ಗ್ರಹಿಸಿದವನಾಗಿ ಏಳುನೂರು ಶ್ಲೋಕಗಳೊಂದಿಗೆ ಭಗವದ್ಗೀತೆಯನ್ನು ಬರೆದಿದ್ದಾನೆ. ಅರ್ಜುನನ ಮೂಲಕ ವಿಷಯ ತಿಳಿದುಕೊಂಡ ನಂತರ ಆ ವಿಷಯವನ್ನು ಸ್ವತಃವಾಗಿ ದೇವರೇ ಹೇಳಿದ್ದಾನೆಂದು ತಿಳಿದುಕೊಂಡಿದ್ದಾನೆ. ದೇವರು ವೇದಗಳನ್ನು ಗುಣಗಳಾಗಿ, ಗುಣ ವಿಷಯಗಳಾಗಿ ಹೇಳಿದಂತೆ, ಗುಣಗಳೇ ಮಾಯೆಯಾಗಿವೆಯೆಂದು ತಿಳಿದು ತಾನು ಅದಕ್ಕುಮೊದಲು ಮಾಯರೂಪವಾದ ವೇದಗಳನ್ನು ಬರೆದು ಪ್ರಜೆಗಳಿಗೆಕೊಟ್ಟು

ಪ್ರಜೆಗಳನ್ನು ಅಜ್ಞಾನದಾರಿ ಹಿಡಿಸಿದ್ದೇನೆಂದುಕೊಂಡು ಬಹಳ ಬಾಧೆಪಟ್ಟವನಾಗಿ ಮಾಡಿದ ತಪ್ಪಿಗೆ ಪಾಶ್ಚಾತ್ತಾಪಪಟ್ಟು, ತನ್ನ ತಪ್ಪನ್ನು ಸರಿಪಡಿಸಿಕೊಂಡು ಬದಲಾದ ಮನುಷ್ಯನಾಗಿ ತಯಾರಾಗಿ ಪಾಪಪರಿಹಾರಾರ್ಥ ಭಗವದ್ಗೀತೆಯನ್ನು ಬರೆಯಬೇಕೆಂದುಕೊಂಡು ಬರೆಯುವುದಾಗಿದೆ. ಭಾರತದಲ್ಲಿ ಒಂದು ಭಾಗವಾದ ಭಗವದ್ಗೀತೆಯನ್ನು ಶ್ರದ್ಧೆಯಿಂದ ಪ್ರತ್ಯೇಕ ಗ್ರಂಥವಾಗಿ ಬರೆದಿದ್ದಾನೆ.

ವೇದಗಳನ್ನು ಬರೆದಿರುವುದಕ್ಕೆ ಆತನ ಹೆಸರು ವೇದವ್ಯಾಸನು ಎಂದು ಹೇಳುತ್ತಿದ್ದಾರೆ. ಆ ಹೆಸರು ತನಗೆ ಇಲ್ಲದಂತಿರುವುದಕ್ಕೆ ವ್ಯಾಸನು ಭಗವದ್ಗೀತೆಯನ್ನು ಬರೆದು ಅದರಲ್ಲಿ ವೇದಗಳನ್ನು ಮೂರು ಗುಣ ವಿಷಯಗಳಾಗಿಯೇ ಹೇಳಿದ್ದಾನೆ. ನಂತರ ಮೂರು ಗುಣಗಳನ್ನೇ ವೇದಗಳಾಗಿ ವರ್ಣಿಸಿ ಹೇಳಿದ್ದಾನೆ. ಅದರಿಂದ ವೇದಗಳನ್ನು ಬರೆದ ವೇದವ್ಯಾಸನೇ ವೇದಗಳನ್ನು ಮಾಯೆ ಎಂದೂ, ಮಾಯೆ ಇರುವವರೆಗೂ ದೇವರು ತಿಳಿಯುವುದಿಲ್ಲವೆಂದು ಹೇಳುವುದರಿಂದ ಸ್ವಲ್ಪ ಸತ್ಯ ಹೊರಗೆ ತಿಳಿದಿದೆ. ಆದರೂ ವ್ಯಾಸನು ವೇದಗಳನ್ನು ಕುರಿತು ಕೆಟ್ಟದಾಗಿ ಹೇಳಿದ ಮಾತುಗಳನ್ನು ಪಂಡಿತರೆಲ್ಲರೂ ಅಡಗಿಸಿಟ್ಟು ಹೊರಗೆ ತಿಳಿಯದಂತೆ ಮಾಡಿ ಈದಿನಕ್ಕು ಎಲ್ಲಾ ಶುಭಕಾರ್ಯಗಳಲ್ಲಿ ವೇದಗಳನ್ನು ಓದುತ್ತಿದ್ದಾರೆ. ವೇದಗಳ ಮಾಯೆಯಿಂದ ಎಲ್ಲರನ್ನು ಮೋಸಮಾಡುತ್ತಿದ್ದಾರೆ.

ವೇದವ್ಯಾಸನು ವೇದಗಳನ್ನು ಕುರಿತು ದೇವರು ಹೇಳಿದ ಭಗವದ್ಗೀತೆ ಯನ್ನು ನೋಡುವವರೆಗು ವೇದಗಳು ಆಧ್ಯಾತ್ಮಿಕಕ್ಕೆ ಸರಿಹೋಗುವುದಿಲ್ಲವೆಂದು ಮುಖ್ಯವಾದ ನಾಲ್ಕು ಅಧರ್ಮಗಳಲ್ಲಿ ವೇದಪಠನೆ ಒಂದು ಅಧರ್ಮವೆಂದು ಜೀವನದ ಕೊನೆಯ ಹಂತದಲ್ಲಿ ತಿಳಿದುಕೊಂಡಿದ್ದಾನೆ. ಶಂಕರಾಚಾರ್ಯರು ವೇದಗಳನ್ನು ಒಂದುಬಾರಿ ದೇಶವೆಲ್ಲಾ ಪ್ರಚಾರ ಮಾಡಿ ನಾಲ್ಕು ವೇದಗಳಿಗೆ ನಾಲ್ಕು ಪೀಠಗಳನ್ನು ಸ್ಥಾಪಿಸಿದ ನಂತರ ವೇದಗಳನ್ನು ಕುರಿತು ದೇವರು ಹೇಳಿರುವುದು ವ್ಯಾಸನು ಬರೆದಿರುವುದು ನೋಡಿ ವೇದಗಳನ್ನು ತ್ಯಜಿಸಬೇಕೆಂದು ಕೊಂಡರು. ವ್ಯಾಸನು ಜೀವನದ ಕೊನೆಯಲ್ಲಿ ವೇದಗಳನ್ನು ಕುರಿತು ತಿಳಿದುಕೊಂಡ ನಂತರ ಮೂವತ್ತು ವರ್ಷಗಳು ಬದುಕಿದ್ದಾನೆ. ಶಂಕರನು ಚಿಕ್ಕವಯಸ್ಸಿನಲ್ಲಿ

ವೇದಗಳನ್ನು ಕುರಿತು ತಿಳಿದುಕೊಂಡ ನಂತರ ಮೂರು ವರ್ಷಗಳೇ ಬದುಕಿದ್ದಾನೆ. ಆದರೆ ಪ್ರಬೋಧಾನಂದ ಯೋಗೀಶ್ವರವರು ತನ್ನ ಆಧ್ಯಾತ್ಮಿಕ ಜೀವನದ ಪ್ರಾರಂಭದಲ್ಲಿಯೇ ವೇದಗಳನ್ನು ವಿರೋಧಿಸುತ್ತಾ ಬರುತ್ತಿದ್ದಾನೆ. ಮೂವರು ಸಿದ್ಧಾಂತಕರ್ತರು ವೇದಗಳನ್ನು ಆಧಾರ ಮಾಡಿಕೊಂಡು ತಮ್ಮ ಸಿದ್ಧಾಂತಗಳನ್ನು ಹೇಳಿದಾಗ, ಪ್ರಬೋಧಾನಂದ ಯೋಗೀಶ್ವರರವರು ವೇದಗಳಿಗೆ ವಿರುದ್ಧವಾಗಿ ತನ್ನ ಸಿದ್ಧಾಂತವನ್ನು ಹೇಳಿದನು. ತನ್ನ ಬೋಧನೆ ಭಗವದ್ಗೀತೆಗೆ ಅನುಕೂಲವಾಗಿ ವೇದಗಳಿಗೆ ವಿರುದ್ಧವಾಗಿದೆ. ಪ್ರಬೋಧಾನಂದ ಯೋಗೀಶ್ವರರ ಜ್ಞಾನ ಬಹಳ ಪ್ರ್ಯೇಕತೆಹೊಂದಿ ಯಾರ ಬೋಧನೆಯೊಂದಿಗೂ ಸಂಬಂಧವಿಲ್ಲದಿರುವುದಾಗಿ ಒಂದು ಭಗವದ್ಗೀತೆಗೆ ಹತ್ತಿರವಾಗಿ ಉಳಿದ ಗ್ರಂಥಗಳಿಗೆ ದೂರವಾಗಿರುತ್ತದೆ. ಆತನ ಜೀವನದಲ್ಲಿ ಆತನ ಜ್ಞಾನವೇ ಒಂದು ಪ್ರತ್ಯೇಕತೆ ಎಂದು ಹೇಳಬಹುದು.

**ಪ್ರಶ್ನೆ :– ಪ್ರಬೋಧಾನಂದ ಸ್ವಾಮಿಯವರ ಅನೇಕ ವಿಷಯಗಳನ್ನು ಮೊದಲೇ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೇಳಿದ್ದಾರೆ ಅಲ್ಲವೆ! ಹಾಗೆಯೇ ಪ್ರಬೋಧಾನಂದರು ಹೇಳುವ ಬೋಧನೆಗಳ ಪ್ರತ್ಯೇಕತೆಯನ್ನು ಕುರಿತು ಮೊದಲೇ ಏನಾದರೂ ಹೇಳಿದ್ದಾರಾ?**

**ಉತ್ತರ :–** ಎಷ್ಟೋ ವಿಷಯಗಳನ್ನು ಹೇಳಿದ ಬ್ರಹ್ಮಯ್ಯನವರು ಮುಖ್ಯವಾದ ಜ್ಞಾನ ವಿಷಯಗಳನ್ನು ಕುರಿತು ಹೇಳದೆ ಇರುತ್ತಾನಾ? ಅದಕ್ಕುಮುಂಚೆ ಮೂವರು ಸಿದ್ಧಾಂತಕರ್ತರು ಹೇಳಿರುವುದು ವೇದಗಳಲ್ಲಿನ ಬೋಧನೆಗಳನ್ನೇ ಹೆಚ್ಚಾಗಿ ಹೇಳಿ, ವೇದಗಳ ಪಠನವನ್ನೇ ಹೆಚ್ಚಾಗಿ ಮಾಡಿದ್ದಾರೆ. ಪ್ರಬೋಧಾನಂದ ಬೋಧನೆಗಳು ವೇದಗಳಿಗೆ ಸಂಬಂಧವಿಲ್ಲದಿರುವವಾಗಿ ಇರುವುದರಿಂದ, ಪ್ರತ್ಯೇಕ ಶಕ್ತಿಯಿರುವ ಬೋಧನೆಗಳಾಗಿರುವುದರಿಂದ ಈ ಬೋಧನೆಗಳಿಗೆ ಪ್ರತ್ಯೇಕವಾದ ಹೆಸರನ್ನು ಬ್ರಹ್ಮಯ್ಯನವರು ಇಟ್ಟಿದ್ದಾರೆ. ಅದನ್ನೇ ತನ್ನ ಕಾಲಜ್ಞಾನದಲ್ಲಿ **"ಸಾಂದ್ರಸಿಂಧು ವೇದ"** ಎಂದು ಹೆಸರು ಇಟ್ಟಿದ್ದಾರೆ. ತನ್ನ ಕಾಲಜ್ಞಾನದಲ್ಲಿ ಒಂದುಕಡೆ **"ಸಾಂದ್ರಸಿಂಧೂ ವೇದಕ್ಕೆ ಆನಂದಾಶ್ರಮದ ಕರ್ತ ಬರಬೇಕು"** ಎಂದು ಇದೆ. ಸಾಂದ್ರಸಿಂಧೂ ವೇದವನ್ನು ಹೇಳಿದ ಕರ್ತ ಪ್ರಬೋಧಾನಂದ

ಯೋಗೀಶ್ವರರೆಂದು ಇದರಿಂದ ತಿಳಿಯುತ್ತಿದೆ. ಅಲ್ಲಿಯೇ ಮತ್ತೊಂದು ಮಾತು ಸಹ ಇದೆ. **“ವೇದಗಳಿಗೆಲ್ಲ ಸಾಂದ್ರಸಿಂಧೂ ವೇದವೇ ಆದಿ ವೇದ”** ಎಂದು ಸಹ ಇದೆ. ಮನುಷ್ಯರಿಗೆ ಆದಿವೇದ ಮೊದಲಿನಿಂದಿರುವ ಗುಣಗಳಾದರೆ, ವೇದಗಳಿಗೆ ಆದಿವೇದ ಸಾಂದ್ರಸಿಂಧೂ ವೇದವೇ ಎಂದು ಹೇಳಲ್ಪಟ್ಟಿದೆ. ವೇದಗಳಿಗೆಲ್ಲ ಆದಿವೇದ ಅಂದರೇ ‘ವೇದಗಳಿಗಿಂತ ಮೊದಲು ಹುಟ್ಟಿರುವುದು’ ಎಂದು ಅರ್ಥ. ಸಾಂದ್ರಸಿಂಧೂ ವೇದ ಎಂಬ ವಾಕ್ಯದಲ್ಲಿ ವೇದ ಎಂದರೆ ‘ಮಾಯೆ’ ಎಂದು ಅರ್ಥ. ಸಿಂಧೂ ಎಂದರೆ ‘ಎದುರು ಶಕ್ತಿ’ ಎಂದು ಅರ್ಥ. ಸಾಂದ್ರ ಎಂದರೇ ‘ಹೆಚ್ಚಿನ ಸಾಂದ್ರತೆ ಹೊಂದಿದ’, ‘ಹೆಚ್ಚು ಬಲ ಹೊಂದಿದ’ ಎಂದು ಅರ್ಥ. **ಹೆಚ್ಚಿನ ಶಕ್ತಿಯಿಂದ ವೇದಗಳನ್ನು ಎದುರಿಸುವುದು ಸಾಂದ್ರಸಿಂಧೂವೇದ. ಮಾಯೆಯನ್ನು ಹೆಚ್ಚು ವಿರುದ್ಧ ಶಕ್ತಿಯಿಂದ ಎದುರಿಸುವುದನ್ನು ಸಾಂದ್ರಸಿಂಧೂ ವೇದ ಎನ್ನುತ್ತಾರೆ.** ಪ್ರಬೋಧಾನಂದ ಬೋಧಿಸುವ ಬೋಧನೆಗಳು ಪ್ರತಿಯೊಂದು ಮಾಯೆಗೆ ವಿರುದ್ಧವಾಗಿ ಇರುವವೇ ಆದ್ದರಿಂದ ಆತನ ಜ್ಞಾನವನ್ನು ‘ಸಾಂದ್ರಸಿಂಧೂ ವೇದ’ ಎಂದು ಹೇಳಿದ್ದಾರೆ.

**ಪ್ರಶ್ನೆ :– ಸಾಂದ್ರಸಿಂಧೂ ವೇದ ಎಂಬಮಾತನ್ನು ಎಲ್ಲಿಯೂ ಕೇಳಲಿಲ್ಲ. ಪ್ರತಿ ವೇದವು ಬ್ರಾಹ್ಮಣರಿಗೆ ತಿಳಿದಿದೆ. ಆದರೆ ಸಾಂದ್ರಸಿಂಧೂ ವೇದವನ್ನು ಕುರಿತು ಬ್ರಾಹ್ಮಣರು ಸಹ ಎಲ್ಲಿಯೂ ಹೇಳಲಿಲ್ಲ. ಈ ವೇದವನ್ನು ಕುರಿತು ಪ್ರಜೆಗಳಿಗಾಗಲಿ, ಬ್ರಾಹ್ಮಣರಿಗಾಗಲಿ ತಿಳಿದಿಲ್ಲವಾ?**

**ಉತ್ತರ :–** ಸಾಂದ್ರಸಿಂಧೂ ವೇದ ಎಂದರೇ ಸ್ವಚ್ಛವಾದ ಜ್ಞಾನ. ಸಾಂದ್ರ ಸಿಂಧೂವೇದವೆಂದರೆ! ಗುಣಗಳಿಂದ ಕೂಡಿಕೊಂಡ ಮಾಯೆಗೆ ವಿರುದ್ಧವಾದುದು. ಸಾಂದ್ರಸಿಂಧೂ ವೇದವೆಂದರೆ ಕರ್ಮಗಳನ್ನು ಸುಡುವ ಜ್ಞಾನಶಕ್ತಿಯೆಂಬ ಅಗ್ನಿಕುಂಡ. ಸಾಂದ್ರ ಸಿಂಧುವೇದ ಎಂದರೆ ಬ್ರಾಹ್ಮಣರಿಂದ ಮೊದಲಾಗಿ ಚತುರ್ಮುಖ ಬ್ರಹ್ಮವರೆಗು ಯಾರಿಗೂ ತಿಳಿಯದಿರುವುದು. ಸಾಂದ್ರಸಿಂಧೂ ವೇದವೆಂದರೆ ಸೃಷ್ಠಿ ಆದಿಯಲ್ಲಿನ ಜ್ಞಾನದಿಂದ ಮುಡಿಹಾಕಲ್ಪಟ್ಟಿದೆ. ಸಾಂದ್ರಸಿಂಧೂ ವೇದವೆಂದರೇ ಕಲಿಯುಗದಲ್ಲಿರುವ ಮೂರು ಮತಗಳಿಂದ ಮುಡಿಹಾಕಲ್ಪಟ್ಟ

ಏಕೈಕ ಜ್ಞಾನ. ಅಂತಹ ಸಾಂದ್ರಸಿಂಧೂ ವೇದ ಪ್ರತಿ ಮನುಷ್ಯನಿಗೂ ಹೊಸದೆ, ಬ್ರಾಹ್ಮಣರೆಲ್ಲರಿಗೂ ಹೊಸದೇ.

ಸಾಂದ್ರಸಿಂಧೂ ವೇದವನ್ನು ಕುರಿತು ಬ್ರಹ್ಮಯ್ಯನವರು ಕಾಲಜ್ಞಾನದಲ್ಲಿ ಹೀಗೆ ಹೇಳುತ್ತಿದ್ದಾರೆ ನೋಡಿರಿ. **"ಬ್ರಾಹ್ಮಣರಿಗೆ ಸಾಂದ್ರಸಿಂಧೂ ರಹಸ್ಯ ಕೊಡುವುದು ಇಲ್ಲ"** ಈ ವಾಕ್ಯವನ್ನನುಸರಿಸಿ ಸಂಸ್ಕೃತ ಪಾಂಡಿತ್ಯವಿರುವ ಬ್ರಾಹ್ಮಣರಿಗೂ ಸಹ ಸಾಂದ್ರಸಿಂಧೂ ವೇದ ರಹಸ್ಯಗಳು ತಿಳಿದಿಲ್ಲವೆಂದು ಹೇಳುವುದಾಗಿದೆ. ಮತ್ತೊಂದುಕಡೆ ಇದೇ ಮಾತನ್ನೇ ಹೇಳುತ್ತಾ ಹೀಗೆ ಬರೆದಿಟ್ಟಿದ್ದಾರೆ. **"ಈ ಸಾಂದ್ರಸಿಂಧೂ ವೇದಗಳಲ್ಲಿನ ಮಾತುಗಳು ಬ್ರಹ್ಮನಿಗೂ ತಿಳಿದಿಲ್ಲ"** ಎಂದು ಇದೆ. ಇಲ್ಲಿ ಬ್ರಹ್ಮ ಎಂದರೇ ತ್ರಿಮೂರ್ತಿಗಳಲ್ಲಿನ ಚತುರ್ಮುಖ ಬ್ರಹ್ಮಯೆಂದು ತಿಳಿಯಬೇಕು. ಈ ವಾಕ್ಯವನ್ನನುಸರಿಸಿ ಸಾಂದ್ರಸಿಂಧೂ ವೇದದಲ್ಲಿನ ಜ್ಞಾನ ದೇವತೆಗಳಿಗೂ ಸಹ ತಿಳಿಯದ ರಹಸ್ಯವಾಗಿ ಇದೆಯೆಂದು ಹೇಳದೆಯೇ ತಿಳಿಯುತ್ತಿದೆ. ಪ್ರಬೋಧಾನಂದ ಯೋಗೀಶ್ವರರನ್ನು ನೋಡಿದರೆ ಆತನ ಶರೀರವೇ ಕಾಣಿಸುತ್ತದೆ. ಎಲ್ಲರಂತೆ ಸರ್ವಸಾಧಾರಣವಾಗಿರುವ ಆತನ ಶರೀರ ಮೇಲ್ನೋಟಕ್ಕೆ ಕಾಣಿಸಿದರೂ, ಆತನ ಶರೀರದಲ್ಲಿನ ಆತ್ಮ ಬೋಧಿಸಿದ ಜ್ಞಾನ ಯಾರಿಗೂ ತಿಳಿಯದಿರುವುದು, ಅದನ್ನು ಗ್ರಹಿಸುವುದು ಸಾಮಾನ್ಯವಾದ ಕೆಲಸವಲ್ಲ. ಸಾಧಾರಣ ಮನುಷ್ಯನಲ್ಲಿ ಕಾಣಿಸದ ಜ್ಞಾನ ಅಷ್ಟುದೊಡ್ಡದಾಗಿದೆಯೆಂದು ಯಾರೂ ತಿಳಿಯಲಾರರು. ಎಷ್ಟೋ ದೊಡ್ಡ ರಹಸ್ಯವಾದ ಸಾಂದ್ರಸಿಂಧೂ ವೇದ ಜ್ಞಾನವನ್ನು ತಿಳಿಸಿದ ಪ್ರಬೋಧಾನಂದ ಯೋಗೀಶ್ವರರನ್ನು ಪೋತುಲೂರಿ ವೀರಬ್ರಹ್ಮಯ್ಯನವರು **'ನನಗೂ ಗುರುವೇ'** ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ **'ನಿಮ್ಮೆಲ್ಲರಿಗೂ ಗುರುವೇ'** ಎಂದು ಸಹ ಹೇಳಿದ್ದಾನೆ. ಆತನು ಎಷ್ಟೋ ಗ್ರಹಿಸಿಕೊಂಡಿದ್ದರೇನೆ ಆ ಮಾತು ಹೇಳಿರುತ್ತಾನೆ. ಈ ವಿಷಯಗಳೆಲ್ಲವೂ ನೋಡಿದ ನಂತರ **"ಯೋಗೀಶ್ವರರ ಜ್ಞಾನವನ್ನು ತಿಳಿದವನು ಧನ್ಯನು"** ಎಂದು ಹೇಳಬಹುದು. ಆತನು ಭೂಮಿಮೇಲೆ ಪ್ರತ್ಯಕ್ಷವಾಗಿರುವ ಕಾಲದಲ್ಲಿ ಸಹ ಆತನ ಜ್ಞಾನವನ್ನು ಗುರುತಿಸದವರದು ದುರದೃಷ್ಟವೇಯೆಂದು ಹೇಳಬಹುದು.

**ಪ್ರಶ್ನೆ :– ನೀವು ತ್ರೈತ ಸಿದ್ಧಾಂತಕರ್ತನಾದ ಪ್ರಬೋಧಾನಂದ ಯೋಗೀಶ್ವರರ ಜ್ಞಾನವನ್ನು ದೊಡ್ಡದಾಗಿ ಹೇಳುತ್ತಿದ್ದೀರ. ಆತನ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಆತನ ಹತ್ತಿರಕ್ಕೆ ಹೋಗಿ, ಮುಖ್ಯವಾದ ಭಕ್ತರಾಗಿ ನಡೆದು ಕೆಲವು ವರ್ಷಗಳ ನಂತರ ಯೋಗೀಶ್ವರರ ಹತ್ತಿರಕ್ಕೆ ಹೋಗದಂತೆ ಇರುವವರು ಇದ್ದಾರೆ. ಎಷ್ಟೋ ಭಕ್ತಿಯಿಂದ ಹೋದವರು ಸ್ವಲ್ಪ ಕಾಲಕ್ಕೆ ಅಲ್ಲಿಗೆ ಹೋಗದೇ ಇರುವುದರಲ್ಲಿ ಅರ್ಥವೇನು ಇರುತ್ತದೆ?**

**ಉತ್ತರ :–** ತ್ರೈತ ಸಿದ್ಧಾಂತ ಆದಿಕರ್ತನಾದ ಪ್ರಬೋಧಾನಂದ ಯೋಗೀಶ್ವರಿರುವ ಶರೀರದಲ್ಲಿ ನಾನು ಜೀವಿಯಾಗಿರುವುದು ನನ್ನ ಅದೃಷ್ಟ. ನಾನು ಯೋಗೀಶ್ವರರ ಹತ್ತಿರಕ್ಕೆ ಬರುವವರನ್ನು ಹೋಗುವವರನ್ನು ನೋಡುತ್ತಲೇ ಇದ್ದೇನೆ. ಕೆಲವರು ಭಕ್ತಿಯಿಂದ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಬಂದು ಸ್ವಲ್ಪಕಾಲ ಯೋಗೀಶ್ವರರಿಗೆ ಹತ್ತಿರದ ಭಕ್ತರಾಗಿದ್ದು ದೂರವಾಗಿ ಹೋದವರು ಬಹಳ ಜನ ಇದ್ದಾರೆ. ನನಗೆ ತಿಳಿದು ಮೂವರು ನಾಲ್ವರು ಹಾಗೆ ಹೋದವರು ಇದ್ದಾರೆ. ಅವರು ಹೋದ ವಿಧಾನವನ್ನನುಸರಿಸಿ ನೋಡಿದರೆ, ಅಷ್ಟು ಹತ್ತಿರದ ಭಕ್ತರು ಆತನ ಹತ್ತಿರಕ್ಕೆ ಬಾರದೆ ಹೋಗಿದ್ದಾರೆ ಎಂದರೆ ಯೋಗೀಶ್ವರರಲ್ಲಿಯೇ ಏನೋ ಲೋಪ ಇದೆಯೆಂದು ಅಂದುಕೊಳ್ಳುವ ಅವಕಾಶವು ಇದೆ. ಯೋಗೀಶ್ವರರು ಎಷ್ಟು ದೊಡ್ಡ ಜ್ಞಾನವನ್ನು ಹೇಳಿದರೂ, ಅದನ್ನು ಕೇಳಿದ ನಂತರ ಅವರು ಬರದಂತೆ ಹೋಗಿದ್ದಾರೆಂದರೇ, ಅವರ **ಒಳಗಿರುವ ಭಾವವನ್ನನುಸರಿಸಿ** ದೇವರೇ ಅವರನ್ನು ದೂರ ಕಳಿಸಿದ್ದಾನೆಂದು ಅರ್ಥವಾಗುತ್ತದೆ.

ಸುಮಾರು ಮೂವತ್ತೈದು ವರ್ಷಗಳ ಹಿಂದೆ ಯೋಗೀಶ್ವರರು ಒಬ್ಬ ವ್ಯಕ್ತಿಗೆ ಎಷ್ಟೋ ಒಳ್ಳೆಯ ವಿಧಾನದಲ್ಲಿ ಜ್ಞಾನವನ್ನು ಹೇಳಿದರೆ, ಸ್ವಲ್ಪಕಾಲ ಕೇಳಿದ ನಂತರ ಆತನ ಅಂತರಂಗದಲ್ಲಿ ತಾನು ಸಹ ಗುರು ಆಗಬೇಕೆಂಬ ಭಾವನೆ ಬಂದಿದೆ. ಆ ಭಾವನೆ ಬಂದ ಕೂಡಲೆ ಎರಡು ವರ್ಷಗಳಿಂದ ಜ್ಞಾನವೆಲ್ಲವೂ ತಿಳಿದುಕೊಂಡರೂ, ಇನ್ನೂ ಸ್ವಾಮಿಯವರ ಹತ್ತಿರ ಏನೂ ಜ್ಞಾನ ಉಳಿದಿಲ್ಲ, ಈತನು ಎಷ್ಟು ಕಾಲವಿದ್ದರೂ ಆತನು ಗುರು ಆಗುವುದಿಲ್ಲ.

ಇತರರನ್ನು ಗುರು ಆಗಲು ಬಿಡುವುದಿಲ್ಲ. ನಾನು ಹೊರಗೆ ಹೋಗಿ ಒಂದು ಆಶ್ರಮವನ್ನು ಸ್ಥಾಪಿಸಿಕೊಂಡರೆ, ಮರ್ಯಾದೆಗೆ ಮರ್ಯಾದೆ, ಹಣಕ್ಕೆ ಹಣ ಸಂಪಾದಿಸಿಕೊಳ್ಳಬಹುದು ಎಂದುಕೊಂಡನು. ಅಂದುಕೊಂಡ ತಕ್ಷಣ ಸುಮ್ಮನೆ ಹೋದರೆ ತನ್ನ ತಪ್ಪೇ ಕಾಣಿಸುತ್ತದೆ ಅಲ್ಲವೆ! ಎಂದು ತನ್ನ ತಪ್ಪು ಕಾಣಿಸದಂತಿರುವು ದಕ್ಕೆ ಯೋಗೀಶ್ವರರ ಮೇಲೆ ಯಾವುದೋ ಒಂದು ಆರೋಪಣೆ ಮಾಡಿ ಅಲ್ಲಿಗೆ ಬರದಂತೆ ಹೋಗುವುದಾಗಿದೆ. ಹಾಗೆ ಹೋದವನು ಮೊದಲು ವೀರಬ್ರಹ್ಮಯ್ಯನವರ ಭಾವಚಿತ್ರವನ್ನು, ನಂತರ ಬ್ರಹ್ಮಯ್ಯನವರ ಪ್ರತಿಮೆಯನ್ನು ಅಡ್ಡವಿಟ್ಟುಕೊಂಡು ಬ್ರಹ್ಮಯ್ಯನವರ ಶಿಷ್ಯನೆಂದೋ, ಭಕ್ತನೆಂದೋ ಹೇಳಿಕೊಳ್ಳುತ್ತಾ ಪ್ರತಿ ವರ್ಷ ಬ್ರಹ್ಮಯ್ಯನವರ ಆರಾಧನೆ ಮಾಡುತ್ತಾ ಅದಕ್ಕಾಗಿ ಎಲ್ಲರ ಹತ್ತಿರ ಚಂದಾ ವಸೂಲಿ ಮಾಡುವುದೇ ಕೆಲಸವಾಗಿಟ್ಟುಕೊಂಡು ಭಕ್ತಿಯನ್ನು ವ್ಯಾಪಾರವಾಗಿ ಮರಳಿಸಿಕೊಂಡು ಹಣ ಸಂಪಾದಿಸುವುದು ಪ್ರಾರಂಭ ಮಾಡಿದ್ದಾನೆ.

ಹೊರಗೆ ಹೋಗಿ ಹಣ ಸಂಪಾದಿಸುವ ವ್ಯಾಪಾರವನ್ನು ಇಟ್ಟುಕೊಂಡು ಯೋಗೀಶ್ವರರು ಯಾವಾಗಲೂ ಮಾಡದ ಕೆಲಸಗಳನ್ನು ಮಾಡುತ್ತಾ ಕೆಲವರ ಪ್ರಜೆಗಳ ದೃಷ್ಟಿಯಲ್ಲಿ ಗುರುವಾಗಿ ಚಲಾವಣೆಯಾಗುವವನು ಒಬ್ಬನಿರುವಾಗ! ಮತ್ತೊಬ್ಬನು ಯೋಗೀಶ್ವರರ ಹತ್ತಿರ ಮುಖ್ಯವಾದ ಭಕ್ತನಾಗಿದ್ದು ಸ್ವಲ್ಪ ಜ್ಞಾನವನ್ನು ಸಂಪಾದಿಸಿಕೊಂಡಿದ್ದಾನೆ. ಯೋಗೀಶ್ವರವರು ಎಂದಿಗೂ ಹೊರಗೆಹೋಗಿ ಜ್ಞಾನವನ್ನು ಹೇಳುವುದಿಲ್ಲ. ಅದನ್ನು ಆಸರೆಯಾಗಿ ತೆಗೆದುಕೊಂಡು ಯೋಗೀಶ್ವರರ ಜ್ಞಾನವನ್ನು ಹೊರಗೆ ಹೋಗಿ ಪ್ರಚಾರ ಮಾಡುತ್ತೇನೆಂದು ಪ್ರತಿ ದಿನ ಒಂದು ಊರು ತಿರುಗಿ ಜ್ಞಾನವನ್ನು ಉಪನ್ಯಾಸಗಳಾಗಿ ಹೇಳುವುದು ಪ್ರಾರಂಭಿಸಿದ್ದಾನೆ. ಆಗ ಪ್ರಜೆಗಳು ಆತನ ಹತ್ತಿರ ಜ್ಞಾನವನ್ನು ಕೇಳುವುದಕ್ಕೆ ಬಹಳ ಜನ ಅಭ್ಯಾಸವಾಗಿದ್ದಾರೆ. ಅದರಿಂದ ಆತನನ್ನು ಗುರುವಿಗಿಂತ ದೊಡ್ಡದಾಗಿ ಗೌರವಿಸುವುದು, ಹಣ ಕೊಡುವುದು, ಬಟ್ಟೆಗಳು ಕೊಡುವುದು ಶುರು ಮಾಡಿದ್ದಾರೆ. "ಏಡಿಯನ್ನು ತಿನ್ನುವುದಕ್ಕೆ ಅಭ್ಯಾಸವಾದ ನರಿ ಬತ್ತದ ಗದ್ದೆಯ ದಾರಿಹಿಡಿದಂತೆ"

ಅದೇ ಒಳ್ಳೆಯದಾಗಿ ಕಾಣಿಸಿರುವುದರಿಂದ ಯೋಗೀಶ್ವರರಿಗೆ ತಿಳಿಯದಂತೆ ಪ್ರಜೆಗಳ ಹತ್ತಿರ ಹಣವನ್ನು ತೆಗೆದುಕೊಳ್ಳುವುದು, ಕಾಣಿಕೆಗಳು ತೆಗೆದುಕೊಳ್ಳುವವರೆಗು ಮುಂದುವರೆದಿದ್ದಾನೆ. ತನಗೆ ಆರ್ಥಿಕ ತೊಂದರೆಗಳಿವೆ ಯೆಂದು ಕೆಲವರೊಂದಿಗೆ ಆರೋಗ್ಯಲೋಪವಿದೆಯೆಂದು ಅದಕ್ಕೆ ಹಣ ಅಗತ್ಯವೆಂದು ಕೆಲವರೊಂದಿಗೆ ಹೇಳಿ ಅದರ ನೆಪದಿಂದ ಹಣವನ್ನು ಕಸಿಯಲು ಶುರುಮಾಡಿದ್ದಾನೆ. ಯೋಗೀಶ್ವರರು ಎಂದಿಗೂ ಆ ಕೆಲಸಗಳು ಮಾಡಲಿಲ್ಲ. ಹೀಗೆ ಅನೇಕ ವಿಧಗಳ ಅಭ್ಯಾಸ ಅದರ ಮಾಯೆಯಲ್ಲಿ ಯೋಗೀಶ್ವರರಿಗೆ ತಿಳಿಯದ ಕೆಲಸಗಳು ಸಹ ಯೋಗೀಶ್ವರರು ಹೇಳಿದ್ದಾರೆಂದು ಕೆಲವರನ್ನು ನಂಬಿಸಿ, ತನ್ನಿಷ್ಟ ಬಂದಂತೆ ನಡೆಸುತ್ತಿದ್ದನು. ಯೋಗೀಶ್ವರರು ಆಶ್ರಮದಲ್ಲಿಯೇ ಗುರು. ಆತನು ಹೊರಗೆ ಬರುವುದಿಲ್ಲ, ಆರೋಗ್ಯ ಅನುಕೂಲಿಸುವುದಿಲ್ಲ ಆದ್ದರಿಂದ ಎಂದಿಗೂ ಆತನು ಹೊರಗೆ ಬರುವುದಿಲ್ಲ. ಆದುದರಿಂದ ಹೊರಗಿನ ಊರುಗಳಿಗೆಲ್ಲ ನಾನೇ ಗುರುವೆನ್ನುವಂತೆ ನಡೆದುಕೊಂಡಿದ್ದಾನೆ.

ಪ್ರಜೆಗಳು ಸಹ ವಿವೇಕವಿಲ್ಲದಂತೆ ಪ್ರವರ್ತಿಸಿದ್ದಾರೆ. ಯೋಗೀಶ್ವರರ ಜ್ಞಾನವನ್ನೇ ಅಲ್ಲವೆ ಈತನು ಹೇಳುವುದು! ಎಂದು ಅಂದುಕೊಳ್ಳದಂತೆ ಯೋಗೀಶ್ವರರಿಗಿಂತ ದೊಡ್ಡದಾಗಿ ಆತನನ್ನು ನೋಡುವುದು, ಎಲ್ಲಿಗೆ ಹೋದರೂ ಪ್ರತ್ಯೇಕ ಮರ್ಯಾದೆಗಳು ಮಾಡುವುದು ಎಲ್ಲಾ ನಡೆಯುತ್ತಿದ್ದವು. ಮೂವತ್ತೈದು ವರ್ಷಗಳ ಕೆಳಗೆ ಹೊರಗೆ ಹೋಗಿ ಭಕ್ತಿಯ ಮುಸುಗಿನಲ್ಲಿ ಒಬ್ಬನು ಸಂಪಾದನೆಯಲ್ಲಿ ಬಿದ್ದುಹೋದರೆ, ಈತನು ಹೊರಗೆ ಹೋಗದೆ ಅನುಕೂಲ ವಾಗಿರುವಂತೆ ಹಾಗೆ ಒಟ್ಟಾರೆ ಎಲ್ಲರನ್ನು ತನ್ನಕಡೆ ಅಭ್ಯಾಸ ಮಾಡಿಕೊಂಡು ತಾನೇ ಗುರುವಾಗಿ ಚಲಾವಣೆ ಆಗಬೇಕೆಂದು ನೋಡಿದ್ದಾನೆ. ಯೋಗೀಶ್ವರರು ಇದೆಲ್ಲಾ ಏನು ತಿಳಿಯದಂತಿದ್ದರೂ ಕೊನೆಗೆ ದೇವರು ಆತನನ್ನು ಯೋಗೀಶ್ವರರಿಗೆ ದೂರ ಮಾಡಿದ್ದಾನೆ. ಆದರೂ ಯೋಗೀಶ್ವರರು ಇದೆಲ್ಲಾ ಅವರ ಅಜ್ಞಾನವೆಂದು ಸುಮ್ಮನಿದ್ದಾರೆ. ಅಷ್ಟೇ ಅಲ್ಲದೆ **"ಯಾರು ಹೇಗೆ ಹೋದರೂ ನಾನು ಪ್ರಜೆಗಳಿಗೆ ತ್ರೈತ ಸಿದ್ಧಾಂತವನ್ನು ತಿಳಿಸುವುದಕ್ಕೇ ಬಂದಿದ್ದೇನೆ. ತ್ರೈತ ಸಿದ್ಧಾಂತ ಆದಿಕರ್ತನಾಗಿ**

**ನನ್ನ ಕೆಲಸವನ್ನು ನಾನು ಮಾಡುತ್ತೇನೆ"** ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ "ಹಣದ ವಿಷಯವನ್ನು ಕರ್ಮ ನಿರ್ಣಯಿಸುತ್ತದೆ. ಏನು ಬರಬೇಕೋ, ಏನು ಹೋಗಬೇಕೋ ಅದೇ ನಡೆಯುತ್ತದೆ. ಅದು ತಿಳಿಯದೆ ಅಜ್ಞಾನದಲ್ಲಿಬಿದ್ದ ಮನುಷ್ಯ ತನ್ನ ತಿಳುವಳಿಕೆಯಿಂದ ಹಣವನ್ನು ಸಂಪಾದಿಸಿಕೊಳ್ಳಬೇಕೆಂದು ಕೊಳ್ಳುತ್ತಾನೆ. ಆ ಕೆಲಸದಲ್ಲಿ ಜ್ಞಾನವನ್ನು, ಭಕ್ತಿಯನ್ನು ಸಹ ಸಾಧನವಾಗಿ ಮಾಡಿಕೊಂಡು ಹಣವನ್ನು ಸಂಪಾದಿಸಬೇಕೆಂದು ನೋಡುತ್ತಾನೆ. ಅದು ಅವರ ಅಜ್ಞಾನ ಹೊರತು ಬೇರೆ ಏನೂ ಇಲ್ಲ" ಎಂದನು.

ಅಂತಹ ಭಕ್ತರನ್ನು ದೇವರೇ ಯೋಗೀಶ್ವರರ ಹತ್ತಿರದಿಂದ ದೂರ ಮಾಡುತ್ತಾನೆ. ಈ ವಿಷಯವಾಗಿ ವೀರಬ್ರಹ್ಮೇಂದ್ರಸ್ವಾಮಿಗಳು ತನ್ನ ಮಾತುಗಳಲ್ಲಿ ಹೀಗೆ ಅನ್ನುತ್ತಿದ್ದಾರೆ. **"ಆನಂದಾಶ್ರಮಕ್ಕೆ ದೂರವಾಗಿರುವ ಅವನನ್ನು ನೆನಪಿಸಬೇಡ. ನಿಶ್ಚಯ, ನಿಜ, ತಥ್ಯ. ಮಹಾಕುಟಿಲಗಾರನು, ದ್ರೋಹಿ, ಪಾಪವೆಲ್ಲ ಅವನನ್ನು ಹಿಡಿದುಕೊಂಡು ನೇತಾಡುತ್ತಿರುತ್ತದೆ**. ಎಷ್ಟೋ ದೊಡ್ಡ ಜ್ಞಾನದ ಹತ್ತಿರಕ್ಕೆ ಬಂದು ಸ್ವಲ್ಪಮಟ್ಟಿಗೆ ಜ್ಞಾನ ತಿಳಿದು ಪ್ರಪಂಚ ಚಿಂತೆಗಳಿಂದ ಒಬ್ಬನು ನಾನು ಗುರುವಂಥವನಾಗಬೇಕೆಂದರೆ ಮತ್ತೊಬ್ಬನು ಗುರುವನ್ನೇ ಮೀರಿದವನಾಗ ಬೇಕೆಂದುಕೊಂಡಿದ್ದಾನೆ. ಜ್ಞಾನ ತಿಳಿದರೂ ಅದು ಇತರರಿಗೆ ಹೇಳುವುದಕ್ಕೇ ಅಂದುಕೊಂಡು, ನಮ್ಮ ಸ್ವಂತ ತಿಳುವಳಿಕೆಯಿಂದ ಹಣ ಸಂಪಾದಿಸಿಕೊಳ್ಳಬೇಕೆಂದು ಕೊಂಡವರು ಅವರ ಹಿಂದಿರುವ ಕರ್ಮಪಟ್ಟಿಯನ್ನು ಮರೆತುಹೋಗಿರುತ್ತಾರೆ. ಯಾವಾಗಾದರೆ ಮನುಷ್ಯನಲ್ಲಿ ಕೆಟ್ಟ ಬುದ್ಧಿ ಹುಟ್ಟಿ ಗುರುವನ್ನೇ ಮೋಸ ಮಾಡಬಹುದು ಎಂದು ಅಂದುಕೊಳ್ಳುತ್ತಾನೋ ಆಗಲೇ ಅವನಲ್ಲಿ ಮಾಯೆ ಕೆಲಸ ಮಾಡುವುದು ಶುರುಮಾಡಿ ಜ್ಞಾನಕ್ಕೆ ದೂರ ಮಾಡುತ್ತದೆ. ಮಾಯೆ ತನ್ನನ್ನು ಜ್ಞಾನದಿಂದ ಹೇಗೆ ದೂರ ಮಾಡಿದೆಯೆಂದು ಸಹ ತಿಳಿಯದಂತೆ ಮಾಯೆ ಮನುಷ್ಯನನ್ನು ನಡೆಸಬಲ್ಲದು.

**ಪ್ರಶ್ನೆ :– ಯೆಷಯಾ ಪ್ರವಕ್ತ ಯೇಸುನನ್ನು ಕುರಿತು ಕೆಲವು ವಿಷಯಗಳನ್ನು ಗ್ರಂಥದಲ್ಲಿ ಬರೆದಿಟ್ಟಿದ್ದರೆ, ಬರೆದಿಟ್ಟಂತೆಯೆ ನಡೆಯುವುದು ಯೇಸು ಜೀವನದಲ್ಲಿ**

**ವಿಶೇಷತೆ. ಹಾಗೆ ಪೋತುಲೂರಿ ವೀರಬ್ರಹ್ಮಯ್ಯನವರು ಪ್ರಬೋಧಾನಂದ ಯೋಗೀಶ್ವರರ ಕೆಲವು ವಿಷಯಗಳನ್ನು ಬರೆದಿಟ್ಟರೆ ಅವು ಎಲ್ಲವೂ ನಡೆಯುತ್ತಾ ಬಂದಿವೆ. ಮುಖ್ಯವಾಗಿ ಯೋಗೀಶ್ವರರು ಸಿದ್ಧಾಂತಕರ್ತ ಅಲ್ಲವೆ! ಆತನ ಸಿದ್ಧಾಂತವನ್ನು ಕುರಿತು ಬರೆದ ವಾಕ್ಯಗಳು ಯಾವಾದರೂ ಇವೆಯಾ? ಹಾಗೆ ಇದ್ದರೆ ಯೋಗೀಶ್ವರರ ಸಿದ್ಧಾಂತ ಮೇಲೆ ಪ್ರಜೆಗಳಿಗೆ ದೃಢ ವಿಶ್ವಾಸ ಏರ್ಪಡುತ್ತದೆ. ಏನಾದರೂ ಇದ್ದರೆ ಹೇಳಿರಿ?**

**ಉತ್ತರ :–** ವೀರಬ್ರಹ್ಮಯ್ಯನವರು ಮುಖ್ಯವಾದ ವಿಷಯಗಳನ್ನೇ ತನ್ನ ಭವಿಷ್ಯ ವಾಣಿಯಲ್ಲಿ ಬರೆದಿದ್ದಾನೆ. ಯೋಗೀಶ್ವರರ ಜೀವನದಲ್ಲಿ ತ್ರೈತ ಸಿದ್ಧಾಂತವೇ ಮುಖ್ಯವಾದುದ್ದಾಗಿ ಇರುವುದರಿಂದ ಪ್ರಬೋಧಾನಂದ ಯೋಗೀಶ್ವರರ ಸಿದ್ಧಾಂತವನ್ನು ಕುರಿತು ಬ್ರಹ್ಮಯ್ಯನವರು ಈ ವಿಧವಾಗಿ ಬರೆದಿದ್ದಾರೆ. **"ಸೋಮ ಸಿದ್ಧಾಂತವು ಸೊಂಪಾಗಿ ನಡೆಯುತ್ತದೆ. ಶುಭಾಶುಭಗಳಾಗುವುದಯ್ಯ"** ಎಂಬ ವಾಕ್ಯ ಇದೆ. ಇದರಲ್ಲಿ ತ್ರೈತ ಸಿದ್ಧಾಂತ ಎನ್ನದಂತೆ 'ಸೋಮಸಿದ್ಧಾಂತ' ಎಂದು ಹೇಳಿದ್ದಾರೆ. ಸೋಮ ಎಂದರೆ ಚಂದ್ರನೆಂದು ಅರ್ಥ. ಚಂದ್ರನು ಜ್ಞಾನಕ್ಕೆ ಅಧಿಪತಿಯಾಗಿದ್ದಾನೆ. ಪ್ರಬೋಧಾನಂದ **'ತ್ರೈತ ಸಿದ್ಧಾಂತ'** ಸ್ವಚ್ಛವಾದ ಜ್ಞಾನದಿಂದ ಕೂಡಿಕೊಂಡಿದೆ. ಆದ್ದರಿಂದ ತ್ರೈತ ಸಿದ್ಧಾಂತವನ್ನು ಸೋಮ ಸಿದ್ಧಾಂತವೆಂಬ ಹೆಸರಿನಿಂದ ಹೇಳಿದ್ದಾನೆ. 'ಸೋಮಸಿದ್ಧಾಂತ ಸೊಂಪಾಗಿ ನಡೆಯುತ್ತದೆ' ಎಂದಿದ್ದಾನೆ. ತ್ರೈತ ಸಿದ್ಧಾಂತ ಆತಂಕ ಇಲ್ಲದೆ ಪ್ರಜೆಗಳಲ್ಲಿ ಅತಿವೇಗವಾಗಿ ಹರಡುತ್ತಿರುವುದರಿಂದ 'ಸೊಂಪಾಗಿ ನಡೆಯುತ್ತಿದೆ' ಎಂದಿದ್ದಾರೆ. ತ್ರೈತ ಸಿದ್ಧಾಂತವನ್ನು ನೋಡಿದವರು ಅಸೂಯೆಯಿಂದ ಇದು ಇತರ ಮತವೆಂದು ನೆಪ ತೋರಿಸಿ ಕೆಲವು ಆತಂಕಗಳನ್ನು ಉಂಟುಮಾಡಿದರೂ ಅವೆಲ್ಲವೂ ಪುನಃ ಮಟಮಾಯವಾಗಿ ಹೋಗುತ್ತಿವೆ. ಆದುದರಿಂದ 'ಶುಭ ಅಶುಭಗಳಾದವಯ್ಯ' ಎಂದು ಹೇಳಿದ್ದಾರೆ.

ತ್ರೈತ ಸಿದ್ಧಾಂತವನ್ನು ಕುರಿತು ವೀರಬ್ರಹ್ಮೇಂದ್ರಸ್ವಾಮಿ ಅವರು ತನ್ನ ಗೋವಿಂದ ವಾಕ್ಯಗಳಲ್ಲಿ ಮೇಲಿನ ವಾಕ್ಯವನ್ನು ಬರೆದಿದ್ದಾನೆ. ಅಂಥದ್ದೇ

ಮತ್ತೊಂದು ವಾಕ್ಯ ಗೋವಿಂದ ವಾಕ್ಯಗಳಲ್ಲಿಯೇ ಬರೆಯುವುದು ನಡೆದಿದೆ. ಅಲ್ಲಿ ಬರೆದಿರುವುದನ್ನು ನೋಡಿದರೆ ಹೀಗೆ ಇದೆ. **"ಸಿದ್ಧಾಂತ ಶಿರೋಮಣಿ ಗುರುಸ್ವಾಮಿ. ಗುರುಸ್ವಾಮಿ ಸಿದ್ಧಾಂತವು ನಿತ್ಯ ಸತ್ಯವಾಯಿತಯ್ಯ'** ಈ ವಾಕ್ಯದಲ್ಲಿ 'ಸಿದ್ಧಾಂತ ಶಿರೋಮಣಿ' ಎನ್ನುವುದರಿಂದ ಇದಕ್ಕು ಮುನ್ನ ಬಂದಿರುವ ಸಿದ್ಧಾಂತಗಳಿಗೆಲ್ಲ 'ತ್ರೈತ ಸಿದ್ಧಾಂತ' ಶಿರೋಮಣಿಯಂತೆ ಇದೆಯೆಂದು ಹೇಳಬಹುದು. ಶಿರೋಮಣಿ ಎಂದರೇ 'ಶಿರಸ್ಸಿನಲ್ಲಿ ಧರಿಸುವ ದೊಡ್ಡ ಮಣಿ' ಎಂದು ಅರ್ಥ. ಹಾಗೆ ಹೇಳುವುದರಿಂದ ಎಲ್ಲದಕ್ಕಿಂತ ದೊಡ್ಡ ಸಿದ್ಧಾಂತವೆಂದು ಹೇಳಿದಂತಾಗಿದೆ. ತ್ರೈತ ಸಿದ್ಧಾಂತವಾದ ದೊಡ್ಡ ಸಿದ್ಧಾಂತವನ್ನು ತಿಳಿಸಿದ ವ್ಯಕ್ತಿ ಗುರುವಾಗಿರುತ್ತಾನೆಂದು 'ಶಿರೋಮಣಿ ಗುರುಸ್ವಾಮಿ' ಎಂದು ಹೇಳಿದ್ದಾರೆ. ತ್ರೈತ ಸಿದ್ಧಾಂತ ಉಳಿದ ಸಿದ್ಧಾಂತಗಳಿಗಿಂತ ಸತ್ಯವಾದುದಾದ್ದರಿಂದ, ಅನುಭವಕ್ಕೆ ಬರುವುದರಿಂದ 'ಗುರುಸ್ವಾಮಿ ಸಿದ್ಧಾಂತ ನಿತ್ಯ ಸತ್ಯವೆಂದಿದ್ದಾರೆ' ಈ ವಿಧವಾಗಿ ಯೋಗೀಶ್ವರರ ಸಿದ್ಧಾಂತವನ್ನು ಕುರಿತು ಎರಡು ವಾಕ್ಯಗಳು ಹೇಳಿದಂತೆ ತಿಳಿಯುತ್ತಿದೆ. ನಾಲ್ಕುನೂರು ವರ್ಷಗಳ ಹಿಂದೆ ಮೊದಲೇ ಹೇಳಿರುವುದರಿಂದ ತ್ರೈತ ಸಿದ್ಧಾಂತಕ್ಕೆ ಬಲ ಕೈಗೂಡಿದೆ.

**ಪ್ರಶ್ನೆ :– ಎಷ್ಟೋ ದೊಡ್ಡ ಹೆಸರಿರುವ ಆದಿಶಂಕರಾಚಾರ್ಯರು ಪ್ರತಿಪಾದಿಸಿದ ಅದ್ವೈತಕ್ಕಿಂತ, ರಾಮಾನುಜಾಚಾರ್ಯರು ಪ್ರತಿಪಾದಿಸಿದ ವಿಶಿಷ್ಟಾದ್ವೈತಕ್ಕಿಂತ, ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತವನ್ನು ಬಿಟ್ಟುಹಾಕಿ ಪೋತುಲೂರಿ ವೀರಬ್ರಹ್ಮೇಂದ್ರಸ್ವಾಮಿಯವರು ತ್ರೈತ ಸಿದ್ಧಾಂತವನ್ನೇ ಏಕೆ ದೊಡ್ಡದಾಗಿ ಹೇಳಿದ್ದಾನೆ?**

**ಉತ್ತರ :–** ಅಶೋಕ್ ಹೋಟಲ್‌ನಲ್ಲಿ ಅಗಲವಾಗಿ ಮಾಡಿದ ದೋಸೆಗಿಂತ, ದ್ವಾರಕ ಹೋಟಲ್‌ನಲ್ಲಿ ಮಾಡಿರುವ ಪೂರಿಗಿಂತ, ತಿರುಮಲ ಹೋಟಲ್‌ನಲ್ಲಿ ಮಾಡಿದ ಸಾಂಬಾರಿಗಿಂತ, ಬೇಕರಿಯಲ್ಲಿ ಮಾಡಿದ ಲಡ್ಡೂನೆ ಏಕೆ ಸಿಹಿಯಾಗಿದೆ? ಎಂದು ಕೇಳಿದಂತಿದೆ ನಿಮ್ಮ ಪ್ರಶ್ನೆ. ದೋಸೆ, ಪೂರಿ, ಸಾಂಬಾರು, ಲಡ್ಡುವಿನಲ್ಲಿ ಸಿಹಿಯಾಗಿರುವುದು ಯಾವುದು? ಎಂದರೇ 'ಲಡ್ಡು' ಎನ್ನುವಂತೆ, ಮೂರು ಸಿದ್ಧಾಂತಗಳಲ್ಲಿ ಯಾವುದು ದೊಡ್ಡದು? ಎಂದಾಗ ದೊಡ್ಡದು ಯಾವುದೋ

ಅದನ್ನೇ ಹೇಳಿದ್ದಾನೆ. ಎಲ್ಲವನ್ನು ಬಿಟ್ಟು ಅದನ್ನೇ ಏಕೆ ಹೇಳಿದ್ದಾನೊ ನೀವೇ ಆಳವಾಗಿ ನೋಡಿ ತಿಳಿದುಕೊಳ್ಳಬೇಕಾಗಿರುತ್ತದೆ. ನಮ್ಮ ಸಿದ್ಧಾಂತವನ್ನು ಕುರಿತು ನನ್ನನ್ನು ಕೇಳಿದರೆ ನಮ್ಮದೇ ದೊಡ್ಡದೆಂದು ನಾನು ಹೇಳಿದರೂ "ಅವರದು ಅವರು ದೊಡ್ಡದಾಗಿ ಹೇಳಿಕೊಳ್ಳುತ್ತಾರೆ" ಎಂದು ಅನ್ನುತ್ತಾರೆ. ಆದುದರಿಂದ ಈ ವಿಷಯದಲ್ಲಿ ಸಮಾಧಾನಕ್ಕಾಗಿ ನೀವೇ ಅನ್ವೇಷಿಸಬೇಕು. ಯಾವಾಗಲೋ ನಾಲ್ಕುನೂರು ವರ್ಷಗಳ ಹಿಂದೆ ಹೇಗೆ ಹೇಳಿದ್ದಾನೆಂಬ ಪ್ರಶ್ನೆ ಸಹ ಬರುತ್ತದೆ ಅಲ್ಲವೆ! ಬ್ರಹ್ಮಯ್ಯನವರು ಹೇಳಿದ ವಿಷಯಗಳೆಲ್ಲವೂ ಈ ಮಧ್ಯ ಕಾಲದಲ್ಲಿ ಅಂದರೇ 2004 ನೇ ವರ್ಷದಿಂದ ಆಗಾಗ ಒಂದೊಂದಾಗಿ ತಿಳಿಯುತ್ತಿವೆ. ಮೊದಲು ನಮಗೆ ಇತರರ ಮೂಲಕ ತಿಳಿದಿದೆ. **"ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದು"** ಎಂಬ ವಾಕ್ಯ ಮಾತ್ರ ತಿಳಿದಿದೆ. ಇತರರ ಮೂಲಕ ಅಂದರೇ ನೆಲ್ಲೂರು ಜಿಲ್ಲೆ, ಆತ್ಮಕೂರು ಮಂಡಲದಲ್ಲಿನ ಬಟ್ಟೇಪಾಡು ಎಂಬ ಗ್ರಾಮ ನಿವಾಸಿಯಾದ ವೀರನಾರಾಯಣ ರೆಡ್ಡಿಯವರ ಮೂಲಕ ತಿಳಿದಿವೆ.

ಮೊದಲು ಎರಡನೆ ವಾಕ್ಯದಲ್ಲಿ **"ಪ್ರಬೋಧಾಶ್ರಮದವರು ಶಯನಾಧಿಪತಿ ಗುಣಗಳು ಹೊಂದಿದ್ದಾರೆ"** ಎಂದು ತಿಳಿದಿದೆ. ನಂತರ ಸ್ವಲ್ಪ ಕಾಲಕ್ಕೆ ಏಷ್ಯಕಾಲಜ್ಞಾನವನ್ನು ತಂದುಕೊಂಡು ನೋಡಿದ್ದೇವೆ. ಅದರಲ್ಲಿ ನಮಗೆ ಸಂಬಂಧಿಸಿದವುಗಳನ್ನು ಬರೆದಿದ್ದೇವೆ. ಇನ್ನೂ ಪೂರ್ತಿಯಾಗಿ ನೋಡಿದರೆ ಇನ್ನೂ ಏನು ತಿಳಿಯುತ್ತವೋ ಹೇಳಲಾರೆವು. ಬ್ರಹ್ಮಯ್ಯನವರ ಏಷ್ಯಕಾಲ ಜ್ಞಾನದಲ್ಲಿ ಇಲ್ಲಿಯವರೆಗೂ ಸ್ವಲ್ಪ ಭಾಗವನ್ನು ಮಾತ್ರ ನೋಡಿದ್ದೇವೆ. ಜೀವನ ಚರಿತ್ರೆಯನ್ನು ಓದಿದ್ದೇವೆ. ಆತನು ಸಾಮಾನ್ಯವಾದ ಮನುಷ್ಯನಲ್ಲವೆಂದು ಕಾರಣಜನ್ಮನೆಂದು ಸ್ವಲ್ಪ ಅರ್ಥವಾಗಿದೆ. ಈದಿನ ಎಷ್ಟೋ ಜನ ಆತನು ದೊಡ್ಡ ಯೋಗಿ ಎಂದು ನಂಬಿಕೆಯಿಂದ ಆತನ ಸಮಾಧಿಯನ್ನು ದರ್ಶಿಸಿಕೊಳ್ಳುತ್ತಿದ್ದಾರೆ. ಅಷ್ಟು ದೊಡ್ಡ ವ್ಯಕ್ತಿ ನಮ್ಮನ್ನು ಕುರಿತು(ನನ್ನನ್ನು ಕುರಿತು ಅಲ್ಲ ಶರೀರದೊಳಗಿರುವ ಪ್ರಬೋಧಾನಂದ ಯೋಗೀಶ್ವರರನ್ನು ಕುರಿತು) ಹೇಳುವುದು ಆಶ್ಚರ್ಯವಾಗಿದೆ. ನಾವು ಆತನ ಜೀವನ ಚರಿತ್ರೆಯನ್ನು ಓದಿದ ನಂತರ ಆತನು ಬರೆದ ತತ್ತ್ವಗಳನ್ನು

ನೋಡುವುದಾಗಿದೆ. ಆತನ ತತ್ತ್ವಗಳಿದ್ದರೂ, ಅವುಗಳಿಗೆ ಅರ್ಥ ಹೇಳುವವರು ಯಾರೂ ಇಲ್ಲವೆಂದು ತಿಳಿದು ಬ್ರಹ್ಮಯ್ಯನವರು ಬರೆದ ತತ್ತ್ವಗಳಿಗೆ ನಾವು ವಿವರವನ್ನು ಬರೆಯುವುದಾಗಿದೆ. ನಾವು ಬರೆದ ವಿವರದಿಂದ ಆತನ ತತ್ತ್ವಗಳ ರೂಪದಲ್ಲಿ ಹೇಳಿದ ರಹಸ್ಯ ಜ್ಞಾನ ಹೊರಗಿನ ಪ್ರಪಂಚಕ್ಕೆ ತಿಳಿದುಹೋಗಿದೆ. ವೀರಬ್ರಹ್ಮೇಂದ್ರಸ್ವಾಮಿಯವರು ತನ್ನ ಕಾಲಜ್ಞಾನದಲ್ಲಿ ಯೋಗೀಶ್ವರರನ್ನು ಕುರಿತು ಬರೆದಿರುವುದಕ್ಕೆ ನಾವು ಆತನ ತತ್ತ್ವಗಳಿಗೆ ವಿವರವನ್ನು ಬರೆದು ಆತನ ಋಣವನ್ನು ತೀರಿಸಿಕೊಂಡಿದ್ದೇವೆ.

ಪೋತುಲೂರಿ ವೀರಬ್ರಹ್ಮೇಂದ್ರಸ್ವಾಮಿಗಳ ವಿಷಯ ನನಗೆ ಏನು ತಿಳಿಯದ ದಿನಗಳಲ್ಲಿ ಅಂದರೇ 1980ನೇ ವರ್ಷ ನಾವು ಬ್ರಹ್ಮಯ್ಯನವರ ಸಮಾಧಿ ಇರುವ ಕಂದಿಮಲ್ಲಯ್ಯ ಹಳ್ಳಿಗೆ ಹೋಗುವುದು ನಡೆದಿದೆ. ನಾವು ಅಲ್ಲಿಗೆ ಹೋಗಬೇಕೆಂಬ ಉದ್ದೇಶದಿಂದ ಹೋಗಲಿಲ್ಲ. ಇತರರು ಹೋಗುತ್ತಾ ಅವರು ನಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವುದು ನಡೆದಿದೆ. ಅಲ್ಲಿಗೆ ಹೋದ ನಂತರ ಅವರು ನಮ್ಮನ್ನು ಬ್ರಹ್ಮಯ್ಯನವರ ಸಮಾಧಿ ಹತ್ತಿರಕ್ಕೆ ಕರೆದುಕೊಂಡು ಹೋಗುವುದು ನಡೆದಿದೆ. ಆಗ ಯಾರಿಗೂ ತಿಳಿಯದ, ಯಾರಿಗೂ ಕಾಣಿಸದ ಸಂಘಟನೆ ನಡೆದಿದೆ. ಸುಮಾರು ಮೂನ್ನೂರು ವರ್ಷಗಳಿಂದ ಸಜೀವವಾಗಿ ಸಮಾಧಿಯಲ್ಲಿರುವ ವೀರಬ್ರಹ್ಮಯ್ಯನವರು ನಾವು ಸಮಾಧಿಯನ್ನು ದರ್ಶಿಸಿಕೊಂಡ ಸಮಯದಲ್ಲಿ ಸಮಾಧಿಯಲ್ಲಿನ ಆತನು ಶರೀರದಿಂದ ಹೊರಗೆ ಬರುವುದು ನಡೆದಿದೆ. ಅಷ್ಟುಕಾಲ 'ನಮ್ಮ ಬರುವಿಕೆಗಾಗಿ' ಕಾದುಕೊಂಡಂತೆ ಆತನ ಶರೀರವನ್ನು ಬಿಟ್ಟು ಹೊರಗೆ ಬರುವುದು ನನಗೆ ತಿಳಿಯದಿದ್ದರೂ ಯೋಗೀಶ್ವರರಿಗೆ ಚೆನ್ನಾಗಿ ತಿಳಿದಿದೆ. ಆಗ ಏನು ನಡೆದಿರುವುದು ಯೋಗೀಶ್ವರರಿಗೆ ಮಾತ್ರ ತಿಳಿದಿದೆ. ಆ ಸಮಯದಲ್ಲಿ ಏನು ನಡೆದಿರುವುದು ಇತರರಿಗೆ ಯಾರಿಗೂ ಏನೂ ತಿಳಿದಿಲ್ಲ. ಯೋಗೀಶ್ವರರು ಸಹ ಯಾರಿಗೂ ಏನೂ ಹೇಳಲಿಲ್ಲ. ನಂತರ ಸುಮಾರು ಹತ್ತು ವರ್ಷಗಳು ಕಳೆದ ನಂತರ ಬಹುಶಃ 1990ನೇ ವರ್ಷ ಬ್ರಹ್ಮಯ್ಯನವರು ಸಮಾಧಿಯಲ್ಲಿ ಇಲ್ಲವೆಂದು ಒಂದು ಸಂದರ್ಭದಲ್ಲಿ

ಹೇಳುವುದಾಗಿದೆ. ನಂತರ 'ಆನಂದಾಶ್ರಮಕ್ಕೆ ಬರುತ್ತೇನೆ' ಎಂದು ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಬರೆದುಕೊಂಡಂತೆ ನೋಡಿದ್ದೇವೆ.

ಎಷ್ಟೋ ದೊಡ್ಡ ಜೀವನ ಚರಿತ್ರೆ ಇರುವ ಬ್ರಹ್ಮಯ್ಯನವರು ಯೋಗೀಶ್ವರರನ್ನು ಕುರಿತು ನಾಲ್ಕುನೂರು (400) ವರ್ಷಗಳ ಕೆಳಗೇ ಬರೆಯುವುದು ಎಷ್ಟು ದೊಡ್ಡ ಆಶ್ಚರ್ಯವಾದ ಕೆಲಸ, ಅದ್ಭುತವಾದ ಕೆಲಸವೆಂದು ಹೇಳಬಹುದು. ಆತನು ಹೇಳಿದ ವಾಕ್ಯಗಳನ್ನು ದೊಡ್ಡದಾಗಿ ಗ್ರಹಿಸಿಕೊಂಡವರು ಇದ್ದಾರೆ. ಕೆಲವರು ಜೀರ್ಣಿಸಿಕೊಳ್ಳದವರು ಇದ್ದಾರೆ. ಕೆಲವರು ಬ್ರಾಹ್ಮಣರು ಅವರಲ್ಲಿ ಯಾವ ಘನತೆ ಇಲ್ಲದಿದ್ದರೂ ಒಂದುಕಡೆ ವೀರಬ್ರಹ್ಮಯ್ಯನವರನ್ನು, ಮತ್ತೊಂದುಕಡೆ ವೇಮನ ಯೋಗಿಯವರನ್ನು ವಿಮರ್ಶಿಸುತ್ತಿರುತ್ತಾರೆ. ಹಾಗೆ ವಿಮರ್ಶಿಸುವುದಕ್ಕೆ ಒಂದೇ ಒಂದು ಕಾರಣ ಇದೆ. ಯಾವ ಕಾರಣದಿಂದ ಬುದ್ಧನು ಕ್ಷತ್ರಿಯನೆಂದು ಆತನು ಹೇಳಿದ ಬೋಧನೆಯನ್ನು ಪರಮತವೆಂದು ಹೇಳಿದ್ದಾರೋ, ಯಾವ ಕಾರಣದಿಂದ ಜೈನನು ಬ್ರಾಹ್ಮಣನು ಅಲ್ಲವೆಂದು ಆತನದು ಜೈನಮತವೆಂದು ಹಿಂದೂಗಳಿಂದ ಬೇರ್ಪಡಿಸಿದ್ದಾರೋ, ಯಾವ ಕಾರಣದಿಂದ ಸಿಕ್ಕರನ್ನು ಇತರ ಮತವಾಗಿ ಹಿಂದೂಮತದಿಂದ ಬೇರೆ ಮಾಡಿದ್ದಾರೋ, ಆ ಕಾರಣದಿಂದಲೇ ಕುಲ ವ್ಯತ್ಯಾಸದಿಂದ ವೇಮನಯೋಗಿಯನ್ನು ಹುಚ್ಚನೆಂದು, ಬ್ರಹ್ಮಯ್ಯನವರನ್ನು ಮೆಟ್ಟ (ಬರಡು) ವೇದಾಂತಿ ಎಂದು ಹೇಳನೆ ಮಾಡಿದ್ದಾರೆ. ಅದೇ ಕಾರಣದಿಂದಲೇ ಈದಿನ ಪ್ರಬೋಧಾನಂದ ಯೋಗೀಶ್ವರರು 'ಚೌದರಿ' ಕುಲದಲ್ಲಿ ಹುಟ್ಟಿರುವುದಕ್ಕೆ ಅಡಗಿಸಬೇಕೆಂದು ನೋಡುತ್ತಿದ್ದಾರೆ. ಆರ್ಯ ಭಾವನೆಗಳು ತುಂಬಿರುವ ಅವರು ಈದಿನ ಅಲ್ಲಲ್ಲಿದ್ದರೂ ಅವರ ಬುದ್ಧಿವಂತಿಕೆಯನ್ನು ಉಪಯೋಗಿಸಿ ಇತರ ಕುಲದವರಿಗೆ 'ಮತ' ಎಂಬ ಮತ್ತು ಔಷಧಿಯನ್ನು ಕೊಟ್ಟು, ಆ ಮತ್ತು ತಲೆಗೇರಿದ ನಂತರ, ಏನು ಯೋಚಿಸದವರನ್ನು ಯೋಗೀಶ್ವರರನ್ನು ವಿಮರ್ಶಿಸುವಂತೆ ಮಾಡಿ ಯೋಗೀಶ್ವರರ ಸಿದ್ಧಾಂತ, ಬೋಧನೆಗಳು ಪರಮತವಾದ ಕ್ರೈಸ್ತಮತಕ್ಕೆ ಸಂಬಂಧಿಸಿರುವವೆಂದು ನಂಬಿಸುತ್ತಿದ್ದಾರೆ. ಹಿಂದೂಮತದಲ್ಲಿರುವ ಕೆಲವರು

ಕುರಿಗಳಂಥವರು ನಾವು ಯಾರನ್ನು ವಿಮರ್ಶಿಸುತ್ತಿದ್ದೇವೆ? ಯಾರನ್ನು ದೂಷಿಸುತ್ತಿದ್ದೇವೆ? ಯಾರನ್ನು ಪರಮತವೆನ್ನುತ್ತಿದ್ದೇವೆಂಬ ಧ್ಯಾಸ ಇಲ್ಲದಂತೆ ಹಿಂದೂಗಳಾದ ನಮ್ಮನ್ನು ದೂಷಿಸುತ್ತಿದ್ದಾರೆ. ಕೆಲವುಕಡೆ ನಮ್ಮ ಭಕ್ತರಮೇಲೆ, ತ್ರೈತ ಸಿದ್ಧಾಂತ ಪ್ರಚಾರಕರ ಮೇಲೆ ದಾಳಿಗಳು ಸಹ ನಡೆಯುತ್ತಿವೆ. ಹಿಂದಿನಿಂದ ವ್ಯೂಹಗಳನ್ನು ರೂಪಿಸುವವರಿರುವಾಗ, ಅವರ ಕೆಳಗೆ ಕುರಿಗಳಾದವರು ಯೋಚಿಸದೆ ಮಾತನಾಡುವುದು ನಡೆಯುತ್ತಿದೆ. ಪ್ರಬೋಧಾನಂದ ಯೋಗೀಶ್ವರರನ್ನು ಯಾರು ಏನು ಮಾತನಾಡಿದರೂ ಆತನಿಗೆ ಏನೂ ನಷ್ಟ ಇರುವುದಿಲ್ಲ. ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೇಳಿದಂತೆ ಅವರೇ ನಾಶವಾಗಿಹೋಗುತ್ತಾರೆ, ಅವರಿಗೆ ಕಷ್ಟ, ನಷ್ಟ ಎಲ್ಲವೂ ನಡೆಯುತ್ತವೆ. ಯೋಗೀಶ್ವರರ ಹತ್ತಿರ ಅಂದರೇ 'ಆನಂದಾಶ್ರಮದ ಹತ್ತಿರ ಮಹಾ ದೇವತೆಗಳೆಲ್ಲರೂ ಇದ್ದಾರೆಂದು' ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೇಳಿರುವುದಲ್ಲದೆ. ಪ್ರಬೋಧಾನಂದ ಯೋಗೀಶ್ವರರು ಸ್ವತಃವಾಗಿ ಬರೆದ **ಶ್ರೀಕೃಷ್ಣನು ದೇವರಾ। ಭಗವಂತನಾ!!"** ಎಂಬ ಗ್ರಂಥದಲ್ಲಿ ಯೋಗೀಶ್ವರರಿರುವ ಕೃಷ್ಣಮಂದಿರದ ಹತ್ತಿರಕ್ಕೆ ಸರ್ವದೇವತೆಗಳು ಬಂದು ಹೋಗುತ್ತಿದ್ದಾರೆಂದು ಬರೆದಿದ್ದಾರೆ. ಒಂದುಕಡೆ ಬ್ರಹ್ಮಯ್ಯನವರು ಮಹಾದೇವತೆಗಳು ಸಹಿತ ಪ್ರಬೋಧಾನಂದಾಶ್ರಮದ ಹತ್ತಿರ ಇದ್ದಾರೆಂದು ಹೇಳಿದರೂ, ಯೋಗೀಶ್ವರರೇ ಸ್ವತಃವಾಗಿ ತನ್ನ ಗ್ರಂಥಗಳಲ್ಲಿ ಸರ್ವ ದೇವತೆಗಳೆಲ್ಲರೂ ಇಲ್ಲಿಗೆ ಬಂದು ಹೋಗುತ್ತಿದ್ದಾರೆಂದು ಹೇಳಿದರೂ, ಗ್ರಹಿಸದ ಮೂರ್ಖ ಪ್ರಜೆಗಳು ಅನವಶ್ಯವಾಗಿ ಲೋಕದಲ್ಲಿ ತಮ್ಮ ಹೆಸರಿಗಾಗಿ ಯೋಗೀಶ್ವರರಿಗೆ ವಿರುದ್ಧವಾಗಿ ಮಾತನಾಡಿದರೆ, ಯೋಗೀಶ್ವರರ ಅಭಿಮಾನಿಗಳಾದ ದೇವತೆಗಳು ಸುಮ್ಮನಿರುತ್ತಾರಾ? ಸಮಯ ನೋಡಿ ಅವರನ್ನು ಅಪಘಾತಕ್ಕೆ ಗುರಿ ಮಾಡುತ್ತಾರೆ. ಹಾಗೆ ಎಷ್ಟೋ ಜನ ತೊಂದರೆಗೀಡಾದವರಿದ್ದಾರೆ. ಪೂರ್ತಿಯಾಗಿ ಮರಣಿಸಿದವರೂ ಇದ್ದಾರೆ.

**ಪ್ರಶ್ನೆ :– ಹೊರಗೆ ಪ್ರಜೆಗಳು ಯೋಗೀಶ್ವರರನ್ನು ಕುರಿತು ಅನವಶ್ಯವಾಗಿ ಅಸೂಯೆಯಿಂದ ಮಾತನಾಡುವ ಮಾತುಗಳನ್ನು ಕೇಳಿದ್ದೇವೆ. ನಂತರ ಸ್ವಲ್ಪ**

**ಕಾಲಕ್ಕೆ ಅವರು ಘೋರವಾದ ರೋಗಗಳಿಂದ, ಘೋರವಾದ ದುರ್ಘಟನೆಗಳಲ್ಲಿ ಭಯಂಕರವಾದ ರಸ್ತೆ ಅಪಘಾತಗಳಲ್ಲಿ ಮರಣಿಸುವುದು ನಡೆದಿದೆ. ಆಗ ನಮಗೆ ಅರ್ಥವಾಗದಿದ್ದರೂ ಈಗ ನೀವು ಹೇಳಿರುವುದನ್ನು ಅನುಸರಿಸಿ ಸ್ವಲ್ಪಕ್ಕೆ ಸ್ವಲ್ಪ ಅರ್ಥವಾಗುತ್ತಿದೆ. ನಾವು ಹಾಗೆ ಆಪತ್ತುಗಳಲ್ಲಿ ಸಿಲುಕಿಕೊಂಡು ಬಾಧೆಪಡುತ್ತಿರುವ ವರನ್ನು ನೋಡಿದ್ದೇವೆ. ಮರಣಿಸಿದವರನ್ನು ನೋಡಿದ್ದೇವೆ. ಆದರೆ ನೂರಕ್ಕೆ ಒಬ್ಬರು ಅಥವಾ ಇಬ್ಬರು ಅಪಘಾತಗಳಲ್ಲಿ ಸಿಲುಕಿಕೊಳ್ಳದಂತೆ ಹಾಗೆ ಇರುವವರಿದ್ದಾರೆ. ಬಹಳಜನರಿಗೆ ಅನರ್ಥಗಳು ನಡೆದು ಕಷ್ಟಗಳಪಾಲಾಗಿ ಹೋದವರಿರುವಾಗ ಎಲ್ಲಿಯಾದರೂ ಅಪರೂಪವಾಗಿ ಏನು ನಡೆಯದವರಿದ್ದಾರೆ. ಅವರಿಗೆ ಏಕೆ ಶಿಕ್ಷೆ ಬೀಳಲಿಲ್ಲವೆಂದು ನಮಗೆ ಸಂಶಯವಿದೆ? ಅದಕ್ಕೆ ನೀವೇನನ್ನುತ್ತೀರಾ.**

**ಉತ್ತರ:–** ನಿನ್ನ ಸ್ನೇಹಿತರ ಮುಂದೆ ನಿನ್ನನ್ನು ಯಾರಾದರೂ ದೂಷಿಸಿದ್ದಾರೆಂದು ಕೊಳ್ಳಿ, ಆಗ ನಿನ್ನ ಸ್ನೇಹಿತರು ಸುಮ್ಮನಿರುವುದಿಲ್ಲ ಅಲ್ಲವೆ! ಅನುಕೂಲವಿದ್ದರೆ ಆಗಲೇ ದೂಷಿಸಿದವನನ್ನು ದಂಡಿಸಿಯಾದರೂ ದಂಡಿಸುತ್ತಾರೆ. ಅನುಕೂಲ ಇಲ್ಲದಿದ್ದರೆ ನಂತರ ಅನುಕೂಲವಾದಾಗ ಅವನನ್ನು ದಂಡಿಸುವುದೋ, ಒದೆಯುವುದೊ, ಸಾಯಿಸುವುದೊ ನಡೆಯುತ್ತದೆ ಅಲ್ಲವೆ! ಒಂದುವೇಳೆ ನಿನ್ನನ್ನು ಇತರರು ದೂಷಿಸಿದಾಗ ಅಲ್ಲಿ ನಿನ್ನ ಸ್ನೇಹಿತರಾಗಲಿ, ಸಂಬಂಧಿಕರಾಗಲಿ ಇಲ್ಲದಿರುವಾಗ ಅವನು ದೂಷಿಸಿದಂತೆ ತಿಳಿಯದಿರುವುದರಿಂದ ಏನು ಅನ್ನದಂತೆ ಬಿಟ್ಟುಬಿಡುತ್ತಾರೆ. ಅದೇ ವಿಧವಾಗಿ ಪ್ರಬೋಧಾನಂದ ಯೋಗೀಶ್ವರರನ್ನು ದೂಷಿಸಿದ ಸಮಯದಲ್ಲಿ ಅಲ್ಲಿ ಆ ಸಮಯಕ್ಕೆ ಯಾರಾದರೂ ಕಾಣಿಸದ ದೇವತೆಗಳಾಗಲಿ, ಗ್ರಹಗಳಾಗಲಿ ಇದ್ದಿದ್ದರೆ ದೂಷಿಸಿದವನನ್ನು ನೆನಪಿಟ್ಟುಕೊಂಡು ಕೆಲವು ದಿನಗಳಿಗಾಗಲಿ, ಕೆಲವು ತಿಂಗಳಿಗಾಗಲಿ ಅವನನ್ನು ರೋಗರೂಪದಲ್ಲಿ ಕೆಲವರು ಪೀಡಿಸುತ್ತಾರೆ. ಕೆಲವರಾದರೆ ರಸ್ತೆ ಅಪಘಾತಗಳನ್ನು ಮಾಡಿ ಸಾಯಿಸುತ್ತಾರೆ ಅಥವಾ ಸಾವು ಬದುಕುಗಳ ಸಮಸ್ಯೆಗಳಲ್ಲಿ ಸಿಲುಕಿಕೊಳ್ಳುವಂತೆ ಮಾಡುತ್ತಾರೆ. ಕೆಲವರಿಗೆ ಅವಯವ ಲೋಪ ಉಂಟುಮಾಡಿ ಜೀವನಪರ್ಯಂತ ದುಃಖಪಡುವಂತೆ ಮಾಡುತ್ತಾರೆ. ಒಂದುವೇಳೆ ಇತರರು ಯೋಗೀಶ್ವರರನ್ನು

ದೂಷಿಸಿದಾಗ ಆ ಸಮಯದಲ್ಲಿ ಅಲ್ಲಿ ಕಾಣಿಸದವರು ಯಾರೂ ಇಲ್ಲದಂತಾದರೆ, ದೂಷಿಸಿದ ವಿಷಯ ಯಾರಿಗೂ ತಿಳಿದಿಲ್ಲವಾದ್ದರಿಂದ ಅವನನ್ನು ಯಾರೂ ಏನೂ ಅನ್ನುವುದಿಲ್ಲ. ಹಾಗೆ ಮರೆಯಲ್ಲಿ ದೂಷಿಸಿದರೂ ಏನೂ ಆಗದವರು ಅಪರೂಪವಾಗಿರುತ್ತಾರೆ. ನಮಗೆ ತಿಳಿದಮಟ್ಟಿಗೆ ಅನವಶ್ಯವಾಗಿ ಮಾತನಾಡಿ ಜೀವನಪರ್ಯಂತ ಬಾಧೆಪಡುವವರು ಕೆಲವರಿರುವಾಗ, ಕೆಲವರು ಪೂರ್ತಿ ಮರಣಿಸಿದ್ದಾರೆ. ಅವರು ಆಪತ್ತುಗಳನ್ನು ಹೊಂದಿದರೂ ತಮ್ಮ ತಪ್ಪಿನಿಂದಲೇ ಹಾಗೆ ನಡೆದಿದೆಯೆಂದು ಸಹ ಅವರಿಗೆ ತಿಳಿದಿಲ್ಲ. ಏನೊ ಸಹಜವಾಗಿ ಕರ್ಮದ ಪ್ರಕಾರ ನಡೆದಿದೆಯೆಂದೇ ಅಂದುಕೊಳ್ಳುತ್ತಾರೆ ಆದರೆ, ಇದರ ಕಾರಣದಿಂದಲೇ ನಡೆದಿದೆಯೆಂದು ಅವರಿಗೆ ತಿಳಿಯುವುದಿಲ್ಲ.

ಒಂದೊಂದುಸಲ ಯೋಗೀಶ್ವರರನ್ನು ದೂಷಿಸಿದವರು ರೋಗಗಳಿಗೆ ಗುರಿಯಾಗಿ, ರೋಗಗಳಿಂದ ಬಾಧೆಪಡುತ್ತಾ ಯೋಗೀಶ್ವರರೊಂದರ ಹಿರಿಮೆಯನ್ನು ತಿಳಿದವರಾಗಿ ತಮ್ಮ ರೋಗಗಳನ್ನು ನಿವಾರಿಸಿಕೊಳ್ಳುವುದಕ್ಕೆ ಯೋಗೀಶ್ವರರ ಹತ್ತಿರಕ್ಕೇ ಬಂದವರು ಇದ್ದಾರೆ. ಹಾಗೆ ಬಂದವರು ರೋಗಗಳಿಂದ ಹಿಂಸಿಸಲ್ಪಡುತ್ತಿದ್ದಾರೆಂದು ತಿಳಿದ ಪ್ರಬೋಧಾನಂದ ಯೋಗೀಶ್ವರರು ಅವರನ್ನು ಹಿಂಸಿಸುವ ರೋಗಗಳಿಗೆ ಸಮಾಧಾನ ಹೇಳಿ ಅವರು ಜ್ಞಾನಮಾರ್ಗದೊಳಗೆ ಬಂದರೆ ಅವರನ್ನು ಬಿಟ್ಟುಹೋಗೆಂದು, ರೋಗಗಳಿಗೆ ಹೇಳಿದ ಸಂದರ್ಭಗಳು ಸಹ ಇವೆ. ಆಗ ಯೋಗೀಶ್ವರರು ಹೇಳಿದ ಮಾತನ್ನು ಗೌರವಿಸಿ ಆ ರೋಗಗಳು ಅವರನ್ನು ಬಿಟ್ಟು ಹೋದ ಸಂದರ್ಭಗಳು ಸಹ ಇವೆ. ಈ ವಿಧವಾಗಿ ಯೋಗೀಶ್ವರರು ತನಗೆ ವಿರುದ್ಧವಾಗಿ ಮಾತನಾಡಿದವರನ್ನು ಸಹ ಕ್ಷಮಿಸಿ, ಗ್ರಹಗಳಿಗೂ ದೇವತೆಗಳಿಗೂ ಬುದ್ಧಿಮಾತು ಹೇಳಿ ಕಳಿಸಿದ ಸಂದರ್ಭಗಳು ಸಹ ಇವೆ.

**ಪ್ರಶ್ನೆ :– ಪ್ರಬೋಧಾನಂದ ಯೋಗೀಶ್ವರರಿಗೆ ವಿರುದ್ಧವಾಗಿ ಮಾತನಾಡಿದರೆ ಅನವಶ್ಯ ಕಷ್ಟಗಳನ್ನು ತಂದುಕೊಂಡವರಿರುವಂತೆ, ಆತನ ಜ್ಞಾನವನ್ನು ತಿಳಿದು ಆತನ ತ್ರೈತ ಸಿದ್ಧಾಂತವನ್ನು ಅನುಸರಿಸಿದವರಿಗೆ ಎಷ್ಟೋ ಒಳ್ಳೆಯದು ನಡೆದಿರುವ ಸಂಘಟನೆಗಳು**

**ಸಹ ಇವೆಯೆಂದು ಕೇಳಿದ್ದೇವೆ. ವಿರುದ್ಧವಾಗಿ ಮಾತನಾಡಿದರೆ ಎಷ್ಟು ಕಷ್ಟ ಬರುತ್ತದೋ ಅನುಕೂಲವಾಗಿ ಮಾತನಾಡಿದವರಿಗೆ ಕರ್ಮಗಳು ಸುಟ್ಟುಹೋಗಿ ಅಷ್ಟೇ ಒಳ್ಳೆಯದು ನಡೆಯುತ್ತದೆಯೆಂದು ಕೆಲವರು ಹೇಳಿದಾಗ ಕೇಳಿದ್ದೇನೆ. ಅದು ನಿಜವೇನಾ ಎಂದು ಕೇಳುತ್ತಿದ್ದೇನೆ?**

**ಉತ್ತರ:–** ಇಲ್ಲಿ ನಿಜವಾ? ಸುಳ್ಳಾ? ಎಂದು ಕೇಳಿದಷ್ಟುಮಾತ್ರಕ್ಕೆ ಏನು ಪ್ರಯೋಜನೆ ಇಲ್ಲ. ಚೆನ್ನಾಗಿ ಆಲೋಚಿಸಿದವನಿಗೆ, ಸತ್ಯವನ್ನು ತಿಳಿದುಕೊಂಡವನಿಗೆ ಪ್ರಯೋಜನೆ ಇರುತ್ತದೆ. ಪ್ರಬೋಧಾನಂದ ಯೋಗೀಶ್ವರರ ತ್ರೈತ ಸಿದ್ಧಾಂತ ಬೋಧನೆಯಲ್ಲಿ ಮುಖ್ಯವಾಗಿ ಶರೀರಾಂತರ್ಗತ ಜ್ಞಾನವೇ ಇರುತ್ತದೆ. ಶರೀರಾಂತರ್ಗತದಲ್ಲಿ **ಜೀವಾತ್ಮ, ಆತ್ಮ, ಪರಮಾತ್ಮ** ಎಂಬ ಮೂರು ಆತ್ಮಗಳು ಹೇಗಿರುವುದು ಹೇಳಲಾಗುತ್ತದೆ. ಮೂರು ಆತ್ಮಗಳಲ್ಲಿ **ಮಧ್ಯಾತ್ಮ** ವೊಂದರ ವಿಷಯವನ್ನೇ ಹೆಚ್ಚಾಗಿ ತಿಳಿಯಲ್ಪಡುತ್ತದೆ. ಮಧ್ಯದಲ್ಲಿರುವ ಆತ್ಮವನ್ನು ಜೀವಿಯು ಮೊದಲು ತಿಳಿಯಬೇಕಾಗಿರುತ್ತದೆ. ಆದುದರಿಂದ ಮಧ್ಯಾತ್ಮ ಜ್ಞಾನವನ್ನು ಪೂರ್ತಿಯಾಗಿ ತಿಳಿಯಬೇಕಾಗಿರುತ್ತದೆ. ಮಧ್ಯಾತ್ಮ ಶರೀರಕ್ಕೆ ಅಧಿಪತಿಯಾಗಿದ್ದೂ, ಶರೀರದಲ್ಲಿನ ದೇವರಾಗಿ ಕರೆಯಲ್ಪಡುತ್ತಿದೆ. ಮೂರನೆ ಆತ್ಮವಾದ ಪರಮಾತ್ಮ ಶರೀರದ ಹೊರಗಡೆ ದೇವರಾಗಿ ಹೇಳಲಾಗುತ್ತಿದೆ. ಶರೀರದಲ್ಲಿನ ಆತ್ಮ ಶರೀರಕ್ಕೆ ಅಧಿಪತಿಯಾಗಿದ್ದು, ಶರೀರವನ್ನು ಪೂರ್ತಿಯಾಗಿ ವ್ಯಾಪಿಸಿ ನಡೆಸುತ್ತಾ, ಶರೀರದಲ್ಲಿನ ಜೀವಿಯನ್ನು ಕಷ್ಟಸುಖಗಳನ್ನು ಅನುಭವಿಸುವಂತೆ ಮಾಡುತ್ತಿದೆ. ಶರೀರವನ್ನು ಆತ್ಮ ಪಾಲಿಸುವುದಕ್ಕೆ ಶರೀರವನ್ನು ಎರಡು ಭಾಗಗಳಾಗಿ ವಿಭಜಿಸಿಕೊಂಡು ಆತ್ಮ ಪಾಲನೆ ಸಾಗಿಸುತ್ತಿದೆ. ಶರೀರದಲ್ಲಿ ಶಕ್ತಿ ಒಂದು ಭಾಗವಾಗಿ, ಆರೋಗ್ಯ ಒಂದು ಭಾಗವಾಗಿ ವಿಭಜಿಸಲ್ಪಟ್ಟು ಶರೀರ ಶಕ್ತಿ, ಶರೀರ ಆರೋಗ್ಯ ಎಂಬ ಎರಡು ವಿಭಾಗಗಳ ಮೇಲೆ ಆತ್ಮ ಕೆಲಸ ಮಾಡುತ್ತಾ ತನ್ನ ಜೊತೆಗಿರುವ ಜೀವಿಯನ್ನು ಕರ್ಮಗಳನ್ನು ಅನುಭವಿಸುವಂತೆ ಮಾಡುತ್ತಿದೆ.

ಮನುಷ್ಯರಲ್ಲಿ ಆರೋಗ್ಯ ಚೆನ್ನಾಗಿದ್ದು ಶಕ್ತಿ ಕಡಿಮೆ ಇರುವವರು ಕೆಲವರಿರುವಾಗ, ಶಕ್ತಿಯಿದ್ದು ಆರೋಗ್ಯ ಸರಿಯಾಗಿಲ್ಲದವರು ಕೆಲವರಿದ್ದಾರೆ.

ಕೆಲವರಲ್ಲಿ ಆರೋಗ್ಯ ಚೆನ್ನಾಗಿದೆ, ಶಕ್ತಿ ಚೆನ್ನಾಗಿದೆ. ಇನ್ನೂ ಕೆಲವರಲ್ಲಿ ಆರೋಗ್ಯ ಸರಿಯಾಗಿರುವುದಿಲ್ಲ. ಶಕ್ತಿ ಸರಿಯಾಗಿರುವುದಿಲ್ಲ. ಶಕ್ತಿ ಎಂದರೇ ಶರೀರ ಬಲವೆಂದು ತಿಳಿಯಬೇಕು. ಹೀಗೆ ಆರೋಗ್ಯ, ಅನಾರೋಗ್ಯಗಳ ಮಧ್ಯ ಬಲ, ಅಬಲಗಳ ಮಧ್ಯ ಮನುಷ್ಯ ಶರೀರದಲ್ಲಿನ ಕರ್ಮಗಳನ್ನು ಅನುಭವಿಸುತ್ತಿರುತ್ತಾನೆ. ಇದೆಲ್ಲವೂ ಶರೀರ ಸಂಬಂಧವಾದ ಸುಖದುಃಖಗಳಾದರೆ ಮಾನಸಿಕ ಸುಖ ದುಃಖಗಳು ಮತ್ತೊಂದು ವಿಧ ಇವೆ. ಮಾನಸಿಕವಾಗಿ ಉಂಟಾಗುವ ಸುಖದುಃಖಗಳು ಸಹ ಎರಡು ವಿಧಗಳು ಇವೆ. ಒಂದು ತನ್ನನ್ನು ಕುರಿತು, ಎರಡನೆಯದು ಇತರರನ್ನು ಕುರಿತು. ಎರಡು ವಿಧಗಳ ಮನೋಬಾಧೆಗಳಾಗಲಿ, ಮನೋಸುಖಗಳಾಗಲಿ ಇರುತ್ತವೆ. ಜ್ಞಾನ ಉಂಟಾದಾಗ ಮಾನಸಿಕ ಬಾಧೆಗಳಾಗಲಿ, ಸುಖಗಳಾಗಲಿ ಇಲ್ಲದಂತೆ ಹೋಗುತ್ತವೆ. ಆದುದರಿಂದ ಅವು ತಾತ್ಕಾಲಿಕವಾದವುಗಳೇ ಎಂದು ಹೇಳಬಹುದು. ಜ್ಞಾನ ಹೊಂದಿದರೂ ಹೊಂದದೆಹೋದರೂ ಆತ್ಮ ಶರೀರದಲ್ಲಿನ ನಾಡಿಗಳಲ್ಲಿರುವ ಶಕ್ತಿಯಿಂದಲೂ, ಗ್ರಂಥಿಗಳಲ್ಲಿರುವ ಆರೋಗ್ಯ ಅನಾರೋಗ್ಯಗಳಿಂದಲೂ ಶರೀರವನ್ನು ಪಾಲಿಸುತ್ತಿರುತ್ತಾನೆ. ಶರೀರದಲ್ಲಿರುವ ಜೀವಿಯನ್ನು ಕರ್ಮ ಅನುಭವಿಸುವಂತೆ ಮಾಡುವುದಕ್ಕೆ, ಕೊನೆಗೆ ಶರೀರ ಬಲವೆಲ್ಲವನ್ನು ಇಲ್ಲದಂತೆ ಮಾಡಿ, ಮನುಷ್ಯನನ್ನು ಮರಣದವರೆಗು ತೆಗೆದುಕೊಂಡು ಹೋಗುವುದಕ್ಕೆ ಆತ್ಮ ಎಲ್ಲಾ ಅವಕಾಶಗಳಿಂದ, ನಾಡಿಗಳ ಮೂಲಕ, ಗ್ರಂಥಿಗಳ ಮೂಲಕ ಕೆಲಸ ಮಾಡುತ್ತಿದೆ. ಆತ್ಮಕ್ಕೆ ಶರೀರದಲ್ಲಿ ಆಧಾರವಾಗಿರುವ **ನಾಡಿಗಳು** ಒಂದು ವಿಧವಾಗಿದ್ದು, **ಗ್ರಂಥಿಗಳು** ಮತ್ತೊಂದು ವಿಧವಾಗಿ ಇವೆ. ಶರೀರದಲ್ಲಿನ ಆತ್ಮ ನಾಡಿಗಳ ಮೇಲೆ, ಗ್ರಂಥಿಗಳ ಮೇಲಿಂದ ಶರೀರವನ್ನು ಪಾಲಿಸುತ್ತಿದೆ. ಶರೀರದಲ್ಲಿ ದೇವರಾದ ಆತ್ಮ ಶರೀರದಲ್ಲಿ ಸಪ್ತ ನಾಡೀಕೇಂದ್ರಗಳಿಂದ ತನ್ನ ಶಕ್ತಿಯನ್ನು ಶರೀರಕ್ಕೆ ಪ್ರಸಾರಮಾಡುತ್ತಿದೆ. ಹಾಗೆಯೇ ಏಳು ಗ್ರಂಥಿಗಳಲ್ಲಿದ್ದು ಶರೀರವೊಂದರ ಆರೋಗ್ಯವನ್ನು ಅನಾರೋಗ್ಯವನ್ನು ಪ್ರಸಾರಮಾಡುತ್ತಿದೆ. ಈ ವಿಧವಾಗಿ ಏಳು ನಾಡೀಕೇಂದ್ರಗಳ ಮೇಲೆ, ಏಳು ಗ್ರಂಥಿಗಳ ಮೇಲೆ ಆತ್ಮ ನಿವಾಸವಾಗಿ ಶರೀರವನ್ನು ಪಾಲಿಸುತ್ತಿದೆಯೆಂದು

ಯಾರಿಗೂ ತಿಳಿದಿಲ್ಲ. ಆತ್ಮ ಶರೀರದಲ್ಲಿ ಇದ್ದರೂ ಸಹ ಎಷ್ಟು ಶೋಧಿಸಿದರು ಯಾರಿಗೂ ತಿಳಿಯದಂತೆ ನಿವಾಸವಾಗಿದೆ.

ಎಷ್ಟು ತಿಳುವಳಿಕೆ ಇರುವವನಿಗಾದರೂ ಶರೀರದಲ್ಲಿ ಜೀವಾತ್ಮ ಇರುವಂತೆಯೇ ತಿಳಿಯುತ್ತದೆ ಆದರೆ, ಆತ್ಮ ಇರುವಂತೆ ತಿಳಿಯುವುದಿಲ್ಲ. ಆದುದರಿಂದ ಹೊರಗೆ ಎಷ್ಟು ಮೇಧಾವಿಗಳಾದರೂ ಒಳಗಿರುವ ಆತ್ಮವನ್ನು ಗುರುತಿಸಲಾರದಂತಿದ್ದಾರೆ. ಗತದಲ್ಲಿ ಬಂದುಹೋದ ಮೂವರು ಸಿದ್ಧಾಂತಕರ್ತರು ತಮ್ಮ ಸಿದ್ಧಾಂತಗಳನ್ನು ಹೊರಗೆ ಕಾಣಿಸುವ ದೇವರು, ಕಾಣಿಸದ ದೇವರು ಎಂದು ಹೇಳಿಕೊಳ್ಳುತ್ತಾ ಶರೀರದ ಹೊರಗೆ ಹೇಳಿಕೊಂಡಿದ್ದಾರೆ ಆದರೆ, ಅವರ ದೃಷ್ಟಿ ಶರೀರದಲ್ಲಿನ ಆತ್ಮಗಳ ಮೇಲೆ ದೃಷ್ಟಿಹರಿಸಲಿಲ್ಲ. ಆದುದರಿಂದ ಮೂವರು ಸಿದ್ಧಾಂತಕರ್ತರ ಮೂರು ಸಿದ್ಧಾಂತಗಳು ದೇವರು ಅಲ್ಲದಿರುವುದನ್ನು ಹೇಳಿಕೊಂಡಿದ್ದಾರೆ ಆದರೆ, ಅಸಲಾದ ದೇವರನ್ನು ಕುರಿತಾದ ಜ್ಞಾನವನ್ನು ಹೇಳಲಿಲ್ಲ. ಆದುದರಿಂದ ಮೂವರು ಸಿದ್ಧಾಂತಕರ್ತರ ಸಿದ್ಧಾಂತಗಳು ದೇವರಿಗೆ ಸಂಬಂಧಿಸಿರುವವಲ್ಲ. ಆದುದರಿಂದ ಅವುಗಳನ್ನು ಆಧ್ಯಾತ್ಮಿಕ ಸಿದ್ಧಾಂತಗಳೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ದೇವರಿಗೆ ಸಂಬಂಧಿಸಿದ ಸಮಾಚಾರವನ್ನು ತಿಳಿಸುವವು ದೈವ ಸಿದ್ಧಾಂತಗಳಾಗುತ್ತವೆ. ಉಳಿದಿರುವವು ದೈವ ಸಿದ್ಧಾಂತಗಳನ್ನಲ್ಪಡುವುದಿಲ್ಲ. ಮೂಗಿಗೆ ಸಂಬಂಧಿಸಿದ ಆಭರಣಗಳನ್ನು ಮೂಗಿನತ್ತಿಗಳೆನ್ನುತ್ತೇವೆ. ಕಿವಿಗೆ ಸಂಬಂಧಿಸಿದ ಆಭರಣಗಳನ್ನು ಕಿವಿ ಓಲೆಗಳೆನ್ನುತ್ತೇವೆ. ಮೂಗಿನ ಸುರಳಿ ಅಥವಾ ಮೂಗಿನ ನತ್ತುಗಳಿಗೆ, ಕಿವಿ ಓಲೆಗಳು ಅಥವಾ ಕಿವಿ ಕುಂಡಲಗಳಿಗು ಎಷ್ಟೋ ವ್ಯತ್ಯಾಸವಿರುತ್ತದೆ. ಮೂಗಿನತ್ತುಗಳು ಮಾತ್ರ ಇರುವವನು ನನಗೆ ಕಿವಿ ಓಲೆಗಳು ಇವೆಯೆಂದರೆ ನಂಬುವುದಕ್ಕೆ ಸಾಧ್ಯವಿಲ್ಲ ಅಲ್ಲವೆ! ಹಾಗೆಯೇ ಶರೀರದ ಹೊರಗೆ ಪ್ರಕೃತಿಗೆ ಸಂಬಂಧಿಸಿದ ಆಕಾರ, ನಿರಾಕಾರಗಳನ್ನು ಹೇಳಿದವರು ಶರೀರದೊಳಗಿರುವ ದೇವರನ್ನು ಕುರಿತು ಹೇಳಲಿಲ್ಲವೆಂದು, ಶರೀರದಲ್ಲಿನ ದೇವರಿಗೆ ಸಂಬಂಧ ಇಲ್ಲದಿರುವವು ದೈವ ಸಿದ್ಧಾಂತಗಳು ಅಲ್ಲವೆಂದು ಹೇಳಬಹುದು. **ದೇವರಿಗೆ ಆಕಾರವಿಲ್ಲ, ಹೆಸರಿಲ್ಲ, ಕೆಲಸವೂ ಇಲ್ಲ** ಎನ್ನುವುದು

ಮುಖ್ಯವಾದ ದೈವಧರ್ಮ. ಹಾಗಿರುವಾಗ ದೈವವೊಂದರ ಸಾಕಾರ, ನಿರಾಕಾರ ವಾದ ಸಿದ್ಧಾಂತಗಳು ವಾಸ್ತವವಾಗಿ ದೇವರವೇ ಅಲ್ಲವೆಂದು ಹೇಳಬಹುದು.

ಆಧ್ಯಾತ್ಮಿಕ ರಂಗದಲ್ಲಿ ಶರೀರದಲ್ಲಿರುವ ದೇವರನ್ನು ತಿಳಿಸುವ ಸಿದ್ಧಾಂತ ವಾಸ್ತವವಾದ ದೈವಸಿದ್ಧಾಂತವಾಗುತ್ತದೆ. ಆ ಲೆಕ್ಕ ಪ್ರಕಾರ ಭೂಮಿಮೇಲೆ **"ದೈವ ಸಿದ್ಧಾಂತ"** ಪ್ರಬೋಧಾನಂದ ಯೋಗೀಶ್ವರರು ಹೇಳಿದ **"ತ್ರೈತ ಸಿದ್ಧಾಂತ"** ಒಂದೇಯೆಂದು ಹೇಳಬಹುದು. ಶರೀರದಲ್ಲಿನ ಆತ್ಮಗಳನ್ನು ಬಿಡಿಸಿ ಶರೀರದಲ್ಲಿರುವ ದೇವರು ಆತ್ಮಯೆಂದು, ಶರೀರದ ಹೊರಗೆ ಸರ್ವ ವಿಶ್ವವೆಲ್ಲಾ ವ್ಯಾಪಿಸಿದವನೇ  ನಿಜವಾದ ದೇವರೆಂದು ಹೇಳುವ ಸಿದ್ಧಾಂತವೇ ನಿಜವಾದ ದೈವ ಸಿದ್ಧಾಂತ ಎಂದು ಹೇಳಬಹುದು. ಇದರ ಪ್ರಕಾರ ಲೆಕ್ಕಿಸಿ ಹೇಳಿದರೆ ಭೂಮಿಮೇಲೆ ಒಂದೇ ಒಂದು ದೇವರ ಸಿದ್ಧಾಂತ ಇದೆಯೆಂದು ಹೇಳಬಹುದು. ಎಲ್ಲಾ ವಿಧಗಳಲ್ಲಿ ಶಾಸ್ತ್ರಬದ್ಧವಾದ ಸಿದ್ಧಾಂತ ತ್ರೈತ ಸಿದ್ಧಾಂತ ಒಂದೇ. ಪ್ರಪಂಚಕ್ಕೆಲ್ಲಾ ದೊಡ್ಡವನಾದ ದೇವರನ್ನು ತಿಳಿಯುವುದಕ್ಕೆ ಮೊದಲು ಶರೀರದಲ್ಲಿ ಯಂತ್ರಾಂಗವನ್ನು ನಡೆಸುತ್ತಿರುವ ಆತ್ಮವನ್ನು ತಿಳಿಯಬೇಕು. ಆತ್ಮವನ್ನು ತಿಳಿಯಲ್ಪಟ್ಟಾಗ ಆತ್ಮ ಶರೀರದಲ್ಲಿ **ಏಳು ನಾಡಿಕೇಂದ್ರಗಳ** ಮೇಲೆ, **ಏಳು ಗ್ರಂಥಿಗಳ** ಮೇಲೆ ತನ್ನಶಕ್ತಿಯನ್ನು ಪ್ರಸಾರಮಾಡುತ್ತಾ ಶರೀರವನ್ನು ಪಾಲಿಸುತ್ತಿದೆಯೆಂದು ತಿಳಿಯುತ್ತದೆ. ಶರೀರದಲ್ಲಿನ ಆತ್ಮ ವಿಧಾನವನ್ನು ತಿಳಿಯುವುದೇ ಆಧ್ಯಾತ್ಮಿಕ ಎನ್ನಲಾಗುತ್ತದೆ. ಈ ವಿಷಯ ರಹಸ್ಯವಾಗಿರುವಾಗ, ಆ ರಹಸ್ಯವನ್ನು ಎಲ್ಲರೂ ತಿಳಿಯುವಂತೆ ತಿರುಮಲ ತಿರುಪತಿ ಗುಡಿಯಲ್ಲಿ ಗುಡಿ ಗೋಪುರಕ್ಕೆ ಏಳು ದ್ವಾರಗಳಿರುವಂತೆ ಇಟ್ಟಿದ್ದಾರೆ. ಗುಡಿ ಗೋಪುರವೊಂದರ ಏಳು ದ್ವಾರಗಳು ಏಳು ಗ್ರಂಥಿಗಳಿಗೆ ಚಿಹ್ನೆಗಳಾದರೆ, ಗುಡಿಯೊಳಗೆ ದೇವರ ಪ್ರತಿಮೆ ಹತ್ತಿರಕ್ಕೆ ಹೋಗುವುದಕ್ಕೆ ಏಳು ದ್ವಾರಗಳು ದಾಟಬೇಕಾಗಿರುತ್ತದೆ. ಏಳು ಗುಡಿ ದ್ವಾರಗಳು ಏಳು ನಾಡೀಕೇಂದ್ರಗಳಿಗು ಚಿಹ್ನೆಗಳಾಗಿ ಜ್ಞಾನಿಗಳು ಇಡುವುದು ನಡೆದಿದೆ. ಈ ವಿಧವಾಗಿ ಜ್ಞಾನ ಎಷ್ಟೋ ಪ್ರಣಾಳಿಕಾ ಬದ್ಧವಾಗಿ ದೇವಾಲಯ ಹತ್ತಿರ ಇರುವಾಗ, ಅದೇ ವಿಧಾನವೇ ಆತ್ಮಜ್ಞಾನಕ್ಕೆ ನಿಲಯವಾಗಿದೆ. ಶರೀರದಲ್ಲಿನ

ಆತ್ಮವನ್ನು ತಿಳಿಸುವುದಕ್ಕೆ ಉಳಿದ ಎರಡು ಆತ್ಮಗಳನ್ನು ಪರಿಚಯ ಮಾಡುತ್ತಾ ಮೂರು ಆತ್ಮಗಳ ವಿವರವನ್ನು ಸಿದ್ಧಾಂತ ರೂಪವಾಗಿ ಶಾಸ್ತ್ರಬದ್ಧವಾಗಿ ತಿಳಿಸುವುದೇ ತ್ರೈತ ಸಿದ್ಧಾಂತ ಉದ್ದೇಶ.

ಮೂರು ಆತ್ಮಗಳ ವಿವರಣೆ ತಿಳಿಸುವ ವಿಧಾನದಲ್ಲಿ ಮಧ್ಯಾತ್ಮವೊಂದರ ಸಮಾಚಾರ ತಿಳಿಸುವುದು ಬಹಳ ಮುಖ್ಯ. ಮಧ್ಯಾತ್ಮವೊಂದರ ಏಳು ನಾಡೀಕೇಂದ್ರಗಳನ್ನು, ಏಳು ಗ್ರಂಥಿಗಳನ್ನು ತಿಳಿದಾಗಲೇ ಆತ್ಮಶಕ್ತಿ ಜ್ಞಾನಾಗ್ನಿಯಾಗಿ ತಯಾರು ಆಗಬಲ್ಲದು. ಆದುದರಿಂದ ಆಧ್ಯಾತ್ಮಿಕ ವಿದ್ಯೆಯಲ್ಲಿ ಏಳು ನಾಡೀಕೇಂದ್ರಗಳು, ಏಳು ಗ್ರಂಥಿಗಳು ಬಹಳ ಮುಖ್ಯವಾದ ಸಮಾಚಾರವಾಗಿವೆ. ಇದರಿಂದಲೇ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೀಗೆ ಹೇಳಿದ್ದಾರೆ. **"ಆನಂದಾಶ್ರಯರ ವಾಕ್ಯ ಸಪ್ತಮಿ ನಿಶ್ಚಯ, ಸರ್ವದಾ ಸಪ್ತಮಿ ಆಗುತ್ತದೆ."** ಇಲ್ಲಿ ವಾಕ್ಯದಲ್ಲಿ 'ಸಪ್ತಮಿ ನಿಶ್ಚಯ ಸರ್ವದಾ ಸಪ್ತಮಿ ಆಗುತ್ತದೆ' ಎಂದು ಎರಡು ಸಪ್ತಮಿ ಪದಗಳನ್ನು ಬಳಸುವುದು ನಡೆದಿದೆ. ಶರೀರದಲ್ಲಿ ಎರಡು ವಿಧಗಳ 'ಸಪ್ತಮಿ'ಗಳು ಇವೆ. ಒಂದು ಏಳು ನಾಡೀಕೇಂದ್ರಗಳು, ಮತ್ತೊಂದು ಏಳು ಗ್ರಂಥಿಗಳು ಇವೆ. **"ಮಧ್ಯಾತ್ಮ"** ಶರೀರದಲ್ಲಿ ಏಳು ನಾಡೀಕೇಂದ್ರಗಳ ಮೇಲೆ, ಏಳು ಗ್ರಂಥಿಗಳ ಮೇಲೆ ಇದೆಯೆಂಬ ರಹಸ್ಯವನ್ನು ಪ್ರಬೋಧಾಶ್ರಮದವರೇ ಹೇಳಿದ್ದಾರೆಂದು ತಿಳಿಸುವುದಕ್ಕಾಗಿ 'ಆನಂದಾಶ್ರಯದವರ ವಾಕ್ಯ ಸಪ್ತಮಿ ನಿಶ್ಚಯ' ಎಂದಿದ್ದಾರೆ. ಇಲ್ಲಿ **"ವಾಕ್ಯ"** ಎಂದರೇ ಹೇಳಿದ **"ಜ್ಞಾನ"** ಎಂದು ಅರ್ಥ. ಹೇಳಿದ ಜ್ಞಾನದಲ್ಲಿ ಏಳು ನಾಡಿಗಳ ವಿಷಯ ಇರುವುದರಿಂದ 'ಸಪ್ತಮಿ ನಿಶ್ಚಯ' ಎಂದು ಹೇಳುವುದಾಗಿದೆ. ಆ ಮಾತಿನ ಪಕ್ಕದಲ್ಲಿಯೇ 'ಸರ್ವದಾ ಸಪ್ತಮಿ ಆಗುತ್ತದೆ' ಎಂದು ಇದೆ. ಇದರ ಪ್ರಕಾರ ಏಳು ಗ್ರಂಥಿಗಳಿವೆ. ಅವುಗಳಲ್ಲಿ ಆತ್ಮಶಕ್ತಿ ಇದೆಯೆಂದು ಹೇಳುವುದೇ ಉದ್ದೇಶ. ಬ್ರಹ್ಮಯ್ಯನವರ ಮಾತುಗಳೆಲ್ಲ ನೇರವಾಗಿ ಅರ್ಥವಾಗುವಂತೆ ಯಾವುದು ಇರುವುದಿಲ್ಲ. ಎಲ್ಲಾ ವಾಕ್ಯಗಳು ಮರೆಯಲ್ಲಿ ಹೇಳಲಾಗಿದೆ. ನೇರವಾಗಿ ಏನು ಅರ್ಥವಾಗುವುದಿಲ್ಲ. ಆನಂದಾಶ್ರಯರು ಎಂದರೇ ಪ್ರಬೋಧಾಶ್ರಮದವರೆಂದು ತಿಳಿಯಬೇಕು. ಹಾಗೆಯೇ ಆನಂದ

ಗುರು ಎಂದರೆ ಪ್ರಬೋಧಾನಂದ ಗುರುವೆಂದು ಅರ್ಥ ಮಾಡಿಕೊಳ್ಳಬೇಕು. ಎರಡು ಅಥವಾ ಮೂರುಕಡೆ ಪ್ರಬೋಧಾಶ್ರಮವೆಂದು, ಪ್ರಬೋಧಾಶ್ರಮದವರೆಂಬ ಪದಗಳು ಬಳಸುವುದಾಗಿದೆ. ನಂತರ ನಾವು ಮಾತುಮಾತಿಗು ಪ್ರಬೋಧಾನಂದ ಯೋಗೀಶ್ವರರೆಂದು ಹೇಳದೆ 'ಪ್ರಬೋಧ' ಎಂಬ ಪದವನ್ನು ತೆಗೆದುಹಾಕಿ ಯೋಗೀಶ್ವರರು ಎಂಬ ಪದವನ್ನು ಹೇಗೆ ಬಳಸುತ್ತಿದ್ದೇವೋ ಹಾಗೆಯೇ ಬ್ರಹ್ಮಯ್ಯನವರು ಸಹ 'ಪ್ರಬೋಧ' ಎಂಬ ಪದವನ್ನು ತೆಗೆದುಹಾಕಿ ಆನಂದ ಗುರು, ಆನಂದಾಶ್ರಮವೆಂದು ಹೇಳುವುದು ನಡೆದಿದೆ.

ಬ್ರಹ್ಮಯ್ಯನವರು ಹೇಳಿದ ಕಾಲ ಜ್ಞಾನವಾಕ್ಯದಲ್ಲಿ **"ಶಯನಾಧಿಪತಿಗೆ ಸರ್ವದಾ ಆನಂದಂ, ಬ್ರಹ್ಮಾದಿ ದೇವತೆಗಳೆಲ್ಲ ಆಶೀರ್ವದಿಸಿದರು. ಜಾರುವಾಕ್ಯಗಳು ಆಡಿದವರೆಲ್ಲ ನಾಶವಾಗಿಹೋಗುವರು, ಕೇಡು ಬಯಸಿದವರೆಲ್ಲ ಧೂಳಿಯಾಗಿ ಹೋಗುವರು"**. ಎಂದು ಇದೆ ಅಲ್ಲವೆ! ಯೋಗೀಶ್ವರರಾಗಲಿ, ಯೋಗೀಶ್ವರರ ಜ್ಞಾನವಾಗಲಿ ವಿರೋಧಿಸಿ ಆತನಿಗೆ ವಿರುದ್ಧವಾಗಿ ಮಾತನಾಡಿದವರು, ಆತನಿಗೆ ಕೇಡು ಬಯಸಿದವರು ಯಾರಾದರೆ ಇದ್ದಾರೋ ಅವರಿಗೇ ನಷ್ಟ ಕಷ್ಟ ಎಂದು ಬ್ರಹ್ಮಯ್ಯನವರು ಹೇಳಿದಂತೆ ನಡೆಯುತ್ತಲೇ ಇದೆ. ಪ್ರತಿಕೂಲವಾಗಿ ಮಾತನಾಡಿದ ವರಿಗೆ ಹಾಗೆ ನಡೆದಾಗ, ಯೋಗೀಶ್ವರರ ಜ್ಞಾನವನ್ನು ಯೋಗೀಶ್ವರರನ್ನು ಒಳ್ಳೆಯದಾಗಿ ತಿಳಿದು ಆತನ ಜ್ಞಾನವನ್ನೇ ಅನುಸರಿಸುವವರಿಗೆ ಅವರ ಕರ್ಮಗಳು ಸುಟ್ಟುಹೋಗುವುದು ಸಹ ನಡೆಯುತ್ತಿದೆ. ಯಾವಾಗಾದರೆ ಶರೀರಾಂತರ್ಗತ ಜ್ಞಾನದ ಮೇಲೆ ಮನುಷ್ಯನಿಗೆ ದೃಷ್ಠಿ ಉಂಟಾಗುತ್ತಿದೆಯೋ, ಯಾವಾಗಾದರೆ ಮನುಷ್ಯನಿಗೆ ಶರೀರದ ಹೊರಗಿನ ಧ್ಯಾಸಹೋಗಿ, ಶರೀರದಲ್ಲಿನ ಆತ್ಮಮೇಲೆ ದೃಷ್ಠಿ ಉಂಟಾಗುತ್ತಿದೆಯೋ, ಯಾವಾಗಾದರೆ ಶರೀರದಲ್ಲಿನ ಏಳು ನಾಡೀಕೇಂದ್ರಗಳ ಮೇಲೆ ಧ್ಯಾಸ ಉಂಟಾಗುತ್ತಿದೆಯೋ, ಏಳು ಗ್ರಂಥಿಗಳ ಮೇಲೆ ಧ್ಯಾಸ ಬರುತ್ತದೋ ಆಗಲೇ ಮನುಷ್ಯನಲ್ಲಿ ಜ್ಞಾನ ಉದ್ಭವಿಸುತ್ತದೆ. ಹುಟ್ಟಿದ ಜ್ಞಾನ ಸ್ವಲ್ಪಕಾಲಕ್ಕೆ ಜ್ಞಾನಶಕ್ತಿಯಾಗಿ ಬದಲಾಗುತ್ತದೆ. ಬದಲಾದ ಜ್ಞಾನಶಕ್ತಿ **ಜ್ಞಾನಾಗ್ನಿಯಾಗಿ** ಬದಲಾಗಿ ಆ ಜೀವಿಯ ಪಟ್ಟಿಯಲ್ಲಿರುವ ಕರ್ಮಗಳನ್ನು

ಸುಡಲು ಆರಂಭಿಸುತ್ತದೆ. ಈ ವಿಧವಾಗಿ ಕರ್ಮಗಳ ದಹನವು ಯಾವಾಗ ಉಂಟಾಗುತ್ತದೋ ಆಗ ಅವನು ಜ್ಞಾನಮಾರ್ಗದಲ್ಲಿ ಮುಂದಕ್ಕೆ ಸಾಗಿಹೋದಂತಾಗುತ್ತದೆ. ಹಾಗೆ ಮುಂದುವರೆದು ಹೋಗುತ್ತಾ ಹೊಗುತ್ತಾ ಯಾವಾಗಲೋ ಒಂದುಸಲ ಮೋಕ್ಷವೆಂಬ ಗಮ್ಯವನ್ನು ಮನುಷ್ಯ ಸೇರುತ್ತಾನೆ. ಇದೆಲ್ಲವೂ ಒಂದರೊಂದಿಗೆ ಮತ್ತೊಂದು ಸಂಬಂಧಪಟ್ಟಿರುವ ವಿಧಾನ. ಈ ವಿಧಾನದಲ್ಲಿ ಮನುಷ್ಯನಿಗೆ ಬೈಬಲ್‌ನಲ್ಲಿ ಹೇಳಿದಂತೆ **'ಪಾಪಕ್ಷಮಾಪಣೆ'** ಉಂಟಾಗುತ್ತದೆಯೆಂದು ತಿಳಿಯುತ್ತಿದೆ. ಹಾಗೇ ಖುರಾನ್‌ನಲ್ಲಿ ಹೇಳಿದಂತೆ **'ದೇವರ ಕ್ಷಮಾಶೀಲತೆ'** ಮನುಷ್ಯನ ಮೇಲೆ ಉಂಟಾಗುತ್ತಿದೆ. ಈ ಎರಡು ಗ್ರಂಥಗಳಿಗಿಂತ ಮೊದಲು ಹೇಳಿದ ಭಗವದ್ಗೀತೆಯಲ್ಲಿ **'ಕರ್ಮದಹನ'**, **'ಜ್ಞಾನಾಗ್ನಿ'** ಎಂದು ಹೇಳಿದ ವಾಕ್ಯಗಳು ನೆರವೇರುತ್ತಿವೆ. ಇದೆಲ್ಲವೂ ಯೋಗೀಶ್ವರರ ಜ್ಞಾನದಿಂದ ಸಾಧ್ಯವಾಗುತ್ತದೆಯೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– ಇಲ್ಲಿ ಒಂದುಮಾತನ್ನು ಕೇಳುತ್ತಿದ್ದೇವೆ. ಹೀಗೆ ಕೇಳುತ್ತಿರುವುದಕ್ಕೆ ನೀವು ಏನು ನನ್ನನ್ನು ತಪ್ಪಾಗಿ ಅಂದುಕೊಳ್ಳಬೇಡಿ. ನನ್ನ ಪರವಾಗಿ ಅಲ್ಲದೇ ಪ್ರಜೆಗಳಲ್ಲಿ ಬರುವ ಸಂಶಯಗಳನ್ನು ತೀರಿಸುವುದಕ್ಕೆ ಹೀಗೆ ಪ್ರಶ್ನಿಸುತ್ತಿದ್ದೇವೆ. ಯೋಗೀಶ್ವರರ ಜ್ಞಾನದಿಂದಲೇ ಮೋಕ್ಷ ಲಭಿಸುತ್ತದೆಯೆಂದು, ಕರ್ಮನಾಶವಾಗುತ್ತದೆಂದು ಹೇಳಿದ್ದಾರೆ. ಯೋಗೀಶ್ವರರ ಮುಂದೆ ಬಂದಿರುವ ಬೈಬಲು, ಖುರಾನ್, ಭಗವದ್ಗೀತೆ ಗಳಾದ ಮೂರು ದೈವ ಗ್ರಂಥಗಳಲ್ಲಿ ಹೇಳಿದ ಜ್ಞಾನದಿಂದ ಕರ್ಮ ಇಲ್ಲದಂತೆ ಹೋಗುತ್ತದೆಯೆಂದು, ಮೋಕ್ಷ ಉಂಟಾಗುತ್ತದೆಯೆಂದು ಹೇಳಿದ್ದಾರೆ ಅಲ್ಲವೆ! ಹಾಗಿರುವಾಗ ಯೋಗೀಶ್ವರರ ಜ್ಞಾನದಿಂದಲೇ ಜ್ಞಾನ ಉಂಟಾಗುತ್ತದೆ, ಕರ್ಮಗಳು ಸುಡುತ್ತವೆ, ಮೋಕ್ಷ ಲಭಿಸುತ್ತದೆಯೆಂದು ಹೇಳುವುದು ಗರ್ವದಿಂದ ಹೇಳಿದಂತೆ ಕಾಣಿಸುತ್ತಿದೆ. ಪೂರ್ವದಲ್ಲಿ ಹೇಳಿದವರನ್ನು ನಿರಾಕರಿಸಿ ಅವರಿಗಿಂತ ನಾನೇ ಉತ್ತಮನೆಂದು ಹೇಳಿದಂತೆ ಇದೆ. ಹಾಗೆ ಹೇಳುವುದು ಎಲ್ಲಾ ತಿಳಿದ ನಿಮಗೆ ಸರಿಹೋಗುತ್ತದಾ?**

**ಉತ್ತರ :–** ನಿಮ್ಮ ಪ್ರಶ್ನೆ ಕೊನೆಯಲ್ಲಿ ಎಲ್ಲಾ ತಿಳಿದ 'ನಿಮಗೆ' ಅಂದಿದ್ದೀಯಾ ಆದ್ದರಿಂದ ನಾನು ಬದುಕಿಹೋಗಿದ್ದೇನೆ. ಹಾಗಲ್ಲದೆ 'ನೀನು' ಎಂದು ಕೇಳಿದ್ದರೆ ನಾನು ಎಷ್ಟೋ ವಿವರಣೆಯನ್ನು ಕೊಡಬೇಕಾಗಿಬರುತ್ತಿತ್ತು. ನಿಮಗೆ ಸರಿಹೋಗುತ್ತದಾ? ಎಂದು ಕೇಳಿದ್ದೀರ ಆದ್ದರಿಂದ ಸರಿಹೋಗಿದೆ. ಹಾಗೆ ಹೇಳುವುದು ಸರಿಹೋಗಿದೆ ಆದರೆ, ನೀವು ಅರ್ಥ ಮಾಡಿಕೊಳ್ಳುವುದರಲ್ಲಿ ಸರಿಹೋಗಲಿಲ್ಲ. ನಾನು ಬಹಳಸಲ ವಿವರಣೆ ಕೊಡುತ್ತಾ ಬಂದಿದ್ದೇನೆ. **'ಪ್ರಬೋಧಾನಂದ ಯೋಗೀಶ್ವರರು'** ಎಂಬ ಮಾತು ಒಂದು ಶರೀರದ ಹತ್ತಿರ ಬಳಸುತ್ತಿದ್ದರೂ, ಅದು ಶರೀರದೊಳಗಿರುವ **ಮಧ್ಯಾತ್ಮಕ್ಕೇ** ಅನ್ವಯಿಸುತ್ತದೆ ಎಂದು ಹೇಳಿದ್ದೇನೆ. ಅದೇ ಶರೀರದಲ್ಲಿರುವ ನಾನು ಎಂದರೆ ಜೀವಾತ್ಮನು ಅದೃಷ್ಟವಂತ ನೆಂದು ಸಹ ಹೇಳಿದ್ದೇನೆ. ಒಂದು ಶರೀರಕ್ಕಿರುವ ಹೆಸರು ಜೀವಿಯದಾ ಅಲ್ಲವಾ! ಎಂದು ಸಹ ಹೇಳಿದ್ದೇನೆ. ಶರೀರ ಯಾರದಾದರೆ ಆ ಹೆಸರು ಅವರಿಗೇ ಅನ್ವಯಿಸುತ್ತದೆಂದು ಸಹ ಹೇಳಿದ್ದೇನೆ. ಅಜ್ಞಾನದಲ್ಲಿ ಜೀವಿಸುವ ಪ್ರತಿಮನುಷ್ಯ ಶರೀರ ನನ್ನದೇಯೆಂದು ಅಂದುಕೊಳ್ಳುತ್ತಿರುತ್ತಾನೆ. ನಿಜಕ್ಕೆ ಶರೀರ ಅವನದು ಅಲ್ಲದಿದ್ದರೂ ಜೀವಿಯ ಭಾವನೆಯನ್ನೇ ಪರಿಗಣನೆಯೊಳಗೆ ತೆಗೆದುಕೊಳ್ಳುವು ದರಿಂದ ಶರೀರ ಆ ಜೀವಿಯದಾಗಿ ಲೆಕ್ಕಿಸಲ್ಪಡುತ್ತದೆ. ಶರೀರದ ಮೂಲಕ ನಡೆಯುವ ಕೆಲಸಗಳೆಲ್ಲವೂ ಆ ಜೀವಿಯು ಮಾಡಿದಂತೇ ಭಾವಿಸಲ್ಪಡುತ್ತದೆ. ವಾಸ್ತವಕ್ಕೆ ಶರೀರಕ್ಕೆ ದೊಡ್ಡವನಾದ ಆತ್ಮದ್ದು. ನನಗೆ ಶರೀರದ ಜ್ಞಾನ ತಿಳಿದಿದೆ ಆದ್ದರಿಂದ ಶರೀರ ನನ್ನದಲ್ಲ. **"ಶರೀರ ಮಧ್ಯಾತ್ಮದು" ಎಂದು** ತಿಳಿದಿರುವುದರಿಂದ ಶರೀರದಲ್ಲಿ ನಡೆಯುವ ಕೆಲಸಗಳು ನನ್ನವಾಗಿ ಲೆಕ್ಕಿಸಲ್ಪಡಲಿಲ್ಲ.

ಶರೀರದಲ್ಲಿ ನಾನು ಒಂದು ಮೂಲೆಯಲ್ಲಿ ಅಣುವಷ್ಟು (ರವೆಯಷ್ಟು) ಇದ್ದೇನೆ. ಶರೀರವೆಲ್ಲಾ ವ್ಯಾಪಿಸಿರುವ ಆತ್ಮ ಶರೀರಕ್ಕೆ ಅಧಿಪತಿಯಾಗಿರುವುದರಿಂದ ಶರೀರವು ಆತ್ಮದೇ ಆಗುತ್ತದೆ. ಆತ್ಮ ಎಲ್ಲರ ಶರೀರಗಳಲ್ಲಿದ್ದರೂ ಅವರವರ ಕರ್ಮಗಳನ್ನು ಅನುಸರಿಸಿ ಆತ್ಮ ಕೆಲಸ ಮಾಡುತ್ತದೆ. **'ಪ್ರಬೋಧಾನಂದ'** ಎಂಬ ಶರೀರದಲ್ಲಿನ ಆತ್ಮ ಪ್ರತ್ಯೇಕವಾಗಿ ಆತ್ಮಜ್ಞಾನವನ್ನು ಹೇಳುವ ಕೆಲಸ ಮಾಡುತ್ತಿದೆ.

ಜೀವಾತ್ಮ ಜ್ಞಾನವನ್ನು ಕೇಳಿ ತಾನು ಜೀವಿಯು ಮಾತ್ರವೇ, ನನಗೆ ಶರೀರವಿಲ್ಲ, ಆತ್ಮವೊಂದರ ಶರೀರದಲ್ಲಿ ಇದ್ದೇನೆಂದುಕೊಳ್ಳುವುದರಿಂದ ಶರೀರ ಆತ್ಮದಾಗಿಯೇ ಲೆಕ್ಕಿಸಲ್ಪಟ್ಟಿದೆ. ಆಗ ಶರೀರಕ್ಕಿರುವ ಹೆಸರು ಆತ್ಮದೇಯೆಂದು ಲೆಕ್ಕಿಸಲ್ಪಡುತ್ತಿದೆ. 'ಪ್ರಬೋಧಾನಂದ ಯೋಗೀಶ್ವರರು' ಎಂಬ ಹೆಸರು ಆತ್ಮದೇ ಆಗಿವುದರಿಂದ, ಆತ್ಮ ಹೇಳಿದ ಜ್ಞಾನವನ್ನು ಪ್ರಬೋಧಾನಂದ ಯೋಗೀಶ್ವರರು ಹೇಳಿದ್ದಾನೆಂದು ಹೇಳಬಹುದು. ಈ ಶರೀರದಲ್ಲಿ ಯೋಗೀಶ್ವರರಾಗಿರುವ ಆತ್ಮವೇ ಈಗ ಸಕಲ ಜೀವರಾಶಿಗಳ ಶರೀರಗಳಲ್ಲಿ ಇದೆ. ಅಷ್ಟೇ ಅಲ್ಲದೆ ಗತದಲ್ಲಿ ಸಹ ಎಲ್ಲರ ಶರೀರದಲ್ಲಿದೆ **ಭಗವದ್ಗೀತೆಯನ್ನು ಹೇಳಿದ ಕೃಷ್ಣನಲ್ಲಿರುವ ಆತ್ಮ 'ಪ್ರಬೋಧಾನಂದ ಯೋಗೀಶ್ವರರು' ಎಂಬ ಆತ್ಮವೇ, ಹಾಗೆಯೇ ಯೇಸು ಶರೀರದಲ್ಲಿದ್ದು ಜ್ಞಾನವನ್ನು ಹೇಳಿದ ಆತ್ಮ ಸಹ ಯೋಗೀಶ್ವರರ ಶರೀರದಲ್ಲಿದ್ದು ಜ್ಞಾನ ಹೇಳುತ್ತಿರುವ ಆತ್ಮವೇಯೆಂದು ಹೇಳುತ್ತಿದ್ದೇವೆ.** ಗತದಲ್ಲಿ ಜ್ಞಾನ ಹೇಳಿದವರ ಶರೀರಗಳಲ್ಲಿರುವ ಆತ್ಮಗು, ಈಗ ಪ್ರಬೋಧಾನಂದ ಯೋಗೀಶ್ವರರ ಶರೀರದಲ್ಲಿರುವ ಆತ್ಮಗು ಏನಾದರೂ ವ್ಯತ್ಯಾಸ ಇದೆಯಾ? ಏನೂ ಇರುವುದಿಲ್ಲ. ಒಂದೇ ಆತ್ಮ ಎಲ್ಲಾ ಶರೀರಗಳಲ್ಲಿಯೂ ಇದ್ದು, ಆ ಜೀವಿಗಳಿಗೆ ಜೋಡಿ ಆತ್ಮವಾಗಿ, ಪಕ್ಕದವನಾಗಿ ಇದ್ದೂ, ಶರೀರಗಳನ್ನು ನಡೆಸುತ್ತಿದೆ. ಒಂದು ಶರೀರದಲ್ಲಿ ಜ್ಞಾನವನ್ನು ಬೋಧಿಸಿದರೂ, ಅಜ್ಞಾನವನ್ನು ಬೋಧಿಸಿದರೂ ಆ ಕೆಲಸವನ್ನು ಮಾಡುವುದು ಆತ್ಮವೇ. ಗತದಲ್ಲಿ ದೈವ ಗ್ರಂಥಗಳನ್ನು ಹೇಳಿದವರ ಶರೀರಗಳಲ್ಲಿ ಆತ್ಮವೇ ಇದ್ದು ಅವರ ಮೂಲಕ ಜ್ಞಾನವನ್ನು ಬೋಧಿಸಿರುತ್ತದೆ. ಆದುದರಿಂದ ಗತದಲ್ಲಿ ಬೋಧಿಸಿದ ಆತ್ಮವನ್ನು 'ಪ್ರಬೋಧಾನಂದ ಯೋಗೀಶ್ವರರು' ಎಂದು ಈ ದಿನ ಹೆಸರಿನಿಂದಿರುವ ಆತ್ಮವೇಯೆಂದು ಹೇಳುತ್ತಿದ್ದೇವೆ. ಈದಿನ ನಾನು ನಿವಾಸಿಸುವ ಶರೀರ ನನ್ನದು ಎಂದರೇ ಅದು ಆತ್ಮದು ಅಲ್ಲದೆ ನನ್ನ ಶರೀರವಾಗಿ ಲೆಕ್ಕಿಸಲ್ಪಡುತ್ತದೆ. ನನ್ನದಲ್ಲ ಎನ್ನುವುದರಿಂದ ಈ ಶರೀರ ಆತ್ಮದೇ ಆಗುತ್ತಿದೆ. ಶರೀರವು ಆತ್ಮದಾದಾಗ, ಶರೀರದೊಂದಿಗೆ ಶರೀರಕ್ಕಿರುವ ಹೆಸರು ಸಹ ಆತ್ಮದೇ ಆಗುತ್ತಿದೆ. 'ಪ್ರಬೋಧಾನಂದ ಯೋಗೀಶ್ವರರು' ಎಂದು ಈ ಶರೀರಕ್ಕೆ

ಹೆಸರಿರುವುದರಿಂದ ಅದೇ ಹೆಸರು ಆತ್ಮದ್ದಾಗುತ್ತಿದೆ. ಆತ್ಮ ಗತದಲ್ಲಿ ಹೇಳಿದ ಬೋಧನೆಗಳನ್ನು ಈದಿನ ಪ್ರಬೋಧಾನಂದ ಯೋಗೀಶ್ವರರ ಹೆಸರಿನಿಂದಿರುವ ಆತ್ಮವೇ ಹೇಳಿದೆಯೆಂದು ಹೇಳುವುದರಲ್ಲಿ ತಪ್ಪಿಲ್ಲ. ಮೇಲಾಗಿ ಆ ಮಾತು ಸತ್ಯವಾಗುತ್ತದೆ.

ಸತ್ಯವನ್ನು ಅನುಸರಿಸುವ ಪ್ರಬೋಧಾನಂದ ಯೋಗೀಶ್ವರರ ಶರೀರದಲ್ಲಿನ ಆತ್ಮವೇ ದೈವಗ್ರಂಥಗಳನ್ನು ಹೇಳಿದೆಯೆಂದು ಹೇಳಬಹುದು. ಹಾಗೆ ಗತದಲ್ಲಾಗಲಿ, ಈಗಾಗಲಿ ಎಲ್ಲರ ಶರೀರಗಳಲ್ಲಿದ್ದು ಎಲ್ಲರನ್ನು ಅವರವರ ಕರ್ಮಗಳ ಪ್ರಕಾರ ಕದಲಿಸಿ ನಡೆಸುತ್ತಿರುವುದು ಆತ್ಮವೇ. ರಾಮನ ಶರೀರದಲ್ಲಿಯೂ, ಹಾಗೆಯೇ ರಾವಣಬ್ರಹ್ಮ ಶರೀರದಲ್ಲಿಯೂ, ಒಂದೇ ಆತ್ಮ ಇರುತ್ತಿತ್ತು. ರಾಮನ ಶರೀರದಲ್ಲೂ, ರಾವಣಬ್ರಹ್ಮ ಶರೀರದಲ್ಲಿಯೂ, ಕೃಷ್ಣನ ಶರೀರದಲ್ಲಿಯೂ, ಅರ್ಜುನನ ಶರೀರದಲ್ಲಿಯೂ ಆತ್ಮ ಶರೀರಕ್ಕೆ ಬೆಳಕಾಗಿ, ಜೀವಿಗೆ ಜೊತೆಯಾಗಿತ್ತು. ಗತದಲ್ಲಿ ಜ್ಞಾನವನ್ನು ಬೋಧಿಸಿ ಮೋಕ್ಷಕ್ಕೆ ದಾರಿ ತೋರಿಸಿರುವುದು ಆತ್ಮವೇ ಆದ್ದರಿಂದ ಪ್ರಸ್ತುತ ಹೆಸರನ್ನನುಸರಿಸಿ ಪ್ರಬೋಧಾನಂದ ಯೋಗೀಶ್ವರರ ಜ್ಞಾನದಿಂದಲೇ ಯಾರಿಗಾದರೂ ಮೋಕ್ಷ ಲಭಿಸುತ್ತದೆಯೆಂದು ಹೇಳುವುದರಲ್ಲಿ ತಪ್ಪಿಲ್ಲ. ಈದಿನ ಪ್ರಬೋಧಾನಂದ ಯೋಗೀಶ್ವರರ ಶರೀರದಲ್ಲಿ ಆತ್ಮನಾಗಿದ್ದು ಶರೀರದಿಂದ **"ಹಿಂದೂಮತದಲ್ಲಿ ಸಿದ್ಧಾಂತಕರ್ತರು"** ಎಂಬ ಗ್ರಂಥವನ್ನು ಬರೆಸಿರುವುದು ಆತ್ಮವೇ. ಆತ್ಮಕ್ಕೆ ಈಗ ಈ ಶರೀರದಲ್ಲಿನ ಹೆಸರು ಅನ್ವಯಿಸುತ್ತಿರುವುದರಿಂದ ಈ ಹೆಸರಿರುವ ಆತ್ಮವೇ ಎಲ್ಲಾ ಮಾಡುತ್ತಿದೆ, ಹಾಗೆ ಗತದಲ್ಲಿ ಮಾಡಿದೆಯೆಂದು ಹೇಳಬಹುದು. ಹಾಗಿರುವಾಗ ಪ್ರಬೋಧಾನಂದ ಯೋಗೀಶ್ವರರಾಗಿರುವ ಆತ್ಮ ಹೇಳಿರುವುದೇ ನಿಜವಾದ ಜ್ಞಾನವೆಂದು, ಯೋಗೀಶ್ವರರ ಜ್ಞಾನದಿಂದಲೇ ಮೋಕ್ಷ ಉಂಟಾಗುತ್ತದೆಯೆಂದು ಹೇಳುವುದರಲ್ಲಿ ತಪ್ಪಿಲ್ಲ ಅಲ್ಲವೆ!

**ಪ್ರಶ್ನೆ :– ಇದಕ್ಕೂ ಮೊದಲು ಪ್ರಬೋಧಾನಂದ ಯೋಗೀಶ್ವರರು ಬರೆದ ಗ್ರಂಥಗಳನ್ನು ಪ್ರಕಟಿಸಿದ್ದಾರೆ ಅಲ್ಲವೆ! ಅದರಲ್ಲಿ ಈಗಾಗಲೇ 81 ಗ್ರಂಥಗಳನ್ನು ಬರೆದಂತೆ ಇದೆ. ಈ 81 ಗ್ರಂಥಗಳನ್ನು ಸ್ವತಃವಾಗಿ ಆತ್ಮವೇ ಬರೆದಿದೆ ಎನ್ನುತ್ತೀರಾ?**

**ಉತ್ತರ :–** ಜ್ಞಾನ ತಿಳಿದ ಯಾರಾದರೂ ಆಗಲಿ, ಎಲ್ಲಾ ಗ್ರಂಥಗಳನ್ನು ಯೋಗೀಶ್ವರರಾದ ಆತ್ಮವೇ ಬರೆದಿದೆಯೆಂದು ಹೇಳಬೇಕು. ಆತ್ಮ ಬರೆದಿದೆಯೆಂದು ಹೇಳುವುದರಲ್ಲಿ ಯಾವುದೇ ಸಂಶಯವಿಲ್ಲ. ಶರೀರದಲ್ಲಿನ ಜೀವಿಯು 'ನಾನು ಬರೆದಿದ್ದೇನೆ' ಎಂದು ಅಂದುಕೊಂಡರೆ ಅವುಗಳನ್ನು ಜೀವಿಯು ಬರೆದಂತೆ ಜೀವಿಯ ಖಾತೆಯೊಳಗೆ ಸೇರಿಸಲಾಗುತ್ತದೆ. ಆಗ ಆತ್ಮ ಬರೆದಂತೆ ಲೆಕ್ಕಿಸಲ್ಪಡದೆಹೋದರೂ, ಚೈತನ್ಯವಾಗಿ ಕೆಲಸ ಮಾಡುವುದು ಆತ್ಮವೇ ಆಗಿರುವುದರಿಂದ ಆ ಕೆಲಸವನ್ನು ಆತ್ಮವೇ ಮಾಡುತ್ತಿದೆ. ಆದರೂ ಹೆಸರು ಜೀವಾತ್ಮಕ್ಕೆ ಬರುತ್ತದೆ. ಭಾವನೆಯನ್ನನುಸರಿಸಿ ಜೀವಿಯ ಖಾತಾದೊಳಗೆ ಸೇರಿಸುವುದಾಗಲಿ, ಸೇರಸದೆ ಇರುವುದಾಗಲಿ ಮಾಡಲಾಗುತ್ತದೆ. ಯೋಗೀಶ್ವರರ ಶರೀರದಲ್ಲಿ ಈಗ ನಿಮ್ಮೊಂದಿಗೆ ಮಾತನಾಡುವ ಜೀವಿಯಾಗಿರುವವನು ನಾನೇ ಆಗುವುದರಿಂದ, ನನಗೆ ಜ್ಞಾನ ತಿಳಿದಿರುವುದರಿಂದ, ಗ್ರಂಥಗಳನ್ನು ಬರೆದಿರುವುದು ನಾನು ಅಲ್ಲ ಆತ್ಮವೇ ಬರೆದಿದೆಯೆಂಬ ಸತ್ಯವನ್ನು ತಿಳಿದಿರುವುದರಿಂದ ಗ್ರಂಥಗಳೆಲ್ಲ ಆತ್ಮವೇ ಬರೆದಿದೆ. ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಎಂಬ ಮೂವರು ಆಚಾರ್ಯರು ಬರೆದಂತೆ ಹೇಳಲ್ಪಡುತ್ತಿರುವ ಗ್ರಂಥಗಳನ್ನು ಆತ್ಮವೇ ಬರೆದಿದೆ. ಆತ್ಮ ಯಾರಲ್ಲಿ ಏನು ಮಾಡಬೇಕೋ ಮೊದಲೇ ನಿರ್ಣಯಿಸಿಕೊಂಡು ಮಾಡುತ್ತದೆ. ಅಜ್ಞಾನಿಗಳಲ್ಲಿ ಅಜ್ಞಾನವನ್ನು ಬೋಧಿಸುವುದು ಆತ್ಮವೇ. ಜ್ಞಾನಿಗಳಲ್ಲಿ ಜ್ಞಾನವನ್ನು ಬೋಧಿಸುವುದು ಆತ್ಮವೇ. ಆದರೆ ಮನುಷ್ಯನಿಗು ಮನುಷ್ಯನಿಗು ಸ್ವಲ್ಪ ವ್ಯತ್ಯಾಸದಿಂದ ಆತ್ಮ ಕೆಲಸಮಾಡುತ್ತಿರುತ್ತದೆ. ಆದುದರಿಂದ ಆಚಾರ್ಯತ್ರಯ ಎಲ್ಲರಲ್ಲಿ ಆತ್ಮವೇ ಮೂರು ವಿಧಗಳಾಗಿ ಕೆಲಸಮಾಡಿ ಸಿದ್ಧಾಂತಗಳೆಂಬ ಹೆಸರಿನಿಂದ ರಾದ್ಧಾಂತ ಮಾಡಿದೆ. ಮೂವರು ಸಿದ್ಧಾಂತಕರ್ತರ ಕಾರ್ಯಗಳು, ಬೋಧನೆಗಳು ಮೂರು ವಿಧಗಳಾಗಿ ಇರುವಂತೆ ಆತ್ಮವೇ ಮಾಡಿದ್ದಾನೆ. ನಾಲ್ಕನೆ ವ್ಯಕ್ತಿಯಾಗಿ ಬಂದಿರುವ ಪ್ರಬೋಧಾನಂದ ಯೋಗೀಶ್ವರರ ಮೂಲಕ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದವನು ಆತ್ಮವೇಯೆಂದು ಹೇಳುತ್ತಿದ್ದೇವೆ.

ಪ್ರಶ್ನೆ :– ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದವನು ಯೋಗೀಶ್ವರರ ಶರೀರದಲ್ಲಿನ ಆತ್ಮವೇಯೆಂದು ನಾವು ನಂಬುತ್ತಿದ್ದೇವೆ. ಯೋಗೀಶ್ವರರು ಬರೆದ **81** ಗ್ರಂಥಗಳನ್ನು ಆತ್ಮವೇ ಬರೆದಿದೆಯೆಂದು ನೀವು ಹೇಳಿದರೆ ನಂಬಬೇಕಾಗಿದ್ದೇಯೆಂದು ನಂಬಿದರೂ, ನಾವು ಮುಚ್ಚಿಟ್ಟುಕೊಳ್ಳದಂತೆ ಹೇಳಿದರೆ ನಮ್ಮಲ್ಲಿ ಸ್ವಲ್ಪ ಅನುಮಾನ ಉಳಿದಿದೆಯೆಂದು ಹೇಳಬಹುದು. ನಮ್ಮ ಅನುಮಾನದ ಪ್ರಕಾರ ಹೇಳಿದರೆ, ಯೋಗೀಶ್ವರರಾದ ಆತ್ಮ ಗ್ರಂಥಗಳನ್ನು ಬರೆದಿದ್ದರೆ, ಅವು ಇನ್ನೂ ಪ್ರತ್ಯೇಕವಾಗಿ ಇರುತ್ತಿದ್ದವೇನೊ ಅನಿಸುತ್ತಿದೆ. ನೀವು ಎಷ್ಟು ಹೇಳಿದರೂ ನಮ್ಮ ಅಂತರಂಗದಲ್ಲಿ ಈ ಗ್ರಂಥಗಳೆಲ್ಲವೂ ಮನುಷ್ಯ ಬರೆದಂತೆ ಇವೆ ಆದರೆ, ಆತ್ಮ ಬರೆದಂತೆ ಯಾವ ಪ್ರತ್ಯೇಕತೆ ಅವುಗಳಲ್ಲಿ ಕಾಣಿಸಲಿಲ್ಲ. ಮನುಷ್ಯನ ಭಾಷೆಯಲ್ಲಿ ಕೆಲವುಕಡೆ ಮೋಟಾಗಿ ಮಾತನಾಡಿದಂತೆ, ಭಾಷೆಯಲ್ಲಿ ತಪ್ಪು ಪದಗಳು ಬರೆದಂತೆ ಆತ್ಮ ಬರೆಯುವುದಿಲ್ಲ ಅಲ್ಲವೆ! ಆತ್ಮಕ್ಕೆ ಎಲ್ಲಾ ವಿದ್ಯೆಗಳು ತಿಳಿದಿದೆಯಾದ್ದರಿಂದ, ಬರೆಯುವ ಭಾಷೆಯನ್ನು ಸ್ವಚ್ಛವಾಗಿ ಬರೆಯಬಲ್ಲದು. ಆದರೆ ಇಲ್ಲಿ ಕೆಲವು ಗ್ರಂಥಗಳನ್ನು ನೋಡಿದರೆ ಮನುಷ್ಯ ಮಾಡಿದ ತಪ್ಪುಗಳು ಭಾಷೆಯಲ್ಲಿ ಇರುವಂತೆ ಕಾಣಿಸುವುದರಿಂದ 'ಇದು ಮನುಷ್ಯನೇ ಬರೆದಿದ್ದಾನೆ' ಎಂಬ ಅನುಮಾನ ಉಂಟಾಗುತ್ತಿದೆ. ಹೇಳುವ ಬೋಧನೆಗಳಲ್ಲಿ ಮಾತನಾಡುವ ಭಾಷೆಯಲ್ಲಿ ಸ್ಪಷ್ಟತೆ ಇಲ್ಲ, ಎಷ್ಟೋ ತಪ್ಪುಗಳಿವೆ. ಕೆಲವು ಪದಗಳು ಹೇಳುವುದರಲ್ಲಿಯೇ ತಪ್ಪಾಗಿ ಹೇಳುತ್ತಿದ್ದಾರೆ. ಬರೆದ ಭಾಷೆಯಲ್ಲಿ ಸರಿಯಾದ ಭಾಷೆಯಿಲ್ಲ. ವ್ಯಾಕರಣದಲ್ಲಿ ಎಷ್ಟೋ ತಪ್ಪುಗಳಿವೆ. ಆತ್ಮ ಗ್ರಂಥಗಳು ಬರೆದರೆ ವ್ಯಾಕರಣದಲ್ಲಿ ತಪ್ಪುಗಳು ಬರೆಯುತ್ತದಾ? ಒಂದು ಪದವನ್ನು ಬಿಡಿಸಿ ಬರೆಯುವಕಡೆ ಕೂಡಿಸಿ ಬರೆದಿದ್ದಾರೆ. ಕೂಡಿಸಿ ಬರೆಯಬೇಕಾದ ಕಡೆ ಬಿಡಿಸಿ ಬರೆದಿದ್ದಾರೆ. ಇಂತಹ ತಪ್ಪುಗಳನ್ನು ನೋಡಿ "ಆತ್ಮ ಈ ವಿಧವಾಗಿ ಬರೆದಿರುವುದಿಲ್ಲ." ಎಂದು ತಿಳಿಯುತ್ತಿದೆ. ಆದರೆ ನೀವು ಹೇಳುವ ಮಾತುಗಳನ್ನನುಸರಿ ಆತ್ಮ ಬರೆದಿದೆಯೇನೊ ಎಂದು ನಂಬಿದರೂ, ತಕ್ಷಣ 'ಇದೆಲ್ಲಾ ಹೇಳುವುದಕ್ಕಾಗಿಯೇ ಹಾಗೆ ಹೇಳಿದ್ದಾರೆ, ಮನುಷ್ಯನೇ ಬರೆದಿರುತ್ತಾನೆಂದು' ಅನುಮಾನ ಬರುತ್ತಿದೆ. ನನ್ನ ಅನುಮಾನವನ್ನು ಮುಚ್ಚಿಟ್ಟುಕೊಳ್ಳ ದಂತೆ ಹೊರಗಿಟ್ಟಿದ್ದೇನೆ. ಹಾಗೆ ಕೇಳುವುದು ತಪ್ಪಾದರೆ ಕ್ಷಮಿಸಿರಿ. ಆದರೆ ನೀವು

**ಬಹಳಕಡೆ 'ಯಾವ ಪ್ರಶ್ನೆಯನ್ನಾದರೂ ಮನಸ್ಸಿನಲ್ಲಿ ಮುಚ್ಚಿಟ್ಟುಕೊಳ್ಳದಂತೆ ಕೇಳುವುದರಲ್ಲಿ ತಪ್ಪಿಲ್ಲ' ಎಂದು ಹೇಳಿದ್ದಾರೆ ಆದ್ದರಿಂದ ಕೇಳುತ್ತಿದ್ದೇನೆ.**

**ಉತ್ತರ :–** ಈ ಪ್ರಶ್ನೆ ನಿಮಗೇ ಅಲ್ಲ ಬಹಳಜನರಿಗೆ ಬಂದಿರುವುದೇ! ಎಂದಿಗಾದರೂ ಇರುವ ಅನುಮಾನವನ್ನು ಮುಚ್ಚಿಟ್ಟುಕೊಳ್ಳದೆ ಕೇಳಬೇಕು. ಆಗ ಆ ಅನುಮಾನ ಇಲ್ಲದಂತೆ ಹೋಗುವ ಅವಕಾಶ ಇರುತ್ತದೆ. ಈಗ ಕೇಳುವುದರಿಂದ ಉತ್ತರ ಹೇಳುವ ನನಗೆ ಯಾವ ಬಾಧೆ ಇಲ್ಲ. ಇನ್ನೂ ಸಂತೋಷವಾಗಿಯೇ ಇದೆ. ಆತ್ಮಗೆ ಎಲ್ಲಾ ವಿದ್ಯೆಗಳು ಗೊತ್ತು. ಆದುದರಿಂದ ಕೆಲವರ ಗ್ರಂಥಕರ್ತರವರಿಂದ ಅಮೋಘವಾದ ಭಾಷೆಯನ್ನು ಬರೆಯಿಸುತ್ತದೆ. ಕೆಲವರು ಬೋಧಕರಿಂದ  ಸ್ವಚ್ಛವಾದ ಭಾಷೆಯನ್ನು ಮಾತನಾಡಿಸುತ್ತದೆ. ಕೆಲವರಲ್ಲಿ ಬೋಧಕರಿಂದ ಸ್ವಚ್ಛವಾದ ಭಾಷೆಯನ್ನು ಮಾತನಾಡಿಸುತ್ತದೆ. ಕೆಲವರಲ್ಲಿ ಅಸ್ಪಷ್ಟವಾದ ಭಾಷೆಯನ್ನು ಸಹ ಹೇಳಿಸುತ್ತದೆ. ಪ್ರಬೋಧಾನಂದ ಯೋಗೀಶ್ವರರು ಸಭೆಯಲ್ಲಿ ಉಪನ್ಯಾಸ ಹೇಳುತ್ತಾ ಅಸ್ಪಷ್ಟವಾದ ಭಾಷೆಯನ್ನೇ ಹೇಳುತ್ತಿರುತ್ತಾರೆ. ಆತನ ರಚನೆಗಳಲ್ಲಿ ಸಹ ಸ್ವಚ್ಛವಾದ ಭಾಷೆ ಇರುವುದಿಲ್ಲ. ಆ ವಿಷಯ ಯೋಗೀಶ್ವರರ ಶರೀರದಲ್ಲಿ ಸಹ ಜೀವನ ಮಾಡುತ್ತಿರುವ ನನಗೆ ಚೆನ್ನಾಗಿ ತಿಳಿದಿದೆ. ಈಗ ಜೀವಿಯಾದ ನಾನು ನನ್ನ ಭಾವನೆಗಳನ್ನು ನಿಮ್ಮೊಂದಿಗೆ ಮಾತನಾಡಿ ಹೇಳಿದಂತೆ, ಉಪನ್ಯಾಸಗಳಲ್ಲಿ ಯೋಗೀಶ್ವರರು ಅನೇಕ ಸಂದರ್ಭಗಳಲ್ಲಿ ಮಾತನಾಡಿದರೂ, ಕೆಲವು ಸಮಯಗಳಲ್ಲಿ ಮಾತನಾಡುವ ಅವಕಾಶ ನನಗೆ ಕಲ್ಪಿಸುತ್ತಿರುತ್ತಾನೆ. ಹಾಗೆ ನಾನು ಮಾತನಾಡುವ ಸಮಯದಲ್ಲಿ ಸಹ ಯೋಗೀಶ್ವರರೇ ಮಾತನಾಡುತ್ತಿರುತ್ತಾರೆ. ಆದರೆ ಆಗ ಜೀವಿಯಾಗಿರುವ ನನ್ನ ಭಾವನೆಗಳನ್ನು ಯೋಗೀಶ್ವರರ ಮೂಲಕ ನಿಮಗೆ ಹೇಳುವುದು ನಡೆಯುತ್ತಿರುತ್ತದೆ. ಹಾಗೆ ಸಮಯ ದೊರೆತಾಗ ನಾನು ಬಹಳಸಲ **"ನಾವು ಹೇಳುವ ಭಾಷೆ ಸರಿಯಾಗಿರುವುದಿಲ್ಲ. ಭಾಷೆಯನ್ನು ನೋಡಿ ನೀವು ಅಪಾರ್ಥಪಡಬೇಡಿ, ನಾಣ್ಯವಾದ, ಸ್ವಚ್ಛವಾದ ಭಾಷೆಯಿಲ್ಲದಿದ್ದರೂ ಎಲ್ಲದಕ್ಕಿಂತ ದೊಡ್ಡ ಭಾವವಿರುವ ಸಮಾಚಾರ ಇರುತ್ತದೆ."** ಎಂದು ನಾನೇ ಸ್ವತಃವಾಗಿ

ಬಹಳಸಲ ಹೇಳಿದ್ದೇನೆ. ಯೋಗೀಶ್ವರರಾದರೆ ಈ ಮಾತು ಹೇಳುವುದಿಲ್ಲ, ಅದು ಜೀವಿಯಾಗಿ ನಾನು ಸಾಮಾನ್ಯ ಜೀವಿಗಳಿಗೆ ಎಚ್ಚರಿಸುತ್ತಾ ಹೇಳಿದ್ದೇನೆ. ಹಾಗೆ ಹೇಳಿಕೊಳ್ಳದೇಹೋದರೆ ಮಾತನಾಡುವ ಭಾಷೆಯನ್ನು, ಮಾತಿನ ಹೊಂದಿಕೆಯನ್ನನುಸರಿಸಿ ಇದು ಸರಿಯಾದ ಜ್ಞಾನ ಅಲ್ಲವೆಂದು ತಪ್ಪುಮಾಡುವ ಅವಕಾಶವಿದೆ. ಆದ್ದರಿಂದ ನಾನೇ ಮೊದಲು ಆ ವಿಷಯವನ್ನು ಹೇಳಿದ್ದೇನೆ.

ಈಗ ನೀವು ಸಹ ಅದೇ ಪ್ರಶ್ನೆಯನ್ನೇ ಕೇಳುತ್ತಿದ್ದೀರಾ. ಈಗ ನಾನು ನನಗೆ ತಿಳಿದ ವಿಷಯವನ್ನು ಮುಚ್ಚಿಟ್ಟುಕೊಳ್ಳದೆ ಹೇಳಬೇಕಾಗಿದೆ. ಆದುದರಿಂದ ಯೋಗೀಶ್ವರರು ಪ್ರತ್ಯೇಕಿಸಿ ಈ ಶರೀರದಲ್ಲಿ ಮಾತನಾಡುತ್ತಿದ್ದರೂ. ತಾನೇ ತನ್ನ ಜ್ಞಾನವನ್ನು ಎಷ್ಟೋ ಗ್ರಂಥಗಳ ರೂಪದಲ್ಲಿ ಬರೆದರೂ, ತನ್ನ ಜ್ಞಾನವನ್ನು ಮೇಲ್ನೋಟಕ್ಕೆ ನೋಡುವವರು, ಶ್ರದ್ಧೆಯಿಲ್ಲದವರು, ಭಕ್ತಿಯಿಲ್ಲದವರು ಯಾರೂ ತಿಳಿಯದಂತಿರುವುದಕ್ಕೆ ಭಾಷೆಯನ್ನು ಅಸ್ಪಷ್ಟವಾಗಿ ಹೇಳುವುದು, ಬರಹವನ್ನು ಸ್ವಚ್ಛವಾಗಿ ಬರೆಯದಿರುವುದು ಮಾಡುತ್ತಿರುತ್ತದೆ. ಭಕ್ತಿ ಶ್ರದ್ಧೆಗಳಿರುವವರು ನಾನು ಹೇಳುವ ವಿಷಯದ ಮೇಲೆ (ಜ್ಞಾನದ ಮೇಲೆ) ಆಸಕ್ತಿ ಹೊಂದಿರುವುದರಿಂದ ನನ್ನ ಭಾವನೆ ಮೇಲೆ ದೃಷ್ಠಿ ಇಟ್ಟು ಭಾಷೆಮೇಲೆ ದೃಷ್ಠಿ ಇಡದಂತಿರುತ್ತಾರೆಂದು ಆತ್ಮ ತಿಳಿಯುತ್ತಿರುತ್ತದೆ. ಇದು ಮೇಲ್ನೋಟಕ್ಕೆ ಎಲ್ಲರಿಗೂ ನಾನು ಹೇಳುವ ನನ್ನ ಸ್ವಂತ ಮಾತುಗಳೇ ಹೊರತು, ಯೋಗೀಶ್ವರರ ಅಂತರಂಗದಲ್ಲಿ ಅಂದರೇ ಆತ್ಮ ಅಂತರಾರ್ಥದಲ್ಲಿ ಬೇರೆ ಭಾವನೆಯಿರುವಂತೆ ಅರ್ಥವಾಗುತ್ತಿದೆ. ಈ ವಿಷಯವಾಗಿ ಪ್ರಜೆಗಳಿಗಿರುವ ಅನುಮಾನವನ್ನು, ನನಗು ಸಹ ಇರುವ ಅನುಮಾನವನ್ನು ಕೇಳಿದರೆ ಆತನು ಅಂದರೇ **ಮಧ್ಯಾತ್ಮ** ಎಂದರೇ **ಪಕ್ಕದವನು** ಈ ವಿಧವಾಗಿ ಹೇಳಿದ್ದಾನೆ. ಹೇಳಿದ್ದಾನೆ ಎನ್ನುವುದು ಸರಿಯಲ್ಲ. ತನ್ನ ಭಾವವನ್ನು ನನಗೆ ತಿಳಿಸಿದ್ದಾನೆ.

ಮಧ್ಯಾತ್ಮ ಆದವನು, ನನಗೆ ಶರೀರದಲ್ಲಿಯೇ ದೇವರಾಗಿರುವವನು, ಶರೀರದೊಳಗೆ ಶ್ವಾಸವನ್ನು ತೆಗೆದುಕೊಳ್ಳುತ್ತಾ ಬಿಡುತ್ತಾ ಜೊತೆಯಾಗಿರುವವನು, ನನ್ನನ್ನು ಬದುಕುವಂತೆ ಮಾಡುವ ಶರೀರ ಅಧಿಕಾರಿ ಆದವನಾದ ಆತ್ಮ,

ಅದೇ ಕೆಲಸವಾಗಿ ಸಕ್ರಮವಾದ ಭಾಷೆಯನ್ನು ಮಾತನಾಡುತ್ತಿಲ್ಲ. ಸರಿಯಾದ ಭಾಷೆಯಲ್ಲಿ ಜ್ಞಾನವನ್ನು ಹೇಳುತ್ತಿಲ್ಲ. ಆದರೂ ಮಾತನಾಡುವ ಭಾಷೆ ಸರಿಯಾಗಿಲ್ಲದಿದ್ದರೂ, ಮಾತನಾಡುವ ಮಾತುಗಳಲ್ಲಿ ಉತ್ತಮೋತ್ತಮವಾದ ಜ್ಞಾನವಿರುತ್ತದೆ. ಬರೆಯುವ ಭಾಷೆ ಸರಿಯಾದುದು ಅಲ್ಲದಿದ್ದರೂ, ಬರೆಯುವ ವಿಷಯಗಳು ಬರೆಯಲ್ಪಡುವ ಜ್ಞಾನ ಎಲ್ಲದಕ್ಕಿಂತ ಉತ್ತಮವಾದ ಜ್ಞಾನ ವಾಗಿರುತ್ತದೆ. ಅಷ್ಟುದೊಡ್ಡ ಜ್ಞಾನವನ್ನು ಜೀವಿಗಳಾಗಿರುವವರು ಯಾರೂ ಹೇಳಲಾರರು. ಯಾರಿಗೂ ತಿಳಿಯದ ಜ್ಞಾನ ಹೇಗೆ ಹೇಳಲ್ಪಟ್ಟಿದ್ದಾನೆ? ಎಂಬ ಪ್ರಶ್ನೆ ಬರುವಮುನ್ನ ತನ್ನ ಭಾಷೆಯಲ್ಲಿಯೂ, ಬರಹದಲ್ಲಿಯೂ, ಲೋಪ ಕಾಣಿಸದಂತೆ ಆತ್ಮವೇ ಮಾಡುತ್ತಿದ್ದಾನೆ. ಸಾಮಾನ್ಯ ಮನುಷ್ಯರು ಆತ್ಮನಾಗಿರುವ ತನ್ನನ್ನು ಗುರುತಿಸದಂತೆ, ಅವರ ದೃಷ್ಠಿ ಆತ್ಮವರೆಗು ಹೋಗದಂತೆ, ಅನೇಕ ಅನುಮಾನಗಳನ್ನು ಉಂಟುಮಾಡುವಂತೆ ಭಾಷೆಯನ್ನು ಸರಿಯಾಗಿ ಇಲ್ಲದಂತೆ ಮಾಡುತ್ತಿದ್ದಾನೆ. ಬರಹವನ್ನು ಸರಿಯಾದ ಬರಹವಾಗಿ ಕಾಣಿಸದಂತೆ ಮಾಡುತ್ತಿದ್ದಾನೆ.

**ಪ್ರಶ್ನೆ :– ಆತ್ಮವಾದರೂ ಹಾಗೆ ಏಕೆ ಮಾಡಬೇಕು? ಪ್ರಜೆಗಳು ಜ್ಞಾನ ತಿಳಿಯಬೇಕೆಂದೇ ಅಲ್ಲವೆ! ಆತ್ಮವೇ ಸ್ವತಃವಾಗಿ ಜ್ಞಾನ ಹೇಳುತ್ತಿರುವುದು. ಹೇಳುವುದನ್ನು ಸರಿಯಾದ ಭಾಷೆಯಲ್ಲಿ ಹೇಳಿ ಪ್ರಜೆಗಳನ್ನು ಆಕರ್ಷಿಸುವುದನ್ನು ಬಿಟ್ಟು ಸಕ್ರಮವಾದ ಭಾಷೆಯಲ್ಲಿ ಹೇಳದಿರುವುದು ಏಕೆ?**

**ಉತ್ತರ :–** ಮನುಷ್ಯರು ನಾವಾದರೆ ಹಾಗೆ ಮಾಡುತ್ತಿದ್ದೆವು. ಪ್ರಜೆಗಳ ಆಕರ್ಷಣೆಗಾಗಿ ಭಾಷೆಯನ್ನು ಸ್ವಚ್ಛವಾಗಿ ಹೇಳುವುದು ಮೊದಲಾದವು ಮಾಡುತ್ತಿದ್ದೆವು. ಎಲ್ಲಾ ಕೈಲಾಗಿ ಕೈಲಾಗದವನಂತೆ ಹೇಳುವುದಕ್ಕೆ ಮುಖ್ಯವಾದ ಕಾರಣ ಇದೆ. ಮನುಷ್ಯ ನೋಡಬೇಕಾಗಿರುವುದು **ಭಾವನೆ**. ಹೇಳುವುದು ಯಾವ ಭಾವನೆಯಲ್ಲಿ ಹೇಳಲ್ಪಡುತ್ತಿದೆ ಎಂದು ನೋಡುವುದೇ ಮುಖ್ಯ. ಭಾಷೆಯನ್ನು ನೋಡುವವನು ಭಾಷಾ ಪ್ರಿಯನೇ ಹೊರತು ಭಾವಪ್ರಿಯನಲ್ಲ, ಅಂಥವನಿಗೆ ಜ್ಞಾನ ಅಗತ್ಯವಿಲ್ಲ. ಶ್ರದ್ಧೆ ಇರುವವನಿಗೇ ಜ್ಞಾನ. ಶ್ರದ್ಧೆಯಿಲ್ಲದವನಿಗೆ ಜ್ಞಾನ

ಅಂಟುಕೊಳ್ಳುವುದಿಲ್ಲ. ಆತ್ಮ ಹೇಳುವ ಬೋಧನೆಗಳಲ್ಲಿ ಯಾರೂ ಹೇಳದ ಜ್ಞಾನವಿದೆ ಅಲ್ಲವೆ! ಕೇಳುವವನು ತಿಳುವಳಿಕೆಯುಳ್ಳವನಾದರೆ, ಜ್ಞಾನ ಬೇಕೆಂಬ ಆಸಕ್ತಿ ಇರುವವನಾದರೆ ಭಾಷೆಯೊಂದಿಗೆ ಅವನಿಗೇನು ಕೆಲಸ? ಹೇಳಿದ ದೊಡ್ಡ ಜ್ಞಾನವನ್ನು ಸ್ವೀಕರಿಸಬಹುದು ಅಲ್ಲವೆ! ಪ್ರಪಂಚದಲ್ಲಿ ಯಾರೂ ಹೇಳದ ಬೋಧನೆಯನ್ನು ಸಾಟಿಮನುಷ್ಯನು ಹೇಳುತ್ತಿರುವಾಗ ಇಲ್ಲಿಯವರೆಗೂ ತಿಳಿಯದ ಜ್ಞಾನ ತಿಳಿಯುತ್ತಿದೆ ಅಲ್ಲವೆ! ಎಂದು ಸಂತೋಷಪಡಬೇಕೆ ಹೊರತು, ಭಾಷೆಯನ್ನು ನೋಡುವುದು ಸರಿಯಲ್ಲ.

ಒಬ್ಬನು ಮದುವೆ ಹಿರೆತನವಾಡುವುದಕ್ಕೆ ಒಂದು ಊರಿಗೆ ಹೋದನಂತೆ. ಅಲ್ಲಿ ಹಿರೆತನಕ್ಕೆ ಹೋದ ಮನೆಯಲ್ಲಿ ಹೆಣ್ಣನ್ನು ಅಲಂಕಾರ ಮಾಡಿ ತೋರಿಸಿದ್ದಾರೆ. ಹಿರೆತನಕ್ಕೆ ಹೋದವನು ವಧುವನ್ನು ನೋಡುವುದಕ್ಕೇ ಅಲ್ಲವೆ! ಅಲ್ಲಿಗೆ ಹೋಗಿರುವುದು. ಅಲ್ಲಿ ಅವರು ಮರ್ಯಾದೆ ಪೂರ್ವಕವಾಗಿ ಯಾವ ಲೋಪ ಇಲ್ಲದಂತೆ ಗೌರವಿಸಿ ಮದುವೆಹೆಣ್ಣನ್ನು ತೋರಿಸಿದ್ದಾರೆ. ಹುಡುಗಿ ಬಹಳ ಸುಂದರವಾಗಿದ್ದಾಳೆ. ಎಲ್ಲಿ ಇಲ್ಲದ ಸೌಂದರ್ಯ ಹಾಗೂ ಯಾರಲ್ಲಿ ಇಲ್ಲದ ಒಳ್ಳೆಯ ಸ್ವಭಾವ ಆಕೆಯಲ್ಲಿ ಇದೆ. ಅಲ್ಲಿಗೆ ಹೋದ ಮದುವೆಗಂಡಿಗೆ ದೃಷ್ಟಿ ಎಲ್ಲವು ಮಾವನವರ ಆಸ್ತಿ ಮೇಲೆ ಇದೆ ಹೊರತು ಮದುವೆ ಆಗುವ ಹೆಣ್ಣಿನ ಮೇಲೆ ಇಲ್ಲ. ಮದುವೆ ಹೆಣ್ಣಿನ ತಂದೆ ಸ್ವಲ್ಪ ತಿಳುವಳಿಕೆಯುಳ್ಳವನು, ಎಷ್ಟೋ ಅನುಭವ ಇರುವವನು. ಅತಿಲೋಕ ಸೌಂದರ್ಯವತಿಯಾಗಿರುವ ತನ್ನ ಕುಮಾರಿಯನ್ನು ಬಂದಿರುವ ಹುಡುಗನಿಗೆ ತೋರಿಸಿದ್ದಾನೆ. ಆದರೆ ಆ ದಿನ ಮದುವೆಗಂಡಿನ ಮಾಮ, ಮದುವೆಹೆಣ್ಣಿಗೆ ತಂದೆಯಾಗುವವನು ಒಳ್ಳೆಯ ವಸ್ತ್ರಗಳು ಧರಿಸದೆ ಸ್ವಲ್ಪ ಸುಕ್ಕಾದ ಬಟ್ಟೆಗಳು, ಹಿಂಬದಿಯಲ್ಲಿ ಹರಿದುಹೋದ ಬಟ್ಟೆಗಳು ಧರಿಸಿದ್ದನು. ಹುಡುಗಿಯನ್ನು ನೋಡಿದ ಹುಡುಗ ಹುಡುಗಿ ಚೆನ್ನಾಗಿದ್ದಾಳೆ ಅಲ್ಲವೆ! ಎಂದು ಅಂದುಕೊಳ್ಳದೆ ಮಾವನವರು ಸುಕ್ಕಾಗಿಹೋದ ನಿಕ್ಕರ್ ಕಟ್ಟಿಕೊಂಡಿದ್ದಾನೆಂದು, ಮಾವನವರು ಚೆನ್ನಾಗಿಲ್ಲ, ನನಗೆ ಈ ಸಂಬಂಧ ಇಷ್ಟವಾಗಲಿಲ್ಲ ಎಂದನಂತೆ. ಹುಡುಗಿ ಇಷ್ಟವಾಗದಿದ್ದರೆ

ಸಂಬಂಧ ಬೇಡ ಎನ್ನುವುದು ನಡೆಯಬೇಕಾಗಲಿ, ಹುಡುಗಿಯನ್ನು ಬಿಟ್ಟು ಮಾವನವರು ಇಷ್ಟವಾಗಲಿಲ್ಲ ನನಗೆ ಸಂಬಂಧ ಬೇಡ ಎನ್ನುವುದು ಸರಿಯಾದ ಪದ್ಧತಿ ಅಲ್ಲ! ಹಾಗೆ ಅಂದವನು ಹುಡುಗಿಯನ್ನು ನೋಡಲು ಬಂದಿದ್ದಾನಾ! ಮಾವನನ್ನು ನೋಡಲು ಬಂದಿದ್ದಾನಾ!! ಆತನಿಗೆ ಬೇಕಾಗಿರುವುದು ಹೆಂಡತಿಯೊಂದಿಗೆ ಮದುವೆಯಾ ಅಥವಾ ಮಾವನವ ಆಸ್ತಿನಾ? ಆಸ್ತಿಯನ್ನು ನೋಡಿ ಹುಡುಗಿ ಎಂಥವಳಾದರೂ ಪರವಾಗಿಲ್ಲ ಮಾಡಿಕೊಳ್ಳುತ್ತೇನೆಂಬ ವ್ಯಕ್ತಿತ್ವ ಒಳ್ಳೆಯದಲ್ಲವೆಂದು ಅಲ್ಲವೆ ಅರ್ಥ. ಅಂಥವನಿಗೆ ಹುಡುಗಿಯನ್ನು ಕೊಟ್ಟರೂ ಸುಖಪಡುವುದಿಲ್ಲ ಎಂದು ಮೊದಲೇ ಹೇಳಬಹುದು. ಇದು ಉಪಮಾನ. ಇದರಂತೆ ಇರುವ ವಿಷಯವನ್ನು ನೋಡೋಣ.

ಅದೇ ವಿಧವಾಗಿ ಮೋಕ್ಷವನ್ನು ಕೋರುವವರು, ದೈವಸನ್ನಿಧಿ ಬೇಕೆನ್ನುವವನು, ಹೇಳುವ ಬೋಧನೆಯಲ್ಲಿನ ಜ್ಞಾನವನ್ನು ನೋಡಬೇಕು. ಕೇಳಿದ ಜ್ಞಾನದಲ್ಲಿ ಎಷ್ಟು ಸಾರವಿದೆಯೋ ಗ್ರಹಿಸಿಕೊಳ್ಳಬೇಕು. ಅಲ್ಲಿ ನೋಡಬೇಕಾಗಿರುವುದು ಜ್ಞಾನವೇ ಆದರೂ, ಹೇಳುವಂತಹ ಜ್ಞಾನ ಎಷ್ಟೋ ವೈಭವವಾಗಿ, ಎಲ್ಲಿಯೂ ನೋಡದ ಜ್ಞಾನ ಅಲ್ಲಿ ತಿಳಿಯುತ್ತಿದ್ದರೂ, ತನಗೆ ಬೇಕಾಗಿರುವುದು ಜ್ಞಾನವೇ ಆದರೂ, ಮನುಷ್ಯ ಅದನ್ನು ಬಿಟ್ಟು ಹೇಳುವವನ ಭಾಷೆ ಚೆನ್ನಾಗಿಲ್ಲ ಎನ್ನುವುದು, ಹಿರೆತನಕ್ಕೆ ಹೋಗಿ ಹುಡುಗಿ ಚೆನ್ನಾಗಿದ್ದರೂ, ಹುಡುಗಿ ವಿಷಯವನ್ನು ನೋಡದೆ ಮಾವನವರು ಸುಕ್ಕಾಗಿಹೋದ ನಿಕ್ಕರನ್ನು ಕಟ್ಟಿಕೊಂಡಂತಿರುತ್ತದೆ. ಅಂಥವನಿಗೆ ಹುಡುಗಿಯ ಹತ್ತಿರ ಕೆಲಸವಿಲ್ಲ ಮಾವನವರ ಆಸ್ತಿಯೊಂದಿಗೇ ಕೆಲಸ ಎನ್ನುವಂತೆ, ಹೇಳುವ ಭಾಷೆಯೊಂದಿಗೇ ಕೆಲಸ ಹೇಳುವಂತಹ ಜ್ಞಾನದೊಂದಿಗೆ ಕೆಲಸವಿಲ್ಲ ಎನ್ನುವವರಿಗೆ ಜ್ಞಾನ ಅಗತ್ಯವಿಲ್ಲ ಅಲ್ಲವೆ! ಆತನಿಗೆ ಜ್ಞಾನದ ಮೇಲೆ ಆಸಕ್ತಿ ಇಲ್ಲದಂತೆಯೆ ಅಲ್ಲವೆ! ಅಂಥವನಿಗೆ ಜ್ಞಾನ ತಿಳಿಯಬಾರದೆಂಬ ಉದ್ದೇಶದಿಂದಲೇ ಆತ್ಮ ಅದೇಕೆಲಸವಾಗಿ ಸಕ್ರಮವಾದ ಭಾಷೆಯಲ್ಲಿ ಅಲ್ಲದೇ ಜ್ಞಾನ ಹೇಳಿರುವುದು ಅಂದುಕೊಳ್ಳುತ್ತಿದ್ದೇನೆ. ಸ್ಪಷ್ಟವಾದ ಭಾಷೆ ಅಲ್ಲದಿದ್ದರೂ ಆತ್ಮ ಹೇಳಿರುವುದು ಅತ್ಯಂತ ರಹಸ್ಯವಾದ ಜ್ಞಾನ, ಎಲ್ಲಿಯೂ

ತಿಳಿಯದ ಜ್ಞಾನ ಅಲ್ಲವೆ! ಅಷ್ಟುದೊಡ್ಡ ಜ್ಞಾನವನ್ನು ಹೇಳಿದರೂ, ಅದನ್ನು ಗ್ರಹಿಸದೆ ಭಾಷೆಯನ್ನು ನೋಡುವವನು ಮೇಲಿನ ವ್ಯಕ್ತಿಯನ್ನು ನೋಡುವವನು, ಹುಡುಗಿ ಅಂದವನ್ನು ನೋಡದೆ ಮಾಮನ ನಿಕ್ಕರನ್ನು(ಸಲ್ಲಾಡ) ನೋಡಿದವನಂತೆ ಇದೆ. ಆತ್ಮ ಎಂದರೇ ಯಾರೂ ಊಹಿಸದ ವಿಧವಾಗಿದ್ದು ಸರ್ವ ಜೀವರಾಶಿ ಗಳಲ್ಲಿದ್ದು ನಡೆಸುವ ಏಕೈಕ ಶಕ್ತಿ. ಸರ್ವಜೀವರಾಶಿಗಳಿಗು ಶರೀರದಲ್ಲಿ ದೇವರಾಗಿರುವುದು ಆತ್ಮ. ಆತ್ಮದಿಂದಲೇ ನಿಜವಾದ ದೇವರನ್ನು ತಿಳಿಯಬಹುದು. ದೇವರಿಗು ಜೀವಿಯಾದ ನಿನಗು ಮಧ್ಯವರ್ತಿಯಾಗಿರುವ ಆತ್ಮ, ಅಷ್ಟು ದೊಡ್ಡದಾದ ಆತ್ಮಕ್ಕೆ ತಿಳಿಯದಿರುವುದು ಏನೂಯಿಲ್ಲ. ಮನುಷ್ಯನನ್ನು ಹೇಗಾದರೂ ನಡೆಸಬಲ್ಲದು. ಏನಾದರೂ ಮಾಡಬಲ್ಲನು.

ಶರೀರದಲ್ಲಿ ಇಲ್ಲಿಯವರೆಗೂ ದೊಡ್ಡ ಜ್ಞಾನಿಗಳು ಸಹ ಗುರುತಿಸದಂತೆ ಅಡಗಿದೆ ಆತ್ಮ. ಅಂತಹ ಆತ್ಮವನ್ನು ಕುರಿತು ಇಲ್ಲಿಯವರೆಗೂ ಮೂರು ದೈವ ಗ್ರಂಥಗಳಲ್ಲಿ ಹೊರತು ಇತರರ ಯಾವ ಗ್ರಂಥದಲ್ಲಿಯೂ ಯಾರೂ ಹೇಳಲಿಲ್ಲ. ಯಾರಿಗೂ ತಿಳಿಯದಂತೆ ಶರೀರದಲ್ಲಿ ನಿಕ್ಷಿಪ್ತವಾಗಿರುವ ಆತ್ಮ ಪ್ರಪಂಚದಲ್ಲಿನ ಶರೀರಗಳ ಮೂಲಕ ಎಲ್ಲಾ ಕೆಲಸಗಳು ಮಾಡುತ್ತಾ ಪ್ರತಿ ಮನುಷ್ಯನಿಗು ಹತ್ತಿರವಾಗಿದೆ. ಜೀವಿಗೆ ಶರೀರದಲ್ಲಿಯೇ ಹತ್ತಿರವಾಗಿದೆ ಆತ್ಮ. ಜೀವಿಗೆ ಅತ್ಯಂತ ಸಮೀಪದಲ್ಲಿದ್ದರೂ ಆತ್ಮವನ್ನು ಜೀವಿಯು ಗ್ರಹಿಸದೆ ಶರೀರದಲ್ಲಿ ತಾನು ಹೊರತು ಯಾರೂ ಇಲ್ಲವೆಂದುಕೊಳ್ಳುತ್ತಿದ್ದಾನೆ. ಜೀವಿಯು ಜ್ಞಾನಿಯಾದರು ಶರೀರದಲ್ಲಿನ ಆತ್ಮವನ್ನು ಗುರುತಿಸದೆ, ಅಸಲು ಶರೀರದಲ್ಲಿಯೇ ದೃಷ್ಠಿಯನ್ನು ಸಾರದೆ, ದೇವರನ್ನು ಕುರಿತು ಹೊರಗಿನ ಪ್ರಪಂಚದಲ್ಲಿ ಹುಡುಕುತ್ತಿದ್ದಾನೆ. ಅಸಲಾದ ದೇವರು ಪ್ರಪಂಚದಲ್ಲಿ ಅಣುಅಣುವಿನಲ್ಲಿ ಇದ್ದರೂ ಆತನು ಯಾರಿಗೂ ತಿಳಿಯುವುದಿಲ್ಲ. **ಯಾವ ಜೀವಿಯಾದರೂ ಆತ್ಮ ಮೂಲಕವೇ ದೇವರನ್ನು ತಿಳಿಯಬೇಕು**. ಆತ್ಮದ ಮೂಲಕ ಆಗದಿರುವುದು ಯಾರಾಗಲಿ ದೇವರನ್ನು ಸೇರಲಾರನು. ಆತ್ಮ ಎಂಥದೋ ಮೊದಲು ತಿಳಿಯದೆಯೇ ಪರಮಾತ್ಮನನ್ನು ಸೇರುವುದಕ್ಕೆ ಸಾಧ್ಯವಾಗುವುದಿಲ್ಲ. ಆದುದರಿಂದ ಆತ್ಮಜ್ಞಾನ ತಪ್ಪದೆ ಅಗತ್ಯ.

ಮೋಕ್ಷ ಹೊಂದುವವನು ಮರಣಿಸುವ ಸಮಯವನ್ನು ಕುರಿತು ಭಗವದ್ಗೀತೆಯಲ್ಲಿ **"ಹಗಲು, ಸೂರ್ಯರಶ್ಮಿ ಇರುವಾಗ, ಶುಕ್ಲಪಕ್ಷಮಿ, ಉತ್ತರಾಯಣ ಕಾಲದಲ್ಲಿ ಮರಣಿಸಿದ ಯೋಗಿ ಮೋಕ್ಷ ಪಡೆಯುತ್ತಾನೆ"** ಎಂದು ಹೇಳಿದ್ದಾರೆ. ಅದರ ಪ್ರಕಾರ ಬಹಳ ಜನ ಜ್ಞಾನ ತಿಳಿದ, ಜ್ಞಾನವನ್ನು ಬೋಧಿಸಿದ ಸ್ವಾಮೀಜಿಗಳು ಸಹ ಮರಣಿಸಲಿಲ್ಲವೆಂದರೆ ಅವರಿಗೆ ಮೋಕ್ಷ ಲಭಿಸಲಿಲ್ಲವೆಂದೇ ಅಲ್ಲವೇ ಅರ್ಥ. ಅಷ್ಟು ದೊಡ್ಡ ಸ್ವಾಮೀಜಿಗಳಿಗೆ ಸಹ ಆತ್ಮಜ್ಞಾನ ತಿಳಿಯದಿರುವುದೇ ಕಾರಣವಾಗಿ ಅವರು ಮೋಕ್ಷಕ್ಕೆ ಹೋಗಲಿಲ್ಲ.

ಪ್ರಪಂಚದಲ್ಲಿನ ಮನುಷ್ಯರಲ್ಲಿಯೇ ಅಲ್ಲದೆ ಸರ್ವಜೀವಿಗಳಲ್ಲಿ ಒಂದೇ ಆತ್ಮ ಎಲ್ಲಾ ಜೀವಿಗಳಿಗು ಜೊತೆಯಾಗಿದ್ದು, ಎಲ್ಲಾ ಶರೀರಗಳನ್ನು ಅವರವರ ಕರ್ಮಗಳ ಪ್ರಕಾರ ನಡೆಸುತ್ತಿದೆ. ಎಲ್ಲರ ಶರೀರಗಳಲ್ಲಿ ಆತ್ಮ ಇದ್ದರೂ ಎಷ್ಟು ದೊಡ್ಡ ಜ್ಞಾನಿಗಳು ಸಹ ಆತ್ಮವನ್ನು ತಿಳಿಯಲಾರನು. ಆತ್ಮ ಒಂದು ಇದೆಯೆಂಬ ಸಮಾಚಾರವೇ ಅವರಿಗೆ ತಿಳಿದಿಲ್ಲ. ಇದಕ್ಕುಮುನ್ನ ಹಿಂದೂಮತದಲ್ಲಿ ಬಂದುಹೋದ ಮೂವರು ಸಿದ್ಧಾಂತಕರ್ತರು ಸಹ ಆತ್ಮ ಇರುವಿಕೆಯನ್ನು ಕಂಡುಕೊಳ್ಳದೆ ಹೋಗಿದ್ದಾರೆ. ಅವರು ಮೂವರು ಆಕಾರವಿರುವ ವಿಷ್ಣುವನ್ನು ಸಾಕಾರನೆಂದು ಹೇಳಿಕೊಂಡು, ಅದ್ವೈತರು ಶಿವಲಿಂಗವನ್ನು ಇಟ್ಟುಕೊಂಡು ಪಾರ್ವತಿ ಪತಿಯಾದ ಶಿವನು ನಿರಾಕಾರನೆಂದು ಹೇಳಿಕೊಂಡಿದ್ದಾರೆ. ಈ ವಿಧವಾಗಿ ಮೂವರು ಸಿದ್ಧಾಂತಕರ್ತರು ಸಾಕಾರ, ನಿರಾಕಾರಗಳ ಮಧ್ಯೆ ಹೊಡೆದಾಡುತ್ತಾ ಅವರ ಸಿದ್ಧಾಂತಗಳನ್ನು ತಯಾರು ಮಾಡಿಕೊಂಡು ಪ್ರಪಂಚದ ಹೊರಗಡೆಯೇ ದೇವರಿದ್ದಾನೆಂದು ಅಂದುಕೊಂಡಿದ್ದಾರೆ. ಯಾರ ದೃಷ್ಟಿ ಶರೀರದಲ್ಲಿ ತಮ್ಮನ್ನು ನಡೆಸುತ್ತಿರುವ ಆತ್ಮದ ಮೇಲೆ ಹೋಗಲಿಲ್ಲ. **ದೇವರ ಮೇಲೆ ಎಷ್ಟೋ ಶ್ರದ್ಧೆ, ಭಕ್ತಿ ಇರುವವನಿಗೆ ದೇವರೇ ದಾರಿತೋರಿಸುತ್ತಾನೆ.** ತನ್ನ ಹತ್ತಿರಕ್ಕೆ ಯಾರನ್ನು ಸೇರಿಸಿಕೊಳ್ಳಬೇಕೊ, ಯಾರನ್ನು ದೂರವಾಗಿ ಇಡಬೇಕೊ ದೇವರಿಗೆ ಚೆನ್ನಾಗಿ ತಿಳಿದಿದೆ. ತನ್ನನ್ನು ಪೂರ್ತಿಯಾಗಿ ನಂಬಿ, ತನ್ನ ಮೇಲೆ ಭಕ್ತಿ ಹೊಂದಿರುವವನಿಗೆ ಸರಿಯಾದ ಜ್ಞಾನಮಾರ್ಗವನ್ನು ತೋರಿಸಿ, ಆ

ಮಾರ್ಗದಲ್ಲಿ ತನ್ನನ್ನು ಸೇರುವಂತೆ ಮಾಡುವನು. **ಅನ್ಯಚಿಂತೆ ಇಲ್ಲದಂತೆ ಯಾರಾದರೆ ತನ್ನನ್ನೇ ವಿಶ್ವಾಸಿಸಿ ನಿತ್ಯವೂ ತನ್ನಲ್ಲಿಯೇ (ದೇವರಲ್ಲಿಯೇ) ಬೆರೆತುಹೋಗಬೇಕೆಂದು ಪ್ರಯತ್ನಿಸುತ್ತಿರುತ್ತಾನೊ ಅಂಥವನ ಯೋಗವೊಂದರ ಕ್ಷೇಮವನ್ನು ದೇವರೇ ನೋಡಿಕೊಳ್ಳುತ್ತಾನೆ.** ಅಂದರೇ ಆತನೇ ಆತನನ್ನು ಸಕ್ರಮ ಮಾರ್ಗದಲ್ಲಿ ನಡೆಸಿ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ. ಒಬ್ಬ ಮನುಷ್ಯ ದೇವರಲ್ಲಿ ಸೇರುವುದಕ್ಕೆ ಒಂದು ಪದ್ಧತಿ ನಿರ್ಣಯಿಸಲ್ಪಟ್ಟಿರುತ್ತದೆ. ಆ ಪದ್ಧತಿಯಲ್ಲಿನ ಮನುಷ್ಯನನ್ನು ಬಲಹೀನನು ಆಗದಂತೆ ಅವನಿಗೆ ಬಲವನ್ನು ಕೊಟ್ಟು, ಪದ್ಧತಿ ಪ್ರಕಾರವೇ ನಡೆಸಿ, ಅಂದರೇ ಅವನ ಯೋಗ ಭಂಗವಾಗದಂತೆ ನೋಡಿ ಯೋಗವೊಂದರ ಆರೋಗ್ಯವನ್ನು ತಾನೆ ನೋಡಿಕೊಂಡು, ಅವನ ಯೋಗಪದ್ಧತಿ ಸರಿಯಾಗಿರುವಂತೆ ಮಾಡಿ ಕೊನೆಗೆ ಪದ್ಧತಿ ಪ್ರಕಾರ ಅವನ ಕರ್ಮವೆಲ್ಲವೂ ಇಲ್ಲದಂತೆ ಹೋದಾಗ ಅವನನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ.

ದೇವರಲ್ಲಿ ಸೇರುವುದಕ್ಕೆ **"ಯೋಗ"** ಎಂಬ ಪದ್ಧತಿ ಇದೆ. ದೇವರಲ್ಲಿ ಸೇರುವುದಕ್ಕೆ ಬೇಕಾದ ಯೋಗ ಪದ್ಧತಿಯನ್ನು ದೇವರೇ ಹೇಳಬೇಕು. ಮನುಷ್ಯರಿಗೆ ದೇವರು ಹೇಗಿರುತ್ತಾನೋ, ದೇವರನ್ನು ಹೇಗೆ ಸೇರಬೇಕೊ ತಿಳಿದಿಲ್ಲ. ಆದುದರಿಂದ ದೇವರ ಯೋಗ ಜ್ಞಾನವನ್ನು ದೇವರೇ ಹೇಳಬೇಕಾಗಿದೆ. ದೇವರು ಸ್ವತಃವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಆದುದರಿಂದ ದೇವರು ಯಾವ ವಿಷಯವನ್ನು ಮನುಷ್ಯನಿಗೆ ತಿಳಿಸಬೇಕೆಂದುಕೊಂಡರೂ ಯಾವುದೋ ಒಂದು ವಿಧವಾಗಿ ತಿಳಿಸುತ್ತಾನೆ. ದೇವರು ಮನುಷ್ಯನಿಗೆ ಜ್ಞಾನವನ್ನು ತಿಳಿಸುವ ವಿಧಾನಗಳು ಮೂರು ಇವೆಯೆಂದು **"ಅಂತಿಮ ದೈವಗ್ರಂಥ"ದಲ್ಲಿ** ದೇವರೇ ಹೇಳಿದ್ದಾನೆ. ಆ ಮೂರು ವಿಧಾನಗಳಲ್ಲಿ ಒಂದು **'ಆಕಾಶವಾಣಿ'** ಮೂಲಕ ಜ್ಞಾನವನ್ನು ತಿಳಿಸುವುದು. ಎರಡು **'ತೆರೆಮರೆ'ಯಿಂದ** ತನ್ನ ಜ್ಞಾನವನ್ನು ತಿಳಿಸುವುದು. ಮೂರು ತನ್ನ ಅಂಶವಾದ **"ಭಗವಂತನ"** ಮೂಲಕ ತನ್ನ ಜ್ಞಾನವನ್ನು ದೇವರು ತಿಳಿಸುತ್ತಾನೆ. ಆಕಾಶವಾಣಿ ಮೂಲಕ ತಿಳಿಸಿದರೂ, ತನ್ನ ಅಂಶವಾದ ಸಾಕಾರರೂಪವಾದ (ಕಾಣಿಸುವ ರೂಪವಾದ) ಮನುಷ್ಯನ

ಮೂಲಕ ತಿಳಿಸಿದರೂ, ತೆರೆಮರೆಯಿಂದ ಎಂದರೇ ಕಾಣಿಸದ ರೂಪದಿಂದ ತಿಳಿಸಿದರೂ, ಮೂರರಲ್ಲಿರುವ ಆತ್ಮವೇ ತಿಳಿಸಬೇಕು. ಆಕಾಶ ಭೂತದಲ್ಲಿರುವ ಆತ್ಮ ಶಬ್ಧರೂಪದಲ್ಲಿ ಜ್ಞಾನವನ್ನು ಹೇಳಿದಾಗ, ಕಾಣಿಸದ ಸೂಕ್ಷ್ಮರೂಪವಾಗಿರುವ ಅವನಲ್ಲಿರುವ ಆತ್ಮವೇ ಜ್ಞಾನವನ್ನು ಮಾತುಗಳ ರೂಪದಲ್ಲಿ ಹೇಳುತ್ತಿದೆ. ವಾಣಿಯಿಂದ, ತೆರೆಮರೆಯಿಂದ ಎರಡು ವಿಧಗಳಲ್ಲಿ ಆತ್ಮವೇ ಮಾತುಗಳ ರೂಪದಲ್ಲಿ ಎಂದರೆ ಬೋಧನೆಗಳ ರೂಪದಲ್ಲಿ ದೈವಜ್ಞಾನವನ್ನು ಹೇಳಿದಾಗ, ಮೂರನೆ ವಿಧಾನವಾದ ಸಾಕಾರರೂಪದಿಂದ ಎಂದರೇ ಕಾಣಿಸುವ ಮನುಷ್ಯನಾಗಿದ್ದು ಹೇಳಿದಾಗ ಸಹ ಆ ಶರೀರದಲ್ಲಿನ ಕಾಣಿಸದ ಆತ್ಮವೇ ದೈವಜ್ಞಾನವನ್ನು ಕುರಿತು ಹೇಳುತ್ತಾನೆ. ಎಲ್ಲಿಯಾದರೂ ಕಾಣಿಸದ ಆಕಾರದಿಂದಾಗಲಿ, ಕಾಣಿಸುವ ಆಕಾರದಿಂದಾಗಲಿ, ಆಕಾರದೊಳಗೆ ಅಡಗಿ ಯಾರಿಗೂ ತಿಳಿಯದಂತಿರುವ ಎರಡನೆ ಆತ್ಮ (ಮಧ್ಯಾತ್ಮ), ಮೂರನೆ ಆತ್ಮವಾದ ಪರಮಾತ್ಮನನ್ನು (ದೇವರನ್ನು) ಕುರಿತು ಹೇಳುತ್ತಾನೆ.

ಜೀವಾತ್ಮಗು ಪರಮಾತ್ಮಗು ಮಧ್ಯದಲ್ಲಿರುವ ಆತ್ಮ ಯಾರಿಗೂ ಕಾಣಿಸುವುದಿಲ್ಲ. ಯಾರಿಗೂ ಕೇಳಿಸುವುದಿಲ್ಲ. ಆದರೂ ಎಲ್ಲರಿಗೂ ಕಾಣಿಸುವಂತೆ ಮಾಡುವುದು, ಎಲ್ಲರಿಗೂ ಕೇಳಿಸುವಂತೆ ಮಾಡುವುದು ಆತ್ಮವೇ. ಆತ್ಮ ದೈವಜ್ಞಾನವನ್ನು ಆಕಾಶ ವಾಣಿಯಿಂದ, ತೆರೆಮರೆಯಲ್ಲಿ ಕಾಣಿಸದಂತಿರುವ ವಾಣಿಯಿಂದ ಹೇಳುವ ಜ್ಞಾನ ಕೇವಲ ಬೋಧನೆಗಳ ರೂಪದಲ್ಲಿ ಮಾತ್ರ ಇರುತ್ತದೆ. ಸಾಕಾರರೂಪವಾದ ದೈವ ಪ್ರತಿನಿಧಿಯಿಂದ ಹೇಳುವ ಜ್ಞಾನ ಮಾತುಗಳ ರೂಪವೇಯಲ್ಲದೆ, ಬರಹ ರೂಪದಲ್ಲಿ ಸಹ ಲಭಿಸುತ್ತದೆ. ಅಂದರೇ ಗ್ರಂಥರೂಪದಲ್ಲಿ ಸಹ ಲಭಿಸುತ್ತದೆ. ಕೃಷ್ಣನು, ಯೇಸು ಇಬ್ಬರ ಶರೀರಗಳಿಂದ ಆತ್ಮ ಮಾತನಾಡಿದಾಗ ಆ ಮಾತುಗಳು ಇತರರ ಮೂಲಕ ಗ್ರಂಥರೂಪವಾಗಿವೆ. ಕಾಣಿಸದ ಜಿಬ್ರಯೇಲ್ ಹೇಳಿದ ಜ್ಞಾನವನ್ನು ಕೇಳಿದ ಪ್ರವಕ್ತರು ಗ್ರಂಥರೂಪದಲ್ಲಿ ಬರೆದಿದ್ದಾರೆ. ಹೀಗೆ ಮೂರು ದೈವಗ್ರಂಥಗಳು ತಯಾರಾಗಿವೆ. ಇದು ಇಲ್ಲಿಯವರೆಗೂ ಗತದಲ್ಲಿ ನಡೆದ ವಿಧಾನ. ಮೂರು ಗ್ರಂಥಗಳನ್ನು ಮನುಷ್ಯರು

ಆತ್ಮ ದೈವಜ್ಞಾನವನ್ನು ಹೇಳಿದ ನಂತರ ಅದನ್ನೇ ಗ್ರಂಥರೂಪವಾಗಿ ಬರೆದಿದ್ದಾರೆ. ಹಾಗೆ ಬರೆಯುವಾಗ ಅವರಿಗೆ ಅರ್ಥವಾಗದ ವಿಷಯಗಳನ್ನು ಭಾವವನ್ನು ಬದಲಿಸಿ ಅವರಿಗೆ ಅರ್ಥವಾದ ಭಾವವನ್ನೇ ಬರೆದಿದ್ದಾರೆ. ಆಗ ದೇವರ ಭಾವನೆ ಬೇರೆ ಇರುವಾಗ ಮನುಷ್ಯರು ಬರೆದ ಭಾವನೆ ಬೇರೆ ಇರುವುದು ನಡೆದಿದೆ. ಅಂತಹ ಮಾನವ ತಪ್ಪುಗಳು ಮೂರು ದೈವ ಗ್ರಂಥಗಳಲ್ಲಿ ಅಲ್ಲಲ್ಲಿ ಕಾಣಿಸುತ್ತಿರುತ್ತವೆ. ಅಂತಹ ತಪ್ಪುಗಳು ನಡೆಯದಂತೆ **ಮುಂಬರುವ ಸಾಕಾರ ರೂಪದಿಂದ** ಆತ್ಮವೇ ದೈವಜ್ಞಾನವನ್ನು ಶರೀರದ ಮೂಲಕ ಹೇಳುವುದೆ ಅಲ್ಲದೇ, ಶರೀರದ ಮೂಲಕವೇ ಆತ್ಮವೇ ಸ್ವತಃವಾಗಿ ತಾನು ಹೇಳುವ ಜ್ಞಾನವನ್ನು ಗ್ರಂಥರೂಪ ಮಾಡಬೇಕೆಂದುಕೊಂಡಿದೆ. ಆತ್ಮ ಇರುವ ಶರೀರದ ಮೂಲಕವೇ ಗ್ರಂಥ ಬರೆಯಲ್ಪಡುತ್ತದೆ.

ಶರೀರಗಳ ಒಳಗಿರುವ ಆತ್ಮ ಒಂದೊಂದು ಶರೀರದಲ್ಲಿ ಒಂದೊಂದು ವಿಧವಾಗಿ ಪ್ರವರ್ತಿಸುತ್ತಿರುತ್ತದೆ. ದೈವಾಂಶದಿಂದ ಹುಟ್ಟಿದ ಶರೀರವನ್ನು **'ಭಗವಂತನು'** ಎಂದು ಹೆಸರಿಟ್ಟಿದ್ದೇವೆ. ಭಗವಂತನಾಗಿರುವ ಶರೀರ ಸಾಧಾರಣವಾಗಿ ಎಲ್ಲಾ ಶರೀರಗಳಂತೆ ಇರುವುದರಿಂದ ಯಾರೂ ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಜೀವಿಯು ಎಲ್ಲಿ ಇರುತ್ತಾನೋ ಆತ್ಮ ಅಲ್ಲಿ ಆ ಶರೀರವನ್ನು ನಡೆಸುವುದಕ್ಕಾಗಿ ಇರಬೇಕು. ಆದರೆ ಹುಟ್ಟಿದ ಶರೀರದಲ್ಲಿರುವ ಜೀವಾತ್ಮ ದೈವಾಂಶದಿಂದ ಹುಟ್ಟಿರುವುದಾದಾಗ ಆ ಜೀವಾತ್ಮಕ್ಕೆ ಜೊತೆಯಾಗಿರುವ ಆತ್ಮ ಅದಕ್ಕೆ ತಕ್ಕಂತೆ ಪ್ರವರ್ತಿಸುತ್ತದೆ. ದೇವರ ಅಂಶದಿಂದ ಹುಟ್ಟಿದ ಭಗವಂತನ ಶರೀರದಲ್ಲಿ ಸಹ ಜೀವಾತ್ಮ, ಆತ್ಮ, ಪರಮಾತ್ಮ ಮೂರು ಆತ್ಮಗಳಿರುತ್ತವೆ. ಆದರೆ ಎಲ್ಲರ ಶರೀರಗಳಂತೆ ಆತ್ಮ ಎಲ್ಲಾ ಕೆಲಸಗಳು ಮಾಡುತ್ತಿದ್ದರೂ ಪ್ರತ್ಯೇಕಿಸಿ ಆ ಶರೀರದಿಂದ ಆತ್ಮವೇ ದೈವಜ್ಞಾನವನ್ನು ಹೇಳುತ್ತದೆ. ದೈವಜ್ಞಾನವನ್ನು ಆತ್ಮ ಹೇಳಿದ್ದರೂ ಈ ಬಾರಿ ಹಿಂದಿನಹಾಗಲ್ಲದೆ ಸ್ವತಃವಾಗಿ ದೈವಜ್ಞಾನವನ್ನು ಗ್ರಂಥರೂಪದೊಳಗೆ ಶರೀರದ ಮೂಲಕ ಬರೆಯಿಸುತ್ತದೆ. **ದೈವಜ್ಞಾನವನ್ನು ಮಾತುಗಳರೂಪದಲ್ಲಿ ಅಂದರೇ ಬೋಧನೆಗಳ ರೂಪದಲ್ಲಿ ಒಂದು**

**ವಿಧವಾಗಿ ಹೇಳಿದರೆ, ಮತ್ತೊಂದು ವಿಧವಾಗಿ ಗ್ರಂಥರೂಪದಲ್ಲಿ ಬರೆಯುತ್ತಿದೆ.** ಶರೀರದಲ್ಲಿರುವ ಎರಡು ವಿಧಾನಗಳನ್ನು ಆತ್ಮ ಉಪಯೋಗಿಸುತ್ತಿದೆ. ಇದು ಇಲ್ಲಿಯವರೆಗು ಯಾರಿಗೂ ತಿಳಿಯದ ವಿಷಯವಾದರೂ ಈಗ ನಾವು ತಪ್ಪದೆ ಹೇಳಬೇಕಾಗಿ ಬಂದಿದೆ. ಇದು ಒಂದು ವಿಧವಾಗಿ ದೈವರಹಸ್ಯ ಆದ್ದರಿಂದ ಜಾಗ್ರತೆಯಾಗಿ ಕೇಳಬೇಕೆಂದು ಹೇಳುತ್ತಿದ್ದೇವೆ.

ಪ್ರತಿ ಶರೀರದಲ್ಲಿ ಆತ್ಮ ತನ್ನ ಶಕ್ತಿಯನ್ನು ಎರಡು ವಿಧಗಳ ಶರೀರಗಳಲ್ಲಿ ವ್ಯಾಪಿಸುವಂತೆ ಮಾಡುತ್ತಿದೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ಅದೇ ವಿಷಯವನ್ನೇ ಈಗ ಹೇಳಿಕೊಂಡರೇ ಶರೀರದಲ್ಲಿ ಏಳು ನಾಡೀಕೇಂದ್ರಗಳ ಮೂಲಕ, ಮತ್ತು ಏಳು ಗ್ರಂಥಿಗಳ ಮೂಲಕ ಆತ್ಮ ತನ್ನ ಶಕ್ತಿಯನ್ನು ಶರೀರವೆಲ್ಲಾ ವ್ಯಾಪಿಸುವಂತೆ ಮಾಡುತ್ತಿದೆ. **ನಾಡೀಕೇಂದ್ರಗಳ** ಮೂಲಕ ಪ್ರವಹಿಸುವ ಶಕ್ತಿ **ಶರೀರಬಲವನ್ನು** ಒದಗಿಸುತ್ತಿರುವಾಗ, **ಗ್ರಂಥಿಗಳ** ಮೂಲಕ ಪ್ರವಹಿಸುವ ಶಕ್ತಿ **ಶರೀರ ಆರೋಗ್ಯವನ್ನು** ಒದಗಿಸುತ್ತಿದೆ. ಈ ವಿಧವಾಗಿ ಶರೀರದಲ್ಲಿ ಎರಡು ವಿಧಾನಗಳ ಮೂಲಕ ಮನುಷ್ಯನ ಜೀವನವನ್ನು ಆತ್ಮ ನಡೆಸುತ್ತಿದೆ. ಈ ಎರಡು ವಿಧಾನಗಳು ಸಹ ಈ ಕಾಲದ ಮನುಷ್ಯನಿಗೆ ತಿಳಿದಿಲ್ಲ ಅಂದುಕೊಳ್ಳುತ್ತೇನೆ. ಶರೀರದಲ್ಲಿರುವ ಆತ್ಮ ಸರ್ವಸಾಧಾರಣ ಮನುಷ್ಯರನ್ನು ಹೀಗೆ ನಡೆಸುತ್ತಿರುತ್ತದೆ. ಆದರೆ ಭಗವಂತನ ಶರೀರದಲ್ಲಿ ದೈವಜ್ಞಾನವನ್ನು ಹೊರಗೆ ಹೇಳುವಾಗ ಶರೀರ ನಾಡೀಕೇಂದ್ರಗಳ ಮೂಲಕ ಶರೀರವೆಲ್ಲಾ ವ್ಯಾಪಿಸಿದ ಶಕ್ತಿಮೂಲಕ ದೈವಜ್ಞಾನವನ್ನು ಮಾತುಗಳ ರೂಪವಾದ ಬೋಧನೆಗಳಾಗಿ ಹೇಳುತ್ತದೆ. ಅದೇ ದೈವಜ್ಞಾನವನ್ನು ಬರಹರೂಪವಾಗಿ ಗ್ರಂಥಗಳಲ್ಲಿ ಬರೆಯಬೇಕಾಗಿ ಬಂದಾಗ ಗ್ರಂಥಗಳಿಂದ ಪ್ರಸಾರವಾಗುವ ಆತ್ಮಶಕ್ತಿ ಮೂಲಕ ಬರೆಯಲಾಗುತ್ತದೆ. ಒಂದು ಸಪ್ತಮಿ ಮೂಲಕ ಬೋಧನೆಗಳು ಹೇಳಲಾಗುತ್ತದೆ. ಒಂದು ಸಪ್ತಮಿ ಮೂಲಕ ಗ್ರಂಥಗಳು ಬರೆಯಲ್ಪಡುತ್ತವೆ. ಹೀಗೆ ಶರೀರದಲ್ಲಿನ ಎರಡು ವಿಧಾನಗಳನ್ನು ಉಪಯೋಗಿಸಿ ಎರಡು ರೂಪಗಳಲ್ಲಿ ದೈವಜ್ಞಾನ ಹೊರಬರುತ್ತಿದೆ. ಹಾಗೆ ಹೇಳಲಾದ ಬೋಧನೆಗಳಲ್ಲಾಗಲಿ, ಹಾಗೆ ಬರೆಯಲ್ಪಟ್ಟ ಗ್ರಂಥಗಳಲ್ಲಾಗಲಿ,

ಭಾವಲೋಪಗಳಾಗಲಿ, ಅನ್ಯ ಭಾವನೆಗಳಾಗಲಿ ಇರುವುದಿಲ್ಲ. ಸ್ವತಃವಾಗಿ ಆತ್ಮವೇ ತನ್ನ ಎರಡು ವಿಧಗಳ ಶಕ್ತಿಗಳನ್ನು ಉಪಯೋಗಿಸಿಕೊಂಡು ಜ್ಞಾನವನ್ನು ಹೇಳುತ್ತಿದೆ.

'ಬೋಧನೆ' ಎಂದರೇ ಬಲವಾಗಿ ಹೇಳುವುದು ಅಥವಾ ಗಟ್ಟಿಯಾಗಿ ಹೇಳುವುದೆಂದು ಅರ್ಥ. ಹೇಳುವ ಬೋಧನೆಯನ್ನು ಎಷ್ಟು ಬಲವನ್ನಾದರೂ ಉಪಯೋಗಿಸಿ ಎಷ್ಟು ಗಟ್ಟಿಯಾಗಿ (ಎಷ್ಟು ಜೋರಾಗಿ) ಆದರೂ ಹೇಳಬಹುದು. ಗಟ್ಟಿಯಾಗಿ ಕಿರಚಿ ಹೇಳುವುದಕ್ಕೆ ಬಲ (ಶಕ್ತಿ) ನಾಡೀಕೇಂದ್ರಗಳಿಂದ ಬರುತ್ತಿದೆ. ನಾಡೀಶಕ್ತಿ ಮೂಲಕ ಹುಟ್ಟುವುದು ಬೋಧನೆಯೆಂದು ಹೇಳಬಹುದು. ಗ್ರಂಥಗಳನ್ನು ಬರೆಯುವುದರಲ್ಲಿ ಬಲ ಅಗತ್ಯವಿಲ್ಲ. ಮನುಷ್ಯನ ಆರೋಗ್ಯದ ಮೇಲೆ ಆಧಾರಪಟ್ಟು ಗ್ರಂಥವನ್ನು ಬರೆಯಬಹುದು. ಮನುಷ್ಯನ ಆರೋಗ್ಯ ಅನಾರೋಗ್ಯಗಳು ನಿರ್ಣಯಿಸುವವು ಶರೀರದಲ್ಲಿನ ಗ್ರಂಥಿಗಳು, ಗ್ರಂಥಿಗಳ ಶಕ್ತಿ ಮೂಲಕ ಬರೆಯಲ್ಪಡುವವೆಂದು ಅವುಗಳನ್ನು ಗ್ರಂಥಗಳು ಎಂದಿದ್ದಾರೆ. ಗ್ರಂಥಗಳನ್ನು ನೋಡಿದರೂ, ಬೋಧನೆಗಳನ್ನು ಕೇಳಿದರೂ, ಆ ಎರಡೂ **ಆತ್ಮಶಕ್ತಿ** ಮೂಲಕ ಬಂದಿರುವವೇ ಆದ್ದರಿಂದ ಜ್ಞಾನವನ್ನು ತಿಳಿದ ಮನುಷ್ಯನಲ್ಲಿ ಸಹ ಆತ್ಮಶಕ್ತಿ ಪ್ರೇರಣೆ ನಡೆದು ತಿಳಿದುಕೊಂಡ ಜ್ಞಾನ **ಜ್ಞಾನಾಗ್ನಿಯಾಗಿ** ಬದಲಾಗುತ್ತದೆ. ಅ ಜ್ಞಾನಾಗ್ನಿ ಮೂಲಕ ಕರ್ಮಗಳು ಸುಡುವುದಕ್ಕೆ ಪ್ರಾರಂಭಿಸುತ್ತದೆ. ಇಲ್ಲಿ ಎಂದರೇ ಪ್ರಬೋಧಾಶ್ರಮದಲ್ಲಿ ತಯಾರಾದ ಯಾವ ಗ್ರಂಥವಾದರೂ ಪ್ರಬೋಧಾನಂದ ಹಸ್ತಸ್ಪರ್ಶ ತಗಲುತ್ತಲೇ ಆ ಗ್ರಂಥ ಒಂದು ಶಕ್ತಿ ಕೇಂದ್ರವಾಗಿ ತಯಾರಾಗುತ್ತದೆ. ಇಲ್ಲಿ ತಯಾರಾದ ಗ್ರಂಥಗಳ ಮೇಲೆ ನಂಬಿಕೆಉಂಟಾಗಿ, ಭಕ್ತಿಉಂಟಾಗಿ ಓದಿದವರಿಗೆ ವಿಶೇಷವಾದ **ಜ್ಞಾನಶಕ್ತಿ** ಸೇರುತ್ತದೆ. ಓದುಬರದವರಾದರೂ ಗ್ರಂಥಗಳ ಮೇಲೆ ಭಕ್ತಿ ಹೊಂದಿದ್ದು ಯಾವಾಗಾದರೂ ಅವರ ಬಾಧೆಗಳಿಂದ ಪೀಡಿಸಲ್ಪಡುತ್ತಿರುವಾಗಾಗಲಿ, ಬಾಧಿಸಲ್ಪಡುತ್ತಿರುವಾಗಾಗಲಿ ನಮ್ಮ ಗ್ರಂಥಗಳನ್ನು ಅವರಿಗೆ ನೋವು ಎಲ್ಲಿದೆಯೋ ಅಲ್ಲಿಗೆ ಗ್ರಂಥವನ್ನು ಸ್ಪರ್ಶಿಸುವಂತೆ ಮಾಡಿದಾಗ ಗ್ರಂಥದಲ್ಲಿನ **ಆತ್ಮಶಕ್ತಿ** ಆ

ಶರೀರದಲ್ಲಿನ ದುಃಖವನ್ನು ಇಲ್ಲದಂತೆ ಮಾಡುತ್ತದೆ. ಇದು ಜ್ಞಾನಶಕ್ತಿ ಪ್ರತ್ಯಕ್ಷವಾಗಿ ನಿರೂಪಣೆಗೆ ಬರುತ್ತಿದೆ. ಬಾಧೆ ಇರುವ ಸ್ಥಳದಲ್ಲಿ ಗ್ರಂಥವು ಶರೀರಕ್ಕೆ ಅಂಟಿಕೊಂಡಿದ್ದು ಶರೀರದಲ್ಲಿನ ಕರ್ಮವನ್ನು ಸುಡುವವರೆಗು ಶರೀರವನ್ನು ಬಿಡುವುದಿಲ್ಲ. ನಮ್ಮ ಮಾತುಗಳ ಮೇಲೆ ನಂಬಿಕೆ ಇಲ್ಲದವರಿಗೆ ಈ ವಿಧವಾಗಿ ಕರ್ಮ ಸುಟ್ಟುಹೋಗುವುದು ಪ್ರತ್ಯಕ್ಷವಾಗಿ ಕಾಣಿಸುತ್ತಿದೆ.

ಇಲ್ಲಿಯವರೆಗೂ ಬಂದಿರುವ ಸಿದ್ಧಾಂತಗಳಲ್ಲಿ ಬಂದಿರುವ ಜ್ಞಾನಕ್ಕಿಂತ ತ್ರೈತ ಸಿದ್ಧಾಂತದಲ್ಲಿ ಬಂದಿರುವ ಜ್ಞಾನ ಶ್ರೇಷ್ಠವಾದುದೆಂದು ನಿರೂಪಿಸುವುದಕ್ಕೆ ದೇವರೇ ನಮ್ಮ ಗ್ರಂಥಗಳಲ್ಲಿ ಶಕ್ತಿಯನ್ನು ತುಂಬಿದ್ದಾನೆಂದು ಹೇಳುತ್ತಿದ್ದೇವೆ. ಇಲ್ಲಿ ತಯಾರಾದ ಮುಸ್ಲಿಮ್ ಗ್ರಂಥವೆಂದು ಹೇಳಲ್ಪಡುವ **"ಅಂತಿಮ ದೈವಗ್ರಂಥ"** ಎಂದು ನಾವು ಬರೆದ ಖುರಾನ್ ಗ್ರಂಥ ಸಹ ಶಕ್ತಿ ನಿಲಯವಾದಂತೆ ಶರೀರಕ್ಕೆ ಅಂಟಿಕೊಂಡು ಹೋಗಿದೆ. ಉಳಿದ ಕಡೆ ಎಲ್ಲಿಯೂ ಕಾಣಿಸದ ವಿಧಾನ ಇಲ್ಲಿ ಕಾಣಿಸುತ್ತಿದ್ದರೂ ಮೂರು ಮತದವರು ಅಸೂಯೆಯಿಂದ ನಮ್ಮನ್ನು ಮಾತನಾಡುವುದರಿಂದ ನಿಮಗೇ ಕಷ್ಟ, ನಷ್ಟ. ಈಗಲಾದರೂ ಹಿಂದೂಮತದಲ್ಲಿ ಬಂದಿರುವ **ತ್ರೈತ ಸಿದ್ಧಾಂತ** ಶ್ರೇಷ್ಠವಾದುದೆಂದು ಹಿಂದೂಗಳು ತಿಳಿಯಬೇಕೆಂದು, ಉಳಿದ ದೈವಗ್ರಂಥಗಳಲ್ಲಿ ಸಹ ಇರುವ **ತ್ರೈತ ಸಿದ್ಧಾಂತವನ್ನು** ಉಳಿದ ಕ್ರೈಸ್ತ, ಇಸ್ಲಾಮ್ ಮತದವರು ಗ್ರಹಿಸಬೇಕೆಂದು ಕೋರುತ್ತಾ ಇಲ್ಲಿಗೆ ಮುಗಿಸುತ್ತಿದ್ದೇವೆ.

## ಮುಕ್ತಾಯ

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರವು ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲಗಳೆದರೂ ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

